॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೬



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1947

|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೬



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1947

|| ಓಂ ಪರಬ್ರಹ್ಮಣೇ ನಮಃ ||

# ಮುನ್ನುಡಿ

ಪುರಾಣೇತಿಹಾಸಗ್ರಂಥಗಳು ಜನಸಾಮಾನ್ಯಕ್ಕೆ ಭಕ್ತಿಮಾರ್ಗವನ್ನುಪದೇಶಿಸುತ್ತಾ ಲೋಕವನ್ನುದ್ಧರಿಸುವುವು ಎಂಬುದು ನಿರ್ವಿವಾದವಾದ ವಿಷಯ. ಸಮಸ್ತ ಜಗತ್ಸ್ವರೂಪದಿಂದ ಪ್ರತಿಫಲಿಸುವ ಪರಬ್ರಹ್ಮವಸ್ತುವೇ ಗುಣತ್ರಯವಿಶಿಷ್ಟವಾಗಿ ತ್ರಿಮೂರ್ತ್ಯಾತ್ಮಕವಾದ ಭೇದದಿಂದ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ನಡೆಸುತ್ತಿರುವುದೆಂಬುದು ತಾತ್ತ್ವಿಕರ ಸಿದ್ಧಾಂತ. ಅಂತಹ ತತ್ತ್ವಮಾರ್ಗಗಾಮಿಗೂ ಭಕ್ತಿಮಾರ್ಗವೆಂಬುದು ಮೊದಲನೆಯ ಮೆಟ್ಟಲು. ಪರಮಾತ್ಮವಿಷಯಕವಾದ ಅನುರಾಗವೇ ಭಕ್ತಿ. ಆ ಭಕ್ತಿಸ್ವರೂಪವನ್ನು ಗ್ರಂಥಗಳು ಬೋಧಿಸಬಲ್ಲವು. ಹಿರಿಯರು ತಿಳಿಸಬಲ್ಲರು. ಅಷ್ಟರಿಂದಲೇ ಮನುಷ್ಯನಿಗೆ ಭಕ್ತಿಯು ಮೂಡಲಾರದು. ನಮ್ಮವರು ಹೇಳುವಂತೆ ಗುರುಹಿರಿಯರಲ್ಲಿಯೂ, ಜಗನ್ನಿಯಾಮಕನಾದ ಪರಮಾತ್ಮನಲ್ಲಿಯೂ, ನಿರ್ದೋಷವಾದ ಭಕ್ತಿಯುದಯಿಸಬೇಕಾದರೆ, ಸುಕೃತವಿರಬೇಕು. ಯಜ್ಞವೇ ಮೊದಲಾದ ಸತ್ಕರ್ಮಾಚರಣೆಗಳೂ, ಭೂದಾನವೇ ಮೊದಲಾದ ಮಹಾದಾನಗಳೂ, ದೇವತಾರಾಧನೆಯೇ ಮುಂತಾದ ನಿತ್ಯಾನುಷ್ಠಾನಗಳೂ ಭಕ್ತಿಯ ಆವಿರ್ಭಾವಕ್ಕೆ ಕಾರಣಗಳಾಗುವುವು. ಭಕ್ತಿಯ ಮೇಲ್ಮೆಟ್ಟವೆಂದರೆ ಆತ್ಮನಿವೇದನವೆಂದೇ ದೃಢಪಡಿಸಿರುವರು. "ಅನ್ಯಥಾ ಶರಣಂ ನಾಸ್ತಿ" ಎಂಬ ಭಾವವು ಹೃದಯದಲ್ಲಿ ಮೂಡಿ, ಅಹಂಭಾವವನ್ನು ತೊರೆದು, ಸೋಹಂಭಾವದಿಂದಿರುವಿಕೆಯೇ, ಆತ್ಮನಿವೇದನ. ಇದನ್ನೇ ಪರಮಪದ ಅಥವಾ ಮೋಕ್ಷವೆನ್ನುವರು. ಮೋಕ್ಷಪ್ರಾಪ್ತಿಗಿರುವ ಅನೇಕ ಮಾರ್ಗಗಳಲ್ಲಿ ಸುಗಮವಾದ ಮಾರ್ಗವೆಂದರೆ ಇದೊಂದೇ ಎಂದು ಪುರಾಣೇತಿಹಾಸಕಾರರು ಮಾನವಸಾಮಾನ್ಯಕ್ಕೂ ಆಗಾಗ ಹೇಳುತ್ತಲೇ ಇರುವರು.

ಪ್ರಕೃತ ಶಿವರಹಸ್ಯದ ಈ ಭಾಗದಲ್ಲಿ ಶಿವಪೂಜಾವಿಧಿಯು ನಾನಾರೂಪದಲ್ಲಿ ವಿಸ್ತೃತವಾಗಿದೆ. ವಿವಿಧವಸ್ತುಗಳಲ್ಲಿ ವೈರಾಗ್ಯವು ಆವಶ್ಯಕವೆನಿಸಿದರೂ ಶಿವಪೂಜಾ ಸಾಧಕಗಳಾದ ಪದಾರ್ಥಗಳಲ್ಲಿ ಮಾತ್ರ ಆಸಕ್ತಿಯನ್ನು ವಹಿಸಿರಲೇಬೇಕು ಎಂಬುದು ಈ ಗ್ರಂಥಕಾರರ ಅಭಿಪ್ರಾಯ. ಲೋಕದಲ್ಲಿ ಜನಿಸಿದಮೇಲೆ, ಮಾನವವರ್ಗಕ್ಕೆ

ಕಾಲಿಟ್ಟವರು ಗೃಹಸ್ಥವೃತ್ತಿಯಲ್ಲಿದ್ದೇ ಶಿವಾನುಗ್ರಹವನ್ನು ಸಂಪಾದಿಸಬಹುದೆಂದು ನಿರೂಪಿಸುತ್ತಾ ಅದಕ್ಕೆ ತಕ್ಕ ಮಾರ್ಗವನ್ನು ನಿದರ್ಶನಾದಿಗಳಿಂದ ತೋರ್ಪಡಿಸಲು ಇಲ್ಲಿ ಪ್ರಯತ್ನಿಸಿರುವರು. ದೇಹಾಭಿಮಾನವು ಅತಿಯಾಗಿರಕೂಡದು ಎಂಬುದಕ್ಕೆ ಈ ಗ್ರಂಥದ ಕೊನೆಯ ಅಧ್ಯಾಯದಲ್ಲಿ ಶೈವರಾಜಪುತ್ರನಿಂದ ಹೇಳಿಸುವ ಮಾತುಗಳು ಎಂತಹವರನ್ನೂ ಮುಗ್ಧಗೊಳಿಸುವುವು. ಗ್ರಂಥಕಾರರ ಮುಖ್ಯಧ್ಯೇಯದಂತೆ ಶಿವಸ್ತುತಿಗಳು ಈ ಭಾಗದಲ್ಲಿಯೂ ಹೇರಳವಾಗಿ ಕಂಡುಬರುತ್ತಿವೆ. ಭಕ್ತಿಭಾವಪ್ರಚೋದಕಗಳಾದ ಇತಿಹಾಸಗಳೂ, ಕವಿತಾಶೈಲಿ, ನಿರೂಪಣೆಯ ಕ್ರಮ ಇವು ಗ್ರಂಥವನ್ನು ಪರಮೋನ್ನತಿಗೇರಿಸಿವೆ ಎಂಬುದು ಮನಮುಟ್ಟಿದ ಮಾತು.

ಕಲಿಯುಗದಲ್ಲಿ ಭಕ್ತಿಮಾರ್ಗವೇ ಪ್ರಜಾವರ್ಗಕ್ಕೆ ಮುಕ್ತಿದಾಯಕವು ಎಂಬ ತತ್ತ್ವಾಂಶವನ್ನರಿತ, ನಮ್ಮನ್ನಾಳುತ್ತಿರುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರು, ಕೃಪಾತಿಶಯದಿಂದ ಪಂಡಿತಪಾಮರವರ್ಗಕ್ಕೆಲ್ಲಾ ಅನುಕೂಲಿಸುವಂತೆ ಈ ಗ್ರಂಥ ಪ್ರಕಾಶಕ್ಕೆ ಅನುಮತಿಯಿತ್ತು, ಸರ್ವಸಹಾಯವನ್ನೂ ನೀಡಿ ಪ್ರೋತ್ಸಾಹಗೊಳಿಸುತ್ತಿರುವುದು ಸರ್ವಜನವಿದಿತವೇ ಆಗಿದೆ. ಮಹಾಪ್ರಭುಗಳವರಿಗೂ ಅವರ ಕುಟುಂಬ ವರ್ಗಕ್ಕೂ ಸರ್ವೇಶ್ವರನು ಸಕಲ ಸನ್ಮಂಗಳಗಳನ್ನೂ ಮತ್ತೂ ಇಷ್ಟಾರ್ಥಗಳನ್ನೂ ಅನುಗ್ರಹಿಸುತ್ತಿರಲಿ ಎಂದು ನಾನು ಸರ್ವದಾ ಜಗನ್ನಿಯಾಮಕನಾದ ಪರಶಿವನನ್ನು ಪ್ರಾರ್ಥಿಸುತ್ತೇನೆ.

ಸರ್ವಜಿನ್ನಾಮ ಸಂವತ್ಸರದ<br>ಆಷಾಢ ಶುದ್ಧ ದ್ವಿತೀಯಾ<br>ಶುಕ್ರವಾರ<br>20—6—1947.

ಇತಿ ಸಜ್ಜನವಿಧೇಯ,<br>**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**<br>ಆಸ್ಥಾನವಿದ್ವಾನ್, ಮೈಸೂರು.

|| ಶ್ರೀಃ ||

# ಶ್ರೀಶಿವರಹಸ್ಯದ ಹರನಾಮಕವಾದ ತೃತೀಯಾಂಶ ಪೂರ್ವಾರ್ಧದ ಕೊನೆಯ ಹದಿನೈದು ಅಧ್ಯಾಯಗಳ ವಿಷಯಾನುಕ್ರಮಣಿಕೆ

## ನಲವತ್ತನೆಯ ಅಧ್ಯಾಯ



## ನಲವತ್ತೊಂದನೆಯ ಅಧ್ಯಾಯ



## ನಲವತ್ತೆರಡನೆಯ ಅಧ್ಯಾಯ



## ನಲವತ್ತುಮೂರನೆಯ ಅಧ್ಯಾಯ



## ನಲವತ್ತು ನಾಲ್ಕನೆಯ ಅಧ್ಯಾಯ



## ನಲವತ್ತೈದನೆಯ ಅಧ್ಯಾಯ

## ನಲವತ್ತಾರನೆಯ ಅಧ್ಯಾಯ



## ನಲವತ್ತೇಳನೆಯ ಅಧ್ಯಾಯ



## ನಲವತ್ತೆಂಟನೆಯ ಅಧ್ಯಾಯ



## ನಲವತ್ತೊಂಬತ್ತನೆಯ ಅಧ್ಯಾಯ



## ಐವತ್ತನೆಯ ಅಧ್ಯಾಯ





॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಷಟ್ತ್ರಿಂಶೋಽಧ್ಯಾಯಃ

॥ ಶ್ರೀಸದಾಶಿವ ಉವಾಚ ॥

**ತೀರ್ಥೇಶ್ವರಾಭಿಧಂ ಲಿಂಗಂ ಮಂಗಳಾಕಾರಮವ್ಯಯಂ ।**
**ತತ್ಸರ್ವಂ ಮಂಗಳಂ ದಿವ್ಯಂ ಸರ್ವಮಂಗಳದಾಯಕಂ ॥೧॥**

**ತಸ್ಯ ಲಿಂಗಸ್ಯ ಮಹಿಮಾ ಮಯಾ ವಿಜ್ಞಾಯತೇ ಶಿವೇ ।**
**ತಸ್ಯ ಸ್ಮರಣಮಾತ್ರೇಣ ಸಂಪದೋ ಯಾಂತಿ ಸಾದರಂ ॥೨॥**

---

## ಶ್ರೀಶಿವರಹಸ್ಯ ತೃತೀಯಾಂಶ ಪೂರ್ವಾರ್ಧದಲ್ಲಿ ಮೂವತ್ತಾರನೆಯ ಅಧ್ಯಾಯ

ಶ್ರೀಶೈಲಕ್ಷೇತ್ರದಲ್ಲಿ ತೀರ್ಥೇಶ್ವರವೆಂಬ ಲಿಂಗವಿರುತ್ತದೆ. ಅದು ಅತ್ಯದ್ಭುತವಾದದ್ದು. ಮಂಗಳ ಸ್ವರೂಪವೇ ಅದು. ಆ ಲಿಂಗಕ್ಕೆ ಎಂದೂ ವಿನಾಶವೇ ಇರುವುದಿಲ್ಲ. ಅದು ಸನಾತನ, ಸದಾತನವಾಗಿರುವಂಥಾದ್ದು. ಅದನ್ನು ಅರ್ಚಿಸಿ ಆರಾಧಿಸುವವರಿಗೆ ಸಕಲ ಕಲ್ಯಾಣಗಳೂ ಸರ್ವದಾ ಲಭಿಸುತ್ತವೆ. ॥೧॥

ಓ ಗಿರಿಜೆಯೆ, ಆ ಮಹತ್ತರವಾದ ಶಿವಲಿಂಗದ ಮಹಿಮೆಯು ನನಗೆ ಮಾತ್ರ ತಿಳಿದಿರುತ್ತದೆ. ಅದನ್ನು ಬೇರೆಯವರು ತಿಳಿಯುವುದು ಅಸಾಧ್ಯವಾಗಿರುತ್ತದೆ. ಆ ಲಿಂಗವು ಅತ್ಯಂತ ವಿಚಿತ್ರವಾದುದು. ಆ ಲಿಂಗವನ್ನು ಮನಸಾ ಧ್ಯಾನಿಸಿದ ಮಾತ್ರಕ್ಕೇ ಸಕಲ ಸಂಪತ್ತುಗಳೂ ತಾವಾಗಿಯೇ ಬಂದು ಸೇರುವುವು. ॥೨॥

ಸ್ಮರಣಂ ತಸ್ಯ ಲಿಂಗಸ್ಯ ಕೋಟಿಜನ್ಮಾರ್ಜಿತೈಃ ಪರಂ ।
ಪುಣ್ಯೈಃ ಪ್ರಜಾಯತೇ ಗೌರಿ ತಲ್ಲಿಂಗಂ ಗೌರವಪ್ರದಂ ॥೩॥

ತಲ್ಲಿಂಗಸ್ಮರಣಾದೇವ ಮುಕ್ತಿಕಾಂತಾಕರಾಶ್ರಿತಾ ।
ಸಂಪದ್ಭಿಃ ಸಹ ಸಂಪನ್ನಾಃ ವಿಪನ್ನೈರ್ವೋಪಜಾಯತೇ ॥೪॥

ನ ತಸ್ಯ ವಿಪದಾರ್ತಿಸ್ಸ್ಯಾದ್ದೌರ್ಮನಸ್ಯಂ ಭಯಾನಿ ವಾ ।
ಯಸ್ಯ ತೀರ್ಥೇಶಲಿಂಗಸ್ಯ ಸ್ಮರಣಂ ಹೃದಿ ವರ್ತತೇ ॥೫॥

ಏತದಾರಾಧನಂ ಪೂರ್ವಂ ಕೃತ್ವಾ ಬಿಲ್ವದಳಾದಿಭಿಃ ।
ಪ್ರಾಪ್ತನ್ಯೈಶ್ವರ್ಯಮತುಲಂ ಸ್ವರ್ಗಪ್ರಾಪ್ತಿಸ್ತತಃಪರಂ ॥೬॥

ಪುರಾ ಮುನೀಶ್ವರಾಸ್ಸರ್ವೇ ಕೋಟಿಶಂಕರಪೂಜಕಾಃ ।
ಭಸ್ಮೋದ್ಧೂಳಿತಸರ್ವಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ॥೭॥

---

ಆ ಪುಣ್ಯಲಿಂಗದ ಸ್ಮರಣೆಯು ಸಾಮಾನ್ಯ ಜನರಿಗೆ ಉಂಟಾಗಲಾರದು. ಅನೇಕ ಜನ್ಮಗಳ ಪುಣ್ಯಪರಿಪಾಕವಿದ್ದರೇ ಆ ಲಿಂಗದ ಸ್ಮರಣೆಯು ಬರುವುದು. ಆ ಲಿಂಗಾರ್ಚನೆಯಿಂದ ಅತ್ಯಂತ ಗೌರವವು ಲಭಿಸುತ್ತದೆ. ॥೩॥

ಆ ಪುಣ್ಯಲಿಂಗವನ್ನು ಯಾರು ಧ್ಯಾನಮಾಡುತ್ತಾರೆಯೋ, ಅವರನ್ನು ಮುಕ್ತಿರಮಣಿಯು ತಾನೇ ಬಂದು ಪಾಣಿಗ್ರಹಣ ಮಾಡುವಳು. ಆ ಲಿಂಗವನ್ನು ಧ್ಯಾನಿಸುವವರಿಗೆ ಸಕಲ ಸಂಪತ್ತುಗಳೂ ಲಭಿಸುವುವು, ಎಂದೂ ಆಪತ್ತು ಉಂಟಾಗುವುದಿಲ್ಲ. ॥೪॥

ಆ ಪುಣ್ಯಲಿಂಗವನ್ನು ಧ್ಯಾನಮಾಡುವವನಿಗೆ ಎಂದೂ ಪೀಡೆಗಳು ಲಭಿಸುವುದಿಲ್ಲ. ಮನಃಕ್ಲೇಶವೇ ಆಗಲಿ, ಕಾಯಕ್ಲೇಶವೇ ಆಗಲಿ, ಭಯವೇ ಆಗಲಿ, ಯಾವುದೂ ಹತ್ತಿರಕ್ಕೆ ಬರುವುದಿಲ್ಲ. ಆ ತೀರ್ಥೇಶಲಿಂಗವು ಅಷ್ಟು ಮಹನೀಯವಾದುದು. ॥೫॥

ಆ ತೀರ್ಥೇಶಲಿಂಗವನ್ನು ಬಿಲ್ವಪತ್ರೆಯೇ ಮೊದಲಾದ ಪೂಜಾಸಂಭಾರಗಳಿಂದ ಆರಾಧನೆ ಮಾಡಿದರೆ, ಮೊದಲು ಈ ಲೋಕದಲ್ಲಿ ಅಪರಿಮಿತವಾದ ಐಶ್ವರ್ಯವು ದೊರೆಯುವುದಲ್ಲದೇ, ದೇಹಾಂತ್ಯದಲ್ಲಿ ಸ್ವರ್ಗವಾಸವೂ ಲಭಿಸುವುದು. ॥೬॥

ಪೂರ್ವಕಾಲದಲ್ಲಿ ಅನೇಕ ಋಷಿಗಳು ಶಂಕರನನ್ನು ಆರಾಧನೆಮಾಡುತ್ತಿದ್ದರು. ಅವರೆಲ್ಲರೂ ಪರಮಶಿವಭಕ್ತರಾಗಿದ್ದರು. ಶೈವಚಿಹ್ನೆಗಳಾದ ಭಸ್ಮವನ್ನೂ

ರುದ್ರಾಕ್ಷಮಾಲಾಭರಣಾಶ್ಶಿವಧ್ಯಾನಪರಾಯಣಾಃ ।
ಜಟಾಮಂಡಲವೀತಾಂಗಾಸ್ಸರ್ವೇ ಲಿಂಗಾರ್ಚನಪ್ರಿಯಾಃ ॥೮॥

ತೇ ಸರ್ವೇ ಗೌತಮಂ ದೃಷ್ಟ್ವಾ ಶಿವಯಾತ್ರಾಪರಾಯಣಂ ।
ಶಿಷ್ಯಕೋಟಿಸಮಾಕೀರ್ಣಂ ಶಿವಭಕ್ತವರಂ ಪರಂ ॥೯॥

ದೃಷ್ಟ್ವಾ ಭಕ್ತ್ಯಾ ನತಾಸ್ಸರ್ವೇ ಕೃತಾಂಜಲಿಪುಟಾಶ್ಶಿವೇ ।
ಮೋಕ್ಷಧರ್ಮಾಂಶ್ಚ ಪಪ್ರಚ್ಛುರ್ವಿನಯಾನತಕಂಧರಾಃ ॥೧೦॥

॥ ಋಷಯ ಊಚುಃ ॥

ಭಗವನ್ ಧರ್ಮತತ್ತ್ವಜ್ಞ ಶಿವಪೂಜೈಕಜೀವನ ।
ಮೋಕ್ಷೋಪಾಯಃ ಕಸ್ತ್ವಯಾದ್ಯ ಸ ವಕ್ತವ್ಯಸ್ಸಮಾಧಿನಾ ॥೧೧॥

---

ತ್ರಿಪುಂಡ್ರವನ್ನೂ ರುದ್ರಾಕ್ಷಮಾಲೆಗಳನ್ನೂ ಧರಿಸಿಕೊಂಡು ಸದಾ ಶಿವನನ್ನು ಧ್ಯಾನ ಮಾಡುವುದರಲ್ಲಿಯೇ ಆಸಕ್ತರಾಗಿರುತ್ತಿದ್ದರು. ಆ ಜಟಾಧಾರಿಗಳಾದ ಋಷಿಗಳು ಸರ್ವದಾ ಶಿವಲಿಂಗದ ಅರ್ಚನೆಯಲ್ಲಿಯೇ ಕಾಲಕಳೆಯುತ್ತಿದ್ದರು. ॥೭-೮॥

ಹೀಗೆ ಆ ಋಷಿಗಳೆಲ್ಲರೂ ಶಿವಾರಾಧನ ತತ್ಪರರಾಗಿ ಕಾಲಕಳೆಯುತ್ತಾ ಇರಲು ಒಂದುಸಲ ಅವರಿಗೆ ಗೌತಮಮಹರ್ಷಿಯ ಭೇಟಿ ಆಯಿತು. ಆ ಗೌತಮನು ಶಿವಕ್ಷೇತ್ರಗಳನ್ನೂ, ಶಿವಮಂದಿರಗಳನ್ನೂ, ಶಿವಾರಾಧನೆ ನಡೆಯುವ ಸ್ಥಳಗಳನ್ನೂ ದರ್ಶನ ಮಾಡುತ್ತಾ ಈ ಋಷಿಗಳಿದ್ದಲ್ಲಿಗೆ ಬರಲು, ಆ ಶಿಷ್ಯಕೋಟಿ ಪರಿವಾರ ಸಮೇತನಾದ ಗೌತಮನಿಗೆ ಸ್ವಾಗತವೇ ಮೊದಲಾದ ಸತ್ಕಾರಗಳನ್ನು ಮಾಡಿದರು. ॥೯॥

ಆ ಪರಮ ಶಿವಭಕ್ತನಾದ ಗೌತಮನನ್ನು ಕಂಡೊಡನೆಯೇ ಎಲ್ಲರೂ ಭಕ್ತಿಯಿಂದ ನಮಸ್ಕರಿಸಿ ಉಚಿತವಾಗಿ ಸತ್ಕರಿಸಿದರು. ಅನಂತರ ಎಲ್ಲರೂ ವಿನಯ ಪೂರ್ವಕವಾಗಿ ತಮಗೆ ಮೋಕ್ಷಧರ್ಮಗಳನ್ನು ಉಪದೇಶಿಸಬೇಕೆಂದು ಕೇಳಿ ಕೊಂಡರು. ॥೧೦॥

"ಭಗವನ್ ಗೌತಮಮಹರ್ಷಿಯೇ, ನೀನು ಧರ್ಮಗಳ ತತ್ತ್ವವನ್ನು ತಿಳಿದವ ನಿದ್ದೀಯೆ. ಸದಾ ಶಿವಾರಾಧನೆಯನ್ನೇ ನಿನ್ನ ಜೀವನದ ಪರಮೋದ್ದೇಶವಾಗಿ ಮಾಡಿಕೊಂಡಿದ್ದೀಯೆ. ಆದುದರಿಂದ ನೀನು ನಮ್ಮ ಪ್ರಶ್ನೆಗೆ ಸಮಂಜಸವಾದ

ಸಂಸಾರ ಸಾಗರೇ ಮಗ್ನಾಃ ಕೋಟಿಶೋ ಗೃಹಮೇಧಿನಃ ।
ಕೋಟಿಶಂಕರಸೇವಾಯಾಂ ನಿರತಾಸ್ಸರ್ವದಾ ಮುನೇ ॥೧೨॥

ತತ್ಸೇವಯಾಪಿ ಸಹಸಾ ಪಾಶಸ್ಸಂಸಾರಲಕ್ಷಣಃ ।
ನ ವಿಚ್ಛಿನ್ನಃ ಕಥಂ ತಸ್ಯ ವಿಚ್ಛೇದೋಽಪಿ ಭವಿಷ್ಯತಿ ॥೧೩॥

ನ ಕೋಽಪಿ ಶಿವತತ್ತ್ವಜ್ಞೋ ಯದಾ ಮೂರ್ತಿಸ್ವಭಾವತಃ ।
ಭವತ್ತುಲ್ಯೋ ನ ದೃಷ್ಟೋಽಭೂದಸ್ಮಾಭಿರ್ಭವಭೀರುಭಿಃ ॥೧೪॥

---

ಉತ್ತರವನ್ನು ಹೇಳಬೇಕು. ನಾವೆಲ್ಲರೂ ಸಂಶಯುಮನಸ್ಕರಾಗಿದ್ದೇವೆ. ಮೋಕ್ಷಕ್ಕೆ ಯಾವ ಉಪಾಯವು ಮುಖ್ಯ ಸಾಧನವಾಗುವುದು ? ಈ ನಮ್ಮ ಜಿಜ್ಞಾಸೆಯನ್ನು ನೀನು ಪರಿಹರಿಸಬೇಕು. ||೧೧||

ನಾವೆಲ್ಲರೂ ಗೃಹಸ್ಥಾಶ್ರಮಿಗಳಾಗಿ ವಿಧ್ಯುಕ್ತವಾದ ಸಕಲ ಕರ್ಮಗಳನ್ನೂ ಅನುಷ್ಠಾನ ಮಾಡುತ್ತಿದ್ದೇವೆ. ಅನೇಕಾನೇಕ ಶಿವಲಿಂಗಗಳಿಗೆ ಪೂಜೆ ಪುರಸ್ಕಾರ ಗಳನ್ನೂ ಸಹಾ ಮಾಡುತ್ತಿರುತ್ತೇವೆ. ಆದರೂ ಈ ಸಂಸಾರ ಬಂಧವು ನಮಗೆ ತಪ್ಪಿರುವುದಿಲ್ಲ. ಈ ಸಾಂಸಾರಿಕ ಭೀಷಣಕ್ಲೇಶದಲ್ಲಿ ಸಿಲುಕಿಕೊಂಡು ವ್ಯಥೆಪಡು ತ್ತಿದ್ದೇವೆ. ಅನುಭವಿಸಲು ದುಸ್ಸಾಧ್ಯವಾಗಿದೆ. ||೧೨||

ನಾವು ಅನವರತವೂ ಶಿವನ ಆರಾಧನೆಯನ್ನು ಮಾಡುತ್ತಲೇ ಇದ್ದರೂ ಈ ಸಂಸಾರ ಬಂಧನವು ತೊಲಗಿರುವುದಿಲ್ಲ. ಇದು ಎಷ್ಟು ಬದ್ಧಮೂಲವೆಂಬುದೂ ತಿಳಿಯುವುದಿಲ್ಲ. ಈ ಜನನ ಮರಣ ಸಂಸಾರವು ಹೇಗೆ ನಿವೃತ್ತವಾಗುವುದು ? ||೧೩||

ನಾವು ಬಹಳ ಕಾಲದಿಂದಲೂ ಶಿವತತ್ತ್ವಜ್ಞಾನಿಯನ್ನು ಹುಡುಕುತ್ತಿದ್ದೇವೆ. ಶಿವತತ್ತ್ವವನ್ನು ತಿಳಿದು ಶಾಂತಿಯನ್ನು ಪಡೆಯಬೇಕೆಂದು ಅತ್ಯಂತ ಉತ್ಸುಕರಾ ಗಿದ್ದೇವೆ. ಆದರೆ ಈವರೆಗೂ ಯಾರೂ ಅಂಥ ತತ್ತ್ವಜ್ಞರು ನಮಗೆ ದೊರೆಯಲಿಲ್ಲ. ನೀನಾದರೋ ಜನ್ಮತಃ ಪರಮಶಾಂತನೂ, ತತ್ತ್ವಜ್ಞನೂ ಆಗಿದ್ದೀಯೆ. ನಿನಗೆ ಸದೃಶರಾದ ಜ್ಞಾನಿಗಳೇ ಯಾರೂ ಇರುವುದಿಲ್ಲ. ||೧೪||

ಇದಂ ತ್ವಚ್ಚರಣಾಂಭೋಜಂ ದೃಷ್ಟಂ ಹಂತ್ಯಘಸಂಚಯಂ ।
ಅದ್ಯ ಪುಣ್ಯೈರಿದಂ ದೃಷ್ಟಂ ಸಂಪತ್ಸಂಪ್ರಾಪಕಂ ಚ ನಃ ॥೧೫॥

ಇತಿ ತದ್ವಾಕ್ಯಮಾಕರ್ಣ್ಯ ವಿಲೋಕ್ಯ ಸ ಮುನೀನಪಿ ।
ಪೂಜಯಿತ್ವಾ ಮಹಾದೇವಂ ಪ್ರಾಹ ಭಕ್ತಿಪುರಸ್ಸರಂ ॥೧೬॥

॥ ಗೌತಮ ಉವಾಚ ॥

ಶಿವಲಿಂಗಾರ್ಚನಧ್ಯಾನಶಾಸ್ತ್ರೇಣಾತಿಶಯೇನ ತು ।
ಸಂಸಾರಪಾಶವಿಚ್ಛೇದೋ ಭವತೀತ್ಯವಗಮ್ಯತಾಂ ॥೧೭॥

ಸಂಸಾರಸಾಗರೇ ತಾವದ್ಭಯಂ ಭವತಿ ಸರ್ವಥಾ ।
ಯಾವನ್ನಾರಾಧಿತೋ ದೇವೋ ಮಹಾದೇವೋ ಭವಃ ಪ್ರಭುಃ ॥೧೮॥

---

ಹೀಗೆ ಶಿವತತ್ತ್ವಜ್ಞನನ್ನು ನಾವು ನಿರೀಕ್ಷಿಸಿಕೊಂಡಿರುವಾಗ ನಿನ್ನ ದರ್ಶನವು ಆಗಿರುತ್ತದೆ. ಇದು ನಮ್ಮ ಅನೇಕ ಪುಣ್ಯಗಳ ಫಲವೇ ಸರಿ. ನಿನ್ನ ಚರಣಕಮಲ ಗಳ ದರ್ಶನವೂ, ಪೂಜನವೂ ಸಕಲ ಪಾಪಗಳನ್ನೂ ನಾಶಮಾಡುತ್ತವೆ. ಇನ್ನು ನಮಗೆ ದೈವೀಸಂಪತ್ತು ದೊರೆಯುವುದರಲ್ಲಿ ಸಂಶಯವಿಲ್ಲ. ॥೧೫॥

ಈರೀತಿಯಾಗಿ ಆ ಋಷಿಜನಗಳು ಪ್ರಶ್ನೆಮಾಡಲು ಅವರೆಲ್ಲರನ್ನೂ ಗಂಭೀರವಾಗಿ ನೋಡಿ ಗೌತಮನು ಮನಸ್ಸಿನಲ್ಲಿಯೇ ಶ್ಲಾಘಿಸಿದನು. ಅನಂತರ ಆ ಋಷಿವರ್ಗಗಳೊಂದಿಗೆ ಸಂಭ್ರಮದಿಂದ ಪರಮೇಶ್ವರನ ಪೂಜೆಯನ್ನು ಮಾಡಿ, ಭಕ್ತಿಪೂರ್ವಕವಾಗಿ ಶಿವಧರ್ಮದ ತತ್ತ್ವವನ್ನು ಹೇಳಲುಪಕ್ರಮಿಸಿದನು. ॥೧೬॥

ಈ ಸಂಸಾರದ ಕ್ಲೇಶಪಾಶದಿಂದ ಪಾರಾಗಲು ಮುಖ್ಯವಾದ ಉಪಾಯವೆಂದರೆ ಒಂದೇ. ಅದು ಶಿವಲಿಂಗಪೂಜೆಯೇ ಸರಿ. ಶಾಸ್ತ್ರವಿಧಿಯ ಕ್ರಮದಲ್ಲಿ ಲಿಂಗಪೂಜೆ ಯನ್ನೂ ಶಿವಧ್ಯಾನವನ್ನೂ ಮಾಡಿದರೆ ಖಂಡಿತ ಸಂಸಾರಬಂಧವು ಕಳಚಿಹೋಗುವು ದೆಂದು ತಿಳಿಯಿರಿ. ॥೧೭॥

ನೀವು ಹೇಳಿದಂತೆ ಈ ಸಂಸಾರವೆಂಬುದು ಮಹಾಸಮುದ್ರವೇ ಸರಿ. ಮತ್ತು ಇದರಲ್ಲಿ ಸಿಲುಕಿದವರಿಗೆ ಪದೇ ಪದೇ ಕಷ್ಟಗಳೂ ಭಯವೂ ಸಂಭವಿಸು ತ್ತಲೇ ಇರುತ್ತವೆ. ಆದರೆ ಇದೆಲ್ಲವೂ ಆ ಮಹಾದೇವನಾದ ಶಂಕರನ ಆರಾಧನೆಯು ಎಲ್ಲಿಯವರೆಗೆ ಆಚರಿಸಲ್ಪಡುವುದಿಲ್ಲವೋ, ಅಲ್ಲಿಯವರೆಗೇ ಈ ಕ್ಲೇಶಗಳ ಉಪಟಳ

ಯಸ್ತು ದೇವೋ ಮಹಾದೇವಸ್ಸರ್ವದೇವಶ್ಶಿಖಾಮಣಿಃ ।
ತನ್ನಾಮಸ್ಮರಣೋದ್ಯೋಗೋಽಪ್ಯಘರಾಶಿಲಯೋ ಭವೇತ್ ॥೧೯॥

ಶ್ರೀಮಹಾದೇವನಾಮಾನಿ ಸ್ಮರ್ತವ್ಯಾನೀತಿ ಯಸ್ಯ ಧೀಃ ।
ತಸ್ಯ ಪಾಪಾಚಲಾದ್ಭೀತಿಃ ಕದಾಪಿ ನ ಭವಿಷ್ಯತಿ ॥೨೦॥

ಮಹಾದೇವಾರ್ಚನೇ ಬುದ್ಧಿಃ ತಾವನ್ನೈವೋಪಜಾಯತೇ ।
ಯಾವನ್ನಾಘಕುಲಧ್ವಾಂತವಿಲಯಶ್ಶಂಕರಸ್ಮೃತಿಃ ॥೨೧॥

ಶಂಕರಸ್ಮರಣಾಕಾರಪ್ರಭಾಕರಕರಾವೃತೇ ।
ಚಿತ್ತೇ ಪಾಪಾಂಧಕಾರಸ್ಯ ವಿಲಯೋ ಭವತಿ ಧ್ರುವಂ ॥೨೨॥

---

ವಿರುವುದು. ಆ ಶಂಕರನನ್ನು ಆರಾಧಿಸಿದರೆ ಕ್ರಮೇಣ ಶಾಂತಿ ದೊರೆಯುವುದು. ॥೧೮॥

ಆ ಶಂಕರನು ಸಾಮಾನ್ಯದೇವತೆಗಳಂತಲ್ಲ. ಆತನು ಸಮಸ್ತದೇವತೆಗಳಿಗೂ ಚೂಡಾಮಣಿಯು. ಎಲ್ಲಾ ದೇವತೆಗಳಿಗೂ ಆತನೇ ದೇವರೂ ಆಗಿರುತ್ತಾನೆ. ಆತನ ಪುಣ್ಯನಾಮಸ್ಮರಣೆಯನ್ನೂ, ಸಂಕೀರ್ತನೆಯನ್ನೂ ಮಾಡುವುದಕ್ಕೆ ಪ್ರಯತ್ನಮಾಡಿದೊಡನೆಯೇ ಪಾಪದ ರಾಶಿಯೇ ಇದ್ದರೂ ಅದು ನಶಿಸಲಾರಂಭಿಸುವುದು. ॥೧೯॥

ಆ ಮಹಾದೇವನ ಪುಣ್ಯನಾಮಸ್ಮರಣೆಯನ್ನು ಮಾಡಬೇಕೆಂಬ ಯೋಚನೆ ಮಾತ್ರವಾದರೂ ಯಾವಾತನಿಗೆ ಇರುತ್ತದೆಯೋ, ಆತನಿಗೆ ಪಾಪದ ರಾಶಿರಾಶಿಯಿಂದಲೂ ಭಯವಿರುವುದಿಲ್ಲ. ಅದರಿಂದ ಆತನಿಗೆ ಎಂದೂ ಭಯವುಂಟಾಗುವುದಿಲ್ಲ. ॥೨೦॥

ಮನುಷ್ಯನ ಬುದ್ಧಿಯನ್ನು ಎಲ್ಲಿಯವರೆಗೆ ಪಾಪವೆಂಬ ಕತ್ತಲೆಯು ಆವರಿಸಿಕೊಂಡು ಆತನನ್ನು ತೊಳಲಿಸುವುದೋ ಅಲ್ಲಿಯವರೆಗೂ ಆತನಿಗೆ ಆ ಶಂಕರನನ್ನು ಅರ್ಚಿಸಲೂ ತಿಳಿಯುವುದಿಲ್ಲ, ಸ್ಮರಿಸಲೂ ಸಾಧ್ಯವಾಗುವುದಿಲ್ಲ. ಕಷ್ಟದಿಂದ ಪಾರಾಗುವ ಉಪಾಯವೇ ಆತನಿಗೆ ಹೊಳೆಯುವುದಿಲ್ಲ. ॥೨೧॥

ಕದಾಚಿತ್ ಧರ್ಮ ಕರ್ಮ ಸಂಯೋಗವಶದಿಂದ ಆ ಶಂಕರನ ಸ್ಮರಣೆಯು ಬಂದರೆ ಮನುಷ್ಯನ ಮನಸ್ಸಿನಲ್ಲಿ ಸೂರ್ಯನೇ ಉದಯಿಸಿದಂತಾಗಿ ಆ ಕೂಡಲೇ ಆ ಪಾಪವೆಂಬ ಗಾಢಕತ್ತಲೆಯು ನಾಶವಾಗುತ್ತದೆ. ॥೨೨॥

ಶ್ರೀಮಹಾದೇವಭಕ್ತಾನಾಂ ಭವಬಂಧಭಯಂ ಕುತಃ ।
ಭವಸ್ಮರಣಮಾತ್ರೇಣ ಭವರಾಶಿರ್ವಿನಶ್ಯತಿ ॥೨೩॥

ಭವಗಾಢಾಂಧಕಾರೋಽಪಿ ಮಹಾಮೋಹಪ್ರದಃ ಸದಾ ।
ತದ್ಭಕ್ತಿಭಾನುಮಾಲೋಕ್ಯ ಸ್ವತ ಏವ ವಿನಶ್ಯತಿ ॥೨೪॥

ದಿವಾಭೀತನಿಭಂ ಯತ್ತು ಭಯಂ ಸಂಸಾರಲಕ್ಷಣಂ ।
ತನ್ಮಹೇಶಾರ್ಚನಾಕಾರಸೂರೇ ದೃಷ್ಟೇ ಪ್ರಯಾಸ್ಯತಿ ॥೨೫॥

ಮಹಾದೇವಪ್ರಭಾವಸ್ತು ಸಹಸಾ ಜ್ಞಾಯತೇಽಪಿ ನ ।
ತಜ್ಜ್ಞಾನೇ ಸತಿ ಸಂಸಾರಭಯಮೇವ ನ ಜಾಯತೇ ॥೨೬॥

---

ಆ ಪರಮೇಶ್ವರನ ಭಕ್ತರಿಗೆ ಸಂಸಾರವೆಂದರೇನು? ಸಂಸಾರದ ಭಯ ವೆಂದರೇನು? ಅವುಗಳೆಲ್ಲಿ ಬಂದಾವು? ಆ ಶಂಕರನ ಸ್ಮರಣಮಾತ್ರದಿಂದಲೆ ರಾಶಿ ರಾಶಿ ಸಂಸಾರದುಃಖಗಳಿದ್ದಾಗ್ಯೂ ಅವುಗಳೆಲ್ಲವೂ ನಾಶವಾಗುವುವು. ||೨೩||

ಈ ಸಂಸಾರವೆಂಬುದು ಮಹಾ ಕಗ್ಗತ್ತಲೆಯಂತೆಯೇ ಸರಿ. ಇದು ಮಹಾ ಮೋಹಕರವಾದದ್ದು. ಇದರಲ್ಲಿ ಸಿಲುಕಿದವರಿಗೆ ಯುಕ್ತಾಯುಕ್ತಜ್ಞಾನವೂ ಕರ್ತವ್ಯಾಕರ್ತವ್ಯಜ್ಞಾನವೂ ಉಪಾದೇಯಾನುಪಾದೇಯಜ್ಞಾನವೂ ಏನೂ ಉಳಿಯುವುದಿಲ್ಲ. ಹೀಗಿದ್ದರೂ ಶಂಕರನಲ್ಲಿ ಭಕ್ತಿ ಎಂಬುದೊಂದಿದ್ದರೆ ಸೂರ್ಯ ನನ್ನು ಕಂಡು ಕತ್ತಲೆಯು ನಾಶವಾಗುವಂತೆ ಆ ಭಕ್ತಿಯ ಪ್ರಕಾಶದಿಂದ ಸಂಸಾರಾಂಧ ಕಾರವು ತೊಲಗುತ್ತದೆ. ||೨೪||

ಈ ಸಂಸಾರವೆಂಬುದೂ ಮತ್ತು ಅದರ ಭಯವೂ ಗೂಬೆಯಂತೆಯೇ ಸರಿ. ಅದು ಹೇಗೆ ಕತ್ತಲೆಯಲ್ಲಿ ಮಾತ್ರವೇ ಪರಾಕ್ರಮ ತೋರುವುದೋ, ಹಾಗೆಯೇ ಸಂಸಾರಭಯವೂ ಅಜ್ಞಾನಾವಸ್ಥೆಯಲ್ಲಿ ಮಾತ್ರವೇ ಮನುಷ್ಯನನ್ನು ಪೀಡಿಸು ವುದು. ಯಾವಾಗ ಈಶ್ವರನಲ್ಲಿ ಭಕ್ತಿಯೂ, ಆತನ ಪೂಜೆಯೂ ನಡೆಯುವುದೋ, ಆ ಕೂಡಲೇ ಸೂರ್ಯನನ್ನು ಕಂಡಕೂಡಲೇ ಗೂಬೆಯು ಪಲಾಯನ ಮಾಡುವಂತೆ ಸಂಸಾರಭಯವೂ ಮಾಯವಾಗುವುದು. ||೨೫||

ಸಂಸಾರವು ನಿವೃತ್ತವಾಗಬೇಕಾದರೆ ಮೊದಲು ಪರಮೇಶ್ವರನ ಮಹಿಮೆ ಯನ್ನು ಅರಿಯಬೇಕು. ಆದರೆ ಆತನ ಮಹಿಮೆಯನ್ನು ಅರಿಯಲು ಸುಲಭವಲ್ಲ.

ಮಹಾದೇವಂ ಸಕೃದ್ವಾಪಿ ಯಃ ಸ್ಮರೇದ್ಭಸ್ಮಭೂಷಣಃ ।
ತತ್ಪಾದದರ್ಶನೇನಾಪಿ ನ ಸಂಸಾರಮಹಾಭಯಂ ॥೨೭॥

ಮಹಾದೇವಾರ್ಚನೇ ಭಕ್ತಿಸ್ಸಹಸಾ ನೋಪಜಾಯತೇ ।
ಸಾ ಚೇಜ್ಜಾತಾ ತತೋ ದುಃಖಂ ನ ಕಾಲಾದಪಿ ಜಾಯತೇ ॥೨೮॥

ಮಹಾದೇವಾಭಿಧಾನಾನಿ ಸುಧಾಧಾರಾನಿಭಾನಿ ಯಃ ।
ಶೃಣೋತಿ ತತ್ಕುಲಸ್ಯಾಪಿ ನ ಸಂಸಾರಭಯಂ ಭವೇತ್ ॥೨೯॥

ಮಹಾದೇವಾಭಿಧಾನೇನ ಶ್ರುತೇನಾಪಿ ಸ್ಮೃತೇನ ವಾ ।
ಸಂಸಾರಸಾಗರಾಪಾರಂ ತರಿಣಾಪಿ ತರಂತಿ ತೇ ॥೩೦॥

---

ಅದು ಮಹಾಗಹನವೂ ಗೂಢವೂ ಆಗಿರುವುದು. ಅದನ್ನು ಪೂರ್ಣ ತಿಳಿದರೆ ಸಂಸಾರಭಯವೇ ಉಳಿಯುವುದಿಲ್ಲ. ||೨೬||

ಆ ಮಹಾದೇವನನ್ನು ಒಂದುಸಲವಾದರೂ ಸ್ಮರಿಸಿಕೊಂಡರೆ, ಒಂದು ತಡವೆಯಾದರೂ ಶಿವಚಿಹ್ನೆಗಳನ್ನು ಧಾರಣೆಮಾಡಿಕೊಂಡರೆ, ಒಂದು ಬಾರಿಯಾದರೂ ಶಿವಭಕ್ತನನ್ನು ದರ್ಶನಮಾಡಿದರೆ, ಈ ಮಹಾಸಂಸಾರಭಯವು ಕೊಂಚ ಕಡಮೆಯಾದೀತು. ||೨೭||

ಆ ಮಹಾದೇವನ ಅರ್ಚನೆಯಲ್ಲಿಯೂ ಶ್ರದ್ಧೆ, ಭಕ್ತಿ, ನಂಬಿಕೆ ಇವುಗಳು ಸುಲಭವಾಗಿ ಉಂಟಾಗಲಾರವು. ಅದಕ್ಕೂ ಪುಣ್ಯಬೇಕು. ಸಾಧನೆ ಬೇಕು. ಸಾಧು ಸತ್ಪುರುಷರ ಉಪದೇಶದಂತೆ ಸಾಧನೆಯಿಂದ ಶಿವಪೂಜೆಯನ್ನು ಮಾಡುತ್ತಾ ಭಕ್ತಿಯನ್ನು ಸಂಪಾದಿಸಿಕೊಂಡು ದೃಢಪಡಿಸಿಕೊಂಡರೆ, ಅಂಥವನಿಗೆ ಮೃತ್ಯುವಿನಿಂದಲೂ ಸಹ ಭಯವಿಲ್ಲ. ||೨೮||

ಯಾವನು ಅಮೃತಧಾರೆಗೆ ಸದೃಶವಾದ ಆ ಮಹಾದೇವನ ಪುಣ್ಯನಾಮಗಳನ್ನು ಕಿವಿಯಿಂದ ಕೇಳುವನೋ, ಆತನು ಮಾತ್ರವೇ ಸಂಸಾರಭಯದಿಂದ ಮುಕ್ತನಾಗುವುದಿಲ್ಲ. ಆತನ ವಂಶದವರಿಗೇನೇ ಸಂಸಾರ ಭಯವು ತಪ್ಪಿ ಹೋಗುವುದು. ||೨೯||

ಆ ಮಹಾದೇವನ ಪುಣ್ಯನಾಮಾವಳಿಯನ್ನು ಶ್ರವಣಮಾಡಿದವರು ಮಹಾಸಮುದ್ರವನ್ನು ದೋಣಿಯಿಂದ ಕ್ರಮವಾಗಿ ದಾಟುವಂತೆ ಈ ಸಂಸಾರವನ್ನೂ ಕ್ರಮಕ್ರಮವಾಗಿ ದಾಟಬಲ್ಲರು. ||೩೦||

ಮಹಾದೇವಂ ಸಕೃದ್ಧ್ಯಾತ್ವಾ ಸ್ಮೃತ್ವಾ ತನ್ನಾಮ ಸಾದರಂ ।
ಸಂಸಾರಸಾಗರಂ ತೀರ್ತ್ವಾ ಪ್ರಯಾಂತಿ ಶಿವಮಂದಿರಂ ॥೩೦॥

ಭಾಗ್ಯವಂತೋ ಮಹಾದೇವನಾಮರೂಪಾಂ ಸುಧಾಂ ಮುಹುಃ ।
ಸ್ಮೃತ್ವಾ ಕರ್ಣಪುಟೈಃ ಪೀತ್ವಾ ಸ್ತನ್ಯಾನಿ ನ ಪಿಬಂತಿ ಹಿ ॥೩೧॥

ಭಕ್ತ್ಯಾ ಕರ್ಣಸುವರ್ಣಪಾತ್ರಗ ಮಹಾದೇವಾಭಿಧಾನಾಮೃತಂ
ಪೀತ್ವಾ ತಿಷ್ಠ ಗರಿಷ್ಠ ನಿಷ್ಠುರವಚೋವೀಚೀಪ್ರಪಂಚೈರಲಂ ।

ತೇನೈವಾಶು ವರಿಷ್ಠತಾಂ ವ್ರಜ ಪುನಸ್ಸಂಸಾರಘೋರಾರ್ಣವ ।
ವ್ಯಾಕೀರ್ಣಾಮಿತಕರ್ಣಧಾರವರತಾಂ ಪ್ರಾಪ್ಯ ತ್ವಯಾ ಸತ್ವರಂ ॥೩೩॥

---

ಪರಮೇಶ್ವರನನ್ನು ಒಂದೇ ಒಂದುಸಲ ಧ್ಯಾನಮಾಡಿದರೆ, ಅಥವಾ ಆತನ ಪುಣ್ಯನಾಮವನ್ನು ಭಕ್ತಿಯಿಂದ ಒಂದುಬಾರಿ ಸ್ಮರಿಸಿಕೊಂಡರೆ ಸಾಕು. ಈ ಸಂಸಾರ ಸಾಗರವನ್ನು ದಾಟಬಹುದು ಮತ್ತು ಅಂತ್ಯದಲ್ಲಿ ಕೈಲಾಸವನ್ನೂ ಪಡೆಯ ಬಹುದು. ॥೩೦॥

ಆ ಪರಮೇಶ್ವರನ ಪುಣ್ಯನಾಮಾವಳಿಯನ್ನು ಭಾಗ್ಯವಂತರು, ಪದೇ ಪದೇ ಅಮೃತದಂತೆ ಕಿವಿ ಎಂಬ ದೊನ್ನೆಗಳಿಂದ ಪಾನಮಾಡುತ್ತಾರೆ. ಮತ್ತು ಕ್ಷಣೇ ಕ್ಷಣೇ ಧ್ಯಾನಮಾಡುತ್ತಾರೆ. ಅಂತಹ ಭಾಗ್ಯಶಾಲಿಗಳು ಮತ್ತೆ ಸ್ತನ್ಯವನ್ನು ಪಾನ ಮಾಡುವುದಿಲ್ಲ. (ಸ್ತನ್ಯಪಾನಮಾಡುವುದು ಪುನರ್ಜನ್ಮದ ಬಾಲ್ಯಾವಸ್ಥೆಯಲ್ಲಿ ತಾನೆ. ಅವರಿಗೆ ಪುನರ್ಜನ್ಮವೇ ಇಲ್ಲದಿರುವುದರಿಂದ ಸ್ತನ್ಯಪಾನಪ್ರಸಕ್ತಿಯೇ ಇರುವುದಿಲ್ಲ. ಮೋಕ್ಷವನ್ನೇ ಪಡೆಯುವರೆಂದು ತಾತ್ಪರ್ಯ.) ॥೩೧॥

ಓ ಮನುಜನೇ, ನೀನು ಅಮೂಲ್ಯವಾದ ಕಿವಿಯನ್ನು ಪಡೆದಿರುವೆ. ಅದನ್ನು ವ್ಯರ್ಥವಾಗಿ ಮಾಡಿಕೊಳ್ಳಬೇಡ. ಆ ನಿನ್ನ ಕಿವಿಯು ಸುವರ್ಣಪಾತ್ರೆಯಂತೆ ಅತ್ಯಂತ ಶ್ರೇಷ್ಠವಾಗಿರುವುದು. ಆ ಪಾತ್ರೆಯಿಂದ ಶಿವನಾಮವೆಂಬ ಅಮೃತ ವನ್ನು ತುಂಬಿ ತುಂಬಿಕೊಂಡು ಪಾನಮಾಡು. ಭಕ್ತಿ ಎಂಬ ಮದದಿಂದ ಮತ್ತ ನಾಗಿರು. ಈ ಪ್ರಪಂಚವು ಬಹು ಕ್ಷುದ್ರವಾದದ್ದು. ಇಲ್ಲಿ ಕಾಯಕ್ಕೂ ಇಂದ್ರಿಯ ಗಳಿಗೂ ಮನಸ್ಸಿಗೂ ಬಹು ಸಂತಾಪಕಾರಿಯಾದ ಕ್ಲೇಶಗಳು ತುಂಬಿರುತ್ತವೆ. ಇದರಲ್ಲಿ ನೀನು ಬೀಳಬೇಡ. ಆ ಶಿವನಾಮಾಮೃತಪಾನದಿಂದ ನೀನು ಮತ್ತ ನಾದರೆ ಇಲ್ಲಿ ಶ್ರೇಷ್ಠತ್ವವನ್ನೇ ಪಡೆಯುತ್ತೀಯೆ. ಈ ಸಂಸಾರಸಾಗರದಲ್ಲಿ ತೇಲುವವ

ಮಹಾದೇವಾಭಿಧಾನೇನ ನಿಧಾನೇನ ಪರಂ ಧನೀ ।
ತದ್ಧನಂ ಸಾವಧಾನೇನ ಸಾಧುಭಿರ್ಧ್ಯಾಯತೇ ಹೃದಿ ॥೩೪॥

ಮಹಾದೇವಾಭಿಧಾನಸ್ಯ ಧ್ವನಿಮಧ್ವನಿ ಸಾಧವಃ ।
ಸುಧಾಧುನೀಮಿವ ಪ್ರಾಪ್ಯ ಸಾನಂದಂ ಪ್ರಾಪ್ನುವಂತಿ ಹಿ ॥೩೫॥

ಮಹಾದೇವಾಭಿಧಾನೇನ ಮಹಾನಂದಸಮೃದ್ಧಯಃ ।
ವೃದ್ಧಿಂ ಪ್ರಯಾಂತಿ ತಾಸ್ತಾವತ್ಪರಮಾನಂದ ಸನ್ನಿಭಾಃ ॥೩೬॥

ಮಹಾದೇವಂ ಮುಹುರ್ಧ್ಯಾತ್ವಾ ಸಕೃದ್ವಾ ಪುಣ್ಯಕೋಟಿಭಿಃ ।
ಪುಣ್ಯರಾಶಿಮನುಪ್ರಾಪ್ಯ ಪುಣ್ಯವಾನೇವ ಜಾಯತೇ ॥೩೭॥

---

ರನ್ನು ದಾಟಿಸಲು ನೀನೇ ಸಮರ್ಥನಾದ ನಾವಿಕನಾಗಬಲ್ಲೆ. ಆದುದರಿಂದ ನೀನು ಇತರ ವ್ಯಾಮೋಹಗಳಿಗೆ ಮನಗೊಡದೇ ಶಿವನಾಮಧ್ಯಾನದಲ್ಲಿ ಆಸಕ್ತನಾಗು. ॥೩೩॥

ಈ ಲೌಕಿಕವಾದ ಧನಸಂಪತ್ತಿನಿಂದ ನಿಜವಾದ ಶ್ರೀಮಂತನೆನಿಸಲಾರನು. ಪರಂತು ಆ ಪರಮೇಶ್ವರನಾಮಾವಳಿ ಎಂಬ ದ್ರವ್ಯಗಣಿಯುಳ್ಳವನೇ ವಾಸ್ತವಿಕ ವಾಗಿ ಶ್ರೀಮಂತನಾಗಿರುವನು. ಅಂಥ ಧನವನ್ನು ಮುನಿಗಳೂ ಸಹ ಆಸಕ್ತಿಯಿಂದ ಮನಸಾ ಧ್ಯಾನಮಾಡುತ್ತಿರುತ್ತಾರೆ. ॥೩೪॥

ಋಷಿಜನಗಳಿಗೆ ಮಾರ್ಗದಲ್ಲಿರುವಾಗ ಶಿವನಾಮಧ್ವನಿಯೇ ಪಾನೀಯ ವಾಗುವುದು. ಆ ಶಿವನಾಮಶಬ್ದವನ್ನು ಕೇಳಿದರೆ ಅವರಿಗೆ ಅಮೃತಗಂಗೆಯೇ ಸಿಕ್ಕಿದಂತಾಗಿ ಪರಮಾನಂದವನ್ನು ಪಡೆಯುತ್ತಾರೆ. ॥೩೫॥

ಮಹಾನಂದ ಸಮೃದ್ಧಿಗಳು ಆ ಪರಮೇಶ್ವರನ ನಾಮಸಂಕೀರ್ತನದಿಂದ ಮತ್ತು ಅಭಿವೃದ್ಧಿಹೊಂದುತ್ತವೆ. ಕೊನೆಗೆ ಮೋಕ್ಷಾವಸ್ಥೆಯನ್ನು ಅನುಭವಿಸುವ ಪರಮಾನಂದಗಳೇ ಅವಾಗುತ್ತವೆ. ॥೩೬॥

ಆ ಪರಮೇಶ್ವರನನ್ನು ಪದೇ ಪದೇ ಧ್ಯಾನಮಾಡಿದರೆ ಕೋಟಿ ಕೋಟಿ ಪುಣ್ಯಗಳು ಲಭಿಸಿ, ಅನಂತರ ಆ ಪುಣ್ಯರಾಶಿಯಿಂದ ಪುಣ್ಯಾತ್ಮನೇ ಆಗುತ್ತಾನೆ. ॥೩೭॥

ಪಾಪಘೋರಾಬ್ಧಿಮಗ್ನಾನಾಂ ಕ್ಷಣಾತ್ತಾರಣಕಾರಣಂ ।
ಮಹಾದೇವಾಭಿಧಾನಂ ಹಿ ಮಹಾಪತ್ತಾರಕಂ ಪರಂ ॥೩೮॥

ಮಹಾದೇವಾಭಿಧಾರೂಪಮಮೃತಂ ಶಿವನಿರ್ಮಿತಂ ।
ಸಂಸಾರೋರಸ್ಸರಾಪಾರವಿಷರಾಶಿವಿನಾಶಕಂ ॥೩೯॥

ಸಂಸಾರಸಾಗರೇ ಘೋರೇ ಮಗ್ನೋ ಭಗ್ನಮನೋರಥಃ
ಅನಾಥನಾಥಂ ನ ಕಥಂ ವಿಶ್ವನಾಥಮಹಂ ಭಜೇ ॥೪೦॥

ಪಾಪಘೋರಾಬ್ಧಿಮಗ್ನಾನಾಂ ಕ್ಷಣಾತ್ತಾರಣಕಾರಣಂ ।
ಇದಂ ದೃಷ್ಟಂ ಶಿವಸ್ಥಾನಂ ಪಾಪನಾಶಾಯ ಜಾಯತೇ ॥೪೧॥

---

ಪರಮೇಶ್ವರನ ನಾಮಾವಳಿಯು ತಾರಕಮಂತ್ರವಾಗಿದೆ. ಮಹಾಪಾಪ ಸಮುದ್ರದಲ್ಲಿ ಮುಳುಗಿರುವವರನ್ನೂ ಸಹ ಈ ನಾಮವು ಕ್ಷಣಮಾತ್ರದಲ್ಲಿ ಉದ್ಧರಿಸಿ ಕಾಪಾಡುವುದು. ಮಹಾವಿಪತ್ತುಗಳಿಂದ ಸಹ ಈ ನಾಮಾವಳಿಯು ಪಾರುಮಾಡುವುದು. ॥೩೮॥

ಈ ಶಿವನಾಮಾವಳಿಯನ್ನು ಸಾಕ್ಷಾತ್ ಆ ಪರಮೇಶ್ವರನೇ ನಿರ್ಮಿಸಿರುತ್ತಾನೆ. ಇದನ್ನು ಒಂದು ಅಮೃತವನ್ನಾಗಿಯೇ ತಯಾರಿಸಿದ್ದಾನೆ. ಈ ಅಮೃತವು ಸಂಸಾರವೆಂಬ ಸರ್ಪದ ಸಕಲ ವಿಷವನ್ನೂ ನಾಶಮಾಡಿ ಮನುಷ್ಯನನ್ನು ಅಮರನನ್ನಾಗಿ ಮಾಡುತ್ತದೆ. ॥೩೯॥

ಈ ಸಂಸಾರವೆಂಬ ಅಗಾಧವಾದ ಸಮುದ್ರವು ಅತ್ಯಂತ ಭಯಂಕರವಾಗಿರುವುದು. ಇದರಲ್ಲಿ ಬೀಳಲು ಮನಸ್ಸಿನ ಎಲ್ಲಾ ಆಸೆ ಅಭಿಲಾಷೆಗಳೂ, ಜೊತೆಯಲ್ಲಿ ಧೈರ್ಯವೂ ನಾಶವಾಗುವುದು. ಹೀಗೆಯೇ ನಿರ್ವಿಣ್ಣನಾದ ನಾನು ಆ ಅನಾಥ ಸಂರಕ್ಷಕನಾದ ಪರಮೇಶ್ವರನನ್ನು ಹೇಗೆತಾನೆ ಏತಕ್ಕೆ ತಾನೇ ಭಜಿಸದಿರಲಿ! ॥೪೦॥

ಅದರಲ್ಲಿಯೂ ಶಿವಕ್ಷೇತ್ರವು ಅತ್ಯಂತ ಪವಿತ್ರತಮವಾದದ್ದು. ಪಾಪಮಹಾ ಸಮುದ್ರದಲ್ಲಿ ಮುಳುಗಿರುವವರನ್ನೂ ಸಹ, ಶಿವಕ್ಷೇತ್ರವು ಕೂಡಲೇ ಅವರ ಪಾಪಗಳನ್ನು ಧ್ವಂಸಮಾಡಿ ಪವಿತ್ರರನ್ನಾಗಿ ಮಾಡುತ್ತದೆ. ॥೪೧॥

ಇತೋಽಪ್ಯುತ್ತಮಂ ಲಿಂಗಂ ಲಿಂಗಂ ತೀರ್ಥೇಶ್ವರಾಭಿಧಂ ।
ಇತೋಽಪ್ಯುತ್ತಮಂ ಲಿಂಗಂ ಮಂಡಲೇಽಸ್ಮಿನ್ನ ದೃಶ್ಯತೇ ॥೪೨॥

ತತ್ರಾದ್ಯ ಗತ್ವಾ ತೀರ್ಥೇಶಃ ಪೂಜನೀಯಃ ಪ್ರಯತ್ನತಃ ।
ಸೋಮತ್ರಯೋದಶೀ ಸೇಯಂ ಪಾತಾದ್ರ್ರಾಸಂಯುತಾ ತಥಾ॥೪೩॥

ಭೂತಯಾ ಸಂಯುತಾ ಶ್ರೇಷ್ಠಂ ಶಿವಪೂಜನಸಾಧನಂ ।
ಇತ್ಯುಕ್ತಂ ತದ್ವಚಶ್ಶ್ರುತ್ವಾ ಗೌತಮೇನ ಸಹಾದರಾತ್ ॥೪೪॥

ತತಸ್ತೀರ್ಥೇಶ್ವರಂ ಪ್ರಾಪು ರ್ಮುನಯೋ ಗೌತಮಾನ್ವಿತಾಃ ।
ತತಸ್ತೇ ಮುನಯಃ ಸ್ನಾತ್ವಾ ಪಾಪನಾಶನವಾರಿಭಿಃ ॥೪೫॥

ಉದ್ಧೂಲ್ಯ ಭಸ್ಮನಾಂಗಾನಿ ರುದ್ರಾಕ್ಷಾಲಂಕೃತಾಶ್ಚ ತೇ ।
ತತಃ ಪರಂ ಬಿಲ್ವಪತ್ರಾಣ್ಯಮಲಾನಿ ಜಲಾನ್ಯಪಿ ॥೪೬॥

---

ಆದರಲ್ಲಿಯೂ ಮಹತ್ತಮವೆಂದರೆ ಶ್ರೀ ತೀರ್ಥೇಶ್ವರವೆಂಬ ಶಿವಲಿಂಗವು. ಅದು ಅತ್ಯಂತ ಶ್ರೇಷ್ಠತಮವಾದುದು. ಅದರಂತಹ ಶ್ರೇಷ್ಠವಾದ ಶಿವಲಿಂಗವು ಬೇರೊಂದೂ ಪ್ರಪಂಚದಲ್ಲಿ ಇರುವುದಿಲ್ಲ. ॥೪೨॥

ಆದುದರಿಂದ ಅಲ್ಲಿಗೆ ಹೋಗಿ ಆ ತೀರ್ಥೇಶ್ವರಲಿಂಗವನ್ನು ಅವಶ್ಯವಾಗಿ ಪೂಜಿಸಬೇಕು. ಅದರಲ್ಲಿಯೂ ಇಂದು ವಿಶೇಷ ಯೋಗಾವಳಿ ಇರುತ್ತದೆ. ಈದಿನ ಸೋಮವಾರವೂ ಪ್ರದೋಷವೂ ಆಗಿರುವುದಲ್ಲದೇ ಆದ್ರ್ರಾನಕ್ಷತ್ರವೂ ಚತುರ್ದಶೀ ತಿಥಿಯೂ ಇಂದಿಗೆ ಸೇರಿರುತ್ತದೆ. ಇಂಥ ಯೋಗಾವಳಿಕಾಲ ಸಿಕ್ಕಿರುವಾಗ ನಾವು ಅವಶ್ಯ ಲಿಂಗಾರ್ಚನೆಯನ್ನು ಮಾಡಬೇಕು." ॥೪೩॥

ಹೀಗೆ ಶಿವಲಿಂಗಪೂಜೆಗೆ ಅತ್ಯುತ್ತಮ ಕಾಲವೆಂದು ಕೇಳಿ, ಅವರೆಲ್ಲರೂ ಆ ಗೌತಮನೊಡನೆ ಆ ತೀರ್ಥೇಶ್ವರ ಲಿಂಗವಿದ್ದಲ್ಲಿ ಹೋದರು. ॥೪೪॥

ಅನಂತರ ಅಲ್ಲಿರುವ ಪಾಪನಾಶಕವಾದ ತೀರ್ಥದಲ್ಲಿ ಅವರೆಲ್ಲರೂ ಸ್ನಾನ ಮಾಡಿದರು. ಮೈಗೆಲ್ಲಾ ಭಸ್ಮವನ್ನೂ ರುದ್ರಾಕ್ಷಮಾಲೆಗಳನ್ನೂ ಧರಿಸಿದರು. ಅನಂತರ ಶಿವಪೂಜೆಗೆ ಬೇಕಾದ ಬಿಲ್ವಪತ್ರೆ ಮತ್ತು ನಿರ್ಮಲವಾದ ಜಲ ಇವೆಲ್ಲ ವನ್ನೂ ಶೇಖರಿಸಿದರು. ॥೪೫-೪೬॥

ಗೃಹೀತ್ವಾ ತೀರ್ಥನಾಥಸ್ಯ ಪೂಜಾಂ ಚಕ್ರುರ್ಮುನೀಶ್ವರಾಃ ।
ತತಃ ಪ್ರದಕ್ಷಿಣೀಕೃತ್ಯ ದಂಡವತ್ಪ್ರಣಿಪತ್ಯ ತೇ ॥೪೭॥

ಶಿವಧ್ಯಾನರತಾಸ್ಸರ್ವೇ ಸ್ಥಿತಾಸ್ತನ್ಮುಕ್ತಿಮುಂಟಪೇ ।
ತತಃ ಪರಂ ಮುನಿವರಾಸ್ತೀರ್ಥೇಶನಿಕಟಸ್ಥಿತಾಃ ॥೪೮॥

ಬಿಲ್ವಪತ್ರಕರಾಸ್ಸರ್ವೇ ಗೌತಮಂ ದ್ರಷ್ಟುಮಾಗತಾಃ ।
ತತಃ ಪರಂ ಬಿಲ್ವಪತ್ರೈಸ್ತೀರ್ಥನಾಥಾರ್ಚನಂ ಮುದಾ ॥೪೯॥

ಕೃತ್ವಾ ನತ್ವಾ ಗೌತಮಂ ಚ ಪ್ರಣತಾಃ ಪ್ರೀತಿಪೂರ್ವಕಂ ॥೫೦॥

ತಾನಾಗತಾನ್ ಸಮಾಲೋಕ್ಯ ಗೌತಮಶ್ಶಾಂಭವೋತ್ತಮಾನ್ ।
ತದುಕ್ತವಚನಂ ರಮ್ಯಂ ಶುಶ್ರಾವ ಪ್ರೀತಿಪೂರ್ವಕಂ ॥೫೧॥

॥ ಮುನಯ ಊಚುಃ ॥

ತೀರ್ಥೇಶಕ್ಷೇತ್ರಮಹಿಮಾ ಮಹತಾ ಜ್ಞಾಯತೇ ತ್ವಯಾ ।
ಸ ವಕ್ತವ್ಯೋಽಧುನಾ ಯೇನ ನಿಷ್ಪಾಪಾಃ ಸ್ಮೋ ವಯಂ ಮುನೇ ॥೫೨॥

---

ಅನಂತರ ಅವರೆಲ್ಲರೂ ಶಾಂತಮನಸ್ಕರಾಗಿ ಭಕ್ತಿಯಿಂದ ಆ ತೀರ್ಥೇಶ್ವರ ಲಿಂಗಕ್ಕೆ ಸಕಲೋಪಚಾರಪುರಸ್ಸರವಾಗಿ ಪೂಜೆಮಾಡಿದರು. ಪೂಜಾಂತ್ಯದಲ್ಲಿ ಸಾಷ್ಟಾಂಗವಾಗಿಯೂ ಉದ್ದಂಡವಾಗಿಯೂ ನಮುಸ್ಕಾರವನ್ನು ಮಾಡಿದರು. ||೪೭||

ಅನಂತರ ಅದೇ ತೀರ್ಥೇಶ್ವರಲಿಂಗದ ಸಮೀಪದಲ್ಲಿಯೇ ಕುಳಿತುಕೊಂಡು ಏಕಾಂತಮನಸ್ಕರಾಗಿ ಎಲ್ಲರೂ ಆ ಪರಶಿವನನ್ನೇ ಧ್ಯಾನಮಾಡಿದರು. ||೪೮||

ಹಾಗೆ ಧ್ಯಾನಮಾಡಿದ ಮೇಲೆ ಮತ್ತೆ ಬಿಲ್ವಪತ್ರೆಗಳಿಂದ ಲಿಂಗವನ್ನು ಅರ್ಚಿಸಿ ಗೌತಮಮಹರ್ಷಿಯು ಕುಳಿತಲ್ಲಿಗೆ ಬಂದು ಆತನನ್ನೂ ಅತ್ಯಂತ ಆದರ ದಿಂದಲೂ ವಿನಯದಿಂದಲೂ ನಮುಸ್ಕರಿಸಿದರು. ||೪೯-೫೦||

ಆಗ ಗೌತಮನು ತನ್ನ ಬಳಿಗೆ ಬಂದ ಆ ಶಿವಭಕ್ತರನ್ನೆಲ್ಲಾ ಬಹಳ ಪ್ರೀತಿಯಿಂದ ಪುರಸ್ಕರಿಸಿದನು. ಮತ್ತು ಅವರು ಹೇಳಿದ ರಮ್ಯವಾದ ಮಾತನ್ನೂ ಆದರದಿಂದ ಕೇಳಿದನು. ||೫೧||

ಓ, ಮಹರ್ಷಿ ಗೌತಮ, ಈ ತೀರ್ಥೇಶಲಿಂಗವಿರುವ ಕ್ಷೇತ್ರದ ಮಹಿಮೆಯು

ಇತಿ ತದ್ವಚನಂ ಶ್ರುತ್ವಾ ಗೌತಮಃ ಪ್ರೀತಮಾನಸಃ ।
ನತ್ವಾ ತೀರ್ಥೇಶ್ವರಂ ಭಕ್ತ್ಯಾ ತಾನಾಹ ಪ್ರೀತಿಪೂರ್ವಕಂ ॥೫೩॥

॥ ಗೌತಮ ಉವಾಚ ॥

ಸಾಧುಪೃಷ್ಟಮಿದಂ ಕ್ಷೇತ್ರಂ ತೀರ್ಥೋತ್ತಮಮಿತಿ ಸ್ಮೃತಂ ।
ಅಯಂ ತೀರ್ಥೇಶ್ವರೋ ದೇವೋ ಲಿಂಗಂ ತೀರ್ಥೇಶ್ವರಾಭಿಧಂ॥೫೪॥

ಅಸ್ಯ ತೀರ್ಥೇಶಮಹಿಮಾ ವೇದೈರ್ವಿಜ್ಞಾಯತೇ ಪರಂ ।
ಮಯಾಪಿ ತತ್ಪ್ರಸಾದೇನ ಕಥಂಚಿತ್ ಜ್ಞಾಯತೇ ಖಲು ॥೫೫॥

ಅತ್ರ ಪೂರ್ವಂ ಮುನಿವರಾಃ ಶಂಕರಾರಾಧನೋತ್ಸುಕಾಃ ।
ಬಹವಸ್ತೀರ್ಥನಾಥಸ್ಯ ಪೂಜಾಧ್ಯಾನರತಾಸ್ಸದಾ ॥೫೬॥

---

ಮಹಾತ್ಮನಾದ ನೀನು ಅರಿತಿರುವೆ. ಆ ಮಹಿಮೆಯನ್ನು ನಮಗೂ ಹೇಳಿ ನಮ್ಮ ಪಾಪವನ್ನು ಪರಿಹರಿಸಬೇಕು. ॥೫೨॥

ಈರೀತಿಯಾಗಿ ಆ ಮುನಿಗಳು ಪ್ರಶ್ನೆಮಾಡಲು ಗೌತಮನು ಸಂತುಷ್ಟನಾದನು. ಮತ್ತು ಮನಸ್ಸಿನಲ್ಲಿ ಆ ತೀರ್ಥೇಶ್ವರನನ್ನು ಧ್ಯಾನಮಾಡಿಕೊಂಡು ಪ್ರಸನ್ನವದನನಾಗಿ ಹೇಳತೊಡಗಿದನು. ॥೫೩॥

ಎಲೈ ಮುನಿಗಳಿರಾ, ನೀವು ಬಹು ಯೋಗ್ಯವಾದ ಪ್ರಶ್ನೆಯನ್ನು ಕೇಳಿರುತ್ತೀರಿ. ಇದನ್ನು ಅರಿತುಕೊಂಡಿರಬೇಕಾದದ್ದು ಯುಕ್ತವಾಗಿರುತ್ತದೆ. ಈ ಕ್ಷೇತ್ರಕ್ಕೆ ಬಹಳ ಪ್ರಾಶಸ್ತ್ಯವಿದೆ. ಇದು ಶ್ರೇಷ್ಠವಾದ ಯಾತ್ರಾಸ್ಥಳವೆನಿಸಿದೆ. ಇಲ್ಲಿರುವ ಪರಮೇಶ್ವರ ಸನ್ನಿಧಿಗೆ ತೀರ್ಥೇಶ್ವರಕ್ಷೇತ್ರ ಎಂಬ ಹೆಸರಿರುತ್ತದೆ. ಈ ಲಿಂಗದ ಹೆಸರೂ ತೀರ್ಥೇಶ್ವರ ಎಂತಲೇ. ॥೫೪॥

ಈ ತೀರ್ಥೇಶ್ವರನ ಮಹಿಮೆಯು ಅಗಾಧವಾದದ್ದು. ಅದನ್ನು ವೇದವು ಒಂದೇ ಅರಿತುಕೊಂಡಿರುವುದು. ಅದೇ ವೇದಾನುಗ್ರಹದಿಂದ ನನಗೂ ಕೊಂಚ ಆತನ ಮಹಿಮೆಯು ತಿಳಿದಿರುತ್ತದೆ. ಅದನ್ನೇ ಹೇಳುವೆನು. ಸಾವಧಾನದಿಂದ ಕೇಳಿರಿ. ॥೫೫॥

ಪೂರ್ವಕಾಲದಲ್ಲಿ ಅನೇಕಾನೇಕ ಮುನಿಶ್ರೇಷ್ಠರು ಪರಮೇಶ್ವರನ ಆರಾಧನೆಯನ್ನು ಇದೇ ತೀರ್ಥೇಶ್ವರಲಿಂಗದಲ್ಲಿಯೇ ಮಾಡಿರುವರು. ಇದೇ ಲಿಂಗದ ಬಳಿಯೇ ಆ ಪರಮೇಶ್ವರನನ್ನು ಧ್ಯಾನಿಸುತ್ತಿದ್ದರು. ॥೫೬॥

ತೇ ಲಬ್ಧ್ವಾ ಕಾಮನಿಚಯಂ ಭುಕ್ತ್ವಾ ಭೋಗಾನ್ ಯಥೇಚ್ಛಯಾ।
ಅಂತರ್ಹಿತಾಃ ಪ್ರಯತ್ನೇನ ಲಿಂಗೇ ತೀರ್ಥೇಶ್ವರಾಭಿಧೇ ॥೫೭॥

ಇದಂ ತು ಕಾಮದಂ ಲಿಂಗಂ ಮುಕ್ತಿದಂ ಚ ಮುನೀಶ್ವರಾಃ ।
ಏತನ್ನಿರ್ಮಾಲ್ಯಪೂಜಾಪಿ ಮುಕ್ತಿಸಾಧನಮುಚ್ಯತೇ ॥೫೮॥

ಪುರಾ ವಿಜಯಯಾ ಸೃಷ್ಟಂ ಜಯಯಾಪಿ ಪುರಂ ಪರಂ ।
ಧೀರೇ ಕ್ಷೀರನದೀತೀರೇ ಗೌರೀತೀರ್ಥೇಶ್ವರಾಜ್ಞಯಾ ॥೫೯॥

ರತ್ನಪ್ರಾಕಾರಸಂಕೀರ್ಣಂ ರತ್ನಗೋಪುರಸಂಕುಲಂ ।
ತತಸ್ತಾಭ್ಯಾಂ ಮಹಾದೇವಸ್ತೀರ್ಥೇಶಃ ಪ್ರಾರ್ಥಿತಃ ಸ್ತವೈಃ ॥೬೦॥

---

ಇದೇ ರೀತಿಯಾಗಿ ಅತ್ಯಂತ ಪ್ರಯತ್ನದಿಂದ ಪರಮೇಶ್ವರನನ್ನು ಆರಾಧಿಸಿ ಆ ಮುನಿಗಳು ತಮ್ಮ ತಮ್ಮ ಮನೋರಥಗಳನ್ನು ಪಡೆದುಕೊಂಡರು. ಅನಂತರ ಅನೇಕ ಕಾಲ ಭೋಗವಿಲಾಸಗಳೆಲ್ಲವನ್ನೂ ಅನುಭವಿಸಿ, ಅಂತ್ಯದಲ್ಲಿ ಇದೇ ತೀರ್ಥೇಶ್ವರಲಿಂಗದಲ್ಲಿಯೇ ಐಕ್ಯರಾದರು. ||೫೭||

ಈ ಲಿಂಗವು ಮನಸ್ಸಿನ ಸಕಲ ಇಷ್ಟಾರ್ಥಗಳನ್ನೂ ಪೂರೈಸಿಕೊಡುವುದಲ್ಲದೇ ಮುಕ್ತಿಯನ್ನೂ ಸಹ ಕೊಡುವುದು. ಇನ್ನೊಂದು ಅದ್ಭುತವೇನೆಂದರೆ, ಈ ಲಿಂಗಕ್ಕೆ ಪೂಜೆಮಾಡಿ, ಅನಂತರ ತೆಗೆದಿರುವ ಹೂವೇ ಮೊದಲಾದ ನಿರ್ಮಾಲ್ಯಕ್ಕೆ ಪೂಜೆ ಮಾಡಿದರೂ ಸಹ, ಆ ಪೂಜೆಯು ಮುಕ್ತಿಗೆ ಸಾಧನವಾಗುವುದು. ಇದಕ್ಕೆ ಒಂದು ಇತಿಹಾಸವುಂಟು. ||೫೮||

ಪೂರ್ವಕಾಲದಲ್ಲಿ ವಿಜಯೆ ಮತ್ತು ಜಯೆ ಎಂಬ ಇಬ್ಬರು ಸ್ತ್ರೀಯರಿದ್ದರು. ಅವರು ತೀರ್ಥೇಶ್ವರನ ಪ್ರೇರಣೆ ಮೇರೆಗೆ ಕ್ಷೀರನದಿಯ ದಡದಲ್ಲಿ ಶ್ರೇಷ್ಠವಾದ ನಗರವನ್ನು ನಿರ್ಮಾಣಮಾಡಿದರು. ||೫೯||

ತಾವು ನಿರ್ಮಿಸಿದ ನಗರವನ್ನು ಅಚ್ಚುಕಟ್ಟಾಗಿ ಅಲಂಕರಿಸಿದರು. ಸುತ್ತಲೂ ರತ್ನದ ಪ್ರಾಕಾರವನ್ನು ಕಟ್ಟಿಸಿದರು. ಪುರದ ಬಾಗಿಲಲ್ಲಿ ಸುಂದರವಾದ ಗೋಪುರವನ್ನೂ ನಿರ್ಮಿಸಿದರು. ಆ ಕೆಲಸಗಳು ಸಂಪೂರ್ಣವಾದಮೇಲೆ ಅವರಿಬ್ಬರೂ ಮಹಾದೇವನಾದ ತೀರ್ಥೇಶನನ್ನು ಕುರಿತು ಹೀಗೆ ಪ್ರಾರ್ಥಿಸಿದರು. ||೬೦||

ತ್ವಯಾ ತ್ವದಾಜ್ಞಯಾ ಸೃಷ್ಟೇ ನಗರೇ ರತ್ನಸುಂದರೇ ।
ವಸತಿಸ್ಸತತಂ ಕಾರ್ಯಾ ದಯಯಾ ಪರಯೇತ್ಯಪಿ ॥೬೧॥

ತಯೋಸ್ತದ್ವಚನಂ ಶ್ರುತ್ವಾ ತಥಾಸ್ತ್ವಿತ್ಯಾಹ ಶಂಕರಃ ।
ತತಃ ಪರಂ ಗತಂ ತಾಭ್ಯಾಂ ಸಂತೋಷೇಣ ಶಿವಾಜ್ಞಯಾ ॥೬೨॥

ಸ್ವಭಕ್ತಾನುಗ್ರಹಂ ಕರ್ತುಂ ಸ್ವನಿರ್ಮಾಲ್ಯೇಽಪಿ ಶಂಕರಂ ।
ಸ್ಥಿತಸ್ಸಮರ್ಚಿತೋ ಭಕ್ತ್ಯಾ ಸರ್ವಾಭೀಷ್ಟಪ್ರದೋ ಭವೇತ್ ॥೬೩॥

ತತಃ ಸ್ವಭಕ್ತನೀತೇಽಪಿ ಸ್ಥಿತೋ ನಿರ್ಮಾಲ್ಯಚಂದನೇ ।
ಶಿವಸ್ತಂ ನಗರಂ ಪ್ರಾಪ ತದಭೀಷ್ಟಪ್ರದೋ ಬುಧಾಃ ॥೬೪॥

---

ಓ ಪರಮೇಶ್ವರನೇ, ನಿನ್ನಿಂದಲೇ, ನಿನ್ನ ಪ್ರೇರಣೆಯಿಂದಲೇ ಆ ನಗರವು ಸುಂದರವಾಗಿಯೂ, ರತ್ನಮಯವಾಗಿಯೂ ನಿರ್ಮಾಣವಾಗಿರುತ್ತದೆ. ಆ ನಗರದಲ್ಲಿ ನೀನೂ ಸಹ ಸದಾ ಬಂದು ನೆಲೆಸಿರಬೇಕು. ನಮ್ಮ ಮೇಲೆ ಕೃಪೆಮಾಡಿ ನಮ್ಮ ನಗರದಲ್ಲಿ ನಿನ್ನ ಸನ್ನಿಧಿಯನ್ನು ಕರುಣಿಸಬೇಕು." ಹೀಗೆಂದು ಪ್ರಾರ್ಥಿಸಿದರು. ||೬೧||

ಆವರಿಬ್ಬರ ಪ್ರಾರ್ಥನೆಯನ್ನು ಕೇಳಿ ಪರಮೇಶ್ವರನು ಸಂತೋಷದಿಂದ ಹಾಗೆಯೇ ಆಗಲೆಂದು ಸಮ್ಮತಿಸಿದನು. ಈ ರೀತಿಯಾಗಿ ತಮ್ಮ ಇಷ್ಟಾರ್ಥವು ಶಿವಸಮ್ಮತಿರೂಪವಾದ ಅಪ್ಪಣೆಯಿಂದ ನೆರವೇರಿದ್ದಕ್ಕಾಗಿ ಆವರಿಬ್ಬರೂ ಅತ್ಯಂತ ಸಂತುಷ್ಟರಾದರು. ||೬೨||

ತನ್ನ ಭಕ್ತರಿಗೆ ಅನುಗ್ರಹ ಮಾಡಲು ಪರಮೇಶ್ವರನು ತನ್ನ ನಿರ್ಮಾಲ್ಯದಲ್ಲಿಯೂ ತನ್ನ ಸನ್ನಿಧಿಯನ್ನು ತಳೆದಿರುವನು. ಆದುದರಿಂದ ಆ ನಿರ್ಮಾಲ್ಯಕ್ಕೆ ಭಕ್ತಿಯಿಂದ ಪೂಜೆಮಾಡಿದರೂ, ಆ ಶಿವನೇ ಸಕಲ ಇಷ್ಟಾರ್ಥಗಳನ್ನೂ ಕೊಡುವನು. ||೬೩||

ತನ್ನ ಭಕ್ತರಿಂದ ತೀರ್ಥೇಶ್ವರಲಿಂಗ ನಿರ್ಮಾಲ್ಯವು ಗೃಹೀತವಾದರೆ, ಆ ನಿರ್ಮಾಲ್ಯದಲ್ಲಿಯೂ ಪರಮೇಶ್ವರನು ತನ್ನ ಸಾನ್ನಿಧ್ಯವನ್ನು ಅನುಗ್ರಹಿಸುವನು. ಅಂತೆಯೇ ಆ ವಿಜಯೆ, ಜಯೆಯರು ಸ್ವೀಕರಿಸಿದ ನಿರ್ಮಾಲ್ಯ ಚಂದನದಲ್ಲಿ ತನ್ನ ಸನ್ನಿಧಿಯನ್ನು ಅಂಗೀಕರಿಸಿ, ಆ ಚಂದನದೊಡನೆ ಅವರ ನಗರದಲ್ಲಿ ಹೋಗಿ ಶಂಕರನು ನೆಲೆಸಿದನು. ||೬೪||

ತತ್ರಾಭೀಷ್ಟಪ್ರದೋ ಜಾತಃ ಸ್ವಭಕ್ತೇಭ್ಯಃ ಸದಾ ಶಿವಃ ।
ಕರಿಷ್ಯಂತ್ಯೇವ ಬಹವಸ್ತತ್ಪೂಜಾಂ ಭಾಗ್ಯಲಿಪ್ಸವಃ ॥೬೫॥

ಯೇ ನಿತ್ಯಂ ತೀರ್ಥನಾಥಸ್ಯ ನಿರ್ಮಾಲ್ಯಸ್ಯಾಪಿ ಪೂಜನಂ ।
ಕರಿಷ್ಯಂತಿ ಪ್ರಯತ್ನೇನ ತೇ ಪೂಜ್ಯಾಃ ಸ್ಯುಃ ಸುರೈರಪಿ ॥೬೬॥

ಯದಾ ಯತ್ರ ಸ ತೀರ್ಥನಾಥೋ ಜಾತಃ ಸ್ವಭಕ್ತೈರಪಿಪೂಜಿತಃ ಸ್ಯಾತ್ ।
ತತ್ರ ಸ್ಥಿತಸ್ತತ್ಕೃತಪೂಜಯೈವ ದಾಸ್ಯತ್ಯವಶ್ಯಂ ತದಭೀಪ್ಸಿತಾನಿ ॥೬೭॥

ಏತನ್ನಿರ್ಮಾಲ್ಯಮಾದಾಯ ದಿವ್ಯಚಂದನಲಕ್ಷಣಂ ।
ವಿಜಯಾಪತ್ತನಂ ಪ್ರಾಪ್ಯ ಕಶ್ಚಿಲ್ಲಿಂಗಂ ಕರಿಷ್ಯತಿ ॥೬೮॥

ತಲ್ಲಿಂಗಪೂಜಯಾ ತಾವಜ್‌ಜ್ಞಾನಂ ಭಾಗ್ಯಂ ಚ ಭಾಸುರಂ ।
ಪ್ರಾಪ್ತವ್ಯಮಪ್ಯಯತ್ನೇನ ಶಿವಭಕ್ತೇನ ತೇನ ಹಿ ॥೬೯॥

---

ಆ ನಿರ್ಮಾಲ್ಯದಲ್ಲಿ ನೆಲೆಸಿಯೇ ಪರಮೇಶ್ವರನು ತನ್ನ ಭಕ್ತರ ಇಷ್ಟಾರ್ಥವನ್ನು ಸದಾ ಪ್ರದಾನಮಾಡಿದನು. ಈಗಲೂ ಸಹ ಭಾಗ್ಯಾಪೇಕ್ಷಿಗಳು ಅನೇಕರು ಆ ನಿರ್ಮಾಲ್ಯಚಂದನವನ್ನು ಪೂಜಿಸುತ್ತಿರುತ್ತಾರೆ. ||೬೫||

ಯಾರು ಈ ತೀರ್ಥೇಶ್ವರನ ನಿರ್ಮಾಲ್ಯವನ್ನಾದರೂ ನಿತ್ಯವೂ ಭಕ್ತಿಯಿಂದ ಪೂಜೆಮಾಡುವರೋ ಅವರು ದೇವತೆಗಳಿಂದಲೂ ಮಾನ್ಯರಾಗುತ್ತಾರೆ. ||೬೬||

ಎಲ್ಲೆಲ್ಲಿಯೇ ಆಗಲಿ ಯಾವಾಗಲಾದರೂ ಸರಿಯೆ, ಆ ತೀರ್ಥನಾಥನನ್ನು ಅಥವಾ ಆತನ ನಿರ್ಮಾಲ್ಯವನ್ನು ಸಹ ಪೂಜಿಸುವರೋ, ಅಲ್ಲಿ ಎಲ್ಲೆಡೆಯೂ ಆ ತೀರ್ಥೇಶ್ವರನು ತನ್ನ ಸನ್ನಿಧಿಯನ್ನು ವಹಿಸಿ ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುವನು. ||೬೭||

ಪರಮೇಶ್ವರನ ಅಪ್ಪಣೆಯನ್ನು ಪಡೆದು ವಿಜಯೆಯು ಈ ತೀರ್ಥೇಶ್ವರನ ನಿರ್ಮಾಲ್ಯಚಂದನವನ್ನು ತೆಗೆದುಕೊಂಡು ತನ್ನ ಪಟ್ಟಣಕ್ಕೆ ಹೋದಳು. ಮತ್ತು ಆ ನಿರ್ಮಾಲ್ಯಚಂದನವನ್ನೇ ಒಂದು ಲಿಂಗವನ್ನಾಗಿ ಮಾಡಿದಳು. ||೬೮||

ಆ ಚಂದನ ನಿರ್ಮಿತವಾದ ಲಿಂಗವನ್ನು ಪೂಜಿಸಿದರೂ ವಿವೇಕಜ್ಞಾನವೂ ಸೌಭಾಗ್ಯವೂ ವಿಸ್ತಾರವಾಗಿ ಪ್ರಾಪ್ತವಾಗುವುದು. ಪರಶಿವಭಕ್ತನಾದವನು ಭಾಗ್ಯ

ತತ್ಸಂತತಿಪ್ರವೃದ್ಧಿಶ್ಚ ಭವಿಷ್ಯತಿ ದಿನೇ ದಿನೇ ।
ತಲ್ಲಿಂಗಂ ಚಂದನೇನೈವ ಪ್ರವೃತ್ತಂ ಸ ಕರಿಷ್ಯತಿ ॥೭೦॥

ತಸ್ಯ ಪುತ್ರಾಶ್ಚ ಪೌತ್ರಾಶ್ಚ ತಲ್ಲಿಂಗಾರ್ಚನತತ್ಪರಾಃ ।
ಸರ್ವಸೌಭಾಗ್ಯಸಂಪನ್ನಾಃ ವೃದ್ಧಿಂ ಯಾಸ್ಯಂತಿ ಸರ್ವಥಾ ॥೭೧॥

ತಲ್ಲಿಂಗಂ ದರ್ಶನಂ ಕರ್ತುಂ ಶಾಂಕರಃ ಕಶ್ಚಿದುತ್ತಮಃ ।
ಆಗತ್ಯ ತಸ್ಯ ಲಿಂಗಸ್ಯ ಪೂಜನಂ ಚ ಕರಿಷ್ಯತಿ ॥೭೨॥

ತದ್ಭಾವಲಿಂಗಮಾಲೋಕ್ಯ ಪ್ರತ್ಯಹಂ ತಸ್ಯ ಪೂಜನಂ ।
ಕೃತ್ವಾ ಸ್ಥಾಸ್ಯತಿ ತದ್ಗೇಹೇ ತದನ್ನೇನೈವ ಪೋಷಿತಃ ॥೭೩॥

---

ವನ್ನು ಪಡೆಯಲು ಈ ಲಿಂಗಪೂಜೆಯನ್ನು ಬಿಟ್ಟು ಮತ್ತೇನೂ ಬೇರೆ ಪ್ರಯತ್ನ ಮಾಡಬೇಕಾಗಿಲ್ಲ. ॥೬೯॥

ಆ ಲಿಂಗವನ್ನು ಪೂಜಿಸುವ ಭಾಗ್ಯವು ದಿನದಿಂದ ದಿನಕ್ಕೆ ಅಭಿವೃದ್ಧಿಯಾಗುವಂತೆಯೂ, ಆ ಭಕ್ತನ ಸಂತಾನ ಐಶ್ವರ್ಯ ಮೊದಲಾದವುಗಳು ಏಳಿಗೆಯಾಗುವಂತೆಯೂ ಆ ಚಂದನಲಿಂಗವೇ ಮಾಡುವುದು. ॥೭೦॥

ಆ ಚಂದನ ನಿರ್ಮಿತವಾದ ಲಿಂಗಕ್ಕೆ ಪೂಜಿಸುವ ಭಕ್ತರ ಕಳತ್ರ ಪುತ್ರ ಪೌತ್ರರೂ, ಅಶ್ವಾದಿ ವಾಹನಗಳೂ, ಸಕಲ ಸೌಭಾಗ್ಯಗಳೂ ಯಾವ ಕೊರತೆಯೂ ಇಲ್ಲದಂತೆ ಅಭಿವೃದ್ಧಿಯನ್ನೇ ಪಡೆಯುತ್ತಾ ಹೋಗುತ್ತವೆ. ॥೭೧॥

ಶಿವಭಕ್ತನು ಯಾವನೇ ಆಗಲಿ, ಶಿವಲಿಂಗದರ್ಶನಾರ್ಥವಾಗಿ ಆ ಚಂದನ ಮಯವಾದ ಲಿಂಗದ ಬಳಿಗೆ ಬರುವನು. ಮತ್ತು ಆ ಲಿಂಗವನ್ನು ಪೂಜಿಸುವನು. ॥೭೨॥

ಹೀಗೆ ಪೂಜೆಮಾಡಿದ ಬಳಿಕ ಶಿವಲಿಂಗಮರ್ಮಜ್ಞನಾದವನು, ಆ ಲಿಂಗದ ಲಕ್ಷಣಗಳನ್ನು ಕಂಡು, ಭಾವಲಿಂಗವೆಂದು ತಿಳಿದುಕೊಂಡು, ಆ ಉತ್ತಮವಾದ ಲಿಂಗಕ್ಕೆ ನಿತ್ಯವೂ ಪೂಜೆಮಾಡುತ್ತಾ, ಆ ಲಿಂಗಕ್ಕೆ ನಿವೇದಿತವಾದ ಅನ್ನದಿಂದಲೇ ಜೀವಿಸುತ್ತಾ ಆ ಶಿವಮಂದಿರದಲ್ಲಿಯೇ ಉಳಿದುಕೊಳ್ಳುವನು. ॥೭೩॥

ಸೋಽಪಿ ಶಾಂಭವಮಾಲೋಕ್ಯ ತೇನ ಸ್ನೇಹಂ ಕರಿಷ್ಯತಿ ।
ಶೃಣ್ವಂಛಿವಕಥಾಂ ತಸ್ಮಾತ್ತುಷ್ಟಃ ಸ್ಥಾಸ್ಯತಿ ಸರ್ವದಾ ॥೭೪॥

ಕಾಲೇ ಕಾಲೇ ಪ್ರಯತ್ನೇನ ತಸ್ಯ ಲಿಂಗಸ್ಯ ಸೇವಯಾ ।
ತಚ್ಚಿತ್ತಂ ನಿರ್ಮಲಂ ತೇನ ಸ ತತ್ಸೇವಾಂ ಕರಿಷ್ಯತಿ ॥೭೫॥

ಸನ್ನಿಧಾನಂ ಮಹೇಶಸ್ಯ ತೀರ್ಥೇಶಸ್ಯಾಸ್ಯ ಸರ್ವದಾ ।
ಸಿದ್ಧಿಪ್ರದಾಯಕಸ್ಯಾಸ್ಯ ಭಾವಲಿಂಗೇ ಭವಿಷ್ಯತಿ ॥೭೬॥

ಭಾವಲಿಂಗಾಶ್ರಯಸ್ಯಾಸ್ಯ ಬಹುಭಾಗ್ಯಪ್ರದಸ್ಯ ಚ ।
ಸ್ಮರಣಾದೇವ ಸಿಧ್ಯಂತಿ ಫಲಾನಿ ವಿವಿಧಾನ್ಯಪಿ ॥೭೭॥

---

ಹೀಗೆ ಒಬ್ಬೊಬ್ಬರಾಗಿ ಅನೇಕ ಜನ ಶಿವಭಕ್ತರು ಅಲ್ಲಿಗೇ ಬಂದು ನೆಲಿಸಿ ಆ ಲಿಂಗಕ್ಕೆ ಪೂಜೆಮಾಡುವರು. ಆಗ ಆ ಭಕ್ತರೆಲ್ಲಾ ಪರಸ್ಪರ ಪರಿಚಯ ಮತ್ತು ಮೈತ್ರಿಯನ್ನು ಸಂಪಾದಿಸಿಕೊಂಡು, ಯಾವಾಗಲೂ ಒಬ್ಬರಲ್ಲ ಒಬ್ಬರು ಶಿವಕಥೆಯನ್ನು ಹೇಳುವುದು, ಉಳಿದವರು ಕೇಳುವುದು, ಹೀಗೆ ಸಂತೃಪ್ತರಾಗಿಯೇ ವಾಸಿಸುವರು. ||೭೪||

ಕಾಲಕಾಲದಲ್ಲಿ ಪದೇ ಪದೇ ಭಕ್ತಿಯಿಂದ ಆ ಲಿಂಗವನ್ನು ಪೂಜಿಸಿದರೆ ಮನಸ್ಸು ನಿಶ್ಚಿಂತವೂ ಪರಿಶುದ್ಧವೂ ಆಗುವುದು. ಆದರಿಂದ ಮುಂದಕ್ಕೆ ಮತ್ತೂ ಹೆಚ್ಚಾದ ಶ್ರದ್ಧೆಯಿಂದ ಪೂಜಿಸಲು ತೊಡಗುತ್ತಾನೆ. ||೭೫||

ಈ ತೀರ್ಥೇಶ್ವರಲಿಂಗದಲ್ಲಿ ಸನ್ನಿಹಿತನಾಗಿರುವ ಪರಮೇಶ್ವರನೇ ಸಕಲರಿಗೂ ಇಷ್ಟಾರ್ಥಗಳನ್ನು ಪ್ರದಾನಮಾಡುವನು. ಯಾವ ಭಾವಲಿಂಗದಲ್ಲಿಯೇ ಆಗಲಿ ಈ ತೀರ್ಥೇಶ್ವರನ ಸನ್ನಿಧಾನವು ಇದ್ದುಕೊಂಡೇ ಇಷ್ಟಗಳನ್ನು ಪೂರೈಸುವುದು. ||೭೬||

ಆದುದರಿಂದ ಈ ತೀರ್ಥೇಶ್ವರನು ಸಕಲ ಭಾವಲಿಂಗಗಳಿಗೂ ಆಶ್ರಯಭೂತನಾಗಿರುವನು. ಈತನೇ ನಾನಾಬಗೆಯಾದ ಭಾಗ್ಯಗಳನ್ನೂ ಅನುಗ್ರಹಿಸುವನು. ಈತನನ್ನು ಸ್ಮರಿಸಿದ ಮಾತ್ರದಿಂದಲೇ ವಿವಿಧ ಫಲಗಳೂ ದೊರೆಯುತ್ತವೆ. ||೭೭||

**ಸಿದ್ಧಲಿಂಗೇಷ್ವಿದಂ ಲಿಂಗಂ ಪ್ರಸಿದ್ಧಂ ಸರ್ವಕಾಮದಂ ।**
**ಏತದಭ್ಯರ್ಚನೇನೈವ ಮುಕ್ತಿಃ ಕರತಲಾಶ್ರಯಾ ॥೨೮॥**

**ತಸ್ಯೈವ ಭಾವಲಿಂಗಸ್ಯ ಸ್ತುತಿಂ ಸ ತು ಕರಿಷ್ಯತಿ ।**
**ತಾಂ ಭಾವಿನೀಂ ಸ್ತುತಿಂ ವಕ್ಷ್ಯೇ ಶೃಣ್ವಂತು ಮುನಯೋ ಮುಹುಃ ॥೨೯॥**

**ತೇನ ಸಂಪೂಜಿತೋ ಭಕ್ತ್ಯಾ ಪ್ರಸನ್ನಸ್ತೀರ್ಥನಾಯಕಃ ।**
**ಭಾವಲಿಂಗೇ ಮುದಾ ಸ್ತೋತ್ರಮೇತದೇವ ಕರಿಷ್ಯತಿ ॥೩೦॥**

॥ ಶ್ರೀ ಶಾಂಕರ ಉವಾಚ ॥

**ಶಿವಂ ದೇಹಿ ಮೇ ಭಾವಲಿಂಗಾಲಯಾಶು**
**ಪ್ರಸೀದ ಪ್ರಸೀದ ಪ್ರಸೀದಾದರೇಣ ।**
**ತ್ವದಾರಾಧನಾಯತ್ತಚಿತ್ತಾಯ ನಿತ್ಯಂ**
**ವಿಕಾರಾಂತರಾಯಾಪಕಾರಾನಭೂಯಃ ॥೩೧॥**

---

ಪ್ರಪಂಚದಲ್ಲಿ ಅನೇಕ ಸಿದ್ಧಲಿಂಗಗಳಿದ್ದಾಗ್ಯೂ ಎಲ್ಲಾ ಸಿದ್ಧಲಿಂಗಗಳಿಗಿಂತಲೂ ಈ ತೀರ್ಥೇಶ್ವರ ಸಿದ್ಧಲಿಂಗವೇ ಪ್ರಸಿದ್ಧವೂ ಸರ್ವಸಿದ್ಧಿಪ್ರದಾಯಕವೂ ಆಗಿರುತ್ತದೆ. ಈ ಲಿಂಗವನ್ನು ಅರ್ಚನೆಮಾಡುತ್ತಿದ್ದರೆ ಮುಕ್ತಿಯು ಹಸ್ತಗತವಾದಂತೆಯೇ. ಅಂದರೆ ಇದನ್ನು ಪೂಜಿಸುವವನಿಗೆ ಮುಕ್ತಿಯು ಸಿದ್ಧವಿಷಯ. ॥೨೮॥

ಆ ಭಾವಲಿಂಗವನ್ನು ಭಕ್ತನು ಅತ್ಯಂತ ಭಕ್ತಿಯಿಂದ ಸ್ತುತಿಸುತ್ತಾನೆ. ಆ ಸ್ತೋತ್ರವನ್ನೇ ನಿಮಗೂ ಹೇಳುವೆನು. ಗಮನವಿಟ್ಟು ಕೇಳಿರಿ. ॥೨೯॥

ಆ ಸ್ತೋತ್ರದಿಂದ ತೀರ್ಥೇಶ್ವರನು ಸಂತುಷ್ಟನಾಗಿ ಆ ಭಕ್ತನನ್ನು ಅನುಗ್ರಹಿಸಿದನು. ಆ ಭಕ್ತನು ಹಾಗೆಯೇ ಅನುಗೃಹೀತನಾಗಿ ಆ ತೀರ್ಥೇಶ್ವರನನ್ನೇ ಭಾವಿಸಿ ಪೂಜಿಸುತ್ತಿದ್ದನು. ಮತ್ತು ಇದೇ ಸ್ತೋತ್ರವನ್ನೇ ಪುನಃ ಪುನಃ ಪಾರಾಯಣ ಮಾಡುತ್ತಿದ್ದನು. ॥೩೦॥

" ಓ ಭಾವಲಿಂಗಗಳಿಗೆಲ್ಲಾ ನಿಧಿಯಾದ ತೀರ್ಥೇಶ್ವರನೇ, ನನ್ನ ಮೇಲೆ ಪ್ರಸನ್ನನಾಗು. ನನಗೆ ಕರುಣಿಸಿ ಮಂಗಳವನ್ನು ಕೊಡು. ನಿನ್ನ ಆರಾಧಕನಾದ ನನಗೆ ಎಂದೂ ವಿಕಾರವೂ ವಿಘ್ನವೂ ಅಪಜಯಾಪಕಾರಗಳೂ ಆಗುವುದು ಬೇಡ. ॥೩೧॥

ನಮೋ ಭಾವಲಿಂಗಾಯ ಭಾಪಾಲಯಾಯ
ಸ್ಮರಾಪಾರಗರ್ವಾಪಹಾರೋದ್ಯತಾಯ ।
ನಮಃ ಪುಣ್ಯಕಲ್ಯಾಣಪೂರ್ಣಾರ್ಣವಾಯ
ಪ್ರಮಾಣಾಗ್ರಗಣ್ಯಾಗ್ರಗಣ್ಯಾಯ ತುಭ್ಯಂ ॥೮೨॥

ಇದಂ ಭಾವಲಿಂಗಂ ಗತಾನಂಗಸಂಗಂ
ಯದಂಗೋಪಸಂಗಂ ಪ್ರಸಂಗೇನ ಶಂಗಂ ।
ವಿಲೀನಾಭಿಷಂಗಂ ಮಹಾರೋಗಭಂಗಂ
ಕರೋತೀತಿ ಮನ್ಯೇ ತತಸ್ತೇ ನಮೋಽಸ್ತು ॥೮೩॥

ಯದರ್ಧಾಂಗಮೂರ್ಧೇಂದುಖಂಡಂ ಪ್ರಚಂಡ
ಪ್ರಭಾಮಂಡಲಾಖಂಡಲಾರಾಧ್ಯಮಾಡ್ಯಂ ।
ತದಾರಾಧ್ಯಮಾರಾಧ್ಯಕಾರಾಧ್ಯಕಾರ್ಧ್ಯಂ
ಮುಹುರ್ಭಾವಲಿಂಗಂ ವಿಪದ್ಭೋಗಭಂಗಂ ॥೮೪॥

---

ಓ ಭಾವಲಿಂಗಸ್ವರೂಪನೇ ನಿನಗೆ ನಮಸ್ಕಾರವು. ನೀನು ಸಕಲ ಭಾವ ಕಲೆಗಳಿಗೆ ನಿಧಿಯಾಗಿರುವೆ. ಅತ್ಯಂತ ಗರ್ವಿಷ್ಠನಾದ ಮನ್ಮಥನನ್ನು ನೀನೇ ಧ್ವಂಸಮಾಡಿದವನಿದ್ದೀಯೆ. ಸಕಲ ಪುಣ್ಯಗಳಿಗೂ ಕಲ್ಯಾಣಗಳಿಗೂ ನೀನು ಸಮುದ್ರ ನಂತೆ ಆಶ್ರಯನಾಗಿದ್ದೀಯೆ. ಪ್ರಮಾಣಶಾಸ್ತ್ರಗಳಲ್ಲೆಲ್ಲಾ ಶ್ರೇಷ್ಠವಾಗಿರುವ ವೇದಗಳು ನಿನ್ನನ್ನೇ ಅಗ್ರಗಣ್ಯನೆಂದು ಸಾರುತ್ತಿವೆ. ॥೮೨॥

ಈ ಭಾವಲಿಂಗವು ಮನ್ಮಥವಿಕಾರಕ್ಕೆ ತುತ್ತಾದವನನ್ನು ವಿವೇಕಮಾರ್ಗಕ್ಕೆ ತರುವುದಾಗಿರುತ್ತದೆ. ಇದನ್ನು ಆರಾಧಿಸುವವನಿಗೆ ಎಂದೂ ಕಾಮವಾಸನೆಯು ಅಂಟುವುದಿಲ್ಲ. ಈ ಅರ್ಚನೆ ಸಂಸಾರಬಂಧನವನ್ನು ನಾಶಮಾಡುವುದು. ಈ ಲಿಂಗವು ಮಹಾ ಮಹಾ ರೋಗಗಳೆಲ್ಲವನ್ನೂ ನಾಶಮಾಡುವುದೆಂದು ತಿಳಿಯುತ್ತೇನೆ. ಇಂಥ ಮಹಾಮಹಿಮಶಾಲಿಯಾದ ಈ ಶಿವಲಿಂಗವನ್ನು ನಮಸ್ಕರಿಸುತ್ತೇನೆ. ॥೮೩॥

ಆ ಪರಮೇಶ್ವರನ ಅರ್ಧಾಂಗದ ಶಿರೋಭಾಗದಲ್ಲಿ ಅರ್ಧಾಕಾರವಾದ ಚಂದ್ರನು ವಿರಾಜಿಸುತ್ತಿರುತ್ತಾನೆ. ಆ ಪರಮೇಶ್ವರನನ್ನು ಪ್ರಚಂಡಪ್ರಭಾವವುಳ್ಳ ಇಂದ್ರನೂ ಸಹ ಆರಾಧಿಸುತ್ತಾನೆ. ಆತನೇ ಸ್ತುತ್ಯನು. ಆ ಪರಮೇಶ್ವರನ ಅಂಶವೇ ಆದ ಭಾವಲಿಂಗವೂ ಅಷ್ಟೇ ಮಹಿಮಾಶಾಲಿಯಾದದ್ದು. ತನ್ನನ್ನು ಆರಾಧಿಸತಕ್ಕವರ

ಯದಾರಾಧನೇನಾಮುರಾರಾಧ್ಯತಾ ಸ್ಯಾ
ನ್ನರಸ್ಯಾಧಮಸ್ಯಾಪಿ ಸಿದ್ಧಿಪ್ರಸಿದ್ಧಿಃ ।
ತದಾರಾಧ್ಯಮಸ್ಮಾಕಮಸ್ಮತ್ಕುಲಸ್ಯ
ನೃಪಾಸ್ಯಾನ್ಯದೇವಂ ಸದಾ ಭಾವಲಿಂಗಂ ॥೮೫॥

ಪ್ರಭೂತೇಷು ಪುಣ್ಯೇಷ್ವಗಣ್ಯೇಷು ಭಕ್ತಿಃ
ಭವೇ ಭಾವಲಿಂಗೇ ಭವೇದ್ಭಾವನಾಪಿ ।
ಶಿವೇ ಭಾವಲಿಂಗಪ್ರಭಾವಪ್ರಬೋಧೇ
ಪ್ರಮೋದೇನ ಮೋದಾಯ ಸಂಪಾದನೀಯಃ ॥೮೬॥

ಸರತ್ಯಾಶು ಸಂಸಾರಘೋರಾಂಧಕಾರಃ
ಸ್ಫುರದ್ಭಾವಲಿಂಗಾಂಗಸೂರ್ಯಪ್ರಕಾಶೇ ।

---

ಸಕಲ ವಿಪತ್ತುಗಳನ್ನೂ ನಾಶಮಾಡುವುದು. ಆದುದರಿಂದ ಆ ಭಾವಲಿಂಗವನ್ನು ಆರಾಧಿಸಬೇಕು. ॥೮೪॥

ಆ ಪರಮೇಶ್ವರನ ಆರಾಧನೆಯಿಂದ ಮನುಷ್ಯಮಾತ್ರನು ಅಧಮನಾಗಿದ್ದರೂ ಸಕಲ ಸಿದ್ಧಿಗಳೂ ಪ್ರಸಿದ್ಧಿಗಳೂ ಲಭಿಸುವುವಲ್ಲದೇ ದೇವತೆಗಳೊಡನೆ ಸರಿಸಮಾನತೆಯೂ ದೊರೆಯುವುದು. ಆದುದರಿಂದ ಇನ್ನು ನಾವು ಇತರ ದೇವರನ್ನು ನಂಬಿ ಕಾಲಕಳೆಯದೇ ನಿತ್ಯವೂ ಭಾವಲಿಂಗವನ್ನೇ ಆರಾಧಿಸಬೇಕು. ನಮ್ಮ ವಂಶದವರೂ ಇತರ ದೇವರನ್ನು ನಂಬದೇ ಭಾವಲಿಂಗವನ್ನೇ ಅರ್ಚಿಸಬೇಕು. ॥೮೫॥

ಶಿವನ ಆರಾಧನೆಯಿಂದ ಬೇಕಾದಷ್ಟು ಪುಣ್ಯರಾಶಿಯು ಲಭಿಸುವುದೆಂದು ನಂಬಬೇಕು. ಆ ಶಿವನ ಸ್ವರೂಪವೇ ಆದ ಭಾವಲಿಂಗದಲ್ಲಿ ಭಕ್ತಿಭಾವನೆಯನ್ನು ಉತ್ಕಟವಾಗಿ ತಾಳಬೇಕು. ಶಿವಲಿಂಗದ ಮಹಿಮಾವಿಕಾಸವು ಶಿವಸ್ವರೂಪವೂ, ಶಿವನ ಮಹಿಮಾವಿಕಾಸವೂ ಶಿವಲಿಂಗವೂ ಆಗಿದೆ ಎಂದು ತಿಳಿದುಕೊಳ್ಳಬೇಕು. ಹೀಗೆ ನಂಬಿಕೆಯಿಂದಲೂ ಭಕ್ತಿಯಿಂದಲೂ ಲಿಂಗವನ್ನು ಅರ್ಚಿಸಿದರೆ ನಮಗೆ ಪರಮಾನಂದವು ಲಭಿಸುವುದು. ॥೮೬॥

ಆ ಅತ್ಯಂತ ಪ್ರಕಾಶಮಾನವಾದ ಭಾವಲಿಂಗವೆಂಬ ಸೂರ್ಯಪ್ರಕಾಶದ ಎದುರಿನಲ್ಲಿ ಈ ಗಾಢವಾದ ಅಂಧಕಾರದಂತಿರುವ ಸಂಸಾರವೇ ಮಾಯವಾಗುವುದು. ಅಂದಮೇಲೆ ಪತಂಗಸದೃಶವಾದ ಮೃತ್ಯುವೂ, ಕ್ಷುದ್ರವೂ ಅಕ್ಷುದ್ರವೂ ಆದ

ನಿಶಿಷ್ಟಾನಿಶಿಷ್ಟಾಘಖದ್ಯೋತವಾರ್ತಾ
ಕೃತಾಂತಾಂತವಾರ್ತಾಪಿ ತಸ್ಮಿನ್ ಕುತಃ ಸ್ಯಾತ್ ॥೮೭॥

ಅವಿದ್ಯಾಮಹಾವರ್ತಗರ್ತಾನುವೃತ್ತಿಃ
ಕುತೋ ಭಾವಲಿಂಗಾರ್ಕಕೋಟಿಪ್ರಕಾಶೇ ।
ತದಾರಾಧನಾವೋದಮಾನಂದಸಿಂಧೋಃ
ಶಿವಜ್ಞಾನಚಂದ್ರೋಽಪಿ ಕೋಽಪಿ ಪ್ರಜಾತಃ ॥೮೮॥

ಅಹೋ ಭಾಗ್ಯಮಸ್ಮಾಕಮಸ್ಮತ್ಕುಲಸ್ಯಾ
ಪ್ಯಭೂದ್ಭಾವಲಿಂಗಂ ಪರಂ ದೈವತಂ ನಃ ।
ವಯಂ ಧನ್ಯಧನ್ಯಾಗ್ರಗಣ್ಯಾಗ್ರಗಣ್ಯಾಃ
ಸದಾ ಭಾವಲಿಂಗಾರ್ಚನಾಸಕ್ತಚಿತ್ತಾಃ ॥೮೯॥

---

ಪಾಪಗಳ ಪಾಡೇನು? ಇವೆಲ್ಲವೂ ನಾಶವೇ ಆಗುವುವೆಂಬುದನ್ನು ಪ್ರತ್ಯೇಕ ಹೇಳಬೇಕೇ? ॥೮೭॥

ಕೋಟಿಸೂರ್ಯನಂತೆ ಭಾವಲಿಂಗವು ಪ್ರಕಾಶಿಸುತ್ತಿರಲು ಅವಿದ್ಯೆಯ ಸುಳಿಯೂ ಹೊಡೆತವೂ ಎಲ್ಲಿಯದು? ಅವಿದ್ಯೆ ಎಂಬ ಗುಂಡಿಯಲ್ಲಿ ಏತಕ್ಕೆತಾನೆ ಬೀಳುವುದು? ಆ ಭಾವಲಿಂಗವನ್ನು ಪೂಜಿಸುವುದು ಪರಮಾನಂದವೆಂಬ ಸಮುದ್ರಕ್ಕೆ ಚಂದ್ರೋದಯದಂತೆ ಆಗುವುದು. ಶಿವಜ್ಞಾನವೆಂಬ ಚಂದ್ರನು ಆನಂದಸಮುದ್ರವನ್ನು ಉಕ್ಕೇರಿಸಿ ಅಭಿವೃದ್ಧಿಪಡಿಸುವನು. ಚಂದ್ರನ ಉದಯದಿಂದ ತಾನೆ ಸಮುದ್ರವು ಅಭಿವೃದ್ಧವಾಗುವುದು. ॥೮೮॥

ಭಾವಲಿಂಗವನ್ನು ಪೂಜಿಸುವ ನಾವೇ ಧನ್ಯರು. ಭಾವಲಿಂಗದ ಭಕ್ತರಾದ ನಾವೂ ನಮ್ಮ ಕುಲದವರೂ ಪರಮ ಧನ್ಯರು. ಭಾವಲಿಂಗವೇ ನಮ್ಮ ಕುಲದೈವವಾದ್ದರಿಂದ ನಾವೇ ಧನ್ಯರು. ನಮ್ಮ ಮನಸ್ಸು ಸದಾ ಭಾವಲಿಂಗದ ಅರ್ಚನೆಯಲ್ಲಿಯೇ ಆಸಕ್ತವಾಗಿರುವುದರಿಂದ ನಾವು ಧನ್ಯರೆಲ್ಲರಿಗೂ ಅಗ್ರಗಣ್ಯರೂ ಆಗಿದ್ದೇವೆ. ॥೮೯॥

ಯದಾ ಭಾವಲಿಂಗಾರ್ಚನಾಭಕ್ತಿಲೇಶಃ
ತದಾ ತಾವದಾಪತ್ಸಮೂಹಪ್ರಣಾಶಃ ।
ತದಾರಾಧನಾಸಕ್ತಲೇಶಪ್ರಕಾಶೋ
ಮಹಾನಂದರಾಶಿಪ್ರವೇಶೋಽನುವೇಲಂ ॥೯೦॥

ನಮಂತಃ ಸ್ಮರಂತಃ ಸಕೃತ್ಪೂಜಯಂತೋ
ಭವಂ ಭಾವಲಿಂಗೇ ಮುದಾ ಭಾವಯಂತಃ ।
ಲಭಂತೇ ಗಣೇಶತ್ವಮಪ್ರಾಪ್ಯಮನ್ಯೈಃ
ಇಹ ಪ್ರಾಪ್ಯ ದುಷ್ಪ್ರಾಪಮೋದಾಂಬುರಾಶಿಂ ॥೯೧॥

ನ ಚಾನ್ನಾಭಿಲಾಷಾಸ್ಪದಾಲಾಭಶಂಕಾ
ನ ಚಾನ್ಯತ್ರ ವಾ ಭಾವಲಿಂಗಾರ್ಚಕಾನಾಂ ।
ಇಹಾಮುತ್ರ ಸೌಖ್ಯಾಭಿವೃದ್ಧಿರ್ಭವಿತ್ರೀ
ಭುಜಂ ಸಮ್ಯಗುದ್ಧೃತ್ಯ ಸತ್ಯಂ ಮಯೋಕ್ತಂ ॥೯೨॥

---

ಯಾವಾಗ ಭಾವಲಿಂಗವನ್ನು ಅರ್ಚಿಸಬೇಕೆಂಬ ಆಸೆಯೂ ಭಕ್ತಿಯೂ ಲೇಶಮಾತ್ರ ಉಂಟಾಗುವುದೋ, ಆ ಕೂಡಲೇ ವಿಪತ್ಸಮೂಹಗಳೇ ನಾಶವನ್ನು ಹೊಂದುತ್ತ ಬರುವುವು. ಆ ಭಾವಲಿಂಗದ ಆರಾಧನೆ ಎಂಬ ಸೂಕ್ಷ್ಮಪ್ರಕಾಶವು ಉಂಟಾದೊಡನೆಯೇ, ಸತತವೂ ಮಹಾನಂದರಾಶಿಯೇ ಪ್ರವೇಶಮಾಡುವುದು. ॥೯೦॥

ಆ ಭಾವಲಿಂಗದ ಆಯತನದಲ್ಲಿ ಒಂದಾವರ್ತಿ ಆ ಪರಮೇಶ್ವರನನ್ನು ನಮಸ್ಕರಿಸಿದರೆ, ಸ್ಮರಿಸಿದರೆ, ಅಥವಾ ಪೂಜೆಯನ್ನು ಮಾಡಿದರೆ, ಅಂಥವರು ಇಹದಲ್ಲಿ ಪರಮ ಕಷ್ಟಸಾಧ್ಯವಾದ ಆನಂದ ಪಾರಾವಾರವನ್ನೇ ಪಡೆಯುವರಲ್ಲದೇ, ಅಂತ್ಯದಲ್ಲಿ ಇತರರಿಗೆ ಅಲಭ್ಯವಾದ ಗಣಾಧಿಪತಿತ್ವವನ್ನೂ ಸಹ ಹೊಂದುತ್ತಾರೆ. ॥೯೧॥

ಭಾವಲಿಂಗವನ್ನು ಪೂಜಿಸತಕ್ಕವರಿಗೆ ಅನ್ನವು ದೊರೆಯದೆಂಬ ಶಂಕೆಯೇ ಇರುವುದಿಲ್ಲ. ಅವರಿಗೆ ಭಾವಲಿಂಗವನ್ನು ಪೂಜಿಸುವುದನ್ನು ಬಿಟ್ಟು ಬೇರೆಯ ಕಾರ್ಯದಲ್ಲಿ ಅಭಿಲಾಷೆಯೇ ಇರುವುದಿಲ್ಲ. ಅಂಥ ಪೂಜಕರಿಗೆ ಇಹದಲ್ಲಿ ಪರಮ ಸೌಖ್ಯಾಭಿವೃದ್ಧಿಯೂ ಪರಲೋಕದಲ್ಲಿ ಪರಮಾನಂದವೂ ಲಭಿಸುವುದು. ಇದು ಸತ್ಯ

ನ ಚಂದ್ರತ್ವವಾಂಛಾ ನ ಚೇಂದ್ರತ್ವವಾಂಛಾ
ನ ಚೋಪೇಂದ್ರತಾಬ್ಜಾಸನತ್ವಾದಿವಾಂಛಾ ।
ಯತಸ್ತಾನ್ಯಪಾಯಾನ್ವಿತಾನೀತಿ ಮನ್ಯೇ
ಪರಂ ತ್ವೀಪ್ಸಿತಂ ಭಾವಲಿಂಗಾರ್ಚನಂ ಮೇ ॥೯೩॥

ಇದಂ ಭಾವಲಿಂಗಾರ್ಚನಂ ಕಾಮಧೇನುಃ
ಸಮಸ್ತಾಮರಾಶಾಸ್ಯಕಲ್ಪದ್ರುಮೋ ವಾ ।
ಇದಂ ಮರ್ತ್ಯದುಷ್ಪ್ರಾಪಚಿಂತಾಮಣಿರ್ವಾ
ಫಲಾನಿ ಪ್ರಸೂತೇ ವಿಚಿತ್ರಾಣಿ ನಿತ್ಯಂ ॥೯೪॥

ಯತೋಽನನ್ಯಲಭ್ಯಾನಿ ಸೂತೇ ಫಲಾನಿ
ಪ್ರಕೃಷ್ಟಾನಿ ವಾಂಛಾಸ್ಪದಾನ್ಯಾನಿ ತಾನಿ ।
ಅತಃ ಕಾಮಧೇನುರ್ನಕಲ್ಪೋ ಮಣಿರ್ವಾ
ಪರಂ ತ್ವನ್ಯದೇವಾದ್ಭುತಂ ಭಾವಲಿಂಗಂ ॥೯೫॥

---

ವೆಂದು ಹೇಳುತ್ತೇನೆ. ಎರಡೂ ಕೈಗಳನ್ನೂ ಮೇಲಕ್ಕೆತ್ತಿ ಶಪಥವನ್ನೇ ಮಾಡ ಬಲ್ಲೆನು. ॥೯೨॥

ನನಗೆ ಚಂದ್ರತ್ವವನ್ನು ಪಡೆಯಬೇಕೆಂಬ ಆಸೆ ಇರುವುದಿಲ್ಲ. ಇಂದ್ರತ್ವ ವನ್ನು ಪಡೆಯಲೂ ನನಗೆ ಅಪೇಕ್ಷೆ ಇಲ್ಲ. ಹಾಗೆಯೇ ವಿಷ್ಣುತ್ವ ಬ್ರಹ್ಮತ್ವಗಳನ್ನೂ ನಾನು ಬಯಸುವುದಿಲ್ಲ. ಏತಕ್ಕೆಂದರೆ ಅವುಗಳೆಲ್ಲವೂ ಅಶಾಶ್ವತಗಳು. ಅನಿತ್ಯಗಳು. ಆದುದರಿಂದ ನನಗೆ ಅಪೇಕ್ಷಿತವಾದದ್ದು ಇದೊಂದೇ-ನಾನು ಸರ್ವದಾ ಭಾವಲಿಂಗ ವನ್ನು ಪೂಜಿಸಲು ಆಸೆಪಡುತ್ತೇನೆ. ॥೯೩॥

ಈ ಭಾವಲಿಂಗಾರ್ಚನೆಯೇ ಸಮಸ್ತ ಇಷ್ಟಾರ್ಥಗಳನ್ನೂ ಪ್ರದಾನಮಾಡುವ ಕಾಮಧೇನುಸ್ವರೂಪವಾಗಿರುತ್ತದೆ. ಅಥವಾ ಸಕಲ ದೇವತೆಗಳೂ ಅಪೇಕ್ಷಿಸುವ ಕಲ್ಪವೃಕ್ಷವೇ ಆಗಿದೆ. ಅಥವಾ ಮಾನವರಿಗೆ ದುರ್ಲಭವಾದ ಚಿಂತಾಮಣಿ ಸ್ವರೂಪವೇ ಈ ಭಾವಲಿಂಗಾರ್ಚನೆ ಆಗಿದೆ. ಏಕೆಂದರೆ ಇದು ಸಕಲ ಮನೋಭೀಷ್ಟ ಗಳನ್ನೂ ಕೂಡಲೇ ಒದಗಿಸಿಕೊಡುವುದು. ॥೯೪॥

ಬೇರೆ ಯಾವ ಉಪಾಯದಿಂದಲೂ ದೊರೆಯಲಾರದ ಉತ್ತಮೋತ್ತಮ ಇಷ್ಟಾರ್ಥಗಳನ್ನೂ ಫಲಗಳನ್ನೂ ಭಾವಲಿಂಗವು ಅನುಗ್ರಹಿಸುವುದು. ಆದುದರಿಂದ

ಕ್ಷಣಾರ್ಧಾರ್ಧಕೋಟ್ಯಂಶಕೋಟ್ಯಂಶಮಾತ್ರಂ
ವಯಂ ಭಾವಲಿಂಗಂ ಸ್ಮರಾಮೋ ಯತೋಽತಃ ।
ಪ್ರಕೃಷ್ಟಪ್ರಕೃಷ್ಟ ಪ್ರಕೃಷ್ಟ ಪ್ರಕೃಷ್ಟ
ಪ್ರಕೃಷ್ಟ ಪ್ರಕೃಷ್ಟ ಪ್ರಕೃಷ್ಟ ಪ್ರಕೃಷ್ಟಾಃ ॥೯೬॥

ಮಹಾಭೂತಜಾತಾಪ್ರಜಾತಾತಿಭೀತಿಃ
ಮಹಾಮೃತ್ಯುದೂತಪ್ರಭೂತಾತಿಭೀತಿಃ ।
ಮಹಾರೋಗಸಂಘಾತಜಾತಿಪ್ರಭೀತಿಃ
ಕುತೋ ಭಾವಲಿಂಗಸ್ಯ ಸಂಗೇಽಂಗಭಾಗೇ ॥೯೭॥

ಸಕೃಜ್ಜನ್ಮಮಧ್ಯೇ ಮುದಾ ಭಾವಲಿಂಗಂ
ಸ್ಮರಂತಂ ಸ್ಮರನ್ ವೈ ಕೃತಾಂತಸ್ಯ ದೂತಃ ।
ಪ್ರಮತ್ತೋಽಪಿ ತನ್ಮಾರ್ಗಸಂಸರ್ಗಭೀತಃ
ಪ್ರಭೂತಪ್ರತಾಪೋಽಪಿ ದೂರಂ ಪ್ರಯಾತಿ ॥೯೮॥

---

ಕಾಮಧೇನುಗಳೊಡನೆ ಈ ಭಾವಲಿಂಗವನ್ನು ಹೋಲಿಸುವುದೂ ಯುಕ್ತವಲ್ಲ. ಈ ಭಾವಲಿಂಗವು ಆ ಕಾಮಧೇನು ಇತ್ಯಾದಿಗಳಲ್ಲ. ಪರಂತು ಇದೊಂದೇ ಬೇರೆ. ಅದ್ಭುತವೂ ವಿಚಿತ್ರವೂ ಆಗಿರುತ್ತದೆ. ॥೯೫॥

ನಾವು ಎಲ್ಲಿಯೋ ಒಂದುಕ್ಷಣದ ಅರ್ಧಾರ್ಧಭಾಗದ ಕೋಟ್ಯಂಶದ ಒಂದು ಕ್ಷಣದಲ್ಲಿ ಮಾತ್ರವೇ ಆ ಭಾವಲಿಂಗವನ್ನು ಧ್ಯಾನಮಾಡುತ್ತೇವೆ, ಅಥವಾ ಸ್ಮರಿಸುತ್ತೇವೆ. ಅಷ್ಟರಿಂದಲೇ ನಾವು, ಪ್ರಪಂಚದಲ್ಲಿ ಯಾರು ಉತ್ತಮರೆಂದು ಪ್ರಸಿದ್ಧರಾಗಿರುವರೋ ಅವರಿಗಿಂತ ನಾವು ಎಂಟು ಪಾಲು ಹೆಚ್ಚು ಶ್ರೇಷ್ಠರೆಂದೆನಿಸಿಕೊಳ್ಳುತ್ತೇವೆಂದಮೇಲೆ ಆ ಲಿಂಗದ ಮಹಿಮೆ ಎಷ್ಟು? ॥೯೬॥

ಈ ಭಾವಲಿಂಗದೊಡನೆ ಅಂಗಸಂಸ್ಪರ್ಶವುಂಟಾದ ಮೇಲೆ ಭೌತಿಕವಾದ ಭೀತಿ, ದುಃಖ ಎಂದರೇನು? ಮಹಾಮೃತ್ಯುವಿನ ದೂತರಿಂದ ಭಯವೆಂದರೇನು? ಮಹಾರೋಗಗಳಿಂದ ಭಯ-ದುಃಖಗಳೆಂದರೇನು? ಇವು ಯಾವುವೂ ಇರುವುದಿಲ್ಲ. ತಾಪತ್ರಯಗಳೂ ಮಾಯುವಾಗುವುವು. ॥೯೭॥

ಮನುಷ್ಯನು ತನ್ನ ಜನ್ಮದಲ್ಲಿ ಎಂದಾದರೊಂದು ಸಲ ಆ ಭಾವಲಿಂಗವನ್ನು ಆದರದಿಂದ ಸ್ಮರಿಸಿಕೊಂಡಿದ್ದರೂ ಸಾಕು, ಅಷ್ಟರಿಂದಲೇ ಅದನ್ನೇ ತಿಳಿದುಕೊಂಡು

ನಮೋ ಭಾವಲಿಂಗಾರ್ಚಕಾರಾಧಕೇಭ್ಯಃ
ತದಾರಾಧಕೇಭ್ಯ ಸ್ತದಾರಾಧಕೇಭ್ಯಃ ।
ತದಾರಾಧಕೇಭ್ಯ ಸ್ತದಾರಾಧಕೇಭ್ಯಃ
ತದಾರಾಧಕೇಭ್ಯ ಸ್ತದಾರಾಧಕೇಭ್ಯಃ ॥೯೯॥

ಯಮಃ ಕಂಪಯನ್ ಪಾಪತಾಪೋಪಭೀತಃ
ಸ್ವದೂತಾನ್ ಸಮಾಹೂಯ ತತ್ಕರ್ಣದೇಶೇ ।
ಮುಹುರ್ಭಾವಲಿಂಗಾರ್ಚಕಾಗಾರಮಾರ್ಗೇ
ನ ಗಂತವ್ಯಮಿತ್ಯೇವ ಜಲ್ಪತ್ಯನುಚ್ಚೈಃ ॥೧೦೦॥

ಕೃತೇ ಭಾವಲಿಂಗಾರ್ಚನೋದ್ಯೋಗಮಾತ್ರೇ
ತ್ರಿನೇತ್ರೋಽಪಿ ಕಿಂ ದೇಯ ಮಸ್ಮೈ ಮಯೇತಿ ।
ವಿಚಾರೈರಪಾರೈರ್ನಯತ್ಯೇವ ಕಾಲಂ
ತತಃ ಕಾಲವಾರ್ತಾಪ್ರವೃತ್ತಿಃ ಕುತೋಽತ್ರ ॥೧೦೧॥

---

ಯಮದೂತನು ಆ ಮನುಷ್ಯನ ಮೇಲೆ ಕೈಮಾಡುವುದಿಲ್ಲ. ಆತನ ಕಡೆಗೆ ಸುಳಿಯುವುದೂ ಇಲ್ಲ. ಎಲ್ಲಿಯಾದರೂ ಸ್ಪರ್ಶವಾಗಿ ಬಿಟ್ಟೀತೆಂಬ ಭಯದಿಂದ ಆ ಯಮದೂತನೇ ದೂರದೂರ ಹೋಗಿಬಿಡುತ್ತಾನೆ. ||೯೮||

ಆ ಭಾವಲಿಂಗವನ್ನು ಅರ್ಚಿಸುವವರಿಗೆ ನಮಸ್ಕಾರವು. ಅದನ್ನು ಆರಾಧಿಸುವವರಿಗೂ ನಮಸ್ಕಾರವು. ಅದನ್ನು ಆರಾಧಿಸುವವರಿಗೆ ಶತಶಃ ನಮಸ್ಕಾರವು. ||೯೯||

ಯಮನು ಭಾವಲಿಂಗಾರ್ಚಕರನ್ನು ಶಿಕ್ಷಿಸಿದರೆ ತನಗೆ ಪಾಪವೆಲ್ಲಾದರೂ ಬಂದುಬಿಟ್ಟೀತೆಂದು ಬಹಳ ಹೆದರಿಕೆಯಿಂದ ಎಚ್ಚರವಾಗಿರುತ್ತಾನೆ. ತನ್ನ ದೂತರನ್ನು ರಹಸ್ಯವಾಗಿ ಕರೆದು ಅವರಿಗೆ ಕಟ್ಟಪ್ಪಣೆ ಮಾಡುತ್ತಾನೆ. ಭಾವಲಿಂಗಾರ್ಚಕರ ಮನೆಯ ಕಡೆಗೂ ಹೋಗಕೂಡದೆಂದು ಹೆದರಿಸಿ ಹೇಳುತ್ತಾನೆ. ಈ ವಿಚಾರವನ್ನೆಲ್ಲಾ ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದು ಕಿವಿಯಲ್ಲಿ ಗುಟ್ಟಾಗಿ ಹೇಳುತ್ತಾನೆ. ||೧೦೦||

ಮನುಷ್ಯನು ಭಾವಲಿಂಗಕ್ಕೆ ಅರ್ಚನೆಯನ್ನು ಮಾಡಬೇಕೆಂಬ ಉದ್ಯೋಗಕ್ಕೆ ಆರಂಭಿಸಿದ ಕೂಡಲೇ ಆ ಪರಮೇಶ್ವರನಿಗೇ ಆಲೋಚನೆಯು ಆರಂಭವಾಗುತ್ತದೆ. " ಈತನು ಇನ್ನು ಭಾವಲಿಂಗವನ್ನು ಆರಾಧಿಸುವನು. ಈತನಿಗೆ ನಾನು ಏನೇ

ಪ್ರಭಾವಂ ಭವ್ಪೋ ಭಾವಲಿಂಗಾರ್ಚಕಾನಾಂ
ಪರಂ ವೇದ ವೇದೋಽಪಿ ತನ್ನೈವ ವೇದ ।
ಅತಸ್ತದ್ವಿಚಾರೇ ವಿರಂಚಿಃ ಕುಲಂಚಃ
ಕಥಂ ಚಂಚುರಾಸ್ಸ್ಯದ್ವಿಚಾರೇ ತದನ್ಯೇ ॥೧೦೨॥

ವರಂ ಭಾವಲಿಂಗಾಂಗದೌವಾರಿಕೋರು
ಸ್ಫುರದ್ವೇತ್ರಪಾತ್ರತ್ವಮಿತ್ಯಾದರೇಣ ।
ತದಿಚ್ಛಾಮುಪೇಂದ್ರೇಂದ್ರಚಂದ್ರಾದಿದೇವಾಃ
ಪ್ರಕುರ್ವಂತಿ ಧರ್ಮಂ ವಿಹಾಯ ಸ್ವಕೀಯಂ ॥೧೦೩॥

ರಮಾ ಭಾವಲಿಂಗಾರ್ಚಕಾರ್ಚಾಪರಾ ಸಾ
ನುವೃತ್ತಿಂ ಚ ಕರ್ತುಂ ಪ್ರವೃತ್ತೈವ ವಾಣೀ ।

---

ನನ್ನ ಎಷ್ಟೆಷ್ಟು ಕೊಡಲಿ" ಹೀಗೆಂದು ದೊಡ್ಡ ಯೋಚನೆಯೇ ಉಂಟಾಗುವುದು. ಅದು ಮುಗಿಯುವ ಯೋಚನೆಯೇ ಆಗುವುದಿಲ್ಲ. ಹೀಗಿರಲು ಆ ಮೃತ್ಯುವಿನ ಪಾಡೇನು? ಅವನು ಭಾವಲಿಂಗಾರ್ಚಕನ ವಿಷಯದಲ್ಲಿ ಏನನ್ನು ತಾನೆ ಮಾಡಿಯಾನು? ॥೧೦೧॥

ಆ ಭಾವಲಿಂಗವನ್ನು ಪೂಜಿಸುವವರ ಪ್ರಭಾವವು ಎಷ್ಟು ಮಹತ್ತರವಾದದ್ದೆಂದು ಆ ಪರಮೇಶ್ವರನೊಬ್ಬನೇ ತಿಳಿದಿರುವನು. ಅವರ ಮಹಿಮೆಯು ವೇದಗಳಿಗೂ ಸಹ ಸರಿಯಾಗಿ ತಿಳಿದಿರುವುದಿಲ್ಲ. ಬ್ರಹ್ಮನಾದರೋ ಎಲ್ಲಿಯೋ ಕೊಂಚ ಕೊಂಚ ತಿಳಿದಿರುವನು. ಅಂದಮೇಲೆ ಮತ್ತಿತರರು ಆ ಭಾವಲಿಂಗಾರ್ಚಕರ ವಿಚಾರವನ್ನೂ ಮಹಿಮೆಯನ್ನೂ ತಿಳಿಯಲು ಹೇಗೆತಾನೆ ಶಕ್ತರಾದಾರು? ॥೧೦೨॥

ಈ ಭಾವಲಿಂಗದ ಸೇವೆಯು ಅತ್ಯಂತ ಮಹತ್ತಮವಾದುದು. ಈ ಭಾವಲಿಂಗದ ದ್ವಾರಪಾಲಕತ್ವವನ್ನು ದಂಡವನ್ನಾದರೂ ಹಿಡಿದುಕೊಂಡು ಮಾಡಬೇಕೆಂದು ಮಹಾಮಹಾ ದೇವತೆಗಳೂ ಅಪೇಕ್ಷಿಸುತ್ತಾರೆ. ವಿಷ್ಣು, ಇಂದ್ರ, ಚಂದ್ರಾದಿಗಳು ತಮ್ಮ ಸ್ವಧರ್ಮವನ್ನಾದರೂ ಮೂಲೆಗೊತ್ತರಿಸಿ ದ್ವಾರಪಾಲಕತ್ವವನ್ನು ಪಡೆಯಬೇಕೆಂದು ಸದಾ ಕಾದುಕೊಂಡು ನಿರೀಕ್ಷಿಸುತ್ತಿರುತ್ತಾರೆ. ಅದಕ್ಕಾಗಿ ಪ್ರಯತ್ನವನ್ನೂ ಪಡುತ್ತಾರೆ. ॥೧೦೩॥

ಭಾವಲಿಂಗಾರ್ಚಕನಿಗೆ ದೇವತೆಗಳೂ ಅಪೇಕ್ಷಿಸುವಂತಹ ಉತ್ತಮೋತ್ತಮ ಸೌಭಾಗ್ಯಗಳು ಲಭಿಸುವುವು. ಭಾವಲಿಂಗಾರ್ಚಕನನ್ನು ಸಾಕ್ಷಾತ್ ಲಕ್ಷ್ಮಿಯು

ತದಂಘ್ರ್ಯರ್ಹಣಾಂ ರೋಹಿಣೀ ಸಾಂಜಸಾ ಚೇ
ದವಶ್ಯಂ ಸುರಾಶಾಸ್ಯಮಾಶಾಸ್ಯಮುಸ್ಯ ॥೧೦೪॥

ಉಮಾ ಭಾವಲಿಂಗಾಂಗತುಂಗೋತ್ತಮಾಂಗೇ
ವಿಚಿತ್ರಾತಪತ್ರಾಮಿತಚ್ಛಾಯಯಾ ಸಾ।
ಅವಿಚ್ಛಿನ್ನಮೇವಾಪರಿಚ್ಛಿನ್ನಯಾ ಚಾ
ಪರಿಚ್ಛಿನ್ನಮೇವ ಪ್ರಕಾಮಂ ಕರೋತಿ ॥೧೦೫॥

ನ ಸಂಸಾರಪಂಕಾಂಕಿತೋ ನಿಷ್ಕಲಂಕೋ
ನಿರಾತಂಕ ಏವಾತಿಶಂಕೋಽಪ್ಯಶಂಕಃ।
ಶಶಾಂಕಾಂಕಿತಂ ಭಾವಲಿಂಗಾಧಿವಾಸಂ
ಸ್ಮರನ್ ವಾಸವತ್ವಾದಿನಾಂಭಾ ಜಹಾತಿ ॥೧೦೬॥

ಅಹಂ ಭಾವಲಿಂಗೇಶಪಾದಾರವಿಂದಂ
ಸ್ವಚಿತ್ತೇನ ಮೂರ್ಧ್ನಾ ಪ್ರಬದ್ಧಂ ಕರೋಮಿ।

---

ಪೂಜಿಸುವಳು. ಸರಸ್ವತಿಯು ಆತನನ್ನು ಯಾವಾಗಲೂ ಹಿಂಬಾಲಿಸುವಳು. ಉತ್ತಮ ಸ್ತ್ರೀಯಾದ ರೋಹಿಣಿಯು ಆತನ ಪಾದಸೇವೆಗೆ ಸದಾ ಸಿದ್ಧಳಾಗಿರುವಳು. ॥೧೦೪॥

ಭಾವಲಿಂಗಾರ್ಚಕನಿಗೆ ಪಾರ್ವತಿಯು ವಿಶೇಷ ಅನುಗ್ರಹ ಮಾಡುವಳು. ಆಕೆಯು ಆತನ ಶಿರೋಭಾಗದಲ್ಲಿ ಸದಾ ವಿಚಿತ್ರವಾದ ಛತ್ರಿಯ ನೆರಳು ಇರುವಂತೆ ಮಾಡುವಳು. ಸದಾ ಅಪರಿಮಿತವಾದ ಐಶ್ವರ್ಯವನ್ನೂ ಪ್ರದಾನಮಾಡುವಳು. ॥೧೦೫॥

ಮನುಷ್ಯನು ಎಷ್ಟೇ ಸಂಸಾರಕೂಪದಲ್ಲಿ ಮುಳುಗಿದ್ದರೂ ಆತನು ನಿಷ್ಕಲಂಕನಾಗುತ್ತಾನೆ. ಎಷ್ಟೇ ಶಂಕಾ ಸಂಶಯಗಳಿದ್ದಾಗ್ಯೂ ಅವೆಲ್ಲಾ ನಾಶವಾಗಿ ಮನುಷ್ಯನು ನಿರಾತಂಕನೂ ನಿಶ್ಶಂಕನೂ ಆಗುತ್ತಾನೆ. ಆ ಚಂದ್ರಕಲಾಲಂಕೃತನಾದ ಭಾವಲಿಂಗ ಸ್ವರೂಪನನ್ನು ಧ್ಯಾನಮಾಡಿದೊಡನೆಯೇ ಮನುಷ್ಯನು ತುಚ್ಛವಾದ ದೇವೇಂದ್ರತ್ವಾದಿ ವಿಷಯಗಳಲ್ಲಿಯೂ ಆಸೆಪಡುವುದಿಲ್ಲ. ॥೧೦೬॥

ಓ ಭಾವಲಿಂಗಸ್ವರೂಪನೇ, ನೀನು ನನ್ನ ಮನಸ್ಸನ್ನು ಅಪಹಾರ ಮಾಡಿರುತ್ತೀಯೆ. ಆದುದರಿಂದ ನಿನಗೆ ಶಿಕ್ಷೆಯನ್ನು ವಿಧಿಸುತ್ತೇನೆ. ನಿನ್ನ ಪಾದಾರವಿಂದ

ಮದೀಯಂ ಹೃತಂ ಮಾನಸಂ ಕಿಂ ತ್ವಯೇತಿ
ತ್ರಿಲೋಕ್ಯಾಂ ನ ಕೋಽಪ್ಯಸ್ತಿ ತೇ ಮೋಚಕೋಽಪಿ ॥೧೦೭॥

ಚಿರಂ ಭಾವಲಿಂಗೇಶಪಾದಾರವಿಂದೇ
ಮನಶ್ಚಂಚರೀಕಶ್ಚಕಾರ ಸ್ಥಿತಿಂ ಮೇ ।
ಸ ಧರ್ಮಾರ್ಥಕಾಮಾಪವರ್ಗಸ್ವರೂಪೈಃ
ಮರಂದೈರಮಂದೈರ್ವಿನೋದಂ ಕರೋತಿ ॥೧೦೮॥

ನಮಸ್ಸುಂದರಾಮಂದಮಂದಾರಕುಂದ
ಸ್ಫುರನ್ನೀರನೀಹಾರಹಾರಾಕರಾಯ ।
ನಿರಾಕಾರತಾರಾಚಿರಾಸಾರಹೀರ
ಸ್ವರಸ್ಸಾಗರಾಕಾರ ತೇ ಶಂಕರಾಯ ॥೧೦೯॥

ಜಲವ್ಯಾಲಬಾಲಾಮಲವ್ಯಾಲಮಾಲಾ
ಕುಲಾನೀಲಲೋಲಾಲಸತ್ಕುಂತಲಾಯ ।

---

ಗಳನ್ನು ನನ್ನ ಮಸ್ತಕದಲ್ಲಿ ಕಟ್ಟಿ ಬಂಧಿಸುತ್ತೇನೆ. ಈ ಬಂಧನದಿಂದ ನಿನ್ನನ್ನು ಸಡಲಿಸುವವರು ಮೂರು ಲೋಕದಲ್ಲಿ ಯಾರೂ ಇರುವುದಿಲ್ಲ. ||೧೦೭||

ನನ್ನ ಮನಸ್ಸೆಂಬ ಭ್ರಮರವು ಭಾವಲಿಂಗೇಶನ ಪಾದಗಳೆಂಬ ಕಮಲದಲ್ಲಿ ಬಹುಕಾಲದಿಂದ ನೆಲೆಸಿ ವಾಸಮಾಡುತ್ತಿದೆ. ಏಕೆಂದರೆ ಆ ಭಾವಲಿಂಗೇಶ ಪಾದಾರವಿಂದವು ಚತುರ್ವಿಧ ಪುರುಷಾರ್ಥಗಳೆಂಬ ಮಕರಂದ ಮಧುವಿನಿಂದ ನನ್ನ ಮನೋಭ್ರಮರವನ್ನು ಸಂತೃಪ್ತಿಗೊಳಿಸಿ ಆನಂದಪಡಿಸುತ್ತದೆ. ||೧೦೮||

ಓ ಭಾವಲಿಂಗೇಶನೇ, ನೀನು ಉಜ್ವಲವಾದ ಮಂದಾರಪುಷ್ಪದ ಮೊಗ್ಗಿನಂತೆ ಇದ್ದೀಯೆ. ನೀರಿನ ಹಿಮಕಣದಂತೆ ಅತ್ಯಂತ ಸ್ವಚ್ಛವಾಗಿ ಪ್ರಕಾಶಿಸುತ್ತೀಯೆ. ಯಥಾರ್ಥವಾಗಿ ನಿನಗೆ ಯಾವ ಆಕಾರವಿಲ್ಲದಿದ್ದರೂ ನೀನು ವಿಲಾಸಾರ್ಥವಾಗಿ ನಕ್ಷತ್ರ, ವಜ್ರ ಮುಂತಾದವುಗಳಂತೆ ಅತ್ಯಂತ ಉಜ್ವಲವಾದ ರೂಪುಗಳನ್ನು ಧರಿಸಿರುತ್ತೀಯೆ. ನೀನೇ ಸಮುದ್ರದ ಆಕಾರವನ್ನು ಧರಿಸಿಕೊಂಡಿದ್ದೀಯೆ. ||೧೦೯||

ಓ ಕಾಲಕಾಲ ಭಾವಲಿಂಗೇಶನೇ, ನೀನು ನೀರು ಹಾವಿನ ಮರಿಯಂತೆ ಅತ್ಯಂತ ನಿರ್ಮಲವಾದ ಮತ್ತು ಥಳಥಳ ಮಿಂಚುವ ಸರ್ಪಗಳನ್ನು ವಿಲಾಸವಾಗಿ ನಿನ್ನ ಜಟೆಯಲ್ಲಿ ಧರಿಸಿದ್ದೀಯೆ. ನಿನ್ನ ವಿಲಾಸವೂ ಅತ್ಯಂತ ವೈಭವವೂ ನೀಲ

**ಸ ನೀಲಾಚಲಾನೀಲನೀಲೋತ್ಪಲಶ್ರೀ**
**ವಿಲಾಸಾಯ ತೇ ಕಾಲಕಾಲ ಪ್ರಣಾಮಃ** ॥೧೧೦॥

**ನಮಃ ಸ್ಫಾರಕರ್ಪೂರಪೂರಾಭ್ರಗೌರ**
**ಜ್ವರಾಪಾರಸಂಸಾರಭಾರಾಪಕಾರ ।**
**ಪುರಾಖರ್ವಗರ್ವಪ್ರಸಾರಾಪಹಾರ**
**ಸ್ಮರಾಂಧಾಂಧಕಾರೇಃ ಸ್ಮರಾರೇ ಹರಾಯ** ॥೧೧೧॥

**ನಮಶ್ಚಾರು ಕಾಕೋದರಾನದ್ಧರುದ್ಧ**
**ಪ್ರಬದ್ಧಾಪ್ರಬುದ್ಧೇಂದುಖಂಡಾರ್ಧಮೌಲೇ ।**
**ಮಹಾಕಾಲಕಾಲಾನಲಾನೀಲಫಾಲ**
**ಪ್ರಬಾಲಪ್ರವಾಲಾಧರಾಧೀರಲೋಲ** ॥೧೧೨॥

**ನಮಶ್ಚಾರುಚಾಮೀಕರಾಕಾರವೀರ**
**ಪ್ರಭಾಪೂರಸಂಪೂರ್ಣಸಂಪೂರ್ಣಕಾಮ ।**

---

ಪರ್ವತದ ಮೇಲೆ ಬೆಳೆದಿರುವ ನೀಲೋತ್ಪಲದ ಕಾಂತಿಯಂತೆ ಉಜ್ವಲವೂ ಪ್ರಶಾಂತ ಗಂಭೀರವೂ ಆಗಿರುತ್ತದೆ. ॥೧೧೦॥

ಓ ಭಾವಲಿಂಗೇಶನೇ, ನೀನು ಕರ್ಪೂರ ರಾಶಿಯಂತೆ ಧವಳವರ್ಣನೂ ಉಜ್ವಲನೂ ಆಗಿದ್ದೀಯೆ. ಸಂಸಾರವೆಂಬ ಮಹಾಜ್ವರಕ್ಕೆ ನೀನು ಅಪಕಾರಿ, ಮತ್ತು ನಾಶಕನು. ಮಹಾ ಗರ್ವಿಷ್ಠನಾದ ತ್ರಿಪುರನ ಗರ್ವಪ್ರಸಾರವನ್ನೆಲ್ಲಾ ನೀನೇ ಧ್ವಂಸಮಾಡಿದೆ. ಕಾಮಾಂಧನಾದ ಅಂಧಕಾಸುರನನ್ನು ಸಂಹಾರಮಾಡಿದವನೂ ನೀನೆಯೇ, ಮನ್ಮಥಧ್ವಂಸಿಯೂ ನೀನೇ ಆಗಿರುತ್ತೀಯೆ. ॥೧೧೧॥

ಓ ಭಾವಲಿಂಗೇಶನೇ, ಉಜ್ವಲವಾದ ಸರ್ಪಗಳನ್ನು ಆಭರಣಗಳನ್ನಾಗಿ ಧಾರಣೆಮಾಡಿಕೊಂಡಿದ್ದೀಯೆ. ಶಿರಸ್ಸಿನಲ್ಲಿ ಸುಂದರವಾದ ಚಂದ್ರಖಂಡವನ್ನು ಧರಿಸಿದ್ದೀಯೆ. ನೀನು ಮಹಾ ಕಾಲಸ್ವರೂಪನು. ನಿನ್ನ ಫಾಲಪ್ರದೇಶದಲ್ಲಿ ಕಲ್ಪಾಂತಕಾಲದ ಪ್ರಲಯಾಗ್ನಿ ಇರುತ್ತದೆ. ನಿನ್ನ ಅಧರೋಷ್ಠವು ನೂತನವಾದ ಚಿಗುರಿನಂತೆ ಸುಂದರವೂ ಸುಕುಮಾರವೂ ಆಗಿರುತ್ತದೆ. ॥೧೧೨॥

ಸುವರ್ಣದಂತೆ ಸುಂದರನೂ ಪ್ರಭಾಪರಿಪೂರ್ಣನೂ ಆದ ನಿನಗೆ ನಮಸ್ಕಾರ. ನೀನೇ ಪರಿಪೂರ್ಣಸ್ವರೂಪನು. ನಿನಗೆ ಪಡೆಯಬೇಕಾದದ್ದು ಯಾವುದೂ

ನ ಕಿಂ ಕಾಮಕಾಮಾಯ ಕಾಮಂ ಪ್ರಕಾಮಂ
ಕರೋಮಿ ಪ್ರದೋಷೇ ನ ರೋಷಂ ಕುರುಷ್ವ ॥೧೧೩॥

ಪ್ರದೋಷೇಷು ತೋಷೇಣ ನಾಟ್ಯಂ ಕರೋಷಿ
ಪ್ರದೋಷೇಷು ರೋಷೋ ನ ತೇಽತಃ ಪ್ರದೋಷೇ ।
ಪ್ರದೋಷೇಽಪಿ ರೋಷೋ ನ ಮಯ್ಯಪ್ಯತೋ ಮಾಂ
ಪ್ರದೋಷೇಷು ವಾ ಭಾವಯಸ್ವಾಸ್ತದೋಷಂ ॥೧೧೪॥

ನರಂ ಸರ್ವದೋಷಾಕರಂ ರಾಜಸಂ ಮಾಂ
ಸದಾ ತಾಮಸಂ ಘೋರಸಂಸಾರಲೀನಂ ।
ಹರಾರಾಧನಾನಂದಸಂದೋಹಹೀನಂ
ಸಹೀನಂ ಹರಾಹೀನಹೀನಂ ಪ್ರಪಶ್ಯ ॥೧೧೫॥

---

ಇರುವುದಿಲ್ಲ. ನಿನಗೆ ಮನ್ಮಥನು ಯಃಕಶ್ಚಿತ್ ತೃಣಪ್ರಾಯನು. ಅಂಥ ನಿನಗೆ ಪ್ರತಿ ಪ್ರದೋಷದಲ್ಲಿಯೂ ಆರಾಧನೆಯನ್ನೂ ನಮಸ್ಕಾರವನ್ನೂ ಮಾಡುತ್ತೇನೆ ನನ್ನ ಮೇಲೆ ಎಂದೂ ಕೋಪ ತಾಳಬೇಡ. ||೧೧೩||

ನೀನು ಪ್ರದೋಷಸಮಯದಲ್ಲಿ ಆನಂದವಾಗಿ ನಾಟ್ಯವಾಡುವೆ. ಆ ಸಮಯ ದಲ್ಲಿ ನಿನಗೆ ಎಂದೂ ರೋಷ ಬರುವುದಿಲ್ಲ. ಅದು ನಿನಗೆ ಪರಮಾನಂದ ಸಮಯವಾಗಿರುತ್ತದೆ. ಹಾಗೆಯೇ ನಾನು ಎಷ್ಟು ತಪ್ಪು ಮಾಡಿದರೂ, ನನ್ನಲ್ಲಿ ಎಷ್ಟೇ ದೋಷಗಳಿದ್ದಾಗ್ಯೂ ನನ್ನಲ್ಲಿ ಕೋಪಮಾಡಬೇಡ. ನಾನೂ ಪ್ರದೋಷ ಸಮಯದಲ್ಲಿ ನಿನ್ನನ್ನು ಆರಾಧಿಸುತ್ತೇನೆ. ನನ್ನ ದೋಷಗಳೆಲ್ಲವೂ ನಾಶವಾಗುತ್ತವೆ. ಆ ಸಮಯದಲ್ಲಿ ನೀನು ನನ್ನಲ್ಲಿ ಸನ್ನಿಧಾನಕೊಟ್ಟು ಸಲಹ ಬೇಕು. ||೧೧೪||

ಓ ಪರಮೇಶ್ವರನೇ, ನಾನು ಮನುಷ್ಯಮಾತ್ರನು. ನನ್ನಲ್ಲಿ ರಜೋಗುಣವು ತುಂಬಿರುವುದರಿಂದ ಅನೇಕ ದೋಷಗಳಿರಬಹುದು. ನನ್ನಲ್ಲಿ ತಮೋಗುಣವು ತುಂಬಿರುವುದರಿಂದಲೇ ಈ ಘೋರಸಂಸಾರದಲ್ಲಿ ಮುಳುಗಿದ್ದೇನೆ. ಈವರೆಗೂ ಪರಮೇಶ್ವರನ ಆರಾಧನೆಯ ಆನಂದವನ್ನು ಕಂಡಿರಲಿಲ್ಲ. ಅದರಿಂದಲೇ ನಾನು ಹೀನನೂ, ದೀನನೂ ಅತ್ಯಂತ ಶೋಚ್ಯನೂ ಆಗಿದ್ದೇನೆ. ನನ್ನನ್ನು ಕೃಪಾದೃಷ್ಟಿ ಯಿಂದ ಅವಲೋಕಿಸು. ||೧೧೫||

ನ ಸಾಧ್ಯಸ್ವಸಂಸ್ಕಾರಸಾರಂಗತೋಽಹಂ
ನ ಸಾರಸ್ವತೇಷ್ಟಿಪ್ರಚಾರಾದರೋಽಹಂ ।
ನ ಚಾತ್ರಾತಿರಾತ್ರಾದ್ಯ ಪೂರ್ವಾಶ್ರಯೋಽಹಂ
ದಯಾಪಾತ್ರಮಾತ್ರಂ ತ್ರಿಣೇತ್ರಾವ ಮಾಂ ತ್ವಂ ॥೧೧೬॥

ಮದೀಯಾಪರಾಧಾನಗಾಧಾನಬಾಧಾನ್
ವಿಧಿವ್ಯಾಧಸಂಬಂಧಬೋಧಪ್ರಬುದ್ಧಾನ್ ।
ಅಧೀತಾನಧೀತಪ್ರಬುದ್ಧಾಪ್ರಬುದ್ಧ
ಶ್ರಿಯಾಭ್ರಾಂತಮುತ್ರಾಂತಮಿಾಶಾಶುಪಾಹಿ ॥೧೧೭॥

ಮದೀಯಾನಿ ಪಾಪಾನ್ಯಪಾರಾಂಬುರಾಶಿ
ಪ್ರಪೂರಾಪಕಾರಾಣಿ ನಾಶಂ ಪ್ರಯಾಂತಿ ।
ತವಾನುಗ್ರಹಾದುಗ್ರದುಷ್ಟಗ್ರಹಾಣಾಂ
ಕ್ವ ವಾರ್ತಾಪಿ ಸಾ ಸ್ಯಾತ್ಕುತೋಽವಗ್ರಹಾಣಾಂ ॥೧೧೮॥

---

ನಾನು ಯಾವ ಯಜ್ಞಯಾಗಾದಿಗಳನ್ನೂ ಮಾಡಿರುವುದಿಲ್ಲ. ಷೋಡಶ ವಿಧವಾದ ಸಂಸ್ಕಾರವೂ ನನಗಿರುವುದಿಲ್ಲ. ಸಾರಸ್ವತೇಷ್ಟಿಯ ಅನುಷ್ಠಾನದಲ್ಲಿ ನನಗೆ ಆದರವೇ ಎಂದೂ ಉಂಟಾಗಿರುವುದಿಲ್ಲ. ಅತಿರಾತ್ರವೇ ಮೊದಲಾದ ಅಧ್ವರಗಳನ್ನು ಅನುಷ್ಠಾನಮಾಡಿದ್ದರಿಂದ ಅವುಗಳಿಂದ ಉಂಟಾಗುವ ಪುಣ್ಯವಿಶೇಷಗಳೂ ನನ್ನಲ್ಲಿ ಇರುವುದಿಲ್ಲ. ನಾನು ಕೇವಲ ದೀನನೂ ದಯಾಪಾತ್ರನೂ ಆಗಿದ್ದೇನೆ. ಆದುದರಿಂದ ಓ ಮುಕ್ಕಣ್ಣನೇ, ನನ್ನನ್ನು ಕೃಪೆಮಾಡಿ ಕಾಪಾಡು. ॥೧೧೬॥

ನನ್ನಲ್ಲಿ ನಾನಾವಿಧವಾದ ಅಪರಾಧಗಳಿವೆ. ಆ ಅಪರಾಧಗಳು ಅಗಾಧಗಳೂ ಉದ್ದಾಮಗಳೂ ಆಗಿವೆ. ನಾನೂ ಸ್ವಲ್ಪ ವೇದವಿಧಿಗಳನ್ನು ತಿಳಿದಿರುವುದರಿಂದ ಅವುಗಳು ಅಪರಾಧಗಳೆಂಬ ಅರಿವು ನನಗುಂಟಾಗಿದೆ. ಅವುಗಳ ಆಘಾತದಿಂದ ತ್ರಸ್ತನಾಗಿದ್ದೇನೆ. ನಾನು ಕಲಿತ ಮತ್ತು ಕಲಿಯದ ವಿದ್ಯೆಯಿಂದಲೂ, ಪ್ರಾಪ್ತ ಮತ್ತು ಅಪ್ರಾಪ್ತ ಧನದಿಂದಲೂ ಸರಿಯಾದ ವಿವೇಕವನ್ನಿಟ್ಟುಕೊಳ್ಳಲಾರದೇ ಭ್ರಾಂತನಾಗಿದ್ದೇನೆ. ಸರಿಯಾದ ವಿವೇಕವನ್ನು ಕರುಣಿಸಿ ಕಾಪಾಡು. ॥೧೧೭॥

ಓ ಪರಮೇಶ್ವರನೇ! ನಿನ್ನ ಅನುಗ್ರಹದಿಂದ ನನ್ನ ಎಲ್ಲಾ ಸಂಕಟಗಳೂ ನಾಶವಾಗುತ್ತವೆ. ನನ್ನ ಪಾಪಗಳು ಸಮುದ್ರರಾಶಿಯಂತೆ ಅಪಾರವಾಗಿದ್ದರೂ, ನನ್ನ

ಮದೀಯಂ ಮನಃ ಪಾದಪದ್ಮೇ ತವಾದ್ಯ
ಪ್ರವಿಷ್ಟಂ ಪ್ರಕೃಷ್ಟಂ ನಿಕೃಷ್ಟಂ ನ ಜಾತಂ ।
ಅತಸ್ತನ್ನಮಾಯಾತುಮಾಯಾತು ಮಾ ಮಾ
ಪ್ರಯಾತು ಪ್ರಯಾತು ಪ್ರಯಾತು ಪ್ರಯಾತು ॥೧೧೯॥

ಭವತ್ಪಾದಪದ್ಮಾಶ್ರಿತಂ ತನ್ಮನೋ ಮೇ
ಮದೀಯಾಪರಾಧಾನ್ ಕ್ಷಮಸ್ವೇತಿ ಮಂದಂ ।
ಕದಾಚಿನ್ನಿವೇದ್ಯಾನಿವೇದ್ಯಾನಪೀಶ
ಪ್ರಸಾದಾಯ ಸಿದ್ಧಿಂ ಕರೋತು ಪ್ರಸನ್ನಂ ॥೧೨೦॥

ಮನೋಜನ್ಮಜನ್ಮಾಂತರಾನಂತಪುಣ್ಯೈಃ
ತ್ವದಂಘ್ರ್ಯಂಬುಜಾರಾಧನಾಯ ಪ್ರವೃತ್ತಂ ।

---

ಅಪಕಾರವು ಗುಡ್ಡದಂತೆ ರಾಶಿಯಾಗಿದ್ದರೂ ನಿನ್ನ ಅನುಗ್ರಹಮಾತ್ರದಿಂದ ಎಲ್ಲವೂ ನಾಶವಾಗುತ್ತವೆ. ನಿನ್ನ ಅನುಗ್ರಹ ದೊರೆತಮೇಲೆ ದುಷ್ಟಗ್ರಹಗಳ ಪಾಡೇನು? ನನಗೆ ಆ ದುಷ್ಟಗ್ರಹಗಳಿಂದ ಏನುತಾನೇ ಪೀಡೆಯುಂಟಾದೀತು? ||೧೧೮||

ಇಂದು ನನ್ನ ಮನಸ್ಸು ನಿನ್ನ ಪಾದಪದ್ಮಗಳಲ್ಲಿ ಲೀನವಾಯಿತು. ಅಂತೆಯೇ ಇಂದು ಬಹಳ ಒಳ್ಳೆಯದಾಯಿತು. ಇಂದು ನನ್ನ ಕೇಡುಗಳೆಲ್ಲಾ ದೂರವಾದವು. ಇನ್ನು ನನಗೆ ಮಾಯೆಯು (ಮೋಹವು) ಬರಲಾರದು. ಅಥವಾ ಬಂದರೆ ಬರಲಿ. ಅಥವಾ ಮಾಯೆಯು ಹೋದರೂ ಹೋಗಲಿ. ನನಗೆ ನಷ್ಟವಿರುವುದಿಲ್ಲ. ||೧೧೯||

ಈ ನನ್ನ ಮನಸ್ಸು ಇಂದಿನವರೆಗೆ ಉಚ್ಛೃಂಖಲವಾಗಿದ್ದರೂ ಈ ದಿನ ನಿನ್ನ ಚರಣಕಮಲಗಳನ್ನು ದೃಢವಾಗಿ ಆಶ್ರಯಿಸಿರುತ್ತದೆ. ಈಗ ಅದು ತನ್ನ ಅಪರಾಧ ಗಳನ್ನು ಒಂದು ವೇಳೆ ಕ್ಷಮಿಸಬೇಕೆಂದು ಕೇಳಿಕೊಳ್ಳಬಹುದು ಅಥವಾ ಕೇಳಿ ಕೊಳ್ಳದೇ ಇರಬಹುದು. ಆದರೂ ನೀನು ಪ್ರಸನ್ನನಾಗಿ ಅವುಗಳನ್ನು ಮನ್ನಿಸ ಬೇಕು. ನೀನು ಮನ್ನಿಸಿದರೇ ನನಗೆ ಅನುಗ್ರಹವೂ ಸಿದ್ಧಿಯೂ ಲಭಿಸುವುದು. ||೧೨೦||

ನನ್ನ ಮನಸ್ಸು ಇಂದು ತನ್ನ ಜನ್ಮಜನ್ಮಾಂತರದಲ್ಲಿ ಸಂಪಾದಿಸಿದ ಪುಣ್ಯ ಯೋಗದಿಂದ ನಿನ್ನ ಚರಣಕಮಲಗಳ ಆರಾಧನೆಯಲ್ಲಿ ಪ್ರವೃತ್ತಿಸಿದೆ. ಇದು ಬಹಳ ಕಷ್ಟದಿಂದ ಸಂಪಾದಿಸಿರುವುದಾಗಿದೆ. ಮನಸ್ಸು ನಿನ್ನ ಆರಾಧನೆಯಿಂದ

ನಿವೃತ್ತಂ ನ ತನ್ಮಾಸ್ತು ಮಾಸ್ತು ಸ್ವತಂತ್ರಾತ್
ಪ್ರವೃತ್ತಂ ನಿವೃತ್ತಂ ಕಥಂ ವಾ ಮಹೇಶ ॥೧೨೧॥

ಶರಣ್ಯಃ ಶರಣ್ಯೇಷು ಕೋ ವಾ ತದನ್ಯೋ
ಮದನ್ಯೋಽಪಿ ದೀನಃ ಕ್ವ ವಾ ಭೂತಲೇಽಸ್ಮಿನ್ ।
ಅತಸ್ತದ್ದ್ವಯಂ ವೀಕ್ಷ್ಯ ಫಾಲಾಕ್ಷಲಕ್ಷಂ
ಕ್ಷಣಂ ವಾ ಕ್ಷಣಾರ್ಧಂ ಪ್ರವಿಶ್ಯಾದರೇಣ ॥೧೨೨॥

ನ ಮೇ ಶಾರದಾದಿಪ್ರಸಾದಾದ್ಯಪೇಕ್ಷಾ
ನ ವೇದಾದಿಬೋಧಪ್ರಸಾದಾದ್ಯಪೇಕ್ಷಾ ।
ಕ್ಷಣಾರ್ಧಂ ತ್ವದಂಘ್ರ್ಯಂಬುಜಾರಾಧನೇ ಮೇ
ತದೇವಾಸ್ತು ವಾಂಛಾ ನ ಚಾನ್ಯತ್ರ ವಾಂಛಾ ॥೧೨೩॥

---

ಮತ್ತೆ ಹಿಂದಿರುಗುವುದು ಬೇಡ. ಮನಸ್ಸೆಂಬುದು ಬಹಳ ಸ್ವತಂತ್ರವಸ್ತುವು. ಒಂದು ನಿಯಮದಲ್ಲಿ ನಿಲ್ಲುವುದಿಲ್ಲ. ಆದರೂ ಅದು ನಿನ್ನ ಆರಾಧನೆಯಿಂದ ಹಿಂತಿರುಗುವಂತೆ ಎಂದೂ ಮಾಡಬೇಡ. ॥೧೨೧॥

ರಕ್ಷಕರಲ್ಲೆಲ್ಲಾ ನೀನೇ ಅತ್ಯಂತ ಶ್ರೇಷ್ಠನಾಗಿರುವೆ. ನಿನ್ನ ಹೊರತು ಬೇರೆ ಯಾರೂ ಸ್ವಾಮಿ ಇರುವುದಿಲ್ಲ. ನಾನಾದರೋ ದೀನರಲ್ಲೆಲ್ಲಾ ಅತ್ಯಂತ ಹೀನ ದೀನನಾಗಿರುವೆನು. ಈ ಪ್ರಪಂಚದಲ್ಲಿ ನನ್ನಿಂದ ದೀನರು ಯಾರಿರುವರು ? ಓ ಪರಮೇಶ್ವರನೇ, ಈ ಎರಡನ್ನೂ ಪರ್ಯಾಲೋಚಿಸಿ ನನ್ನನ್ನು ಕಾಪಾಡು. ಒಂದು ಕ್ಷಣವೋ ಅಥವಾ ಅದಕ್ಕಿಂತಲೂ ಕಮ್ಮಿ ಕ್ಷಣಾರ್ಧವಾದರೂ ನನಗೆ ಪ್ರತ್ಯಕ್ಷನಾಗಿ ಅನುಗ್ರಹಿಸು. ॥೧೨೨॥

ನನಗೆ ಸರಸ್ವತಿಯನ್ನು ಪ್ರಸನ್ನಗೊಳಿಸಿಕೊಳ್ಳಬೇಕೆಂಬ ಅಪೇಕ್ಷೆ ಇರುವುದಿಲ್ಲ ಅಥವಾ ವೇದಗಳನ್ನೂ ವೇದಾರ್ಥಗಳನ್ನೂ ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯೂ ಇಲ್ಲ. ನನಗೆ ಯಾವ ವಿದ್ಯೆಯೂ ಕಲೆಯೂ ಬೇಕಾಗಿಲ್ಲ. ನನಗೆ ಒಂದು ಕ್ಷಣವೋ ಕ್ಷಣಾರ್ಧವೋ ನಿನ್ನ ಚರಣಕಮಲಗಳ ಆರಾಧನೆಯ ಸುಯೋಗವೊಂದಿದ್ದರೆ ಸಾಕು. ಅದೇ ನನ್ನ ತೀವ್ರವಾದ ಅಪೇಕ್ಷೆ. ನನಗೆ ಮತ್ತೇನೂ ಅಪೇಕ್ಷೆಯೇ ಇರುವುದಿಲ್ಲ. ॥೧೨೩॥

ಯದಿ ತ್ವಂ ಮದೀಯಂ ಮನೋಬುದ್ಧಿಗಮ್ಯಂ
ಪ್ರಸಾದಂ ಪ್ರದಾತುಂ ಪ್ರವೃತ್ತಸ್ತದಾ ಮೇ ।
ಭವನ್ನಾಮಮಾತ್ರಾನುರಕ್ತಂ ಮದೀಯಂ
ಮನಸ್ಸರ್ವದಾಪ್ಯಸ್ತು ಶಂಭೋ ಪ್ರಸೀದ ॥೧೨೪॥

ವದಾನ್ಯಾಗ್ರಗಣ್ಯಾಗ್ರಗಣ್ಯಾಗ್ರಗಣ್ಯೋ
ವದಾನ್ಯಾತಿಮಾನ್ಯಾತಿಮಾನ್ಯಸ್ತ್ವಮೀಶ ।
ಅನನ್ಯಾಗ್ರಗಣ್ಯಾಗ್ರಗಣ್ಯಾಗ್ರಗಣ್ಯಃ
ಕಲೌ ಕಾಲಕಾಲಾಹಮೇವೇತಿ ಮನ್ಯೇ ॥೧೨೫॥

ನ ತೇ ದೇಯಮಸ್ತ್ಯಸ್ತಿ ಭಕ್ತ್ಯಾ ವಿನಾನ್ಯತ್
ತದನ್ಯಂ ನ ಮೇ ಪ್ರಾರ್ಥನೀಯಂ ಚ ಲೋಕೇ ।
ನ ಸಾ ಚಂಚಲಾತಿಸ್ಥಿರಾ ತ್ವತ್ಪದಾಬ್ಜೇ
ಮಹಾಕಲ್ಪಕೋಟಿಷ್ವನಂತೇಷ್ವಪೀಶ ॥೧೨೬॥

---

ಓ ಶಂಭುವೇ! ನನ್ನ ಮೇಲೆ ನೀನು ಪ್ರಸನ್ನನಾಗಿದ್ದರೆ, ಅಥವಾ ನನ್ನ ಮನೋಬುದ್ಧಿಗಳಿಗೆ ಗೋಚರವಾಗುವಂಥ ಅನುಗ್ರಹವನ್ನು ಮಾಡಬೇಕೆಂದು ಪ್ರವೃತ್ತನಾಗಿದ್ದರೆ, ಇದೋ ಈ ಅನುಗ್ರಹವನ್ನು ಮಾಡು. ನನ್ನ ಮನಸ್ಸು ನಿನ್ನ ಪುಣ್ಯನಾಮಗಳಲ್ಲಿ ಮಾತ್ರವೇ ಸದಾ ಅನುರಕ್ತವಾಗಿರಲಿ. ಪ್ರಸನ್ನನಾಗಿ ಇದೇ ವರವನ್ನು ಕೊಡು. ||೧೨೪||

ಸರ್ವಶ್ರೇಷ್ಠನೂ ಸರ್ವ ಇಷ್ಟಾರ್ಥಗಳನ್ನು ಪ್ರದಾನಮಾಡುವುದರಲ್ಲಿ ಸರ್ವಾಗ್ರಗಣ್ಯನೂ ನೀನೇ ಆಗಿದ್ದೀಯೆ ಎಂದು ನನ್ನ ನಂಬಿಕೆ. ಸಕಲ ದಾನಿಗಳಿಗೂ ನೀನೇ ಮಾನ್ಯನು ಎಂದು ನನ್ನ ಭಾವ. ಮೃತ್ಯುಂಜಯನಾದ ನೀನೇ ಸರ್ವ ದೇವತೆಗಳಿಗೂ ಅಗ್ರಗಣ್ಯನೆಂದೂ ನಂಬಿದ್ದೇನೆ. ||೧೨೫||

ನಿನ್ನಲ್ಲಿ ದಾನಮಾಡುವುದರಲ್ಲೆಲ್ಲಾ ಶ್ರೇಷ್ಠವಾದದ್ದು, ಭಕ್ತಿಯನ್ನು ಬಿಟ್ಟು ಬೇರೊಂದಿಲ್ಲ. ನಾನು ಪ್ರಾರ್ಥನೆಮಾಡಿ ಬೇಡಿಕೊಳ್ಳುವುದೇನೆಂದರೆ ಅದೇ ಭಕ್ತಿಯೊಂದನ್ನು ಬಿಟ್ಟು ಬೇರೊಂದನ್ನಲ್ಲ. ಆದುದರಿಂದ ನನಗೆ ಅದೇ ಭಕ್ತಿಯನ್ನೇ ಪ್ರದಾನ

ದೃಢಾ ಸೈವ ಜನ್ಯಾಪ್ಯನಂತಾಪ್ರರೂಢಾ
ಪುನರ್ವರ್ಧಮಾನಾ ನವೈವಾನುವೇಲಂ ।
ನ ಜನ್ಯತ್ವಭಾವತ್ವಶಂಕಾಸ್ತು ತಸ್ಯಾಂ
ಪ್ರಸಾದಸ್ಯ ತೇ ದುರ್ಲಭಂ ಭಾವಿ ಕಿಂ ವಾ ॥೧೨೭॥

ನ ಜನ್ಯಸ್ವಭಾವಸ್ಯ ನಿತ್ಯತ್ವಮಸ್ತೀ
ತ್ಯವಶ್ಯಂ ತ್ವಯಾ ನೈವ ವಕ್ತವ್ಯಮೀಶ ।
ಕಿಮಪ್ಯತ್ವಶಕ್ಯಂ ತವಾಪಿ ತ್ರಿಲೋಕ್ಯಾಂ
ಶಿವನ್ಯಾಯವಾರ್ತಾ ನ ಮೇ ರೋಚತೇಽಪಿ ॥೧೨೮॥

ನ ತೇ ಗೌತಮಾಕಾಶನಿತ್ಯತ್ವವಾದೋ
ಮತೋ ವೇದವೇದಾಂತತತ್ತ್ವಜ್ಞಮೂರ್ತೇ ।
ನ ತೇ ಜೈಮಿನೇಶ್ಶಬ್ದನಿತ್ಯತ್ವವಾದೋ
ನ ಮಿಥ್ಯಾತ್ವವಾದೋಽಪಿ ವೇದಾಂತಿನಾಂ ತೇ ॥೧೨೯॥

---

ಮಾಡು. ಕಲ್ಪಕೋಟಿಗಳು ಕಳೆದರೂ ಸ್ವಲ್ಪವೂ ಚಂಚಲವಾಗದೇ ಸ್ಥಿರವಾಗಿರುವ ಭಕ್ತಿಯನ್ನು ನನಗೆ ಕೊಡು. ॥೧೨೬॥

ಆ ಭಕ್ತಿಯು ದೃಢವಾಗಿಯೂ, ಪುನಃಪುನಃ ವೃದ್ಧಿಹೊಂದುತ್ತಾ ನೂತನ ವಾಗುತ್ತಲೂ ಇರುವಾಗ ಪುನಃ ಜನನ ಮರಣ ಶಂಕೆಯು ಎಲ್ಲಿಯದು? ಆ ಸಂಶಯಕ್ಕೆ ಆಸ್ಪದವೇ ಇರುವುದಿಲ್ಲ. ನಿನ್ನ ಅನುಗ್ರಹವು ಒಂದಿರಲು ಆಗಬೇಕಾದ್ದು ಆಗದಿರುವುದು ಏನುಂಟು? ॥೧೨೭॥

ಹುಟ್ಟುವ ಗುಣವುಳ್ಳ ಪದಾರ್ಥಕ್ಕೆ ನಿತ್ಯತ್ವವು ಎಂದೂ ಇರುವುದಿಲ್ಲೆಂಬ ವಿಷಯವು ಪ್ರಸಿದ್ಧವೇ ಆಗಿದೆ. ಇದನ್ನು ನಿನ್ನಿಂದ ತಿಳಿದುಕೊಳ್ಳಬೇಕಾಗಿಲ್ಲ. ನಿನ್ನಿಂದ ತಿಳಿದುಕೊಳ್ಳಬೇಕಾದದ್ದು ಇನ್ನೂ ಮಹತ್ತರವಾದದ್ದು ಬೇರೆ ಇದೆ. ನನಗೆ ಈ ನ್ಯಾಯ ತರ್ಕಗಳ ವಿಚಾರವೇ ರುಚಿಸುವುದಿಲ್ಲ. ನನಗೆ ತತ್ವವಿಚಾರವು ಬೇಕು. ॥೧೨೮॥

ಓ ಪರಮೇಶ್ವರನೇ! ನೀನು ವೇದ ಮತ್ತು ವೇದಾಂತಗಳ ಪರಮ ತತ್ತ್ವವನ್ನು ತಿಳಿದಿರುತ್ತೀಯೆ. ಅಲ್ಲದೇ ಆ ಪರಮತತ್ತ್ವಸ್ವರೂಪನೇ ನೀನಾಗಿದ್ದೀಯೆ. ನಿನಗೆ ಗೌತಮನ ತಾರ್ಕಿಕದರ್ಶನವೂ, ಆ ಆಕಾಶ ನಿತ್ಯತ್ವವಾದವೂ ಇಷ್ಟವಾಗಿರು

ನ ಬಂಧೋಽಪಿ ಮೋಕ್ಷೋಽಪಿ ವೇದಾಂತಶಾಸ್ತ್ರೇ
ತಥಾ ದೃಷ್ಟಸೃಷ್ಟಿಪ್ರವಾದೋಽಪಿ ದೃಷ್ಟಂ ।
ಅವಿದ್ಯಾವಿಲಾಸೋ ನ ಕೋಽಪೀಹ ಕಲ್ಪ್ಯೋ
ವಿಲಾಸೈರ್ಯತಸ್ತೇ ಜಗಜ್ಜಾಲಮಾಸೀತ್ ॥೧೩೦॥

ನ ಚಾನಂತವೇದಾಂತವಾರ್ತಾವಿಚಾರೇ
ಹರಾರಾಧಕಾರಾಧ್ಯಭಾವಾಭಿಮಾನಃ ।
ಸ ಚೇನ್ನಾಧುನಾ ಕರ್ಮಮಾರ್ಗೋ ವಿನಷ್ಟಃ
ಶಿವಾರಾಧನಾಮಾರ್ಗವಾರ್ತಾ ಕುತಃ ಸ್ಯಾತ್ ॥೧೩೧॥

---

ವುದಿಲ್ಲ. ಆ ಜೈಮಿನಿಯು ಶಬ್ದಕ್ಕೆ ನಿತ್ಯತ್ವವನ್ನು ಹೇಳುತ್ತಾನೆ. ಅದೇ ಶಬ್ದಕ್ಕೆ ವೇದಾಂತಿಗಳು ಅನಿತ್ಯತ್ವವನ್ನು ಹೇಳುತ್ತಾರೆ. ಆದರೆ ನನಗೆ ಈ ಶುಷ್ಕವಾದ ತರ್ಕವಿತರ್ಕಗಳು ರುಚಿಸುವುದಿಲ್ಲ. ||೧೨೯||

ವೇದಾಂತಶಾಸ್ತ್ರದಲ್ಲಿ ಅದೇನೇನೋ ಬಂಧವೆಂತಲೂ ಮೋಕ್ಷವೆಂತಲೂ ಚರ್ಚೆಗಳು ನಡೆದಿರುತ್ತವೆ. "ಈ ಕಣ್ಣಿಗೆ ಕಾಣುವ ಪ್ರಪಂಚವೆಲ್ಲವೂ ಕೇವಲ ತೋರುಗಾಣುವಿಕೆಯು ಮಾತ್ರ, ಇವುಗಳು ಪಾರಮಾರ್ಥಿಕವಾಗಿ ಇರತಕ್ಕವುಗಳಲ್ಲ. ಇವುಗಳೆಲ್ಲಾ ಆ ಅವಿದ್ಯೆಯ ಅದ್ಭುತ ಕಾರ್ಯಗಳು" ಹೀಗೆಂದು ನಾನಾ ವಿಧವಾದ ಚರ್ಚೆಗಳಿವೆ. ಆದರೆ ನನಗೆ ಅಲ್ಲಿ ಹೇಳಿರುವುದು ಸರಿಯಾಗಿದೆ ಎನಿಸುವುದಿಲ್ಲ. ಈ ಪ್ರಪಂಚವೆಲ್ಲವನ್ನೂ ಪರಮ ಸ್ವತಂತ್ರನೂ ಪರಮ ವಿಲಾಸಿಯೂ ಆದ ನೀನೇ ಉಂಟುಮಾಡಿದ್ದೀಯೆ ಎಂದು ನಾನು ನಂಬಿದ್ದೇನೆ. ||೧೩೦||

ಆ ವೇದಾಂತಶಾಸ್ತ್ರವೇನೋ ಅಪರಿಮಿತವಾಗಿ ಅಭಿವೃದ್ಧವಾಗಿದೆ. ಆದರೆ ಅದರಲ್ಲಿ ಶಿವಧರ್ಮವೂ ಶಿವಸ್ವರೂಪವೂ ಶಿವಭಕ್ತರ ಸದಾಚಾರವೂ ಎಲ್ಲಿಯೂ ವಿಚಾರಿಸಲ್ಪಟ್ಟಿಲ್ಲ. ಈ ಮುಖ್ಯ ವಿಷಯದಲ್ಲಿಯೇ ಅದಕ್ಕೆ ಅಭಿಮಾನವಿರುವುದಿಲ್ಲ. ಆ ವೇದಾಂತವು ಕರ್ಮಮಾರ್ಗವನ್ನೇ ನಾಶಮಾಡಲು ಹೊರಟಂತಿರುತ್ತದೆ. ಅಂದ ಮೇಲೆ ಅದಕ್ಕೆ ಈ ಶಿವಾರಾಧನೆಯ ವಿಚಾರವನ್ನು ಕಟ್ಟಿಕೊಂಡೇನು ? ಇದ್ದರೆ ಇರಲಿ, ಹೋದರೆ ಹೋಗಲಿ ಎನ್ನುತ್ತದೆ. ಅದಕ್ಕೆ ಅಭಿಮಾನವೇ ಇರುವುದಿಲ್ಲ. ||೧೩೧||

ಶಿವಾರಾಧನಂ ಚೇತ್ಕದಾಚಿತ್ಪ್ರಮಾದಾತ್
ವಿಹಾಯೈಕದಾಪಿ ಸ್ಥಿತೇ ಯಾತನಾಸ್ಯಾತ್ ।
ಮಹಾಪಾತಕಾನಾಂ ವಿನಾಶಂ ಕದಾಚಿತ್
ಶಿವಾರಾಧನೇನೇಹ ಸಂಭಾವಿತೋಽಪಿ ॥೧೩೨॥

ವರಂ ಮದ್ಯಪಾಚಾರಮಾರ್ಗಾಭಿಮಾನೋ
ವರಂ ಚಂಡಚಂಡಾಲಮಾರ್ಗಪ್ರವೇಶಃ ।
ವರಂ ನೇಶ್ವರಾರಾಧನತ್ಯಾಗಮಾರ್ಗೋ
ಸ ಮಾರ್ಗೋ ಮಹಾಯಾತನಾಮಾರ್ಗ ಏವ ॥೧೩೩॥

ನ ನೀರಂ ಹರಾನರ್ಪಿತಂ ಪಾನಯೋಗ್ಯಂ
ಸುರಾಕಲ್ಪಮಲ್ಪಂ ಹಿ ತನ್ಮೂತ್ರಕಲ್ಪಂ ।
ಪ್ರಮಾದೇನ ಪೀತ್ವಾಪಿ ತತ್ತಾವದಂತೇ
ಸದಾ ಯಾತನಾಂ ಪ್ರಾಪ್ನುವಂತ್ಯೇವ ವಿಪ್ರಾಃ ॥೧೩೪॥

---

ಎಲ್ಲಿಯಾದರೂ ಪ್ರಮಾದದಿಂದಲಾದರೂ ಶಿವಪೂಜೆಯನ್ನು ತ್ಯಾಗಮಾಡಿದರೂ, ಒಂದು ಸಲ ಮಾತ್ರ ಬಿಟ್ಟುಬಿಟ್ಟರೂ ಬಹಳ ಕಷ್ಟವು ಒದಗುವುದು. ಪರಮ ಯಾತನೆಯು ಸಂಭವಿಸುವುದು. ಒಂದು ವೇಳೆ ಮಹಾಪಾಪಗಳು ನಾಶವಾಗುವುವೆಂದರೆ ಆ ನಾಶವು ಶಿವಾರಾಧನೆ ಮಾತ್ರದಿಂದಲೇ ಸಂಭಾವಿತವು. ಅನ್ಯಥಾ ಆ ಪಾಪಗಳು ನಾಶವೇ ಆಗಲಾರವು. ||೧೩೨||

ಒಂದು ವೇಳೆ ಮದ್ಯಪಾಯಿಗಳ ಆಚಾರ ವ್ಯವಹಾರಮಾರ್ಗಗಳೇ ಉತ್ತಮವೆಂದು ಬೇಕಾದರೂ ಹೇಳಬಹುದು. ವಿಚಾರವಿಲ್ಲದೇ ಅತ್ಯಂತ ಕೋಪಿಷ್ಠನಾದ ಚಂಡಾಲನ ವ್ಯವಹಾರವನ್ನಾದರೂ ಕೈಗೊಳ್ಳಬಹುದು. ಆದರೆ ಶಿವಾರಾಧನೆಯನ್ನು ತ್ಯಾಗಮಾಡುವುದು ಎಂದೂ ಒಳ್ಳೆಯದಲ್ಲ. ಶಿವಾರಾಧನೆಯನ್ನು ತ್ಯಾಗಮಾಡುವುದೆಂದರೆ ಕ್ರೂರವಾದ ನರಕಯಾತನೆಯ ಮಾರ್ಗವನ್ನು ಆಶ್ರಯಿಸಿದಂತೆಯೇ ಸರಿ. ||೧೩೩||

ಪರಮೇಶ್ವರನಿಗೆ ಅರ್ಪಿತವಾಗದಿರುವ ನೀರು ಪಾನಮಾಡುವುದಕ್ಕೆ ಯೋಗ್ಯವೇ ಅಲ್ಲ. ಆ ನೀರು ಮದ್ಯಕ್ಕೆ ಸದೃಶವಾದದ್ದು. ತುಚ್ಛವಾದದ್ದು. ಮೂತ್ರ ಸಮಾನವಾದದ್ದು. ಅಂಥ ನೀರನ್ನು ಎಂದೂ ಕುಡಿಯಕೂಡದು. ಒಂದುವೇಳೆ ಎಲ್ಲಿ

ಶಿವಾರಾಧನೇ ನಾಸ್ತಿ ಯಸ್ಯಾಭಿಮಾನಃ
ಸ ಚಂಡಾಲ ಚಂಡಾಲ ಏವೇತಿ ಮನ್ಯೇ ।
ಶಿವಾರಾಧನೇ ಯಸ್ಯ ಭಕ್ತಿಃ ಪ್ರವೃದ್ಧಾ
ಸ ವೃದ್ಧಸ್ಸುರಾಣಾಮಪೀತಿ ಪ್ರಸಿದ್ಧಿಃ ॥೧೩೫॥

ಶಿವಾನರ್ಪಿತಾನ್ನಾನಿ ಭುಕ್ತ್ವಾಪಿ ಮೋಹಾತ್
ಮಲಾಶೀ ಭವತ್ಯೇವ ರಾಶಿಸ್ತ್ವಘಾನಾಂ ।
ಸ ಪಾಪಸ್ವರೂಪಃ ಸದಾ ಯಾತನಾಯಾಂ
ನಿಮಗ್ನೋಽತಿದುಃಖಾನಿ ಭುಂಕ್ತೇ ಸುರೋಽಪಿ ॥೧೩೬॥

ಕೃತಾನಂತಪಾಪೋ ವಿಹಾಯೇಶ್ವರಾರ್ಚಾ
ಶಿವಾನ್ನಾರ್ಚನಾಸಕ್ತಚಿತ್ತೋಽಪಿ ಮರ್ತ್ಯಃ ।

---

ಯಾದರೂ ಪ್ರಮಾದವಶಾತ್ ಕುಡಿದರೆ ಅದೇ ಮಹಾ ಯಾತನೆಗಳಿಗೆ ಕಾರಣವಾಗುವುದು. ಕಷ್ಟಗಳನ್ನು ಅನುಭವಿಸಬೇಕಾಗಿ ಬರುವುದು. ॥೧೩೪॥

ಯಾವಾತನಿಗೆ ಶಿವಾರಾಧನೆಯಲ್ಲಿ ಶ್ರದ್ಧಾಭಕ್ತಿಗಳಿರುವುದಿಲ್ಲವೋ ಆತನು ಪರಮ ಚಂಡಾಲರಿಗೂ ನೀಚನಾದ ಚಂಡಾಲನೇ ಸರಿ. ಯಾವಾತನಿಗೆ ಶಿವಾರಾಧನೆಯಲ್ಲಿ ಶ್ರದ್ಧಾಭಕ್ತಿಗಳು ಅಭಿವೃದ್ಧವಾಗಿರುತ್ತವೆಯೋ ಆತನೇ ದೇವತೆಗಳಿಗಿಂತಲೂ ಶ್ರೇಷ್ಠನೂ ವಿಜ್ಞನೂ ಆಗಿರುತ್ತಾನೆ. ಈ ಎರಡು ವಿಚಾರಗಳು ಹೀಗೆಯೇ ಪ್ರಪಂಚದಲ್ಲೆಲ್ಲಾ ಪ್ರಸಿದ್ಧವೇ ಆಗಿವೆ. ॥೧೩೫॥

ಶಿವನಿಗೆ ಅರ್ಪಿತವಾಗದೇ, ನೈವೇದ್ಯವಾಗದೇ ಇರುವ ಅನ್ನವನ್ನು ತಿನ್ನಲೇ ಕೂಡದು. ಒಂದು ವೇಳೆ ಮೋಹವಶಾತ್ ಶಿವನೈವೇದ್ಯವಲ್ಲದ ಅನ್ನವನ್ನು ತಿಂದರೆ, ಅಮೇಧ್ಯವನ್ನು ತಿಂದರೆ ಎಷ್ಟು ಪಾಪಗಳು ಸಂಭವಿಸುತ್ತವೆಯೋ ಅಷ್ಟು ಪಾಪಗಳು ಬರುತ್ತವೆ. ಅಂಥ ಅನ್ನವನ್ನು ತಿನ್ನುವವನು ಪಾಪಸ್ವರೂಪನೇ ಆಗುವನು. ಮತ್ತು ಸದಾ ನರಕಯಾತನೆಯನ್ನು ಪಡೆಯುತ್ತಾನೆ. ಅಂಥವನು ದೇವತೆಯಾಗಿದ್ದರೂ ಕ್ರೂರದುಃಖವನ್ನು ಹೊಂದುತ್ತಾನೆ. ॥೧೩೬॥

ಅಪರಿಮಿತ ಪಾಪಗಳನ್ನು ಮಾಡಿದವನು ಶಿವಾರಾಧನೆ ಮಾಡುವುದನ್ನು ಬಿಟ್ಟು ಮೋಹಕಲುಷಿತನಾಗಿ ಅನ್ಯರನ್ನು ಆರಾಧಿಸಿದರೂ ಆತನಿಗೆ ನರಕ

ಮೃತೇ ಯಾತನಾಂತೇ ಶುನೀಗರ್ಭವಾಸಂ
ಸಮಾಸಾದ್ಯ ತಸ್ಮಾನ್ನಿವೃತ್ತಿರ್ನ ನೂನಂ ॥೧೩೭॥

ವಧೂಭೋಗಕಾಲೇಽಪಿ ಯಃ ಕಾಲಕಾಲ-
ಸ್ವರೂಪಾನುಸಂಧಾನಹೀನಃ ಸ ಹೀನಃ ।
ಪ್ರತಪ್ತಾಯಸಾಕಾರನಾರೀಶರೀರಂ
ಸಮಾಲಿಂಗ್ಯ ದುಃಖಾನಿ ಭುಂಕ್ತೇ ಸದಾಪಿ ॥೧೩೮॥

ಯದೇವಾತಿರಮ್ಯಂ ಸ್ವಭೋಗೋಪಯುಕ್ತಂ
ತದೀಶಾಯ ಸರ್ವಂ ನಿವೇದ್ಯೇಶಶೇಷಃ ।
ಅಯಂ ಮಹ್ಯಮಿತ್ಯಾದರೇಣೋಪಭುಂಕ್ತೇ
ಮಹಾಪುಣ್ಯರಾಶಿಃ ಸ ಭುಂಕ್ತೇ ಸುಖಾನಿ ॥೧೩೯॥

---

ಯಾತನೆಯು ತಪ್ಪುವುದಿಲ್ಲ. ಬದುಕಿರುವವರೆಗೂ ದುಃಖವನ್ನು ಅನುಭವಿಸುವನು. ಮೃತನಾದವನ ಮೇಲೆ ನಾಯಿಯ ಗರ್ಭದಲ್ಲಿ ವಾಸಮಾಡಿ ನಾಯಿಜನ್ಮವನ್ನು ಪಡೆಯುವನು. ಮತ್ತು ಈ ಜನನಮರಣಯಾತನೆಯು ಎಂದೂ ಆತನಿಗೆ ತಪ್ಪುವುದೇ ಇಲ್ಲ. ॥೧೩೭॥

ತನ್ನ ಪತ್ನಿಯೊಡನೆ ಸಂಭೋಗಸುಖವನ್ನು ಅನುಭವಿಸುವ ಕಾಲದಲ್ಲಿಯೂ ಆ ಪರಮೇಶ್ವರನನ್ನೇ ಧ್ಯಾನಮಾಡುತ್ತಿರಬೇಕು. ಹಾಗೆ ಧ್ಯಾನಮಾಡದವನು ಹೀನನು. ಆತನು ನರಕದಲ್ಲಿ ಘೋರತರ ಯಾತನೆಯನ್ನು ಅನುಭವಿಸುತ್ತಾನೆ. ಸ್ತ್ರೀಯ ಆಕಾರದ ಕಬ್ಬಿಣದ ಮೂರ್ತಿಯನ್ನು ಕೆಂಪಾಗಿ ಕಾಯಿಸಿ ಅದರೊಡನೆ ಆತನನ್ನು ಅಪ್ಪಿಕೊಳ್ಳುವಂತೆ ಶಿಕ್ಷೆಮಾಡುತ್ತಾರೆ. ॥೧೩೮॥

ತನಗೆ ಅನುಭವಿಸುವುದಕ್ಕೆಂದೂ, ತನ್ನ ಸುಖಕ್ಕೆಂದೂ ಯಾವ ಸುಂದರ ಸುರಸವಾದ ಪದಾರ್ಥಗಳನ್ನು ಪಡೆದರೂ ಅವುಗಳನ್ನು ಮೊದಲು ಪರಮೇಶ್ವರನಿಗೆ ನಿವೇದಿಸಿ, ಉಳಿದ ಶೇಷವನ್ನು "ಶಿವಪ್ರಸಾದವಿದು ತನಗೆಂದು " ಆದರದಿಂದ ತಾನು ಅನುಭವಿಸಬೇಕು. ಹೀಗೆ ಶಿವನಿವೇದಿತವಾದದ್ದನ್ನೇ ಅನುಭವಿಸುವವನು ಪುಣ್ಯಾತ್ಮನಾಗುವನು. ಸುಖವನ್ನೂ ಪಡೆಯುವನು. ॥೧೩೯॥

ಸುತಂ ವಾ ಸಮಾಲಿಂಗ್ಯ ತಜ್ಜನ್ಯಸೌಖ್ಯಂ
ನಿವೇಷ್ಯಾಂಬಿಕಾವಲ್ಲಭಾಯಾದರೇಣ ।
ಅನಂತಂ ಸುಖಾಂಬೋಧಿಮಾಪ್ನೋತಿ ಸತ್ಯಂ
ಪ್ರವೃದ್ಧಾಪಿ ತತ್ಸಂತತಿಸ್ಸರ್ವದಾ ಸ್ಯಾತ್ ॥೧೪೦॥

ಶಿವಾರಾಧನಾಯಾಂ ಪ್ರವೃತ್ತಸ್ಯ ವಂಶೋ
ನ ನಶ್ಯತ್ಯವಶ್ಯಂ ಪ್ರಸಿದ್ಧಿಂ ಪ್ರಯಾತಿ ।
ಮಹಾನಂದಕಂದತ್ವಮಾಪ್ನೋತಿ ಸತ್ಯಂ
ಮುಕುಂದಾದಿವೃಂದಾರವೃಂದಾಭಿವಂದ್ಯಃ ॥೧೪೧॥

ವರಂ ವಂಧ್ಯಭಾವೋ ವರಂ ಗರ್ಭನಾಶೋ
ವರಂ ಜನ್ಮಕಾಲಪ್ರಣಾಶೋಽಪಿ ಸತ್ಯಂ ।
ವರಂ ನೈವ ಕಸ್ಯಾಪ್ಯಶೈವತ್ವಮೇತತ್
ಫಲಂ ಪಾಪರಾಶೇರಭಾಗ್ಯಾಂಬುರಾಶೇಃ ॥೧೪೨॥

---

ತನ್ನ ಪುತ್ರನನ್ನು ಪ್ರೇಮದಿಂದ ಅಪ್ಪಿಕೊಳ್ಳುವಾಗ ಯಾವ ಸೌಖ್ಯವು ಉಂಟಾಗುವುದೋ, ಆ ಸೌಖ್ಯವನ್ನೂ ಆ ಅಂಬಿಕಾಪತಿಗೇ ಆದರದಿಂದ ಅರ್ಪಿಸಬೇಕು. ಹೀಗೆ ಅನಾಸಕ್ತಿಯಿಂದ ಆರಾಧಿಸಿದರೆ ಅನಂತವಾದ ಸುಖಸಂಪತ್ತನ್ನೂ ಅವಿಚ್ಛಿನ್ನವಾದ ಸಂತಾನಸೌಖ್ಯವನ್ನೂ ಪಡೆಯುವನು. ಆತನ ಸಂತತಿಯು ಸದಾ ಅಭಿವೃದ್ಧಿಯನ್ನೇ ಹೊಂದುವುದು. ॥೧೪೦॥

ಶಿವನನ್ನು ಆರಾಧಿಸುವ ಶಿವಭಕ್ತನ ವಂಶವು ಎಂದೂ ಅವನತಿಯನ್ನೂ ನಾಶವನ್ನೂ ಹೊಂದುವುದಿಲ್ಲ. ಶಿವಭಕ್ತನ ವಂಶವು ಲೋಕದಲ್ಲೆಲ್ಲಾ ಪ್ರತಿಷ್ಠೆಯನ್ನು ಪಡೆಯುವುದು. ಆತನ ವಂಶವನ್ನು ಮುಕುಂದನೇ ಮೊದಲಾದ ದೇವತೆಗಳೂ ಸಹ ಶ್ಲಾಘಿಸುತ್ತಾರೆ. ಆತನ ವಂಶದಲ್ಲಿ ಸದಾ ಉತ್ತಮವಾದ ಆನಂದವೇ ಹರಡಿರುತ್ತದೆ. ॥೧೪೧॥

ಒಂದುವೇಳೆ ಮಕ್ಕಳೇ ಆಗದಿದ್ದರೂ ಬಾಧಕವಿಲ್ಲ. ಗರ್ಭನಾಶವಾದರೂ ಚಿಂತೆಇಲ್ಲ. ಅಥವಾ ಶಿಶುವು ಜನನವಾದ ಕೂಡಲೇ ಸತ್ತರೂ ವ್ಯಥೆಇರುವುದಿಲ್ಲ. ಆದರೆ ಪರಶಿವಭಕ್ತನಾಗದಿರುವ ಪುತ್ರನು ಎಂದೂ ಹುಟ್ಟುವುದು ಬೇಡ. ಶಿವಭಕ್ತ

ಅಶೈವತ್ವಮಾಪ್ನೋತ್ಯಭಾಗ್ಯೈರಭಂಗೈಃ
ವರಂ ಜಾರಜತ್ವಂ ವರಂ ಮದ್ಯಪತ್ವಂ ।
ವರಂ ಸರ್ವಪಾಪೌಘಸಂಜಾತಮೂರ್ತಿ
ಸ್ವರೂಪತ್ವಮಿತ್ಯೇವ ಮನ್ಯೇ ಮಹೇಶ ॥೧೪೩॥

ವರಂ ಪುಲ್ಕಸಸ್ಯಾಪಿ ಸಂಪ್ರಾಪ್ಯ ಜನ್ಮ
ಸ್ಥಿತಸ್ಯಾಪಿ ಗೋಮಾಂಸಮಾತ್ರಾಶನಸ್ಯ ।
ವರಂ ಬ್ರಹ್ಮಹತ್ಯಾಸಹಸ್ರಾದರಸಾ
ಪ್ಯಶೈವತ್ವಮತ್ಯಂತಮೇವಾಪಕೃಷ್ಟಂ ॥೧೪೪॥

ಅಶೈವತ್ವಮಾಸಾದ್ಯ ಕೃತ್ವಾ ಸ್ವನಿಂದಾಂ
ಜ್ವಲದ್ವಹ್ನಿಮಧ್ಯೇ ಪ್ರವಿಷ್ಟೋಽನುತಪ್ತಃ ।
ಮೃತ ಸ್ಸದ್ಗತಿಂ ಪ್ರಾಪ್ಯ ಶೈವತ್ವಮೇತ್ಯ
ಪ್ರಸಾದೇನ ಶಂಭೋಃ ಸ್ಸ ಮುಕ್ತಿಂ ಪ್ರಯಾತಿ ॥೧೪೫॥

---

ನಲ್ಲದ ಪುತ್ರನು ಮಹಾ ನಿಂದ್ಯನಾಗುತ್ತಾನೆ. ಪಾಪರಾಶಿಯು ದುರ್ಭಾಗ್ಯರಾಶಿಯು ಫಲವೇ ಅಶಿವಭಕ್ತನಾದ ಪುತ್ರನು. ||೧೪೨||

ಅಪರಿಹಾರ್ಯವಾದ ದೌರ್ಭಾಗ್ಯದ ಫಲವೇ ಅಶೈವತ್ವವು. ಶಿವಭಕ್ತನಲ್ಲದವನು ಪರಮ ದುರ್ಭಾಗ್ಯವಂತನೇ ಸರಿ. ಜಾರಜ ಮತ್ತು ಮದ್ಯಪಾಯಿಗಿಂತಲೂ ಅಶೈವನು ನಿಕೃಷ್ಟನು. ಅಶೈವತ್ವವು ಸಮಸ್ತ ಪಾಪರಾಶಿಗಳ ಮುದ್ದೆ ಎಂದೇ ಹೇಳಬೇಕು. ||೧೪೩||

ನನಗೆ ಒಂದುವೇಳೆ ಚಂಡಾಲಜನ್ಮವಾದರೂ ಬರಲಿ. ಗೋಮಾಂಸವನ್ನೇ ತಿನ್ನುವ ನಿಕೃಷ್ಟ ಜನ್ಮವಾದರೂ ಬರಲಿ. ಬ್ರಹ್ಮಹತ್ಯೆಯನ್ನು ಮಾಡುವ ದುರ್ಯೋಗವುಳ್ಳ ಹೀನಜನ್ಮವನ್ನಾದರೂ ಅನುಭವಿಸಬಲ್ಲೆನು. ಆದರೆ ಅಶೈವನೆಂದೂ ಆಗಲಾರೆನು. ಏಕೆಂದರೆ ಆ ಅಶೈವತ್ವವು ಸಮಸ್ತ ನಿಕೃಷ್ಟಜನ್ಮಗಳಿಗಿಂತಲೂ ಹೀನವೂ ತುಚ್ಛವೂ ಆಗಿರುತ್ತದೆ. ||೧೪೪||

ಶಿವಭಕ್ತನಾಗದೇ ಅಶೈವನಾಗಿದ್ದರೆ ಬಹಳ ದುಃಖವನ್ನು ಅನುಭವಿಸುವನು. ಸರ್ವದಾ ತನ್ನನ್ನು ನಿಂದಿಸಿಕೊಳ್ಳುವನು. ಝುಗ ಝುಗನೆ ಉರಿಯುತ್ತಿರುವ ಬೆಂಕಿಯ ಮಧ್ಯದಲ್ಲಿ ಬಿದ್ದಿರುವಂತೆ ಅತಿಶಯವಾಗಿ ಸಂತಾಪಪಡುವನು. ಇಷ್ಟು

ವರಂ ಶೈವದಾಸಾನುದಾಸಾನುದಾಸೀ
ಸುತತ್ವಂ ಯತ ಸ್ತಸ್ಯ ಶೈವಾನುಬಂಧಃ ।
ಸ ಶೈವಾನುಬಂಧೇನ ಸಂಸಾರಬಂಧಾ
ದ್ವಿಮುಕ್ತೋಽಪಿ ಮುಕ್ತೋ ಭವೇತ್ಪಾಪಸಂಘಾತ್ ॥೧೪೬॥

ವರಂ ಶೈವಗೇಹಾಂಗಣೇ ಕೀಟಭಾವಃ
ಕದಾಚಿದ್ಯತೋ ಭೂತಿಲೇಶಾನುಯೋಗಃ ।
ತದುಚ್ಛಿಷ್ಟಪಾತ್ರಾಭಿಘಾತೋಽಪ್ಯಘಾಗ್ನಿಃ
ಯತಸ್ತಸ್ಯ ಭಾಗ್ಯೇನ ಸಂಘಾತಿತಸ್ಸ್ಯಾತ್ ॥೧೪೭॥

ಮಹಾದೇವನೈವೇದ್ಯಶೇಷಾಶನಾನಾಂ
ಪವಿತ್ರಾಣಿ ಗಾತ್ರಾಣಿ ತದ್ಗಂಧವಾಹಾತ್ ।

---

ದುರವಸ್ಥೆಯಲ್ಲಿದ್ದರೂ ಒಂದುವೇಳೆ ಶಿವನನ್ನು ಭಜಿಸಿದರೆ, ಶಿವನ ಪ್ರಸನ್ನತೆಯನ್ನು ಸಂಪಾದಿಸಿದರೆ, ಮತ್ತೆ ಹುಟ್ಟುವಾಗ ಶೈವನಾಗಿ ಹುಟ್ಟುವನು. ಮತ್ತು ಅತಿಶಯವಾಗಿ ಶಿವನನ್ನು ಆರಾಧಿಸಿ ಕೊನೆಗೆ ಸದ್ಗತಿಯನ್ನೂ ಮುಕ್ತಿಯನ್ನೂ ಪಡೆಯುವನು. ||೧೪೫||

ಅಶೈವನಾಗಿರುವುದಕ್ಕಿಂತಲೂ ಶಿವಭಕ್ತದಾಸಾನುದಾಸನ ದಾಸಿಯ ಹೊಟ್ಟೆಯಲ್ಲಿ ಹುಟ್ಟಿದರೂ ಉತ್ತಮ. ಏಕೆಂದರೆ ದಾಸಿಯ ಪುತ್ರನಾಗಿದ್ದರೂ ಆತನಿಗೆ ಶೈವ ಸಂಬಂಧವು ಉಳಿದಿರುತ್ತದೆ. ಕಾಲಾನುಕಾಲದಲ್ಲಿ ಅದೇ ಶೈವಸಂಬಂಧದ ಮಹಿಮೆಯಿಂದ ಸಕಲ ಪಾಪಸಮೂಹವಿಮುಕ್ತನಾಗಿ ಈ ಸಂಸಾರಬಂಧನದಿಂದ ಮೋಕ್ಷವನ್ನೇ ಪಡೆಯುತ್ತಾನೆ. ||೧೪೬||

ಶಿವಭಕ್ತನ ಮನೆಯ ಅಂಗಳದಲ್ಲಿ ಕ್ರಿಮಿಕೀಟವಾಗಿ ಹುಟ್ಟಿದರೂ ತೊಂದರೆ ಇಲ್ಲ. ಏಕೆಂದರೆ ಆ ಶೈವನ ಸಹವಾಸದಿಂದ ಎಂದಾದರೊಂದು ದಿನ ಸೌಭಾಗ್ಯವು ಏರ್ಪಡುವುದು. ಆ ಶಿವಭಕ್ತನ ಎಂಜಲು ಪಾತ್ರೆಗಳ ಸಂಪರ್ಕವೂ ಕೂಡ ಪಾಪಾಗ್ನಿಗಳನ್ನು ನಾಶಮಾಡುತ್ತದೆ. ಆ ಶಿವಭಕ್ತನ ಉಚ್ಛಿಷ್ಟದಲ್ಲಿಯೂ ಕೂಡ ಇಷ್ಟು ಮಹಿಮೆ ಇರುತ್ತದೆ. ||೧೪೭||

ಪರಮೇಶ್ವರನಿಗೆ ನಿವೇದಿತವಾದ ಅನ್ನವನ್ನು ಭುಂಜಿಸುವವರ ಅಂಗಪ್ರತ್ಯಂಗಗಳೂ ಪರಮಪವಿತ್ರಗಳಾಗಿರುತ್ತವೆ. ಅಂಥ ಪವಿತ್ರವಾದ ಶರೀರಗಳೊಡನೆ

ಸುರಾಸ್ತಾವದಿಚ್ಛಂತಿ ಪಾಪಾಪನುತ್ಯೈ
ಸದಾ ಗಂಧವಾಹಪ್ರವೇಶಪ್ರವೃದ್ಧಾನ್ ॥೧೪೮॥

ಯದಾ ಯತ್ರ ಶೈವಃ ಪ್ರಚಾರಂ ಕರೋತಿ
ಪ್ರಭೂತೈರಗಣ್ಯೈಃ ಸ್ವಪುಣ್ಯಾಬ್ಧಿಸಂಘೈಃ ।
ತದಾ ತತ್ರ ನೃತ್ಯಂತಿ ಯುತ್ತತ್ಪಿತೄಣಾಂ
ಸಮೂಹಃ ಸ್ವತಃ ಸ್ವರ್ಗಭೋಗಂ ವಿಹಾಯ ॥೧೪೯॥

ನ ಚ ಸ್ವರ್ಗಮಾತ್ರೇ ತದಾನಂದಯೋಗಃ
ತತಸ್ತದ್ವಿಹಾಯಾಮರೈ ಸ್ಸಾಕಮೇತೇ ।
ಪ್ರನೃತ್ಯಂತಿ ಶೈವಂ ಚರಂತಂ ವಸಂತಂ
ಹಸಂತೋ ನಮಂತೋ ಮುದಾ ಪೂಜಯಂತಃ ॥೧೫೦॥

---

ಸಂಸರ್ಗವನ್ನು ಪಡೆಯಬೇಕೆಂದು ದೇವತೆಗಳೂ ಸಹ ಅಪೇಕ್ಷಿಸುತ್ತಾರೆ. ಏಕೆಂದರೆ ಅವರ ಶರೀರ ಸಂಸ್ಪರ್ಶವೂ ಸಕಲ ಪಾಪಗಳನ್ನೂ ನಾಶವಾಡುತ್ತದೆ. ಅವರ ಅಂಗಗಳ ಮೇಲೆ ಬೀಸಿಕೊಂಡು ಬರುವ ಗಾಳಿಯೂ ಸಹ ಪೂತವಾಗಿರುತ್ತದೆ. ||೧೪೮||

ಯಾವಾಗಲಾದರೊಂದು ಸಲ ಎಲ್ಲಿಯಾದರೂ ಒಂದು ಪ್ರದೇಶದಲ್ಲಿ ಶಿವಭಕ್ತನು ಸಂಚರಿಸಿದ್ದರೆ, ಅಂಥ ಪ್ರದೇಶವನ್ನು ಪಿತೃದೇವತೆಗಳ ಸಮೂಹವು ತಮ್ಮ ಪುಣ್ಯಸಾಗರವೆಂದು ಅಭಿನಂದಿಸಿಕೊಳ್ಳುತ್ತಾ, ಸಕಲ ಸ್ವರ್ಗಸುಖಗಳನ್ನೂ ಬಿಟ್ಟು ಅಲ್ಲಿ ಆನಂದದಿಂದ ನರ್ತನವಾಡುತ್ತಾರೆ. ||೧೪೯||

ಶೈವನು ಸಂಚರಿಸಿದ ಮಾರ್ಗದಲ್ಲಿ ಯಾವ ಆನಂದವು ಲಭಿಸುವುದೋ ಆ ಆನಂದವು ಕೇವಲ ಸ್ವರ್ಗದಲ್ಲಿಯೂ ದೊರೆಯಲಾರದು. ಈ ಆನಂದವೇ ಪ್ರತ್ಯೇಕವಾದುದು, ಮಹತ್ತರವಾದುದು. ಆದುದರಿಂದ ಪಿತೃದೇವತೆಗಳು ಇತರ ದೇವತೆಗಳೊಡನೆ ಶೈವನು ಸಂಚರಿಸಿದ ಪ್ರದೇಶದಲ್ಲಿ ಬಂದು ಆನಂದದಿಂದ ನಾಟ್ಯವಾಡುತ್ತಾರೆ. ಶೈವನನ್ನು ನಮಸ್ಕರಿಸುತ್ತಾರೆ. ಅತ್ಯಾದರದಿಂದ ಪೂಜಿಸುತ್ತಾರೆ. ಪರಮಾನಂದವನ್ನು ಪಡೆಯುತ್ತಾರೆ. ||೧೫೦||

ಶಿವಶ್ಶೈವಮಾಲೋಕ್ಯ ತತ್ರಾತಿಹೃಷ್ಟೋ
ನಿವಾಸಂ ಕರೋತ್ಯಂಬಿಕಾಲೋಲದೃಷ್ಟಿಃ ।
ಇತಃ ಕಿಂ ಮಮಾತಿಪ್ರಕೃಷ್ಟಪ್ರಕೃಷ್ಟಂ
ನಿವಾಸಸ್ಥಲಂ ಮದ್ವಿಲಾಸಾನುಕೂಲಂ ॥೦೫೧॥

ಸ ಶೈವಪ್ರಭಾವಂ ಪ್ರಭುಶ್ಶಂಭುರೇಕಃ
ಪ್ರಜಾನಾತಿ ಜಾನಾತಿ ಗೌರೀ ಗಣೇಶಃ ।
ಕುಮಾರೋಽಪಿ ಜಾನಾತಿ ವೇದೋ ನ ಜಾನಾ
ತ್ಯತಸ್ತಂ ವಿಧಿರ್ವಾ ಹರಿರ್ವಾ ತದನ್ಯಃ ॥೧೫೨॥

ಸತೀ ಶೈವಮಾತಾ ತ್ವಶೈವಸ್ಯ ಮಾತಾ
ಪರಂ ಜಾರಿಣೀ ಗಾರ್ದಭೀ ವಾ ಶುನೀ ವಾ ।
ವರಂ ಸೂಕರೀ ವಾ ವರಂ ಕರ್ಕಟೀ ವಾ
ವರಂ ಕರ್ಕಶಾ ವಾ ಪರಂ ರಾಕ್ಷಸೀ ವಾ ॥೧೫೩॥

---

ಈರೀತಿ ಪಿತೃದೇವತೆಗಳಿಂದಲೂ ಸೇವಿತನಾಗಿರುವ ಶೈವನನ್ನು ನೋಡಿ ಪರಮೇಶ್ವರನು ಅತ್ಯಂತ ಹೃಷ್ಟನಾಗುವನು. ಮತ್ತು ಹೀಗೆ ಯೋಚಿಸುವನು. "ಇಂಥ ಮಹತ್ತಮವಾದ ಪ್ರದೇಶಕ್ಕಿಂತಲೂ ಶ್ರೇಷ್ಠವಾದ ನಾನು ವಾಸಮಾಡಬೇಕಾದ ಸ್ಥಲವು ಮತ್ತೆ ಬೇರೆ ಎಲ್ಲಿದೆ? ಇದೇ ಪರಮ ಪವಿತ್ರವಾದುದು. ಇಲ್ಲಿಯೇ ಪಾರ್ವತೀಸಮೇತನಾಗಿ ವಾಸಮಾಡುತ್ತೇನೆ" ಎಂದು ಯೋಚಿಸಿ ತಾನೂ ಬಂದು ವಾಸಮಾಡುವನು. ॥೧೫೧॥

ಹೀಗೆ ಆ ಶೈವನ ಮಹಿಮೆಯು ಎಷ್ಟರಮಟ್ಟಿನದೆಂದು ಸಂಪೂರ್ಣವಾಗಿ ತಿಳಿದಿರುವವನು ಆ ಪರಮೇಶ್ವರನೊಬ್ಬನೇ ಸರಿ. ಹಾಗೆಯೇ ಗೌರಿಯೂ ಗಣೇಶನೂ ಷಣ್ಮುಖನೂ ತಿಳಿದಿರುವರು. ಅವರನ್ನು ಬಿಟ್ಟು ಆವರ ಮಹಿಮೆಯು ವೇದಕ್ಕೇ ತಿಳಿದಿರುವುದಿಲ್ಲ. ಬ್ರಹ್ಮನಿಗೂ ಹರಿಗೂ ಇವರ ಮಹತ್ವವು ಗೋಚರವಾಗಿಲ್ಲ. ಇತರರಿಗಂತೂ ಈ ವಿಚಾರವೇ ಗೊತ್ತಿರುವುದಿಲ್ಲ. ॥೧೫೨॥

ಶಿವಭಕ್ತನಾದ ಶೈವನ ಮಾತೆಯೇ ನಿಜವಾದ ಸಾಧ್ವಿಯು, ಪತಿವ್ರತೆಯು. ಶಿವಭಕ್ತನನ್ನು ಹಡೆಯದ ಅಶೈವನ ತಾಯಿಯು ಕುಲಟೆಯು ಅಥವಾ ಕತ್ತೆಯು ಅಥವಾ ನಾಯಿಯು. ಶಿವಭಕ್ತ ಸಂಬಂಧವುಳ್ಳ ಹಂದಿಯಾದರೂ ಏಡಿಯಾದರೂ

ಪಿತುಶ್ಶೈವಪುತ್ರಸ್ಯ ತಸ್ಯೈವ ಭಾಗ್ಯಂ
ಸ ಭಾಗ್ಯಸ್ತದನ್ಯೋ ನ ಲೋಕೇಷು ದೃಷ್ಟಃ ।
ಅಶೈವಸ್ಯ ಲೋಕೇ ಪಿತಾ ದುರ್ಭಗಾಣಾಂ
ವರಿಷ್ಠಃ ಸವಿಷ್ಠಾಸು ಜಾತಃ ಕ್ರಿಮಿಸ್ಸ್ಯಾತ್ ॥೧೫೪॥

ಶುಭ ಶ್ಯಾಂಭವಾನಾಂ ಪ್ರಭಾವ ಸ್ವಭಾವಃ
ಕಥಂ ಮಾದೃಶೈ ರ್ವರ್ಣನೀಯೋಽಪಿ ಮೂಢೈಃ ।
ಕಥಂ ಭಾವಭಾವಪ್ರಭಾವಪ್ರಭಾವಃ
ಶ್ರುತೀನಾಮಗಮ್ಯೋ ಮಯಾ ವರ್ಣನೀಯಃ ॥೧೫೫॥

ಯಯಾ ಜಿಹ್ವಯಾ ಶಾಂಭವಾನಾಂ ಪ್ರಭಾವಃ
ಪ್ರಭೂತೋ ಮಹಾಪುಣ್ಯಸಂಯುಕ್ತಜಾಯಂ ।
ಮಯಾ ವರ್ಣನೀಯೋಽಪಿ ವಾಣೀ ವಿಚಿತ್ರಾ
ಪವಿತ್ರಾ ಭವತ್ಯಿತ್ಯವಶ್ಯಂ ನ ಚಿತ್ರಂ ॥೧೫೬॥

---

ಶ್ರೇಷ್ಠವೇ ಸರಿ. ಹಾಗೆಯೇ ಶೈವಸಂಬಂಧವುಳ್ಳ ಕರ್ಕಶಿಯೂ ಅಥವಾ ರಾಕ್ಷಸಿಯೂ ಕೂಡ ಉತ್ತಮಳೇ. ॥೧೫೩॥

ಶಿವಭಕ್ತನಾದ ಪುತ್ರನನ್ನು ಪಡೆದುಕೊಂಡ ತಂದೆಯ ಭಾಗ್ಯವೇ ನಿಜವಾದ ಭಾಗ್ಯವು. ಆತನಂಥ ಭಾಗ್ಯಶಾಲಿಯು ಪ್ರಪಂಚದಲ್ಲಿಯೇ ಇರುವುದಿಲ್ಲ. ಯಾವ ತಂದೆಯು ಶೈವಪುತ್ರನನ್ನು ಪಡೆದಿಲ್ಲವೋ ಅಥವಾ ಯಾವಾತನ ಪುತ್ರನು ಶೈವನಲ್ಲವೋ ಅಂಥ ತಂದೆಯು ಹೀನನು ದುರ್ಭಗನು. ಆತನ ಜನ್ಮವು ಅಮೇಧ್ಯದಲ್ಲಿ ಹುಟ್ಟಿದ ಕ್ರಿಮಿಗಳಿಗೆ ಸದೃಶವಾದದ್ದು. ॥೧೫೪॥

ಶಿವಭಕ್ತರ ಸ್ವಭಾವವೂ ಮಹಿಮೆಯೂ ಅತ್ಯಂತ ಕಲ್ಯಾಣಪೂರ್ಣವೇ ಆಗಿರುತ್ತದೆ. ಅದರ ವಿವರವನ್ನು ಮೂಢನಾದ ನಾನು ಹೇಗೆ ವರ್ಣನೆಮಾಡಲಿ! ಆ ಶಿವಭಕ್ತರ ಮಹಿಮಾತಿಶಯದ ಕಥೆಯು ವೇದಗಳಿಗೂ ಗೋಚರವಾಗಿರುವುದಿಲ್ಲ. ನಾನಂತೂ ಮೂಢನೇ ಆಗಿದ್ದೇನೆ; ಅಂದಮೇಲೆ ಅವರ ಮಹಿಮೆಯನ್ನು ವರ್ಣನೆ ಮಾಡುವ ಕೆಲಸವು ನನ್ನಿಂದ ಆಗತಕ್ಕುದಲ್ಲ. ॥೧೫೫॥

ನನ್ನ ಜಿಹ್ವೆಯು ಶೈವರ ಮಹಿಮೆಯನ್ನು ವರ್ಣನೆಮಾಡುವುದೆಂದರೆ ಮಹಾಪುಣ್ಯಶಾಲಿ ಎಂದು ಹೇಳಲೇಬಹುದು. ಅವರ ಮಹಿಮೆ ಅಪಾರವಾದುದು.

ಕೃಪಾ ಶಂಕರಸ್ಯಾಪಿ ಮಯ್ಯಪ್ಯಪಾರಾ
ಯತೋ ಹಾರಚರ್ಯಾವಿಚಾರಃ ಪ್ರವೃತ್ತಃ ।
ಅಹಂ ತಾವದಪ್ಯಸ್ಮಿ ಧನ್ಯೋ ಮದನ್ಯೋ
ನ ಭಾವಪ್ರಭಾವಃ ಸ್ತವೇಷು ಪ್ರವೃತ್ತಃ ॥೧೫೭॥

ಅಹಂ ಧನ್ಯ ಏವಾಸ್ಮಿ ಮಾತಾಪಿ ಧನ್ಯಾ
ಪಿತಾ ಮೇ ಸಖಾ ಬಂಧುವರ್ಗೋಽಪಿ ಧನ್ಯಃ ।
ಯತೋ ಭಾವಮಾರ್ಗಪ್ರಭಾವಾನುರಕ್ತೋ
ವಿರಕ್ತೋಽಪಿ ಸಂಸಾರವಾರ್ತಾಸು ಶಂಭೋ ॥೧೫೮॥

ಅಶೈವಾನುಕೂಲಂ ಮನೋ ಮಾಸ್ತು ಮಾಸ್ತು
ಪ್ರಮಾದೇನ ವಾ ಸ್ವಪ್ನಕಾಲೇಽಪಿ ಮಾಸ್ತು ।
ಅಯಂ ತಾವದೇಕೋ ವರಃ ಪ್ರಾರ್ಥನೀಯೋ
ಮಮೇಶಾನ ಸರ್ವಾತ್ಮನಾಮುಂ ಪ್ರಯಚ್ಛ ॥೧೫೯॥

---

ಆದರಿಂದ ನನ್ನ ವಾಣಿಯು ವಿಚಿತ್ರವೂ ಆಗುವುದು. ಹಾಗೆಯೇ ಪವಿತ್ರವೂ ಆಗುವುದೆಂಬುದರಲ್ಲಿ ಸಂಶಯವಿಲ್ಲ ಆಶ್ಚರ್ಯವೂ ಇಲ್ಲ. ॥೧೫೬॥

ಆ ಪರಮೇಶ್ವರನ ಅಪಾರವಾದ ಕೃಪೆಯು ನನ್ನ ಮೇಲೆ ಇರುತ್ತದೆಂಬುದಕ್ಕೆ ಇದೇ ನಿದರ್ಶನ. ಇದೋ, ಇಲ್ಲಿ ಶಿವಭಕ್ತರ ಮಹಿಮಾವಿಚಾರವೇ ಪ್ರಸ್ತುತವಾಗಿರುತ್ತದೆ. ಅದರಿಂದ ನಾನೇ ಧನ್ಯನು. ನನ್ನಷ್ಟು ಧನ್ಯರು ಯಾರೂ ಇರುವುದಿಲ್ಲ. ಏತಕ್ಕೆಂದರೆ ನಾನು ಶಿವಭಕ್ತರ ಮಹಿಮೆಯನ್ನು ಸ್ತೋತ್ರರೂಪವಾಗಿ ವರ್ಣನೆ ಮಾಡಲು ಪ್ರವೃತ್ತನಾಗಿದ್ದೇನೆ. ॥೧೫೭॥

ನಾನು ಶೈವನಾದ್ದರಿಂದ ಹೇಗೂ ಧನ್ಯನೇ ಆಗಿದ್ದೇನಷ್ಟೆ. ಹಾಗೆಯೇ ನನ್ನ ತಾಯಿಯೂ ತಂದೆಯೂ ಮಿತ್ರರೂ ಬಾಂಧವರೂ ಸಹ ಧನ್ಯರಾಗಿದ್ದಾರೆ. ಏತಕ್ಕೆಂದರೆ ಸಂಸಾರದ ಜಂಜಾಟದಿಂದ ನಾನು ವಿರಕ್ತನಾಗಿರುವೆನಲ್ಲದೇ ಶಿವಭಕ್ತರ ಮಹಿಮೆಯಲ್ಲಿ ಅನುರಕ್ತನೇ ಆಗಿರುವೆನು. ॥೧೫೮॥

ಅಶೈವರಿಗೆ ಸಹಜವಾಗಿರುವ ಮನಸ್ಸಿನಂತೆ ನನ್ನ ಮನಸ್ಸು ಎಂದೂ ಶೂನ್ಯವಾಗಿರುವುದು ಬೇಡ. ಪ್ರಮಾದದಿಂದಲೋ ಅಥವಾ ಸ್ವಪ್ನಕಾಲದಲ್ಲಿಯೋ ಯಾವಾಗಲೂ ಸಹ ಶಿವಭಕ್ತಿಯು ನನ್ನ ಮನಸ್ಸಿನಿಂದ ದೂರವಾಗುವುದು ಬೇಡ.

ಇಯಂ ತಾವದಿಚ್ಛಾ ಕಥಂಚಿತ್ ಪ್ರಜಾತಾ
ಶಿವಾನುಗ್ರಹೇಣೈವ ಮೇ ಪಾಲನೀಯಾ ।
ಯಥಾ ಪ್ರವೃದ್ಧಾ ಪ್ರಜಾತಾ ತಥಾ ಮೇ
ಪ್ರಸೀದ ಪ್ರಸೀದ ಪ್ರಭೋ ಚಂದ್ರಮೌಳೇ ॥೧೬೦॥

ಅಶೈವೈಸ್ಸಹೈತಸ್ಯ ವಾಸಃ ಕದಾಚಿತ್
ಯದಿ ಸ್ಯಾತ್ತದಾ ತಸ್ಯ ವಿಘ್ನೋಽಸ್ತು ಶೀಘ್ರಂ ।
ನ ತನ್ಮಿತ್ರಮಿತ್ರೈರ್ನ ತನ್ಮಿತ್ರಮಿತ್ರೈಃ
ಮಹೇಶಾನ ಸಲ್ಲಾಪವಾರ್ತಾಽಪಿ ಮಾಸ್ತು ॥೧೬೧॥

ಯಥಾ ಚಂಡಚಂಡಾಲಗೇಹಾಧಿವಾಸಃ
ತಥಾ ಸ್ಯಾದಶೈವೈಸ್ಸದೈಕತ್ರವಾಸಃ ।
ಅತಸ್ತತ್ಸಹಾವಾಸವಿಘ್ನೋದಯಃ ಸ್ಯಾತ್
ದಯಾ ಚೇದುಮಾಕಾಂತ ತೇ ಮಯ್ಯವಶ್ಯಂ ॥೧೬೨॥

---

ಓ ಈಶಾನ, ಇದೇ ಒಂದು ಸರ್ವಸ್ವವಾದ ವರವನ್ನು ನಾನು ಬೇಡುತ್ತೇನೆ. ಅದನ್ನೇ ನನಗೆ ಕೊಡು. ॥೧೫೯॥

ನನ್ನ ಮನಸ್ಸಿನಲ್ಲಿ ಯಾವುದೋ ಪುಣ್ಯವಶದಿಂದ ಶಿವಧರ್ಮಪರಾಯಣವಾಗಿರುವ ಇಚ್ಛೆಯು ಹುಟ್ಟಿರುತ್ತದೆ. ಇದನ್ನು ಶಿವಾನುಗ್ರಹದಿಂದಲೇ ಪಾಲಿಸಿಕೊಂಡಿರಲು ಸಾಧ್ಯ. ಇದು ಹುಟ್ಟಿರುವುದೂ ಶಿವಾನುಗ್ರಹದಿಂದಲೇ. ಓ ಚಂದ್ರಶೇಖರನೇ ಪ್ರಸನ್ನನಾಗು. ಈ ಇಚ್ಛೆಯನ್ನು ಇನ್ನೂ ಅಭಿವೃದ್ಧಿಪಡಿಸು. ॥೧೬೦॥

ಈ ನನ್ನ ಮನಸ್ಸಿಗೆ ಎಲ್ಲಿಯಾದರೂ ಅಶೈವರೊಡನೆ ಸಹವಾಸದ ಸಂದರ್ಭವು ಒದಗಿಬಿಟ್ಟರೆ ಅಕಸ್ಮಾತ್ ಈ ನನ್ನ ಸಂಕಲ್ಪಗಳಿಗೆ ವಿಘ್ನವು ಬಂದುಬಿಟ್ಟೀತು. ಆದುದರಿಂದ ಅಂಥ ದುಷ್ಟವಾದ ಅವಕಾಶವನ್ನೇ ನನಗೆ ಒದಗಿಸಬೇಡ. ಅಶೈವರೊಡನೆಯೂ ಅಶೈವರ ಮಿತ್ರರೊಡನೆಯೂ ನನಗೆ ಸಂಭಾಷಣೆ ಮಾಡುವ ಸಂದರ್ಭವೇ ಬರುವುದುಬೇಡ. ನಾನು ಏಕಾಂತವಾಗಿ ಶೈವನಾಗಿಯೇ ಇರುವಂತೆ ಅನುಗ್ರಹಿಸು. ॥೧೬೧॥

ಪರಮ ಕೋಪಿಷ್ಠನಾದ ಚಂಡಾಲನ ಸಂಗಡ ವಾಸಮಾಡುವುದು ಎಷ್ಟು ಜುಗುಪ್ಸಾಸ್ಪದವೂ ದುಃಖದಾಯಕವೂ ಆಗಿರುವುದೋ, ಹಾಗೆಯೇ ಅಶೈವನ

ಯದಿ ಸ್ಯಾದಶೈವಾನುರಕ್ತಂ ಮನೋ ಮೇ
ತದಾ ಸ್ಯುಃ ಕೃತಾಂತಸ್ಯ ದೂತಾಃ ಪ್ರಮತ್ತಾಃ ।
ಪ್ರವೃತ್ತಾಃ ಪ್ರನೃತ್ತಂ ಪ್ರಕುರ್ವಂತ ಏವ
ಪ್ರಬಧ್ವಾ ಪ್ರಣೇಯೋ ಮಯಾಯಂ ಮಯೇತಿ ॥೧೬೩॥

ಅಶೈವೈಸ್ಸಹೈತಸ್ಯ ಶೈವಸ್ಯ ವಾಸೋ
ಮಹಾಪತ್ಸು ಮೋಹಪ್ರವೇಶೋಽಪಿ ಮಾಸ್ತು ।
ಸ ಯಸ್ಮಾದಗಾಧವ್ಯಥಾಹೇತುಭೂತೋ
ನ ಚಾಪತ್ಸಮೂಹಸ್ತಥಾ ದುಃಖಹೇತುಃ ॥೧೬೪॥

ಅಹಂ ಚೇದಪಾತ್ರಂ ಶಿವಾನುಗ್ರಹಸ್ಯ
ತ್ರಿಣೇತ್ರಾಶು ಮೃತ್ಯುಂ ಪರಂ ಪ್ರೇರಯಸ್ವ ।

---

ಸಹವಾಸವೂ ಹೀನವಾಗಿರುತ್ತದೆ. ಆದುದರಿಂದ ಓ ಪಾರ್ವತೀರಮಣ, ನನ್ನಲ್ಲಿ ನಿನಗೆ ದಯೆಯುಂಟಾಗಿದ್ದರೆ ಅಂಥ ಅಶೈವರ ಸಹವಾಸವೂ ಅಂಥ ವಿಘ್ನಗಳೂ ನನಗೆ ಸರ್ವಥಾ ಬಾರದಿರಲಿ. ಇದೇ ನನ್ನ ಪ್ರಾರ್ಥನೆ. ॥೧೬೨॥

ನನ್ನ ಮನಸ್ಸು ವಿಸ್ಮೃತಿಯಿಂದಲಾದರೂ ಆಕಸ್ಮಾತ್ ಅಶೈವರೊಡನೆ ಸ್ನೇಹಮಾಡಿದರೆ ಆ ಕೂಡಲೇ ಯಮದೂತರು ಉಬ್ಬಿಹೋಗುವರು. ನನ್ನ ಮೇಲೆ ಕೆಂಪು ಕೆಂಪು ಕಣ್ಣುಬಿಡುವರು. ಪರಿಹಾಸಮಾಡಿ ಉಗ್ರತಾಂಡವವಾಡುವರು. ನಾನು ತಾನು ಎಂದು ಯಮನ ಹತ್ತಿರ ಕಟ್ಟಿ ಸೆಳೆದುಕೊಂಡು ಹೋಗಬೇಕೆಂದು ಹಾತೊರೆಯುವರು. ॥೧೬೩॥

ಶೈವನಿಗೆ ಅಶೈವರ ಸಹವಾಸವು ಎಂದೂ ಆಗುವುದು ಬೇಡ. ಅಶೈವರೊಡನೆ ವಾಸಮಾಡಬೇಕಾಗಿ ಬರುವ ಆ ಆಪತ್ತುಗಳೂ ಬರುವುದು ಬೇಡ. ಏತಕ್ಕೆಂದರೆ ಶೈವನಿಗೆ ಅಶೈವರೊಡನೆ ವಾಸಮಾಡುವುದೆಂದರೆ ಮಹಾವ್ಯಥಾಕಾರಿಯಾದುದು. ಅದರಷ್ಟು ವ್ಯಥಾಕಾರಿಯಾದುದು ಶೈವನಿಗೆ ಬೇರೊಂದಿಲ್ಲ. ಅದೇ ಆಪತ್ತು.॥೧೬೪॥

ತ್ರಿನಯನನೇ, ನಾನು ಇಷ್ಟು ಬೇಡಿಕೊಂಡರೂ ನಿನ್ನ ಅನುಗ್ರಹಕ್ಕೆ ಯೋಗ್ಯನಾಗಿಲ್ಲದಿದ್ದರೆ ನನ್ನ ಮೇಲೆ ಜಾಗ್ರತೆ ಮೃತ್ಯುವನ್ನೇ ಪ್ರೇರಿಸು. ಮರಣವನ್ನಾದರೂ ಹೊಂದುವೆನು. ಆದರೆ ಅಶೈವರ ಸಂಗವನ್ನೂ ಸಹವಾಸವನ್ನೂ ನನಗೆ ಉಂಟು

ನ ಚಾತ್ಮೈವಸಂಗಾಯ ಮಾಂ ಪ್ರೇರಯಸ್ವ
ಪ್ರಸಾದೋಽಯಮೇವೇಶ ತೇ ಮಹ್ಯಮದ್ಯ ॥೧೬೫॥

ಅಸಂಧ್ಯಾದಿಕರ್ಮಾನುರಾಗಾನುರಾಗೋ
ಯಥಾ ಶಂಕರಾರಾಧನೇ ಸಾಧನೇ ಮೇ ।
ಅಸಾಧ್ಯೇ ಶಿವಾನುಗ್ರಹೇ ಸಂಗ್ರಹೇ ವಾ
ಸಮಗ್ರಸ್ಯ ಪುಣ್ಯಾಂಬುರಾಶೇರ್ಮಹೇಶ ॥೧೬೬॥

ನ ನಿತ್ಯೇನ ನೈಮಿತ್ತಿಕೇನಾಪಿ ಕೇನಾ
ಪ್ಯಪೂರ್ವಾ ಕ್ರಿಯಾ ಹೇತುಭೂತೇನ ಮುಕ್ತಿಃ ।
ಯತಶ್ಶಂಕರಾನುಗ್ರಹೇಣೈವ ಮುಕ್ತಿಃ
ಸ ತಾವಚ್ಛಿವಾರಾಧನೇನೈವ ಲಭ್ಯಃ ॥೧೬೭॥

ಜಡಾಃ ಕೇವಲಂ ಕರ್ಮಣಾ ಮುಕ್ತಿಮೇಕೇ
ವದಂತಃ ಶ್ರುತಾಪಾರವೇದಾಂತಮಾರ್ಗಾಃ ।

---

ಮಾಡಬೇಡ. ಇಷ್ಟೇ ನನ್ನ ವಿನಯದ ಕೋರಿಕೆ. ಇಷ್ಟು ಅನುಗ್ರಹ ಮಾಡಿದರೆ ಅದೇ ನನಗೆ ಈಗ ಮಹಾಪ್ರಸಾದವಾಗುವುದು. ॥೧೬೫॥

ನನಗೆ ಶಂಕರಾರಾಧನೆಯಲ್ಲಿಯೂ ಶಿವಧರ್ಮಸಾಧನೆಯಲ್ಲಿಯೂ ಎಷ್ಟು ಆಸಕ್ತಿ ಅನುರಾಗವಿದೆಯೋ ಅಷ್ಟು ಆಸಕ್ತಿಯು ಸಂಧ್ಯಾವಂದನೆಯೇ ಮೊದಲಾದ ಕರ್ಮಗಳಲ್ಲಿರುವುದಿಲ್ಲ. ಏತಕ್ಕೆಂದರೆ ಆ ಶಿವಾನುಗ್ರಹವು ಸಮಗ್ರ ಪುಣ್ಯರಾಶಿಯಿಂದಲೇ ದೊರೆಯುವುದು. ಅದನ್ನು ಸಂಗ್ರಹಿಸುವುದು ಅಸಾಧ್ಯವಾಗಿದ್ದರೂ ಅತ್ಯಂತ ಪ್ರಾರ್ಥನೀಯವಾಗಿರುವುದು. ॥೧೬೬॥

ಪುಣ್ಯ ಮತ್ತು ಫಲ ಇವುಗಳಿಗೆ ಕಾರಣವಾದ ನಿತ್ಯಕರ್ಮಗಳಿಂದಲೂ ನೈಮಿತ್ತಿಕ ಕರ್ಮಗಳಿಂದಲೂ ಈ ಸಂಸಾರದಿಂದ ಮೋಕ್ಷವು ಲಭಿಸಲಾರದು. ಆ ಮುಕ್ತಿಯು ಶಂಕರನ ಅನುಗ್ರಹಮಾತ್ರದಿಂದಲೇ ದೊರೆಯುವುದು. ಆ ಮೋಕ್ಷಕ್ಕೆ ಕಾರಣವಾದ ಶಿವಾನುಗ್ರಹವು ಆ ಶಿವನ ಆರಾಧನೆಯಿಂದ ಮಾತ್ರವೇ ಲಭಿಸುವುದು. ॥೧೬೭॥

ಅನೇಕ ವೇದವೇದಾಂತಗಳನ್ನು ಅಭ್ಯಾಸಮಾಡಿ ಪರಿಶೀಲಿಸಿದ್ದರೂ ಕೆಲವು ಜನರು ಕರ್ಮದಿಂದಲೇ ಮೋಕ್ಷ ದೊರೆಯುವುದೆಂದು ಹೇಳುವರು. ಆದರೆ ಅವರು

ನ ತೈರಸ್ಮದೀಯಾನಿ ಶಾಸ್ತ್ರಾಣಿ ತಾವತ್
ಶ್ರುತಾನೀತಿ ಮನ್ಯೇ ಬಹೂನಿ ಪ್ರಮತ್ತೈಃ ॥೧೬೮॥

ಕಿಮೇತಾದೃಶಂ ಕರ್ಮ ಮೋಕ್ಷೋಪಯುಕ್ತಂ
ನ ಮೀಮಾಂಸಯಾ ತಾವದೇತದ್ವಿವೇಕಃ ।
ವಿಧಿಃ ಕುತ್ರ ವಾ ದ್ವಾದಶಾಧ್ಯಾಯಮಧ್ಯೇ
ನ ಕುತ್ರಾಪಿ ದೃಷ್ಟೋ ನ ವಾ ವಾರ್ತಿಕೇಽಪಿ ॥೧೬೯॥

ನ ಚ ಬ್ರಹ್ಮಮೀಮಾಂಸಯಾ ತದ್ವಿವೇಕೋ
ನ ಚೋಪಾಸನಾಮಾರ್ಗಭಿನ್ನೋಽಪಿ ಮಾರ್ಗಃ ।
ನ ತಸ್ಯಾಃ ಫಲಂ ಮೋಕ್ಷರೂಪಂ ಪ್ರಕೃಷ್ಟಂ
ಪ್ರಕೃಷ್ಟಂ ಫಲಂ ತತ್ತ್ವವಿಜ್ಞಾನಸಾಧ್ಯಂ ॥೧೭೦॥

---

ಜಡರು. ಅವರು ಸರಿಯಾದ ತಿಳಿವಳಿಕೆಯನ್ನು ಸಂಪಾದಿಸಿರುವುದಿಲ್ಲ. ಅವರು ಕೇವಲ ಪ್ರಮತ್ತರು. ಏಕೆಂದರೆ ನಮ್ಮ ಶೈವಶಾಸ್ತ್ರಗಳನ್ನೂ ಶಿವಧರ್ಮ ಮಹಿಮೆ ಗಳನ್ನೂ ಅವರು ಪರಿಶೀಲಿಸಿಯೇ ಇಲ್ಲ. ಅದನ್ನು ತಿಳಿದಿದ್ದರೆ ಅವರು ಹಾಗೆ ಹೇಳುತ್ತಿರಲಿಲ್ಲ. ॥೧೬೮॥

ಆ ಮೀಮಾಂಸಾಶಾಸ್ತ್ರದಲ್ಲಿ ಈ ಶಿವಧರ್ಮದಂತೆ ಮೋಕ್ಷೋಪಯೋಗಿ ಯಾದ ಕರ್ಮವು ಎಲ್ಲಿಯಾದರೂ ಹೇಳಿರುತ್ತದೆಯೇ? ಇಲ್ಲ. ಅಲ್ಲಿ ಕೇವಲ ಸ್ವರ್ಗಫಲಕವೆಂದು ಬೇಕಾದಷ್ಟು ಕರ್ಮಗಳು ಹೇಳಲ್ಪಟ್ಟಿವೆ. ಅದರಿಂದ ಯಾವ ತಾತ್ವಿಕವಾದ ವಿವೇಕವೂ ಉಂಟಾಗಲಾರದು. ಈ ಶಿವಧರ್ಮದಂತೆ ಮೋಕ್ಷೋಪ ಯೋಗಿಯಾದ ಕರ್ಮವಿಧಿಯು ಆ ಹನ್ನೆರಡು ಅಧ್ಯಾಯದಲ್ಲಿಯಾಗಲೀ ಅಥವಾ ವಾರ್ತಿಕಸೂತ್ರದಲ್ಲಿಯಾಗಲಿ ಕಂಡುಬರುವುದಿಲ್ಲ. ॥೧೬೯॥

ಆ ಶಿವಾನುಗ್ರಹದಿಂದ ಲಭಿಸುವ ವಿವೇಕಜ್ಞಾನವು ಬ್ರಹ್ಮಮೀಮಾಂಸಾ ಶಾಸ್ತ್ರ ವನ್ನು ಅಧ್ಯಯನಮಾಡಿದರೂ ದೊರೆಯಲಾರದು. ಹಾಗೆಯೇ ಆಗಮ, ಉಪಾಸನೆ ಮುಂತಾದ ಮಾರ್ಗಗಳಿಗಿಂತಲೂ ಈ ಶಿವಾನುಗ್ರಹ ಮಾರ್ಗವೇ ಬೇರೆಯಾಗಿದೆ. ಇದಕ್ಕೂ ಅವುಗಳಿಗೂ ಯಾವ ಸಂಬಂಧವೂ ಇರುವುದಿಲ್ಲ. ಈ ಶಿವಾನುಗ್ರಹದಿಂದ ಲಭಿಸುವ ವಿವೇಕದಿಂದ, ತತ್ತ್ವಜ್ಞಾನವೂ ಪರಮಪುರುಷಾರ್ಥವಾದ ಮೋಕ್ಷ

ನ ಚೋಪಾಸನಾ ಚಿತ್ತಶುದ್ಧಿಂ ವಿನಾನ್ಯತ್
ಫಲಂ ಕರ್ತುಮೇಕಂ ಸಮರ್ಥಾಸಮರ್ಥಾ ।
ಕಥಂ ವಾ ಸ ಸಾಧ್ಯೋಽಪಿ ಮೋಕ್ಷಸ್ಸ ನಿತ್ಯೋ
ಮದಾದ್ಯಾಶು ವೇದಾಂತಮಾರ್ಗಪ್ರವಿಷ್ಟಃ ॥೧೭೧॥

ಮಿತಂ ಭಾವನಾಯಾಃ ಸ್ವರೂಪಂ ನ ಕೇನಾ
ಪ್ಯತಸ್ತತ್ಪರಿಜ್ಞಾನಶೂನ್ಯೇನ ಕೇನ ।
ಕಥಂ ತಸ್ಯ ಮೋಕ್ಷಸ್ಯ ಸಾಧ್ಯತ್ವವಾದಃ
ಸ ನಿರ್ವಾಹ್ಯಮಧ್ಯೇ ಬಲಾತ್ಪಾತನೀಯಃ ॥೧೭೨॥

---

ಫಲವೂ ದೊರೆಯುವುದು. ಆದರೆ ಇದನ್ನು ಬಿಟ್ಟು ಹಿಂದೆ ಹೇಳಿದ ಯಾವ ಮಾರ್ಗ ದಿಂದಲೂ ಯಾವ ಉಪಾಯದಿಂದಲೂ ಮೋಕ್ಷವು ದೊರೆಯಲಾರದು. ||೧೭೦||

ಉಪಾಸನೆಯು ಕೇವಲ ಚಿತ್ತಶುದ್ಧಿಯನ್ನು ಮಾಡಿಕೊಳ್ಳುವುದಕ್ಕೆ ಉಪಾಯ ವಾದೀತು, ಅಷ್ಟೆ. ಆ ಉಪಾಸನೆಯೊಂದೇ ಪರಮಪುರುಷಾರ್ಥವಾದ ಮೋಕ್ಷವನ್ನು ಸಂಪಾದಿಸಿಕೊಡುವುದಿಲ್ಲ. ಉಪಾಸನೆಯು ಚಿತ್ತಶುದ್ಧಿಯನ್ನು ಬಿಟ್ಟು ಮತ್ತೇನನ್ನೂ ಸಾಧಿಸಿಕೊಡಲಾರದು. ಹಾಗೆಯೇ ವೇದಾಂತಶಾಸ್ತ್ರವೂ ಆ ಶಾಶ್ವತವಾದ ಮೋಕ್ಷ ವನ್ನು ಹೇಗೆ ಸಾಧಿಸಿಕೊಟ್ಟೀತು ? ಆ ಮೋಕ್ಷವು ಶಿವಾನುಗ್ರಹ ಮಾತ್ರದಿಂದಲೇ ಲಭಿಸಬೇಕಲ್ಲವೆ ! ||೧೭೧||

ಭಾವನೆಯ ಅರ್ಥವೂ ಸ್ವರೂಪವೂ ಎಷ್ಟು ? ಹೇಗೆ ? ಎಂಬುದನ್ನು ಆ ಭಾವನೆಯನ್ನು ಅರಿಯದವನು ಹೇಗೆ ತಿಳಿದುಕೊಂಡಾನು ? ಹೇಗೆ ಹೇಳಿಯಾನು ? ಅದರ ಸ್ವರೂಪವನ್ನು ತಿಳಿದುಕೊಂಡವನಿಗೆ ಮಾತ್ರವೇ ಅದರ ಸ್ವರೂಪವು ಗೊತ್ತು. ಅಷ್ಟೆ. ಹೀಗಿರುವುದರಿಂದ ಈ ಲೌಕಿಕವಾದ ಶಾಸ್ತ್ರಗಳು ಆ ಪರಮಪುರುಷಾರ್ಥ ವಾದ ಮೋಕ್ಷಕ್ಕೆ ಸಾಧನವೆಂದು ಹೇಗೆ ತಾನೇ ಒಪ್ಪಿಕೊಳ್ಳುವುದು ? ಒಂದುವೇಳೆ ಬ್ರಹ್ಮಮೀಮಾಂಸೆಯಲ್ಲಿ ಮೋಕ್ಷೋಪಾಯವು ಇದೆ ಎಂದು ಹೇಳಿದರೂ ಕೇವಲ ಬಲಾತ್ಕಾರವಾಗಿ ಒಪ್ಪಿಕೊಳ್ಳಬೇಕಾಗುವುದು ಅಷ್ಟೆ. ಇದನ್ನು ನಿಸ್ಸಂದಿಗ್ಧವಾಗಿ ಹೇಳುವುದಕ್ಕಾಗುವುದಿಲ್ಲ. ||೧೭೨||

ಯ ಏವಾಕ್ಷಪಾದಸ್ಯ ಮೋಕ್ಷಃ ಸ ಸಾಧ್ಯಃ
ಸ ತಾವತ್ಪರಿಧ್ವಂಸ ಏವಾವಿನಾಶೀ ।
ಸ ತತ್ತ್ವಾವಬೋಧಸ್ಯ ಸಾಧ್ಯಸ್ತು ತಾವತ್
ನ ವೇದಾಂತಶಾಸ್ತ್ರಾವಿರುದ್ಧೋ ವಿರುದ್ಧಃ ॥೧೭೩॥

ಅಲಂ ಶಾಸ್ತ್ರವಾರ್ತಾಭಿರಸ್ಮಾಕಮೇಕಃ
ಶಿವಾನುಗ್ರಹೋ ಮೋಕ್ಷಹೇತು ಸ್ಸ ತಾವತ್ ।
ಶಿವಾರಾಧನೇನೈವ ತತ್ರಾಧಿಕಾರೀ
ಪರಂ ಶಾಂಭವಃ ಕೋಽಪಿ ಧನ್ಯೋಽತಿಧನ್ಯಃ ॥೧೭೪॥

ಶಿವಾದ್ವೈತವಾರ್ತಾ ಪರಂ ರೋಚತೇ ಮೇ
ಶಿವಾರಾಧಕಾಗ್ರೇಸರಾಗ್ರೇಸರಸ್ಯ ।

---

ಗೌತಮನು ಹೇಳುವ ಮೋಕ್ಷವು ಸುಲಭಸಾಧ್ಯವೇ ಆಗಿದೆ. ಏತಕ್ಕೆಂದರೆ ಆತನು ಪ್ರಧ್ವಂಸವೆಂಬ ಅಭಾವವೇ ಮೋಕ್ಷವೆಂದೆನ್ನುತ್ತಾನೆ. ಅಂದರೆ ಆ ಪ್ರಧ್ವಂಸಾಭಾವವೇನೋ ಅನಿತ್ಯವಾದುದಲ್ಲ. ಅವಿನಾಶಿರೂಪ, ನಿತ್ಯವು ಸರಿ. ಆದರೆ ಇದು ವೇದಾಂತಶಾಸ್ತ್ರಕ್ಕೆ ತೀರ ವಿರುದ್ಧವಾಗಿಲ್ಲವೆಂದು ಹೇಳಲಾಗುವುದಿಲ್ಲ. ಏಕೆಂದರೆ ಆ ಮೋಕ್ಷವು ತತ್ತ್ವಜ್ಞಾನದಿಂದ ಮಾತ್ರವೇ ಲಭಿಸುವುದೆಂದು ವೇದಾಂತದಲ್ಲಿ ಹೇಳಿರುತ್ತದೆ. ಗೌತಮನು ಹೇಳುವಂತೆ ಮೋಕ್ಷವಾಗುವುದಾದರೆ ಎಲ್ಲರಿಗೂ ಒಂದು ದಿನ ಮೋಕ್ಷವು ಸುಲಭವಾಗಿಯೇ ಲಭಿಸಿಬಿಟ್ಟೀತು. ಆದರೆ ಆತನ ಮತವೂ ಅಭಿಪ್ರಾಯವೂ ತಪ್ಪು. ವಿರುದ್ಧವೂ ಆಗಿದೆ. ॥೧೭೩॥

ಅದಿರಲಿ. ಆ ಶಾಸ್ತ್ರವಾಕ್ಯಾರ್ಥವನ್ನು ಕಟ್ಟಿಕೊಂಡು ನಮಗೆ ಏನಾಗಬೇಕು ? ನಮಗೆ ಆದರಿಂದ ಏನೂ ಪ್ರಯೋಜನವಿಲ್ಲ. ನಮ್ಮ ಮತವು ಇದೊಂದೇ ನಿಶ್ಚಿತವಾಗಿರುವುದು. ಶಿವಾನುಗ್ರಹವೇ ಮೋಕ್ಷಕ್ಕೆ ಕಾರಣವಾಗಿದೆ. ಇಂಥ ಶಿವಾನುಗ್ರಹವು ಆ ಶಿವನನ್ನು ಆರಾಧಿಸುವುದರಿಂದಲೇ ಲಭಿಸುವುದು. ಅಂಥ ಮೋಕ್ಷದಲ್ಲಿ ಶಿವಭಕ್ತನೊಬ್ಬನೇ ಅಧಿಕಾರಿಯಾಗಿರುವನು. ಆ ಪರಮಧನ್ಯ ಶೈವನಿಗೇ ಮುಕ್ತಿಯು ದೊರೆಯುವುದು. ॥೧೭೪॥

ನಾನು ಒಪ್ಪುವುದೆಂದರೆ ಇದೊಂದೇ. ನನಗೆ ಇಷ್ಟವಾಗಿರುವುದು ಶಿವಾದ್ವೈತವಾದವು. ಶಿವಭಕ್ತಾಗ್ರಣಿಗಳಿಗೂ ಅಗ್ರೇಸರನಾದ ನಾನು ಶಿವಾದ್ವೈತವಾದ

ಶಿವಾರಾಧನಾಬೋಧಕಂ ಶಾಸ್ತ್ರಮೇಕಂ
ಪ್ರಮಾಣಂ ಪ್ರಮಾಣೇಷು ವಿಶ್ವಾಸಬೀಜಂ ॥೧೭೫॥

ಪರಂ ಜನ್ಮಜನ್ಮಾಂತರಾಭ್ಯಸ್ತಮೇಕಂ
ಶಿವಾರಾಧನಾಬೋಧಕಂ ಶಾಸ್ತ್ರಮೇವ ।
ಯತಸ್ತದ್ವಿರುದ್ಧೇನ ಮಾನಾಭಿಮಾನೋ
ಮಮೇಶಾನ ಪಾದಾರವಿಂದೇ ಶಪಾಮಿ ॥೧೭೬॥

ಮಹಾಪತ್ತರಂಗಾನುಷಂಗೇಽಪಿ ಶಂಗ
ತ್ವದನ್ಯಂ ನ ಪಶ್ಯಾಮಿ ನಾರಾಧಯಾಮಿ ।
ನ ಗೃಹ್ಣಾಮಿ ನಾಮಾಪಿ ಸ್ತೌಮಿ ಪ್ರಕಾಮಂ
ತ್ವದನ್ಯಸ್ಯ ವಾರ್ತಾಶ್ಚಗರ್ತೇ ಪತಂತಿ ॥೧೭೭॥

---

ಒಂದನ್ನೇ ಶಾಸ್ತ್ರವೆಂದು ಸಮ್ಮತಿಸುವೆನು. ನನಗೆ ಇದೊಂದರಲ್ಲಿಯೇ ನಂಬಿಕೆ ಇರುವುದು. ಶಿವಾರಾಧನೆಯನ್ನು ಬೋಧನೆ ಮಾಡುವ ವೇದವನ್ನೇ ನಾನು ಪ್ರಮಾಣವೆಂದು ನಂಬುವೆನು. ಸಕಲ ಪ್ರಮಾಣಗಳಲ್ಲಿಯೂ ಶಿವಾರಾಧನೆಯ ಬೋಧನೆಯನ್ನೇ ಸತ್ಪ್ರಮಾಣವೆನ್ನುವೆನು. ॥೧೭೫॥

ನಾನು ನನ್ನ ಜನ್ಮಾಂತರಗಳಲ್ಲಿಯೂ ಅಭ್ಯಾಸಮಾಡಿರುವುದು ಇದೊಂದನ್ನೇ. ಶಿವಾರಾಧನೆಯನ್ನು ಬೋಧನಮಾಡುವ ಶಾಸ್ತ್ರವೊಂದನ್ನೇ ನಾನು ಕಲಿತಿರುವುದು. ಓ ಈಶಾನ, ನಿನ್ನ ಅಡಿದಾವರೆಗಳಲ್ಲಿ ಶಪಥಮಾಡುವೆನು. ಶಿವಾರಾಧನೆಯೊಂದರಲ್ಲಿಯೇ ನನಗೆ ಗತಿ ಇರುವುದು. ಪರಿಚಯಾಭಿಮಾನಗಳೂ ಅಲ್ಲಿಯೇ ಇರುತ್ತವೆ. ಅದರಿಂದಲೇ ಈ ಶೈವಧರ್ಮಕ್ಕೆ ವಿರುದ್ಧವಾದವುಗಳನ್ನು ಕಂಡರೆ ನನಗೆ ಉದ್ವೇಗವಾಗುತ್ತದೆ. ॥೧೭೬॥

ಓ ಶಂಕರ, ನನಗೆ ಎಷ್ಟೇ ತರಂಗತರಂಗಾಕಾರವಾಗಿ ವಿಪತ್ತುಗಳು ಬಂದೊದಗಿದರೂ ನಿನ್ನನ್ನು ಬಿಟ್ಟು ಬೇರೆಯವರನ್ನು ಶರಣೆಂದು ಕರೆಯುವುದಿಲ್ಲ. ಆರಾಧಿಸುವುದಿಲ್ಲ. ನೋಡುವುದೂ ಇಲ್ಲ. ಹೆಸರನ್ನು ಅರ್ಧರ್ಧವಾಗಿಯೂ ಹಿಡಿದು ಕೂಗುವುದಿಲ್ಲ. ನಿನ್ನೊಬ್ಬನನ್ನೇ ಸದಾ ಆಶ್ರಯಿಸುವೆನು. ನಿನ್ನನ್ನು ಬಿಟ್ಟು ಬೇರೆಯವರ ಮಾತೇ ಇಲ್ಲಿ ನಿಲ್ಲಲಾರದು. ಉಳಿದೆಲ್ಲವನ್ನೂ ಹಳ್ಳದಲ್ಲಿ ಹಾಕುವೆನು. ॥೧೭೭॥

ಮಹಾಮೃತ್ಯುರಾಯಾತು ಮಾ ಯಾತು ಕಿಂ ನೋ
ನ ತೇನಾಪಿ ಭೀತಿರ್ಮಹಾಮೃತ್ಯುಮೃತ್ಯುಃ ।
ಯತೋ ಮನ್ಮನಃ ಪದ್ಮಸದ್ಮಪ್ರವಿಷ್ಟಃ
ಸ ದುಷ್ಟಾನಿ ಕಷ್ಟಾನಿ ಹರ್ತುಂ ಸಮರ್ಥಃ ॥೧೭೮॥

ಸ್ವಕಾಲೇಽಪಿ ಕಾಲೋ ನ ಯಾತ್ಯಂತಿಕಂ ನೋ
ಸ ಕೋ ವಾ ವರಾಕಃ ಸ ಕಿನ್ನಾತಿರಂಕಃ ।
ಸ ಚೇಟೀಚಪೇಟೀತಟಾಘಾತಭೀತಃ
ಕೃತಾಂತಾಂತಕಾರಾಧಕಾಗ್ರೇಸರಸ್ಯ ॥೧೭೯॥

ಇಯಂ ನೋ ಮಹಾಶೈವಸಂಗಾನ್ನ ಜಾತಾ
ಮತಿಶ್ಶಂಕರಾರಾಧನಾಸಾಧನೇಷು ।
ಪರಂತ್ವೀಶಪಾದಾರವಿಂದಪ್ರಸಾದಾತ್
ಮಹಾಶೈವವಾರ್ತಾಪಿ ತಾವತ್ಕಲೌ ನಃ ॥೧೮೦॥

---

ನನಗೆ ಮಹಾಮೃತ್ಯುವು ಬಂದರೆ ಬರಲಿ ಅಥವಾ ಬಿಟ್ಟರೆ ಬಿಡಲಿ. ಇದರಿಂದ ನನಗೆ ಯಾವ ಆತಂಕವೂ ಇಲ್ಲ. ಅಥವಾ ಭಯವೂ ಇರುವುದಿಲ್ಲ. ಏಕೆಂದರೆ, ಇಂದು ನನ್ನ ಮನಸ್ಸನ್ನು ಮಹಾಮೃತ್ಯುವಿಗೂ ಮೃತ್ಯುಸ್ವರೂಪನಾದ ಮೃತ್ಯುಂಜಯನು ಪ್ರವೇಶಿಸಿದ್ದಾನೆ. ಆತನೇ ನನಗೆ ಒದಗುವ ಸಕಲ ಭಯಗಳನ್ನೂ ಕಷ್ಟಗಳನ್ನೂ ಪರಿಹರಿಸುವವನಿದ್ದಾನೆ. ॥೧೭೮॥

ಮಹಾಮೃತ್ಯುಂಜಯನನ್ನು ನಾನು ಸದಾ ಆರಾಧಿಸುತ್ತೇನೆ. ಮೃತ್ಯುಂಜಯಾರಾಧಕರಿಗೆಲ್ಲಾ ಅಗ್ರೇಸರನಾದ ನನ್ನ ಸಮೀಪಕ್ಕೆ ಆ ಕಾಲಸ್ವರೂಪ ಮೃತ್ಯುವು ತನ್ನ ಆಗಮನ ಸಮಯದಲ್ಲಿಯೂ ಸಹ ಬರಲಾರದು. ಪಾಪ! ನನ್ನ ಎದುರಿಗೆ ಬರಲು ಆತನು ಎಷ್ಟರಮಟ್ಟಿನವನು? ಎಲ್ಲಿ ದಾಸಿಯರ ಚಾಟಿಯ ಏಟು ಕೆನ್ನೆಗೆ ಬಿದ್ದೀತೋ ಎಂದು ಹೆದರಿಕೆಯಿಂದ ನನ್ನ ಸಮೀಪಕ್ಕೆ ಬರಲು ಬಹಳ ಹೆದರುತ್ತಾನೆ. ॥೧೭೯॥

ಈ ಶಿವಾರಾಧನೆಯನ್ನು ಮಾಡುವ ಬುದ್ಧಿಯು ನನಗೆ ಶೈವರ ಉಪದೇಶದಿಂದಾಗಲಿ ಅವರ ಸಹವಾಸದಿಂದಾಗಲಿ ಉಂಟಾಗಿರುವುದಿಲ್ಲ. ಇದು ಉಂಟಾಗಿರುವುದು ನನ್ನ ಪುಣ್ಯದಿಂದ, ಅಥವಾ ಕೇವಲ ಆ ಪಾರ್ವತೀರಮಣನ ಚರಣ

ಕಲೌಧರ್ಮದಾವಾನಲಸ್ತತ್ರ ವಾರ್ತಾ
ಮಹಾಶೈವದೇವದ್ರುಮಸ್ಯೇತಿ ಶಂಭೋ ।
ಅಹಂ ತಾವದೇಕೋ ಭವತ್ಪಾದಪದ್ಮ
ಪ್ರಸಾದಾಮೃತೇನೈವ ಜೀವಾಮಿ ಲೋಕೇ ॥೧೪೧॥

ಶ್ರೀಮನ್ನಿರ್ಮಲಭಾವಲಿಂಗಮಮರಾರಾಧ್ಯಂ ಪ್ರಸನ್ನಂ ಸದಾ
ಪೂಜ್ಯಂ ಮತ್ಕುಲಸಂಭವೈರನುದಿನಂ ತ್ಯಕ್ತ್ವಾನ್ಯದೇವಾರ್ಚನಂ ।
ಏವಂ ಶಂಕರಶಾಸನಂ ಚ ನ ಸಮುಲ್ಲಂಘ್ಯಂ ಶಿವಾಸಂಯುತಃ
ಶಂಭುರ್ನೃತ್ಯತಿ ಲಿಂಗಮೇತದಮಲಂ ದೃಷ್ಟ್ವಾ ಸುರಾಭೀಷ್ಟದಃ ॥೧೪೨॥

---

ಕಮಲಗಳ ಅನುಗ್ರಹದಿಂದಲೇ. ಅನ್ಯಥಾ ಈ ಅಧರ್ಮಭೂಯಿಷ್ಠವಾದ ಕಲಿಯುಗ ವಲ್ಲಿ ಶಿವಭಕ್ತನೆಂದರೇನು ? ಮಹಾಶೈವನೆಂದರೇನು ? ಎಲ್ಲಾ ದುರ್ಲಭವೇ ಸರಿ. ||೧೪೦||

ಈ ಕಲಿಗಾಲವೆಂಬುದು ಸ್ವಲ್ಪವೇ ಅನರ್ಥಕಾರಿಯಾದುದಲ್ಲ. ಸಕಲ ಧರ್ಮ ಗಳಿಗೂ ಈ ಕಾಲವು ಕಾಡುಗಿಚ್ಚಿನಂತೆಯೇ ಸರಿ. ಸಕಲ ಧರ್ಮಗಳನ್ನೂ ಭಸ್ಮ ಮಾಡುವುದು. ಅಂದಮೇಲೆ ಇಂಥ ದುಷ್ಕಾಲದಲ್ಲಿ ಮಹಾಶೈವನೆಂಬ ಕಲ್ಪವೃಕ್ಷವು ಹೇಗೆ ಸ್ಥಿತಿಯನ್ನು ಪಡೆದುಕೊಂಡು ಜೀವಿಸಿದ್ದೀತು? ಬಹಳ ಅಸಾಧ್ಯವೇ ಸರಿ. ಆದರೆ ಓ ಶಂಭೋ! ನಿನ್ನ ಚರಣಕಮಲಗಳ ಅಮೃತಪ್ರಸಾದದಿಂದ ನಾನೊಬ್ಬನು ಮಾತ್ರ ಈ ಲೋಕದಲ್ಲಿ ಬದುಕಿಕೊಂಡಿದ್ದೇನೆ. ||೧೪೧||

ಸಕಲ ಕಲ್ಯಾಣಗಳನ್ನೂ ಅನುಗ್ರಹಿಸುವ ಭಾವಲಿಂಗವನ್ನು ದೇವತೆಗಳೂ ಸಹ ಆರಾಧಿಸುತ್ತಾರೆ. ಆ ಭಾವಲಿಂಗವನ್ನು ನನ್ನ ವಂಶದವರೆಲ್ಲಾ ಸರ್ವದಾ ಪೂಜಿಸಲಿ. ಅನ್ಯದೇವರನ್ನು ಪೂಜಿಸಿ ಫಲವಿಲ್ಲ. ಎಲ್ಲಾ ಫಲಗಳೂ ಲಿಂಗಾರ್ಚನೆ ಯಿಂದಲೇ ಲಭಿಸುವುವು. ಈ ನಿರ್ಮಲವಾದ ಭಾವಲಿಂಗದಲ್ಲಿ ಪರಮೇಶ್ವರನು ಪಾರ್ವತೀಸಮೇತನಾಗಿ ಆನಂದದಿಂದ ನಾಟ್ಯವಾಡುತ್ತಾ ಇರುತ್ತಾನೆ. ಹೀಗೆ ಪ್ರಸನ್ನನಾದ ಪರಮೇಶ್ವರನನ್ನು ಪೂಜಿಸಿದರೆ ಸಕಲ ಇಷ್ಟಾರ್ಥಗಳನ್ನೂ ಆತನೇ ಪ್ರದಾನಮಾಡುವನು. ಆದುದರಿಂದ ಇತರ ದೇವತೆಗಳನ್ನು ಅರ್ಚಿಸುವುದನ್ನು ಬಿಟ್ಟು ಭಾವಲಿಂಗವನ್ನೇ ಅರ್ಚಿಸಲಿ. ಶಂಕರನ ಆಜ್ಞೆಯೂ ಹೀಗೆಯೇ ಇರುವುದು. ||೧೪೨||

ಏತದ್ದರ್ಶನಮಾತ್ರತೋಽಪಿ ಸಕಲಾಭೀಷ್ಟಾಂಬುರಾಶಿಃ ಸ್ವಯಂ
ನಿತ್ಯಂ ಸ್ವಾಂಗಣಮೇತ್ಯ ಭಾವಲಲಿತಂ ಲಿಂಗಂ ಪ್ರಪಶ್ಯತ್ಯಯಂ ।
ಸ್ವಾಮಿನ್ನಸ್ಯ ವಶೇ ವಸಾಮಿ ತವ ಚೇದಾಜ್ಞಾ ತ್ವದಾರಾಧಕಂ
ತ್ಯಕ್ತ್ವಾನ್ಯತ್ರ ನ ಸಂವಸಾಮಿ ಶಪಥಃ ಶಂಭೋ ತ್ವದಂಘ್ರ್ಯಂಬುಜೇ॥೧೮೩॥

ತ್ವತ್ಪಾದಾಂಬುರುಹಂ ವಿಹಾಯ ನ ಕದಾಪ್ಯನ್ಯತ್ರ ಗಂತುಂ ಮತಿಃ
ಶಂಭೋ ನಿರ್ಮಲಭಾವಲಿಂಗಸದೃಶಂ ಲಿಂಗಂ ಕ್ವ ವಾ ಭೂತಲೇ ।
ಪಾತಾಲೇಽಪಿ ನ ಮಂದಿರೇಽಪಿ ಸುತರಾಂ ಮೇರೌ ಮಹೇಶಾಲಯೇ
ಸತ್ಯಂ ಸತ್ಯಮಿದಂ ಪುನಃ ಪುನರಿದಂ ಸಂದೇಹವಾರ್ತಾಪಿ ನ ॥೧೮೪॥

ಕಲ್ಯಾಣಾನಿ ಪದೇಪದೇ ಸುಖಮಪಿ ಸ್ವಾಮಿನ್ ತ್ವದಾರಾಧನೇ
ಸಿದ್ಧಾನಾಮಪಿ ಸಿದ್ಧಿದಂ ಬಹುವಿಧಾಭೀಷ್ಟಪ್ರದಾನೋನ್ಮುಖಂ ।

---

ಈ ಭಾವಲಿಂಗದ ದರ್ಶನವನ್ನು ಮಾತ್ರ ಮಾಡುವುದರಿಂದಲೇ ಸಕಲ ಇಷ್ಟಾರ್ಥಗಳೂ ತಾವಾಗಿಯೇ ಬಂದು ನಮ್ಮ ಮನೆಯಲ್ಲಿಯೂ ಅಂಗಳದಲ್ಲಿಯೂ ಸಾಂದ್ರವಾಗಿ ನೆಲೆಸುವುವು. ಓ ಶಂಭೋ, ಹೀಗೆ ನಿನ್ನ ಚರಣಸನ್ನಿಧಿಯಲ್ಲಿ ಶಪಥ ಮಾಡುವೆನು. ನಿನ್ನ ಅಪ್ಪಣೆಮೇರೆಗೆ ನಾನು ವರ್ತಿಸುತ್ತೇನೆ. ಶೈವರ ಸಹವಾಸ ವನ್ನು ಬಿಟ್ಟು ಬೇರೆಯವರ ಸಹವಾಸ ಮಾಡುವುದಿಲ್ಲ. ಯಾವಾಗಲೂ ಭಾವಪರ ವಶನಾಗಿ ಭಾವಲಿಂಗವನ್ನೇ ದರ್ಶನಮಾಡುತ್ತೇನೆ. ಆರಾಧಿಸುತ್ತೇನೆ. ಭಾವ ಲಿಂಗವೇ ನನಗೆ ಶರಣೆಂದು ಮರೆಹೊಕ್ಕಿದ್ದೇನೆ. ॥೧೮೩॥

ಓ ಶಂಕರ! ನನಗೆ ನಿನ್ನ ಚರಣಕಮಲಗಳನ್ನು ಬಿಟ್ಟು ಬೇರೆಡೆಗೆ ಹೋಗು ವುದಕ್ಕೆ ಎಂದೂ ಮನಸ್ಸೇ ಉಂಟಾಗುವುದಿಲ್ಲ. ಆದುದರಿಂದ ನಿನ್ನನ್ನೇ ಆರಾಧಿಸು ತ್ತೇನೆ. ಹಾಗೆ ಆರಾಧನೆಮಾಡಲು ಉತ್ತಮವಾದ ಲಿಂಗವೆಂದರೆ ಭಾವಲಿಂಗವೇ ಸರಿ. ಈ ಭಾವಲಿಂಗಕ್ಕೆ ಸದೃಶವಾದ ಬೇರೊಂದು ಲಿಂಗವು ಅಖಂಡ ಭೂತಲದ ಲ್ಲಿಯೇ ಇರುವುದಿಲ್ಲ. ಇಂತಹ ಪಾವನವಾದ ಲಿಂಗವು ಪಾತಾಲದಲ್ಲಿಯೂ ಇಲ್ಲ. ಮೇರುಪರ್ವತದ ಮೇಲಿರುವ ಶಿವಾಲಯದಲ್ಲಿಯೂ ಇರುವುದಿಲ್ಲ. ಈ ನನ್ನ ಮಾತಿ ನಲ್ಲಿ ಯಾವ ಸಂಶಯವೂ ಇಲ್ಲ. ದೃಢವಾಗಿ ಸತ್ಯವನ್ನೇ ಹೇಳುತ್ತಿದ್ದೇನೆ. ॥೧೮೪॥

ಓ ಸ್ವಾಮಿನ್ ಶಂಕರ, ನಿನ್ನನ್ನು ಆರಾಧನೆ ಮಾಡುವುದರಿಂದ ಪದೇ ಪದೇ ಮಂಗಲಗಳೂ ಸುಖಗಳೂ ಲಭಿಸುವುವು. ನಾನಾವಿಧವಾಗಿ ಇಷ್ಟಾರ್ಥ

ನಿತ್ಯಂ ಶಂಕರ ಭಾವಲಿಂಗಮಧುನಾ ಸಿದ್ಧಿಪ್ರದಂ ಜಾತವ
ತ್ಯಗ್ರೇ ಸಿದ್ಧಿಕರಂ ಕರೋತಿ ಸತತಂ ಸಿದ್ಧಿಪ್ರಸಿದ್ಧಿಂ ಪ್ರಭೋ ॥೧೮೫॥

ಶೇಷಾಶೇಷಫಣಾಮಣಿಸ್ಫುರದುರು ಶ್ರೀಕಂಠಕಂಠ ಪ್ರಭೋ
ಗಂಗಾತುಂಗತರಂಗತಿಃ ಕ್ವಚಿದಯಂ ಲಿಂಗೈಕದೇಶೇ ಪುನಃ ।
ಆನೀಲಾ ಯಮುನಾ ತರಂಗತಿಪುನಸ್ಸಾ ವಾಕ್ತರಂಗತ್ಯಹೋ
ಸಾ ವಾಚಾಂ ವಿಷಯಾ ಭವತ್ಯಪಿ ಕಥಂ ಶ್ರೀನೀಲಕಂಠ ಪ್ರಭೋ ॥೧೮೬॥

ಲಿಂಗಂ ಮಂಗಲದಂ ಮನೋರಥತತಿಂ ತಾನತ್ತನೋತ್ಯಾದರಾತ್
ಆದೌ ದೃಷ್ಟಮದೃಷ್ಟಭೇದಜನಕಂ ಸ್ರಷ್ಟುಂ ವಿಶಿಷ್ಟಂ ಫಲಂ ।
ತದ್ಭಕ್ತಪ್ರಣತಂ ಪ್ರಪಶ್ಯತಿ ಮುಹುಶ್ಚಿಂತಾ ಸಮಾಲಿಂಗಿತಂ
ಧ್ಯಾತಂ ಪೂಜಿತಮಪ್ಯನನ್ಯಸದೃಶಂ ದೇಯಂ ಕಿಮಸ್ತೀತ್ಯಪಿ ॥೧೮೭॥

---

ಪ್ರದವಾದ ಈ ಭಾವಲಿಂಗವು ಸಿದ್ಧಪುರುಷರಿಗೂ ಸಕಲ ವಿಧವಾದ ಸಿದ್ಧಿಗಳನ್ನೂ ಕೊಡುವುದು. ಅಲ್ಲದೇ ಈ ಭಾವಲಿಂಗದ ವಿಶೇಷವೇನೆಂದರೆ, ಆರಾಧನೆಯನ್ನು ಮಾಡುವುದಕ್ಕೆ ಮುಂಚಿತವಾಗಿಯೇ ಶಾಶ್ವತವಾದ ಸಿದ್ಧಿಯನ್ನು ಕೊಡುವುದು. ಸರ್ವಕಾಲಿಕವಾದ ಪ್ರತಿಷ್ಠೆ, ಪ್ರಸಿದ್ಧಿ ಇವುಗಳನ್ನೂ ಪ್ರದಾನಮಾಡುವುದು. ॥೧೮೫॥

ಓ ನೀಲಕಂಠಪ್ರಭೋ, ಈ ಭಾವಲಿಂಗದಲ್ಲಿ ಸಾಂದ್ರವಾದ ನೀಲಕಾಂತಿಯು ಉಜ್ವಲವಾಗಿ ಪ್ರಕಾಶಿಸುತ್ತಿರುತ್ತದೆ. ಈ ಕಾಂತಿಯು ಅತ್ಯಂತ ಪಾವನವೂ ಸುಂದರವೂ ಆಗಿದೆ. ಇದು ಎಲ್ಲಿಯದು? ಆ ಗಂಗಾನದಿಯ ತರಂಗಗಳೇ ಇಲ್ಲಿಯೂ ಇದ್ದುಕೊಂಡು ತನ್ನ ಕಾಂತಿಯನ್ನು ಬೀರುತ್ತಿವೆಯೋ? ಅಥವಾ ಯಮುನಾ ನದಿಯ ಲಹರಿಗಳು ಓಲಾಡುತ್ತಾ ತಮ್ಮ ಪ್ರಭೆಯನ್ನು ಎರೆಚುತ್ತಿವೆಯೋ? ಅಥವಾ ಆ ದಿವ್ಯವಾದ ಮತ್ತು ಅಮೃತತುಲ್ಯವಾದ ದಿವ್ಯವಾಣಿಯ ವಿಲಾಸವು ಮೆರೆಯುತ್ತಿದೆಯೋ? ಇದು ಯಾವುದೂ ನನ್ನ ವಾಣಿಗೆ ಗೋಚರವೇ ಆಗುವುದಿಲ್ಲ. ಉಜ್ವಲಮಣಿಯನ್ನುಳ್ಳ ದಿವ್ಯಸರ್ಪವನ್ನು ಧರಿಸಿ ದಿವ್ಯಕಾಂತಿಯನ್ನುಳ್ಳ ನೀನೇ ಇದನ್ನು ಅರಿತವನಿದ್ದೀಯೆ. ॥೧೮೬॥

ಈ ಭಾವಲಿಂಗವು ಸಕಲ ಕಲ್ಯಾಣಗಳನ್ನೂ ಕೊಡುವುದಾಗಿದೆ. ತನ್ನ ಭಕ್ತರಿಗೆ ತನ್ನನ್ನು ಆರಾಧಿಸುವುದಕ್ಕಿಂತ ಮುಂಚಿತವಾಗಿಯೇ ಆದರದಿಂದ ಸಕಲ

**ಅನ್ಯಾಲೋಕನದೂನಮಸ್ಯ ನಯನಾಂಭೋಜಂ ಮದಾಲೋಕನ**
**ಪ್ರೇಮಾನಿಷ್ಕರಣಪ್ರಭಾಕರಸಮುತ್ಫುಲ್ಲಂ ಕಿಮಸ್ಮೈ ಮಯಾ ।**
**ದಾತವ್ಯಂ ಭುವನತ್ರಯೇಽಪಿ ನ ತಥಾಭೂತಂ ಫಲಂ ದೃಶ್ಯತೇ**
**ಧರ್ಮಾದ್ಯರ್ಥಚತುಷ್ಟಯಾನ್ಯದಧಿಕಂ ದೇಯಂ ನ ದೃಷ್ಟಂ ಫಲಂ ॥೧೮೮॥**

**ಶಾರ್ವೇಣಾಪ್ಯಥ ಮಾಯಯಾಪಿ ಸಕೃದಪ್ಯಾಲೋಕಿತಂ ದೈವತೈಃ**
**ಸರ್ವಾಭೀಷ್ಟಫಲಪ್ರದತ್ವಮಭವದ್ಯದ್ಭಾವಲಿಂಗಸ್ಯ ಮೇ ।**
**ತಸ್ಮೈತಸ್ಯ ಕಿಮಸ್ತಿ ದೇಯಮಸಕೃತ್ಸಾನಂದಮಾಲೋಕಿನೇ**
**ಶೈವಾಯೇತ್ಯತಿಚಿಂತಯಾ ಪರಮಿದಂ ಕಾಲಂ ನಯತ್ಯನ್ವಹಂ ॥೧೮೯॥**

---

ಇಷ್ಟಾರ್ಥಗಳನ್ನೂ ನಾನಾ ವಿಧವಾದ ಪುಣ್ಯಗಳನ್ನೂ ವಿಶಿಷ್ಟಫಲಗಳನ್ನೂ ಕೊಟ್ಟು ಉದ್ಧರಿಸುತ್ತದೆ. ಅನಂತರ ಆ ಭಕ್ತರು ನಾನಾ ವಿಧವಾದ ಧ್ಯಾನ, ಪೂಜೆ, ನಮಸ್ಕಾರ, ದರ್ಶನ ಮುಂತಾದವುಗಳನ್ನು ಭಕ್ತಿಯಿಂದ ಮಾಡುವರು. ಆಗ ಆ ಭಾವಲಿಂಗವು "ಈ ಭಕ್ತನಿಗೆ ಮತ್ತೇನನ್ನು ಕೊಡಲಿ? ನಾನು ಕೊಟ್ಟಿರುವುದರಲ್ಲಿ ಏನು ಕೊರತೆ ಇದೆ? ಮತ್ತಾವ ಅಸದೃಶವಾದ ಫಲವನ್ನು ಕೊಡುವುದು ಉಳಿದುಬಿಟ್ಟಿದೆ"? ಎಂದು ಯೋಚನೆಗೊಳಗಾಗುವುದು. ॥೧೮೭॥

"ಈ ಭಕ್ತನ ಕಣ್ಣುಗಳು ನನ್ನನ್ನು ಬಿಟ್ಟು ಬೇರೆ ಪದಾರ್ಥವನ್ನೇ ನೋಡದಿರುವುದರಿಂದ ಸ್ವಲ್ಪ ಆತುರವಾಗಿ ಸೊರಗಿರುವಂತಿವೆ. ಆದರೂ ಏಕಾಗ್ರತೆಯಿಂದ ಈತನ ಕಣ್ಣುಗಳೆಂಬ ಕಮಲಗಳು ನನ್ನಲ್ಲಿಯೇ ನೆಟ್ಟಿರುತ್ತವೆ. ನನ್ನ ಪ್ರೇಮಪೂರ್ವಕವಾದ ಅವಲೋಕನವೆಂಬ ಸೂರ್ಯಪ್ರಕಾಶದಿಂದ ಪ್ರಸನ್ನವಾಗಿ ಅರಳಿಯೂ ಇವೆ. ಇಷ್ಟು ತತ್ಪರನಾದ ಈ ಭಕ್ತನಿಗೆ ಪ್ರದಾನಮಾಡಬೇಕಾದುದು ಈ ಪ್ರಪಂಚದಲ್ಲಿ ಏನಿದೆ. ಅಥವಾ ಧರ್ಮವೇ ಮೊದಲಾದ ನಾಲ್ಕು ವಿಧ ಪುರುಷಾರ್ಥಗಳನ್ನು ಬಿಟ್ಟು ಬೇರೆ ಪುಣ್ಯಫಲವಾದರೂ ಎಲ್ಲಿದೆ? ಎಲ್ಲವನ್ನೂ ಮೊದಲೇ ಕೊಟ್ಟುಬಿಟ್ಟಿದ್ದೇನೆ. ಈಗ ಮತ್ತೇನನ್ನು ಕೊಡಲಿ? ॥೧೮೮॥

ನನ್ನ ಸ್ವಭಾವವೇ ಬಹಳ ಉದಾರವಾಗಿದೆ. ಯಾರಾದರೂ ಬಂದು ಏನನ್ನಾದರೂ ಕೇಳಿದರೆ ಕೂಡಲೇ ಅದನ್ನು ಕೊಟ್ಟುಬಿಡುತ್ತೇನೆ. ಒಂದುವೇಳೆ ಯಾರಾದರೂ ದೇವತೆಗಳು ಉದ್ದೇಶಪೂರ್ವಕವಾಗಿಯೋ ಕೃಪಣರಾಗಿಯೋ ಒಂದು ಸಲ ಬಂದು ದರ್ಶನಮಾಡಿದ್ದರೂ ಸಹ ಅವರಿಗೆ ಅವರ ಸಕಲ ಇಷ್ಟಾರ್ಥಗಳನ್ನೂ

**ಯಃ ಪಶ್ಯತ್ಯಸಕೃನ್ಮುದಾ ಪರಮಿದಂ ಮೇ ಭಾವಲಿಂಗಂ ಪ್ರಭೋ<br>ಭಕ್ತ್ಯಾ ತದ್ವಶತಾಮುಪೇತ್ಯ ನಿವಸಾಮ್ಯಸ್ಯನ್ನ ಕೃತ್ಯಂ ಚ ಮೇ ।<br>ತಸ್ಯಾಸ್ಮಿನ್ನಧಮರ್ಣತಾಮುಪಗತೇ ಮಯ್ಯಪ್ಯದೇಯೋ ಸ ಕಿಂ<br>ಕರ್ತುಂ ಪಾರಯತೀತಿ ಪಾಪವಿಮುಖಶ್ಚಿಂತಾಬ್ಧಿಮಧ್ಯಂಗತಃ ॥೧೯೦॥**

**ಧರ್ಮಾದ್ಯರ್ಥಚತುಷ್ಟಯಾದಿಕಫಲಾಪೇಕ್ಷಾ ನ ಭಕ್ತಸ್ಯ ಮೇ<br>ಯದ್ಯಪ್ಯಸ್ತಿ ತಥಾಪ್ಯನನ್ಯಸದೃಶಂ ಕಿಂ ನ ಪ್ರದೇಯಂ ಫಲಂ ।<br>ಮತ್ಪೂಜಾನಿರತಾಯ ತನ್ಮಮ ನ ಚೇತ್ಕಿಂ ದೇಯಮಿತ್ಯನ್ವಹಂ<br>ಚಿಂತಾಸಿದ್ಧಿಸಮೃದ್ಧಿರೇವ ಬಹುಧಾ ಮತ್ಪೂಜನಾಭ್ಯುಚ್ಚಯೇ ॥೧೯೧॥**

---

ಪ್ರದಾನಮಾಡಿರುತ್ತೇನೆ. ಇಂಥ ಉದಾರಪ್ರಕೃತಿಯ ನಾನು, ಮಹಾದಾನಿ, ಭಾವ ಲಿಂಗ ಎಂದು ವಿಖ್ಯಾತನಾಗಿರಲು, ಈಗ ಈ ಶಿವಭಕ್ತನಿಗೆ, ಅತ್ಯಂತ ಪರಮಭಕ್ತಿ ಯಿಂದ ಪದೇ ಪದೇ ನನ್ನನ್ನೇ ದರ್ಶನಮಾಡಿ ಆರಾಧನೆ ಮಾಡುವ ಈ ಶೈವನಿಗೆ ಏನೇನನ್ನು ಕೊಡಲಿ. ಯಾವುದನ್ನು ಕೊಟ್ಟರೂ ಸಾಲದಲ್ಲ!'' ಹೀಗೆಂದು ಭಾವ ಲಿಂಗವು ಸರ್ವದಾ ಗಾಢಚಿಂತೆಯಲ್ಲಿ ಮುಳುಗಿರುತ್ತದೆ. ||೧೮೯||

ಭಾವಲಿಂಗವು ಇನ್ನೂ ನಾನಾವಿಧವಾಗಿ ಚಿಂತಿಸುತ್ತದೆ—ಓ ಪರಮೇಶ್ವರ! ಈ ಭಕ್ತನು ಅತ್ಯಂತ ಆದರದಿಂದ ನನ್ನನ್ನು (ಭಾವಲಿಂಗವನ್ನು) ದರ್ಶನ ಮಾಡು ತ್ತಾನೆ. ಹೀಗೆ ಆತನು ಅನೇಕಾವರ್ತಿ ಭಕ್ತಿಯಿಂದ ದರ್ಶನ, ಪೂಜನ ಇತ್ಯಾದಿ ಗಳನ್ನು ಮಾಡಲು ನಾನು ಆತನ ವಶದಲ್ಲಿಯೇ ಇದ್ದುಬಿಡಬೇಕಾಗಿದೆ. ಇದನ್ನು ಬಿಟ್ಟು ಅನ್ಯಥಾ ಏನನ್ನೂ ಮಾಡುವಹಾಗಿಲ್ಲ. ಹೀಗೆ ನಾನು ಈ ಭಕ್ತನಿಗೆ ಏನನ್ನೂ ಕೊಡಲಾರದವನಾಗಿ ಅಧಮರ್ಣನಾಗಲು (ಸಾಲವನ್ನು ತೆಗೆದುಕೊಂಡವನು) ಭಕ್ತನು ಏನನ್ನು ತಾನೇ ಮಾಡಿಯಾನು? ಆತನು ಪಾಪವಿದೂರನಾಗಿದ್ದರೂ ಈರೀತಿ ಚಿಂತೆಗೊಳಗಾಗಿದ್ದಾನೆ. ಈತನನ್ನು ಹೇಗೆ ಉದ್ಧಾರಮಾಡಲಿ! ||೧೯೦||

ಈ ನನ್ನ ಭಕ್ತನಿಗೆ ಧರ್ಮಾದಿ ಪುರುಷಾರ್ಥಗಳಲ್ಲಿ ಆಪೇಕ್ಷೆಯೇ ಇರು ವುದಿಲ್ಲ. ಒಂದುವೇಳೆ ಆ ಅಪೇಕ್ಷೆಯು ಇದ್ದಿದ್ದರೆ ಅವುಗಳನ್ನು ಕೊಟ್ಟು ತೃಪ್ತಿಪಡಿಸ ಬಹುದಾಗಿತ್ತು. ಅಲ್ಲದೇ ಇಂತಹ ಭಕ್ತನಿಗೆ ಕೊಡಬಾರದ ವಸ್ತುವು ಯಾವುದೂ ಇರುವುದಿಲ್ಲ. ಹೀಗೆ ನನ್ನ ಪೂಜೆಯಲ್ಲಿಯೇ ನಿರತನಾದ ಭಕ್ತನಿಗೆ ಏನನ್ನೂ ಕೊಡಲಾರದೇ ಹೋದೆನೇ? ಏನು ಮಾಡಲಿ? ಈ ಭಕ್ತನಿಗಾದರೋ ಬೇಕಾದದ್ದು

**ಯತ್ಕಿಂಚಿಜ್ಜಲಮಲ್ಪಮಪ್ಯಪಹತಂ ಭಕ್ತ್ಯಾ ವಿನಾಪ್ಯರ್ಪಿತಂ**
**ದಾಸ್ಯಾಮ್ಯೇವ ಫಲಾನಿ ನಿರ್ಮಲಜಲೈರಾಸೇಚನೇ ಕಿಂ ಫಲಂ ।**
**ದೇಯಂ ಕೋಮಲಬಿಲ್ವಪಲ್ಲವ ನವಾಂಭೋಜಾದಿಭಿಃ ಪೂಜನೈಃ**
**ಕಿಂ ವಾ ದೇಯಮಿತಿ ಪ್ರಶಾಂತಿರಹಿತಾ ಚಿಂತಾ ನ ಜಾತಾಪಿ ಕಿಂ ॥೧೯೨॥**

**ಕಿಂಚಿಚ್ಚೇದಪರಿಷ್ಕೃತಾನ್ನಮಪಿ ಮೇ ದದ್ಯಾತ್ತದಾ ತತ್ಫಲಂ**
**ಸ್ಯಾದಸ್ಯಾನ್ನಪತಿತ್ವಮುತ್ತಮಮಧುಕ್ಷೀರಾಜ್ಯದಧ್ಯನ್ನದಃ ।**
**ಮಹ್ಯಂ ಕಿಂ ಫಲಮಾಪ್ನುಯಾದಿತಿ ನ ಕಿಂ ಚಿಂತಾಪಿ ಮೇ ಜಾಯತೇ**
**ಜಾತಾ ವೃದ್ಧಿಪರಂಪರಾಮುಪಗತಾ ಸದ್ಭಾವಲಿಂಗಸ್ಯ ಮೇ ॥೧೯೩॥**

---

ಒಂದೇ. ನನ್ನ ಪೂಜಾಭಿಲಾಷೆಯು ಮತ್ತೂ ಅಭಿವೃದ್ಧವಾಗಬೇಕೆಂಬುದು. ಆದರೆ ಈಗ ಮಾಡುತ್ತಿರುವ ಪೂಜೆಗೆ ಫಲವಾಗಿ ಕೊಡುವುದಕ್ಕೇ ನನ್ನ ಹತ್ತಿರ ಏನೂ ಇರುವುದಿಲ್ಲ. ಇನ್ನೂ ಈತನು ಹೆಚ್ಚು ಆರಾಧನೆ ಮಾಡಲು ಏನನ್ನು ತಾನೆ ಕೊಡುವುದು?! ||೧೯೧||

ಸ್ವಲ್ಪವೇ ಜಲದಿಂದ, ಅದರಲ್ಲಿಯೂ ಶ್ರೇಷ್ಠವಲ್ಲದ ಜಲದಿಂದ ಭಕ್ತಿಪೂರ್ವಕವಾಗಿ ನನಗೆ ಪ್ರೋಕ್ಷಣೆಮಾಡಿ ಸ್ತುತಿಸಿದರೂ, ಅದರಿಂದಲೇ ನಾನು ಸಂತುಷ್ಟನಾಗಿ ಪುಣ್ಯಫಲಗಳನ್ನು ಕೊಡುವೆನು. ಹೀಗಿರಲು ಈ ಭಕ್ತನು ಭಕ್ತಿ ಮತ್ತು ಶ್ರದ್ಧೆಯಿಂದ ನಿರ್ಮಲವಾದ ಜಲಾಭಿಷೇಕವನ್ನೇ ಮಾಡುತ್ತಾನೆ. ಅಂದಮೇಲೆ ಈತನಿಗೆ ಎಷ್ಟು ಫಲವನ್ನು ಕೊಡತಕ್ಕದ್ದಿದೆ. ಅಲ್ಲದೇ ಈತನು ಕೋಮಲವಾದ ಬಿಲ್ವದಳಗಳನ್ನೂ ನೂತನವಾದ ತಾವರೆಗಳನ್ನೂ ಭಕ್ತಿಯಿಂದ ಪೂಜಿಸಿ ಅರ್ಪಿಸುತ್ತಾನೆ. ಈತನಿಗೆ ನಾನು ಏನನ್ನು ತಾನೆ ಕೊಡಲಿ? ಹೀಗೆಂದು ಅಂತ್ಯವೇ ಇಲ್ಲದ ಚಿಂತೆಯುಂಟಾಗುತ್ತದೆ ||೧೯೨||

ಅಸಮೀಚೀನವಾದ ಅನ್ನವನ್ನು ಸ್ವಲ್ಪವೇ ನಿವೇದನ ಮಾಡಿದರೂ ನಾನು ಪುಣ್ಯಫಲವನ್ನು ಕೊಡುವೆನು. ಅಲ್ಲದೇ ಅನ್ನವನ್ನು ನಿವೇದಿಸುವವನಿಗೆ ಅನ್ನಪತಿತ್ವವನ್ನೇ ಅನುಗ್ರಹಿಸುವೆನು. ಅಂದಮೇಲೆ ಈತನಿಗೆ ಅದಕ್ಕಿಂತಲೂ ಹೆಚ್ಚಾದದ್ದನ್ನು ಏನನ್ನು ಕೊಡಲಿ. ಈ ಭಕ್ತನಾದರೋ ಉತ್ತಮೋತ್ತಮಗಳಾದ ಮಧು, ಕ್ಷೀರ, ದಧ್ಯನ್ನ, ತುಪ್ಪ ಮುಂತಾದವನ್ನು ನನಗೆ (ಭಾವಲಿಂಗಕ್ಕೆ) ಭಕ್ತಿಯಿಂದ ನಿವೇದಿಸಿ ಸಮರ್ಪಿಸುವನು. ಅಂದಮೇಲೆ ಈತನು ಯಾವ ಫಲವನ್ನು ತಾನೆ

**ದಿವ್ಯೈಃ ಕುಂಕುಮಕೇಸರೈರ್ಮೃಗಮದೈಃ ಕರ್ಪೂರಖಂಡೈರ್ನವೈಃ**
**ಅನ್ಯೈರಪ್ಯತಿಗಂಧಸುಂದರರಸದ್ರವ್ಯೈರ್ಯುತಂ ಚಂದನಂ ।**
**ದತ್ತಂ ಚೇತ್ತುಹಿನಾನ್ವಿತಂ ಮಯಿ ತದಾ ದೇಯಂ ಮಯಾ ಕಿಂ ಫಲಂ**
**ಶೈವಾಯೇತಿ ವಿಚಾರಸಾಗರಮಹಾಕಲ್ಲೋಲಮಾಲಾಕುಲಃ ॥೧೯೪॥**

**ಯೋ ನಿತ್ಯಂ ನವಪಟ್ಟಕೂಲವಸನೈರ್ಧೂಪೈಃ ಪ್ರದೀಪೈರ್ಮಹಃ**
**ಮಾಣಿಕ್ಯಾಭರಣಾರ್ಪಣೇನ ವಿಮಲಚ್ಛತ್ರೈಸ್ತಥಾ ಚಾಮರೈಃ ।**
**ಆದರ್ಶೈರ್ಧ್ವಜಸಂಯುತೈರಪಿ ಮಹಾಪೂಜಾಂ ಕರೋತ್ಯಾದರಾತ್**
**ತಸ್ಮೈ ಕಿಂ ಮಮ ದೇಯಮಿತ್ಯನುದಿನಂ ಚಿಂತಾನಿರಂತೋ ನ ಕಿಂ॥೧೯೫॥**

---

ಪಡೆಯಲಾರನು. ಈತನಿಗೆ ನಾನೇನನ್ನು ಕೊಡಲಿ ? ಇದೇ ನನಗೆ ದೊಡ್ಡ ಯೋಚನೆ ಆಗಿರುವುದಲ್ಲಾ ! ಈ ಯೋಚನೆಯು ಪರಿಚ್ಛಿನ್ನವೇ ಆಗುವಂತಿಲ್ಲ. ಈ ಸಂರಂಭವು ಮತ್ತು ಹೆಚ್ಚುತ್ತಲೇ ಇದೆಯಲ್ಲ ! ||೧೯೩||

ಈ ಭಕ್ತನು ಭಕ್ತಿಯಿಂದ ಪೂಜಿಸುವನಲ್ಲದೇ, ದಿವ್ಯವಾದ ಕುಂಕುಮ ಕೇಸರಿ, ಪುನಗು, ಜವ್ವಾಜಿ, ಪಚ್ಚೆಕರ್ಪೂರ ಇನ್ನೂ ಅನೇಕ ವಿಧವಾದ ಸುಗಂಧದ್ರವ್ಯ ಗಳನ್ನೂ ರಸದ್ರವ್ಯಗಳನ್ನೂ ದಿವ್ಯಚಂದನವನ್ನೂ ನನಗೆ ಅರ್ಪಿಸುತ್ತಾನೆ. ಇಷ್ಟು ಈತನು ಉಪಚಾರಮಾಡಿದಮೇಲೆ ನಾನು ಈ ಭಕ್ತನಿಗೆ ಈ ಉಪಚಾರಕ್ಕೆ ಯೋಗ್ಯ ವಾದುದನ್ನು ಏನನ್ನು ತಾನೇ ಕೊಡಲಿ ? ಅಂಥ ಉತ್ಕೃಷ್ಟವಾದದ್ದು ಏನು ತಾನೆ ಇದೆ ? ಚಿಂತೆಯ ಮಹಾಸಾಗರದಲ್ಲಿ ನಾನು ಬಹಳ ವ್ಯಾಕುಲನಾಗಿರುವೆನಲ್ಲಾ ! ಚಿಂತಾತರಂಗದಲ್ಲಿ ಮುಳುಗಿರುವೆಲ್ಲಾ ! ||೧೯೪||

ಈ ಭಕ್ತನು ಪ್ರತಿದಿನವೂ ನೂತನವಾದ ಪಟ್ಟೆವಸ್ತ್ರಗಳನ್ನು ಅರ್ಪಿಸುತ್ತಾನೆ. ದಿವ್ಯವಾದ ಧೂಪದೀಪಗಳಿಂದ ಆರಾಧಿಸುತ್ತಾನೆ. ಮಾಣಿಕ್ಯಮಯವಾದ ಆಭರಣ ಗಳನ್ನು ಸಮರ್ಪಿಸುತ್ತಾನೆ. ಪೂಜಾನಂತರದಲ್ಲಿ ಛತ್ರ, ಚಾಮರ, ಧ್ವಜ, ಮುಂತಾದ ರಾಜ ದೇವೋಪಚಾರ ಮಾಡುವನಲ್ಲದೇ ಕನ್ನಡಿ ಸೇವೆಯನ್ನೂ ಮಾಡುವನು. ಹೀಗೆ ಈ ಭಕ್ತನು ಸಕಲೋಪಚಾರಗಳಿಂದ ಕೂಡಿದ ಮಹಾಪೂಜೆಯನ್ನು ವೈಭವ ದಿಂದ ಮಾಡುತ್ತಿದ್ದಾನೆ. ಈತನಿಗೆ ಉಚಿತವಾದದ್ದನ್ನು ಏನನ್ನು ಕೊಡಲಿ ? ಎನ್ನು ವುದೇ ನನಗೆ ನಿತ್ಯವೂ ಚಿಂತೆಯಾಗಿದೆ. ಈ ಚಿಂತೆಗೆ ಕೊನೆಯೇ ಇರುವುದಿಲ್ಲ. ||೧೯೫||

**ಯೋ ಭಕ್ತ್ಯಾ ಪ್ರಣತೋ ನಿಧಾಯ ಧರಣೀಪೃಷ್ಠೇ ಶಿರಸ್ಸಾದರಂ**
**ತಂ ದೇವಾಃ ಪ್ರಣಮಂತಿ ತಾವದಸಕೃದ್ದಂಡಪ್ರಣಾಮೋದ್ಯತಃ ।**
**ಕಿಂ ವಾ ತತ್ ಫಲಮಾಪ್ನುಯಾದಿತಿ ನ ಕಿಂ ಚಿಂತಾ ತು ಮೇ ಜಾಯತೇ**
**ಗಂಧಾಧಿಷ್ಠಿತಭಾವಲಿಂಗನಿಲಯೋ ವೇದಪ್ರಮೇಯೋ ಮಯಿ ॥೧೯೬॥**

**ಯೋ ಭಕ್ತ್ಯಾ ನಿಯತಃ ಪ್ರದೋಷಸಮಯೇ ಪಂಚಾಮೃತೈರ್ನಿರ್ಮಲೈಃ**
**ನೀರೈರಪ್ಯಭಿಷಿಚ್ಯ ವಸ್ತ್ರವಿಮಲಶ್ರೀಚಂದನಾಲೇಪನೈಃ ।**
**ಪುಷ್ಪೈಶ್ಚಂಪಕಮಾಲಿಕಾಭಿರಭಿತಃ ಶ್ರೀಭಾವಲಿಂಗಾರ್ಚನಂ**
**ಕೃತ್ವಾ ನೃತ್ಯತಿ ಮನ್ಮನಸ್ಯನುದಿನಂ ವೃತ್ತಿರ್ಹಿ ಮೇ ಚಿಂತಯಾ ॥೧೯೭॥**

---

ನಾನು ಯದ್ಯಪಿ ಭಾವಲಿಂಗೇಶ್ವರನು. ವೇದಮಾತ್ರ ಗೋಚರನು. ನನಗೆ ಗಂಧಮಯವಾದ ಲಿಂಗವೇ ಅಧಿಷ್ಠಾನವಾಗಿರುವುದು. ಇಷ್ಟು ನನಗೆ ಮಹಿಮೆ ಇದ್ದರೂ ಈಗ ಮಹಾ ಚಿಂತೆಯೊದಗಿದೆ. ಯಾರೇ ಆಗಲಿ ಭಕ್ತಿಯಿಂದ ತನ್ನ ತಲೆಯನ್ನು ನೆಲಕ್ಕೆ ಊರಿ ನನಗೆ ನಮಸ್ಕಾರಮಾಡಿದರೆ, ಅದಕ್ಕೆ ಮಹಾಫಲವು ದೊರೆಯುವುದು. ನನ್ನನ್ನು ನಮಸ್ಕಾರಮಾಡಿದವನಿಗೆ ಸಕಲ ದೇವತೆಗಳೂ ನಮಸ್ಕರಿಸುವರು. ಆದರೆ ಇಲ್ಲಿ ಇದು ಮಿತಿಮೀರಿರುವುದು. ಈ ಭಕ್ತನು ಪದೇಪದೇ ದಂಡಾಕಾರವಾಗಿ ಸಾಷ್ಟಾಂಗ ಪ್ರಣಾಮವನ್ನು ಮಾಡುತ್ತಿದ್ದಾನೆ. ಇದಕ್ಕೆ ಇನ್ನೆಷ್ಟು ಶ್ರೇಷ್ಠವಾದ ಫಲವನ್ನು ಈತನು ಪಡೆಯುವನೋ? ಏನನ್ನು ಕೊಡಬೇಕೋ? ಅದೇ ನನಗೆ ಮಹಾಚಿಂತೆಯಾಗಿದೆ. ॥೧೯೬॥

ಉಪವಾಸವಿದ್ದುಕೊಂಡು ಪ್ರದೋಷಸಮಯದಲ್ಲಿ ನನ್ನನ್ನು (ಭಾವಲಿಂಗವನ್ನು) ಯಾವ ಭಕ್ತನು ಭಕ್ತಿಯಿಂದ, ಪಂಚಾಮೃತದಿಂದಲೂ ನಿರ್ಮಲವಾದ ಜಲದಿಂದಲೂ ಅಭಿಷೇಕಮಾಡಿ, ದಿವ್ಯವಾದ ವಸ್ತ್ರ, ಚಂದನ, ಅನುಲೇಪನ, ಪುಷ್ಪಮಾಲಿಕೆ, ಮುಂತಾದವುಗಳಿಂದ ಪ್ರಶಸ್ತವಾಗಿ ಅರ್ಚಿಸಿ, ಪೂಜಾಂತ್ಯದಲ್ಲಿ ಭಕ್ತಿಯಿಂದ ಭಜನೆಮಾಡುತ್ತಾ ನರ್ತನ ಮಾಡುವನೋ, ಅವನೇ ನನಗೆ ನಿತ್ಯವೂ ಈ ಪರಿಯ ಚಿಂತೆಯನ್ನು ಉಂಟುಮಾಡುತ್ತಾನೆ. ನನ್ನ ಮನಸ್ಸಿಗೆ ಈ ಚಿಂತೆಯೇ ಭಾರವೆನಿಸುತ್ತದೆ. ॥೧೯೭॥

**ರುದ್ರಾಧ್ಯಾಯಸಹಸ್ರನಾಮಪಠನೈರ್ಮತ್ಸನ್ನಿಧಾನೇ ನಯೇತ್**
**ಯಃ ಕಾಲಂ ಸ ವಿಭೂತಿಪೂತಹೃದಯೋ ಮುಕ್ತೋ ಮಹಾಪಾತಕೈಃ ।**
**ಸ್ಯಾದಿತ್ಯತ್ರ ಕಿಮದ್ಭುತಂ ಶಿವಮನುಸ್ಮೃತ್ವಾಪಿ ತತ್ಸನ್ನಿಧಿಂ**
**ಯಾಸ್ಯತ್ಯಾಪ್ತತಮತ್ವಮೇಷ್ಯತಿ ನ ಸಂದೇಹೋಽತ್ರ ಚಿತ್ರಂ ಚ ಕಿಂ ॥೧೯೮॥**

**ಮಾಂ ದ್ರಷ್ಟುಂ ಯದಿ ಜಾಯತೇ ಮತಿರಪಿ ಪ್ರಾತಃ ಪ್ರಮೋದಾನ್ವಿತೋ**
**ಮುಕ್ತಃ ಪಾಪಗಣೈರಪಾರಸುಕೃತೈರ್ಯುಕ್ತಸ್ಸಮಾಂ ಪಶ್ಯತಿ ।**
**ಆಧಾರಸ್ಸುಖಸಂಪದಾಮಪಿ ಭವತ್ಯಾಯುಃ ಪರಂ ಪ್ರಾಪ್ನುಯಾತ್**
**ಆರೋಗ್ಯಂ ನಿಗಮಾಗಮಾದಿವಿಹಿತಂ ಶ್ರೀಭಾವಲಿಂಗಾರ್ಚನೇ ॥೧೯೯॥**

**ಯೋ ಮದ್ಭಕ್ತಪದಾರ್ಚಕಃ ಸಕೃದಪಿ ಪ್ರಾಪ್ನೋತಿ ಶೈವಂ ಪದಂ**
**ಮತ್ಪೂಜಾನಿರತೋ ಭವೇದ್ಯದಿ ತದಾ ವಕ್ತವ್ಯಮತ್ರಾಸ್ತಿ ಕಿಂ ।**

---

ಈ ನನ್ನ(ಭಾವಲಿಂಗದ) ಸನ್ನಿಧಿಯಲ್ಲಿ ರುದ್ರಾಧ್ಯಾಯವನ್ನೂ ರುದ್ರ ಸಹಸ್ರ ನಾಮವನ್ನೂ ಪಾರಾಯಣ ಮಾಡುತ್ತಾ ಕಾಲಕಳೆಯುವ ಮನುಷ್ಯನುಮಹಾ ಮಹಾ ಪಾಪಗಳಿಂದ ಪಾರಾಗಿ ಮುಕ್ತಿಯನ್ನು ಪಡೆಯುತ್ತಾನೆ. ಆತನ ಮನಸ್ಸು ಮಹಾವಿಭೂತಿಯಿಂದ ಪವಿತ್ರವಾಗುತ್ತದೆ. ಹೀಗೆಂಬುದರಲ್ಲಿ ಸಂಶಯವೇ ಇಲ್ಲ. ಏತಕ್ಕೆಂದರೆ ಆ ಶಿವನನ್ನು ಧ್ಯಾನಮಾಡುವುದರಿಂದ ಮಾತ್ರವೇ ಸಾಲೋಕ್ಯವೇ ಮೊದಲಾದ ಉತ್ತಮ ಫಲಗಳನ್ನೂ, ಶಂಕರನ ಆಪ್ತತ್ವವನ್ನೂ ಪಡೆಯುವನು ಎಂದಿರುವುದು. ಅಂದಮೇಲೆ ಮೇಲೆ ಹೇಳಿದ ಫಲ ದೊರೆಯುವುದೆಂದರೆ ಸಂಶಯ ವೇನಿದೆ? ಅಥವಾ ಆಶ್ಚರ್ಯವಾದರೂ ಏನಿದೆ? ॥೧೯೮॥

ನನ್ನನ್ನು (ಭಾವಲಿಂಗವನ್ನು) ನೋಡಬೇಕೆಂಬ ಮನಸ್ಸಾದರೆ, ಮೊದಲು ಪ್ರತಿನಿತ್ಯವೂ ಪ್ರಾತಃಕಾಲದಲ್ಲಿ ಭಕ್ತಿಯಿಂದ ನನ್ನನ್ನು ಧ್ಯಾನಮಾಡಬೇಕು. ಆಗ ಸಕಲ ಪಾಪಗಳೂ ನಾಶವಾಗುವುವು. ಅನಂತರ ನನ್ನ ದರ್ಶನವೂ ಲಭಿಸುವುದು. ನನ್ನನ್ನು ಭಕ್ತಿಯಿಂದ ಪೂಜಿಸಿದರೆ ಸಕಲ ಸುಖಗಳಿಗೂ ಆಶ್ರಯವೀವ ನಿಧಿಯೇ ಆಗುವನು. ದೀರ್ಘವಾದ ಆಯುಷ್ಯವನ್ನೂ ಪಡೆಯುತ್ತಾನೆ. ಆರೋಗ್ಯವನ್ನೂ ವೇದವಿಹಿತವಾದ ಸಕಲ ಫಲಗಳನ್ನೂ ಹೊಂದುತ್ತಾನೆ. ॥೧೯೯॥

ಯಾವಾತನು ನನ್ನ ಭಕ್ತರ ಪಾದಗಳಿಗೆರಗಿ ಅರ್ಚಿಸುವನೋ, ಅವನೂ ಶೈವನೆಂದೆನಿಸುವನು. ಆತನೂ ಶಿವಲೋಕವನ್ನು ಪಡೆಯುವನು. ಅಂದಮೇಲೆ ನನ್ನ

ತಸ್ಮಾದನ್ವಹಮರ್ಚನೀಯಮಮಲಂ ಶ್ರೀಭಾವಲಿಂಗಂ ಗಣೈಃ
ಆರಾಧ್ಯಂ ತದನನ್ಯಸಕ್ತಮನಸಾ ಸಂತ್ಯಜ್ಯ ಧರ್ಮಾಂತರಂ ॥೨೦೦॥

ಕಿಂ ತೈರಧ್ವರಕೋಟಿಭಿರ್ಬಹುವಿಧದ್ರವ್ಯೋಪಹಾರೋದ್ಯತೈಃ
ದಾನೈಸ್ಸಾಂಗಪದಕ್ರಮಾದಿಸಹಿತೈಃ ಕಿಂ ವೇದಪಾರಾಯಣೈಃ ।
ಕಿಂ ಯೋಗೈಸ್ತಪಸಾಪಿ ಕಿಂ ತು ಸಕೃದಪ್ಯಶ್ರದ್ಧಯಾಪ್ಯರ್ಚಿತಂ
ದಾಸ್ಯತ್ಯೇವ ಹಿ ಭಾವಲಿಂಗಮಮರಾಪ್ರಾಪ್ಯಾನಿ ಭಾಗ್ಯಾನ್ಯಪಿ ॥೨೦೧॥

ಶ್ರೀಮೃತ್ಯುಂಜಯ ಭಾವಲಿಂಗನಿಲಯಾಪಾಯಾಮಯಾನಾಂ ಲಯಃ
ತ್ವನ್ನಾಮಸ್ಮರಣೋದ್ಯಮೇ ಸತಿ ಪರಂ ಮುಕ್ತೇಃ ಕುತಸ್ತದ್ಭಯಂ ।
ನ ಸ್ವಪ್ನೇ ಪ್ರಲಯೇಽಪಿ ನಾಪಿ ಮರಣೇಽಪ್ಯಸ್ಯಾಂತಕಾದ್ವಾಭಯಂ
ತೇನೇತ್ಥಂ ದೃಢನಿಶ್ಚಯೇ ಸತಿ ಫಲಂ ಕಿಂ ನಾಮಸಂಕೀರ್ತನೇ ॥೨೦೨॥

---

ಪೂಜೆಯಲ್ಲಿಯೇ ನಿರತನಾದರೆ ಅಂಥವನ ವಿಚಾರದಲ್ಲಿ ಹೇಳತಕ್ಕದ್ದೇನಿದೆ? ಆತನಿಗೆ ದೊರೆಯಲಾರದುದು ಏನೂ ಉಳಿಯುವುದಿಲ್ಲ. ಆದುದರಿಂದ ಹೇಗೇ ಆದರೂ ಎಷ್ಟೇ ಕಷ್ಟವಾದರೂ ಭಾವಲಿಂಗವನ್ನು ಪೂಜಿಸಬೇಕು. ಸಕಲ ಪರಿವಾರ ಸಮೇತ ನಾಗಿ ಸಕಲ ಸಂಭಾರಗಳಿಂದ ಅನನ್ಯಮನಸ್ಕನಾಗಿ, ಬೇರೆ ಧರ್ಮಗಳನ್ನೆಲ್ಲಾ ಬಿಟ್ಟು ಭಾವಲಿಂಗವನ್ನೇ ಸೇವಿಸಬೇಕು. ಇದೇ ಮುಕ್ತಿಪ್ರದ. ॥೨೦೦॥

ಆ ವೇದವಿಹಿತವಾದ ಯಜ್ಞಯಾಗಾದಿಗಳಿಂದ ಯಾವ ಫಲ ಲಭಿಸುವುದು? ಕೇವಲ ಅತ್ಯಂತ ಶರೀರಶ್ರಮವೂ ಅಪಾರ ಧನವ್ಯಯವೂ ಮಾತ್ರ ಆಗುತ್ತದೆ. ಫಲಮಾತ್ರ ಅಲ್ಪವೇ. ಹಾಗೆಯೇ ವೇದಪಾರಾಯಣ ಮಾಡುವುದು ಎಷ್ಟು ಶ್ರಮ? ಆ ವೇದದ ಜೊತೆಗೆ ವೇದಾಂಗಗಳನ್ನೂ ಪದಕ್ರಮಗಳನ್ನೂ ಪಾರಾಯಣ ಮಾಡಿದರೂ ಎಲ್ಲಿಯೋ ಸ್ವಲ್ಪವೇ ಫಲ ದೊರೆಯುವುದು. ಹಾಗೆಯೇ ಆ ದಾನ ತಪಸ್ಸು ಮತ್ತು ಯೋಗಾಭ್ಯಾಸ ಇವುಗಳಿಂದ ಬರುವ ಪ್ರಯೋಜನವೇನು? ಆಗುವುದಾದರೂ ಏನು? ಇವು ಯಾವುವೂ ಬೇಕಾಗಿಲ್ಲ. ಕೇವಲ ಭಾವಲಿಂಗವನ್ನು ಭಕ್ತಿಯಿಂದ ಒಂದೇ ಒಂದುಬಾರಿ ಅರ್ಚಿಸಿದರೆ ಅದು ದೇವತೆಗಳಿಗೂ ದುರ್ಲಭವಾದ ಅಪಾರ ಭಾಗ್ಯಗಳನ್ನು ಕೊಡುವುದು. ॥೨೦೧॥

ಓ ಭಾವಲಿಂಗಾಧಿಷ್ಠಿತನಾದ ಮೃತ್ಯುಂಜಯನೇ! ನಿನ್ನ ನಾಮಾವಳಿಯನ್ನು ಸ್ಮರಿಸಬೇಕೆಂಬ ಸಂಕಲ್ಪ ಮಾಡಿದ ಕೂಡಲೇ ಸಕಲ ಅಪಾಯಗಳೂ ರೋಗಗಳೂ

ಭೋಃ ಶಂಭೋ ಭವ ಭಾವಲಿಂಗನಿಲಯ ತ್ವತ್ಪೂಜನೋದ್ಯೋಗಿನಂ
ಲಕ್ಷ್ಮೀಸ್ತಾವದುಪೇತ್ಯ ಕಿಂ ತವ ಮತಂ ವಾಂಛಾಸ್ತಿ ತೇ ಕುತ್ರ ವಾ ।
ಆಕ್ಲೇಶಾಂಗಣರಿಂಖಣಪ್ರಣತಿಭಿಃ ಸ್ಥೇಯಂ ಮಯಾ ತ್ವದ್ಗೃಹೇ
ಸ್ವಾಮಿನ್ನಿತ್ಯವಧಾವತೀತಿ ಭಗವನ್ ಕಿಂ ಕಿಂ ಫಲಂ ಪೂಜನೇ ॥೨೦೩॥

ತತ್ಪೂಜಾನಿರತಾತಿಶಾಂಕರಪುರದ್ವಾರೇಷು ತಾವತ್ಸುರಾಃ
ಸಾನಂದಾಂಜಲಿಮಸ್ತಕಾಃ ಪ್ರತಿದಿನಂ ತದ್ದರ್ಶನಾಕಾಂಕ್ಷಯಾ ।
ತಿಷ್ಠಂತ್ಯತ್ರ ಕಿಮದ್ಭುತಂ ತ್ವಯಿ ಮಹಾದೇವೇ ಪ್ರಸನ್ನೇ ಫಲಂ
ಕಿಂ ಕಿಂ ನಾಸ್ಯ ಭವಿಷ್ಯತಿ ಪ್ರತಿದಿನಂ ಶ್ರೀಭಾವಲಿಂಗಾಲಯೇ ॥೨೦೪॥

---

ನಾಶಹೊಂದುವುವು. ಈ ಸಂಸಾರ ಬಂಧನವೇ ಕಳಚಿಹೋಗುವುದು. ಅಂದಮೇಲೆ ಈ ಮೃತ್ಯುವಿನಿಂದ ಭಯ ಹೇಗೆ ಸಂಭವಿಸೀತು ? ಆ ಭಯವೇ ಇರುವುದಿಲ್ಲ. ಸ್ವಪ್ನ ಕಾಲದಲ್ಲಿ, ಜಾಗೃತಿಯ ಅವಸ್ಥೆಯಲ್ಲಿ, ಮರಣಕಾಲದಲ್ಲಿ, ಪ್ರಲಯಕಾಲದಲ್ಲಿ ಸಹ ಆ ಮೃತ್ಯುವಿನ ಭಯವು ಸಂಭವಿಸುವುದಿಲ್ಲ. ಹೀಗಿರಲು ನಿನ್ನ ನಾಮಾವಳಿಯನ್ನು ಭಕ್ತಿಯಿಂದ ಸಂಕೀರ್ತನೆ ಮಾಡಿದರೆ ಇನ್ನು ಯಾವುದರ ಭಯತಾನೇ ಉಳಿಯು ವುದು ? ಅಲಭ್ಯವಾದದ್ದು ತಾನೆ ಮತ್ತಾವುದು ? ||೨೦೨||

ಓ ಭಾವಲಿಂಗವಾಸಿಯಾದ ಶಂಭೊ! ನಿನ್ನನ್ನು ಆರಾಧಿಸಬೇಕೆಂದು ಪ್ರವೃತ್ತಿಸಿದವನನ್ನೇ ಕೂಡಲೇ ಲಕ್ಷ್ಮಿಯು ಹೋಗಿ ಸೇರುವಳು. ಮತ್ತು "ನಿನಗೆ ಏನೇನು ಬೇಕು ? ನಿನಗೆ ಯಾವುದರಲ್ಲಿ ಅಪೇಕ್ಷೆ ಇದೆ ? ನಾನು ನಿನಗೆ ಎಲ್ಲವನ್ನೂ ಒದಗಿಸಿ ಕೊಡಲು ಸಿದ್ಧಳಾಗಿದ್ದೇನೆ. ಅಪ್ಪಣೆ ಆಗಲಿ" ಹೀಗೆಂದು ಲಕ್ಷ್ಮಿಯು ಆತ್ಮಾದರದಿಂದ ಆ ಪೂಜೋದ್ಯೋಗಿಯ ಮನೆಯಲ್ಲಿಯೂ ಅಂಗಳದಲ್ಲಿಯೂ ಕೈಕಾಲುಗಳಿಗೆ ಬಿದ್ದುಬಿದ್ದು ಕೇಳುವಳು. ಮತ್ತು ಆತನ ಮನೆಯಲ್ಲಿಯೇ ನೆಲೆಸಿ ಯಾವಾಗಲೂ ಆತನ ಉಪಚಾರದಲ್ಲಿಯೇ ಸಂಭ್ರಮದಿಂದ ಓಡಾಡುತ್ತಿರುವಳು. ಹೀಗಿರಬೇಕಾದರೆ ನಿನ್ನನ್ನು ಭಕ್ತಿಯಿಂದ ಪ್ರಶಸ್ತವಾಗಿ ಪೂಜಿಸಿಯೇ ಬಿಟ್ಟರೆ ಮತ್ತೇನೇನು ಫಲಗಳು ದೊರೆಯಲಾರವು ? ||೨೦೩||

ಭಾವಲಿಂಗದ ಆರಾಧನೆಯಲ್ಲಿ ನಿರತನಾದ ಮಾತ್ರದಿಂದಲೇ ಆ ಭಕ್ತನ ಮನೆಯ ಬಾಗಿಲಿನಲ್ಲಿ ದೇವತೆಗಳು ಆತನ ದರ್ಶನಮಾಡಬೇಕೆಂದು ಕೈಮುಗಿದು ಕೊಂಡು ಪ್ರತಿದಿನವೂ ಕಾದುಕೊಂಡು ನಿಂತಿರುತ್ತಾರೆ. ಹೀಗಿರಲು ಭಾವಲಿಂಗಾಲಯ

**ಆಶಾಸ್ಯಂ ಮಮ ಭಾವಲಿಂಗ ಸಕಲಂ ಸಿದ್ಧಂ ತ್ವದನ್ಯಾಶ್ರಯ**
**ವ್ಯಾವೃತ್ತಂ ಯದಿ ಮಾನಸಂ ತದಿತಿ ತೇ ಧ್ಯಾನೇನ ಕಿಂ ಪೂಜಯಾ ।**
**ಕಿಂ ವಾ ತ್ವತ್ಪರಿಚರ್ಯಯಾಪಿ ಫಲಮಿತ್ಯಸ್ಮಿನ್ ವಿಚಾರೇ ಕೃತೇ**
**ತಾವದ್ವ್ಯಾಕುಲತಾ ನ ತೇ ಭವತು ಸಾ ತ್ಯಾಜ್ಯೇತಿ ಸಂಪ್ರಾರ್ಥ್ಯತೇ ॥೨೦೫॥**

**ಏತಾವದ್ಭವ ಭಾವಲಿಂಗನಿಲಯ ಸ್ವಾಮಿನ್ ಮಮಾದ್ಯಾವಧಿ**
**ತ್ವತ್ಪಾದಾಂಬುರುಹಾನ್ಯಚಿಂತನಪರಾವೃತ್ತಂ ವಿಕಾರೈರ್ವಿನಾ ।**
**ಚೇತಸ್ತತ್ಪುರುಷಾರ್ಥಭಿನ್ನಮಪಿ ತೇ ದೇಯಂ ಮಮಾಸ್ತ್ವಿತ್ಯಪಿ**
**ಪ್ರತ್ಯಾಶಾ ಶಿವಪೂಜನಸ್ಯ ಫಲಮಸ್ತ್ವನ್ಯನ್ಮಮ ಸ್ಯಾದಿತಿ ॥೨೦೬॥**

---

ನಾದ ನೀನು ಭಕ್ತನಮೇಲೆ ಪ್ರಸನ್ನನೇ ಆದರೆ ಮತ್ತೇನು ಹೇಳುವುದು? ಆ ಭಕ್ತನ ಭಾಗ್ಯವು ಎಷ್ಟೆಂದು ಹೇಳುವುದು? ಆತನಿಗೆ ಅಸಾಧ್ಯವಾದುದು ಅಲಭ್ಯವಾದುದು ಉಳಿಯುವುದೇ? ॥೨೦೪॥

ಓ ಭಾವಲಿಂಗೇಶ್ವರನೇ! ನಿನ್ನ ದಿವ್ಯಾಶ್ರಯ ಮಹಿಮೆಯಿಂದ ನನಗೆ ಬೇಕಾದ ಎಲ್ಲಾ ಇಷ್ಟಾರ್ಥಗಳೂ ದೊರಕಿಯೇ ಇರುತ್ತವೆ. ನನ್ನ ಮನಸ್ಸಾದರೋ ನಿನ್ನನ್ನು ಬಿಟ್ಟು ಬೇರೆ ಯಾರಲ್ಲಿಯೂ ನಿಲ್ಲುವುದೇ ಇಲ್ಲ. ನಿನ್ನಲ್ಲಿಯೇ ಅದು ಲೀನವಾಗಿರುತ್ತದೆ. ಹೀಗಿರಲು ನಾನು ಮತ್ತೆ ಏತಕ್ಕೆ ನಿನ್ನನ್ನು ಪ್ರತ್ಯೇಕ ಧ್ಯಾನ ಮಾಡುವುದು? ಆಡಂಬರಕ್ಕಾಗಿ ಪೂಜಿಸುವುದು ಏಕೆ? ಸೇವಾ ಶುಶ್ರೂಷೆಯು ಕೇವಲ ವಿಡಂಬನಾಸ್ಪದವೇ ಆಗಿರುವುದಲ್ಲವೇ? ಆದುದರಿಂದ ಈ ನನ್ನ ಸಕಲ ಆರಾಧನೆಗಳಿಗೂ ಯಾವ ಫಲವನ್ನು ಕೊಡಬೇಕೆಂದು ನೀನು ಯೋಚನೆಗೊಳಗಾಗ ಬೇಡ. ನನಗೆ ಏನೂ ಬೇಕಾಗಿರುವುದಿಲ್ಲ. ನಿನಗೆ ನನ್ನ ವಿಚಾರವಾಗಿ ಚಿಂತೆಯು ಆಗಬಾರದೆಂದೇ ನನ್ನ ಪ್ರಾರ್ಥನೆ. ಆ ಚಿಂತೆಯನ್ನು ಬಿಟ್ಟುಬಿಡಬೇಕು. ॥೨೦೫॥

ಓ ಭಾವಲಿಂಗೇಶನೇ! ಇಷ್ಟೊಂದು ಮಾತ್ರ ಅನುಗ್ರಹಿಸು. ಇಷ್ಟು ದಿವಸದ ವರೆಗೂ ನನ್ನ ಮನಸ್ಸು ನಿನ್ನ ಚರಣಕಮಲಗಳನ್ನು ಬಿಟ್ಟು ಬೇರೆ ಯಾವ ಹವ್ಯಾಸಗಳಿಗೂ ಒಳಗಾಗದೇ, ಸಕಲ ರಾಗವಿರಾಗಗಳನ್ನೂ ಬಿಟ್ಟು ನಿನ್ನನ್ನೇ ಆರಾಧಿಸುತ್ತಿದೆ. ಈಗ ನನಗೆ ಯಾವ ಪುರುಷಾರ್ಥದಲ್ಲಿಯೂ ಅಪೇಕ್ಷೆ ಇರು ವುದಿಲ್ಲ. ಈ ಪುರುಷಾರ್ಥಗಳಿಂದ ಬೇರೆಯಾದ ಫಲವೇ ನನಗೆ ಅಪೇಕ್ಷಿತವಾದದ್ದು. ಅದನ್ನೇ ನೀನು ಕೊಡಬೇಕಾದುದು. ಅದೇ ನಿನ್ನ ಸಾನ್ನಿಧ್ಯ. ತದಂಗವಾಗಿರುವ

**ಕಿಂ ನಮ್ರಾಮರಭೂರುಹೈ ರ್ನಿಜಗೃಹದ್ವಾರಾಶ್ರಿತೈರಾಶ್ರಿತೈಃ**
**ಕಿಂ ಚಿಂತಾಮಣಿ ಕಾಮಧೇನುನಿವಹೈಃ ಕಿಂ ವಾ ನಿಧೀನಾಂ ಗಣೈಃ ।**
**ಆಕಲ್ಪಂ ಕಮಲಾಪತಿಪ್ರಭೃತಿಭಿರ್ವೃಂದಾರಕೈರಾಶ್ರಿತೈಃ**
**ಆನಮ್ರಾಂಜಲಿಮಸ್ತಕೈರನುದಿನಂ ಶ್ರೀಭಾವಲಿಂಗಾರ್ಚನೇ ॥೨೦೭॥**

**ಇತಿ ಸ್ತುತ್ವಾ ಮುಹುರ್ಭಕ್ತ್ಯಾ ಭಾವಲಿಂಗಾಲಯಂ ಪ್ರಭುಂ ।**
**ಕೃತಾಂಜಲಿಪುಟೋ ನಿತ್ಯಂ ತತ್ಪೂಜಾನಿರತೋ ಭವೇತ್ ॥೨೦೮॥**

**ಪುನಃ ಪುನಸ್ತದ್ಗುಣವರ್ಣನೇನ**
**ಕಾಲಂ ನಯನ್ ಕಾಲಭಯಂ ವಿಹಾಯ ।**

---

ಇದೇ ಶಿವಪೂಜೆಯನ್ನೇ ನಡೆಸುವ ಅವಕಾಶವನ್ನು ನನಗೆ ಶಾಶ್ವತವಾಗಿ ನೀನು ಅನುಗ್ರಹಿಸು. ||೨೦೬||

ಸರ್ವಕಾಲದಲ್ಲಿಯೂ ಭಾವಲಿಂಗವನ್ನೇ ಆರಾಧನೆಮಾಡುವವನಿಗೆ ಮತ್ತೇನು ಬೇಕು? ಅಪೇಕ್ಷಿತವಾದದ್ದಾರೂ ಏನು? ಆ ಭಕ್ತನಿಗೆ ಯಾವುದರಿಂದ ಏನು ಪ್ರಯೋಜನ? ಒಂದುವೇಳೆ ದೇವತರುವಾದ ಕಲ್ಪವೃಕ್ಷವು ಮನೆಯಬಾಗಿಲಲ್ಲೇ ಇರಬಹುದು. ಚಿಂತಾಮಣಿ, ಕಾಮಧೇನು, ನವನಿಧಿಗಳು ಎಲ್ಲವೂ ಇದ್ದು ಸದಾ ಬೇಕಾದ್ದನ್ನು ಕೊಡಬಹುದು. ಆದರೆ ಶಿವಭಕ್ತನಿಗೆ ಏನೂ ಬೇಕಾಗಿರುವುದಿಲ್ಲ. ಆದುದರಿಂದ ಆ ಕಲ್ಪವೃಕ್ಷವೇ ಮೊದಲಾದವುಗಳಿಂದ ಅವನಿಗೆ ಪ್ರಯೋಜನವಿಲ್ಲ? ಹಾಗೆಯೇ ಶಿವಭಕ್ತನನ್ನು ಶ್ರೀಪತಿಯೇ ಮೊದಲಾದ ಸಕಲ ದೇವತೆಗಳೂ ಕಲ್ಪಾಂತ್ಯದವರೆಗೂ ಕೈಕಟ್ಟಿಕೊಂಡು ಆಶ್ರಯಿಸುತ್ತಾರೆ. ಆದರೆ ಶಿವಭಕ್ತನಿಗೆ ಅವರಿಂದಲೂ ಪ್ರಯೋಜನವಿಲ್ಲ? ಆತನಿಗೆ ಬೇಕಾದದ್ದು ಶಿವಾರಾಧನೆ ಒಂದೇ. ಅದನ್ನು ಆ ದೇವತೆಗಳು ಕೊಡಲಾರರು. ||೨೦೭||

ಶಿವಭಕ್ತನು ಪೂರ್ವೋಕ್ತರೀತಿಯಲ್ಲಿ ಭಾವಲಿಂಗನಿಲಯನಾದ ಪರಮೇಶ್ವರನನ್ನು ಭಕ್ತಿಯಿಂದ ಸ್ತೋತ್ರಮಾಡುವನು. ವಿನಯಾದರಗಳಿಂದ ಅಂಜಲಿಬದ್ಧನಾಗಿ ನಮಸ್ಕರಿಸುವನು. ಮತ್ತೆ ಸದಾ ಶಿವಪೂಜೆಯಲ್ಲಿಯೇ ನಿರತನಾಗುವನು. ||೨೦೮||

ಶಿವಭಕ್ತನು ಆ ಪರಮೇಶ್ವರನ ಗುಣವನ್ನೂ ಮಹಿಮೆಯನ್ನೂ ವರ್ಣಿಸಿ ಸ್ತುತಿಸುತ್ತಲೇ ಕಾಲವನ್ನು ಕಳೆಯುತ್ತಾನೆ. ಆತನಿಗೆ ಜನನ, ಮೃತ್ಯುಗಳ ಭಯವೇ

ತಂ ಕಾಲಕಾಲಂ ವಿಮಲಂ ಸಲೀಲಂ
ಪಶ್ಯನ್ಮುಹುಃ ಸ್ಥಾಸ್ಯತಿ ತತ್ಸಮೀಪೇ ॥೨೦೯॥

ತ್ಯಜ ತ್ಯಜ ತಟನ್ನಟೀವಿಟವಧೂಟಿಕಾಚೇಟಿಕಾ
ವಿಕಾರಕರಮಿಂದಿರಾರುಚಿರಭೂವಿಹಾರಂ ಪರಂ ।
ಭಜಾಶು ಭಜ ಧೂರ್ಜಟಿಂ ಸ್ಫುಟಕೃಪೀಟಯೋನಿಸ್ಫುರ
ಲ್ಲಲಾಟಪಟಲಪ್ರಭಾಸಮಭಿಭೂತಭಾನುಪ್ರಭಂ ॥೨೧೦॥

ಇತಿ ಶ್ರೀಶಿವರಹಸ್ಯೇ ತೃತೀಯಾಂಶೇ ಹರಾಖ್ಯೇ ಪೂರ್ವಾರ್ಧೇ
ಋಷಿಗೌತಮಸಂವಾದೇ ತೀರ್ಥೇಶ್ವರ ಭಾವಲಿಂಗಮಹಿಮಾನುವರ್ಣನಂ
ನಾಮ ಷಟ್‌ತ್ರಿಂಶೋಽಧ್ಯಾಯಃ

---

ಇರುವುದಿಲ್ಲ. ಆ ಮಹಾಮೃತ್ಯುವಿಗೂ ಮೃತ್ಯುವಾದ ಮೃತ್ಯುಂಜಯನನ್ನೇ ದರ್ಶನ ಮಾಡುತ್ತಾ ಭಕ್ತಿಯಿಂದ ಸ್ತೋತ್ರಮಾಡುತ್ತಾ ಆತನ ಸಮೀಪದಲ್ಲಿಯೇ ಕುಳಿತುಕೊಂಡಿರುತ್ತಾನೆ. ॥೨೦೯॥

ಐಶ್ವರ್ಯವೂ ಭೂಮಿಕಾಣಿಯೂ ಮಹಾಬಂಧನಕಾರಿಯಾದದ್ದು. ಇವು ವಿದ್ಯುನ್ನಟಿಯಂತೆ ಚಂಚಲವಾಗಿಯೂ, ಯುವತಿಯಾದ ಚೇಟಿಯಂತೆ ವಿಕಾರಾಸ್ಪದಪ್ರದವೂ ಆಗಿರುತ್ತವೆ. ಆದುದರಿಂದ ಇವುಗಳನ್ನು ತ್ಯಾಗಮಾಡು. ಇವುಗಳಲ್ಲಿ ಮೋಹಗೊಳ್ಳಬೇಡ. ಆ ಪರಮೇಶ್ವರನನ್ನು ಭಜಿಸು. ಆತನು ಮಹಾಮಹಿಮಾಶಾಲಿಯು, ದೇವದೇವನೂ ಆಗಿದ್ದಾನೆ. ಆತನ ಲಲಾಟಪ್ರದೇಶದಲ್ಲಿ ಅಗ್ನಿಯು ದೇದೀಪ್ಯಮಾನನಾಗಿದ್ದಾನೆ. ಆತನ ಪ್ರಭೆಯಿಂದ ಸೂರ್ಯನೂ ಸಹ ನಾಚುತ್ತಾನೆ. ಆ ಪರಮೇಶ್ವರನೇ ಪರದೈವವೆನಿಸಿರುವನು. ಆದುದರಿಂದ ಇತರ ಹವ್ಯಾಸಗಳನ್ನು ಬಿಟ್ಟು ಆತನನ್ನೆ ಆಶ್ರಯಿಸಿ ಆರಾಧಿಸು. ॥೨೧೦॥

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಭಾಗದ ಪೂರ್ವಾರ್ಧದಲ್ಲಿ
ಮೂವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಸಪ್ತತ್ರಿಂಶೋಽಧ್ಯಾಯಃ

॥ ನಾರದ ಉವಾಚ ॥

**ಇತಿ ತದ್ವಚನಂ ಶ್ರುತ್ವಾ ಗೌತಮಂ ಮುನಿಪುಂಗವಂ ।**
**ಪುನರೂಚುಃ ಪ್ರಹೃಷ್ಟಾಸ್ತೇ ಭಾವಲಿಂಗಮಹೋತ್ಸವಂ ॥೧॥**

॥ ಋಷಯ ಊಚುಃ ॥

**ಸ್ವಾಮಿನ್ ತೀರ್ಥೇಶನಿರ್ಮಾಲ್ಯಚಂದನಾರಾಧನೇ ಮತಿಃ ।**
**ಕಥಂ ತಸ್ಯಾಭವತ್ತತ್ರ ಲಿಂಗಬುದ್ಧಿರಭೂನ್ಮನೇ ॥೨॥**

---

## ಮೂವತ್ತೇಳನೆಯ ಅಧ್ಯಾಯ

ಮುನಿಶ್ರೇಷ್ಠನಾದ ಗೌತಮನ ಮಾತನ್ನು ಕೇಳಿ, ಆ ಋಷಿಗಳೆಲ್ಲಾ ಬಹಳ ಸಂತೋಷ ಹೊಂದಿದರಲ್ಲದೆ, ಮತ್ತೂ ಆ ಭಾವಲಿಂಗ ಮಹಿಮೆಯನ್ನು ಹೇಳಬೇಕೆಂದು ಆ ಗೌತಮನನ್ನು ಕೇಳಿಕೊಂಡರು. ॥೧॥

ಸ್ವಾಮಿನ್, ಗೌತಮಮಹರ್ಷಿಯೇ, ಆ ಭಕ್ತನಿಗೆ ಪೂಜೆಮಾಡಬೇಕೆಂಬ ಬುದ್ಧಿಯು ಹೇಗೆ ಹುಟ್ಟಿತು? ಆ ತೀರ್ಥೇಶ್ವರನ ನಿರ್ಮಾಲ್ಯವಾದ ಚಂದನವು ಭಾವಲಿಂಗವೆಂದು ಆತನಿಗೆ ಹೇಗೆ ಗೊತ್ತಾಯಿತು? ಈ ವಿಚಾರವನ್ನು ನಮಗೆ ಹೇಳಬೇಕೆಂದು ಆ ಋಷಿಗಳು ಗೌತಮನನ್ನು ಬಾರಿಬಾರಿಗೂ ಪ್ರಾರ್ಥಿಸಿದರು. ॥೨॥

|| ಗೌತಮ ಉವಾಚ ||

ವಿಶ್ವಾಸೋ ಯತ್ರ ಭಕ್ತಸ್ಯ ಯತ್ರ ಪೂಜ್ಯತ್ವಧೀರಪಿ ।
ತದೇವ ಲಿಂಗಂ ತತ್ಪೂಜಾ ಸರ್ವಸಿದ್ಧಿಪ್ರದಾ ಭವೇತ್ ||೩||

ಯದೇವ ಲಿಂಗಸಂಬಂಧಘನಚಂದನಗೋಲಕೈಃ ।
ತತ್ರಾರ್ಪಿತಂ ಬಿಲ್ವಪತ್ರಂ ಭುಕ್ತಿಮುಕ್ತಿಪ್ರದಂ ನ ಕಿಂ ||೪||

ಅನುಲಿಪ್ತಂ ಚಂದನಾದ್ಯೈರ್ಲಿಂಗಮಭ್ಯರ್ಚಯೇದಿತಿ ।
ಶ್ರುತಿಶ್ಚಂದನಸಂಬಂಧಾನ್ನ ದೂರೀಕರ್ತುಮಿಚ್ಛತಿ ||೫||

ಸಮರ್ಪಿತೇಷು ಪುಷ್ಪೇಷು ಪುನಃ ಪುಷ್ಪಸಮರ್ಪಣಂ ।
ಪುಷ್ಪೇಷು ಕ್ರಿಯತೇ ತೇಷು ಪುನಃ ಪುಷ್ಪಸಮರ್ಪಣಂ ||೬||

---

ಎಲೈ ಋಷಿಗಳಿರಾ, ಶಿವಭಕ್ತನಿಗೆ ಹೇಳಿಕೊಡಬೇಕಾದದ್ದು ಏನಿದೆ? ಆತನಿಗೆ ಎಲ್ಲಿ ಯಾವುದಕ್ಕೆ ಪೂಜೆಮಾಡಬೇಕೆಂದು ಮನಸ್ಸಾಗುವುದೋ, ನಂಬಿಕೆ ಹುಟ್ಟುವುದೋ ಅದೇ ಲಿಂಗವಾಗುವುದು. ಆ ಪೂಜೆಯೇ ಸಕಲವಾದ ಇಷ್ಟಾರ್ಥಗಳನ್ನೂ ಪೂರೈಸಿಕೊಡುವುದು. ||೩||

ಯಾವ ಚಂದನವು ಶ್ರೀತೀರ್ಥೇಶ್ವರಲಿಂಗದ ಸಂಬಂಧವನ್ನು ಪಡೆದುಕೊಂಡು ಅನಂತರ ಘನೀಭೂತವಾಗಿ ಗೋಲಾಕಾರವಾಗಿರುವುದೋ ಅದು ಲಿಂಗವಲ್ಲದೇ ಮತ್ತೇನು? ಅಂಥ ಲಿಂಗದಲ್ಲಿ ಬಿಲ್ವದಳವನ್ನು ಅರ್ಪಿಸಿದರೆ ಐಹಿಕವಾದ ಅಶನವಸನಗಳೂ, ಆಮುಷ್ಮಿಕಫಲವಾದ ಮೋಕ್ಷವೂ ದೊರೆಯದೇ ಇರುತ್ತದೆಯೇ? ||೪||

ಚಂದನವೇ ಮೊದಲಾದವುಗಳಿಂದ ಅಲಂಕೃತವಾದ ಲಿಂಗವನ್ನು ಪೂಜಿಸಬೇಕೆಂಬ ವಿಧಿ ಇರುವುದರಿಂದ, ಚಂದನಮಯವಾದ ಲಿಂಗಕ್ಕೆ ಪೂಜೆಮಾಡಬಾರದೆಂದು ಎಲ್ಲಿಯೂ ನಿಷೇಧವಿರುವುದಿಲ್ಲ. ಪ್ರತ್ಯುತ ಇದೇ ಶ್ರುತಿಯು ವಿಧಿಯನ್ನೂ ಸಹ ಮಾಡುತ್ತದೆ. ||೫||

ಲಿಂಗಕ್ಕೆ ಮೊದಲೇ ಪುಷ್ಪವನ್ನು ಸಮರ್ಪಿಸಿದ್ದರೂ ಮೇಲಿನ ವಿಧಿಯಿಂದ ಪುನಃ ಪುಷ್ಪಪೂಜೆಯನ್ನು ಮಾಡಬೇಕು. ಈ ಪೂಜೆಯು ಮೊದಲು ಅರ್ಪಿತವಾದ ಪುಷ್ಪಗಳಮೇಲೆಯೇ ಆಗಿ ಆಗ ಪುಷ್ಪಲಿಂಗವೆನಿಸುವುದು. ಪೂಜಿತವಾದ

ಭಾವಲಿಂಗಂ ತು ಭಾವೇನ ಶುದ್ಧಭಾವೇನ ನಿರ್ಮಿತಂ ।
ತತ್ರಾರ್ಚನಂ ಕೃತಂ ತೇನ ಸ್ವಸಿದ್ಧ್ಯೈಸ್ತದ್ಭವಿಷ್ಯತಿ ॥೭॥

ತತಸ್ತದ್ಭಾವಲಿಂಗಸ್ಯ ಭಾವಪೂತಾರ್ಚನೇನ ತು ।
ಭವತ್ಯೇವ ಮಹದ್ಭಾಗ್ಯಂ ಸ್ವಸ್ವಭಾವಾನುರೋಧತಃ ॥೮॥

ತದ್ಭಾವಲಿಂಗೇ ದೃಷ್ಟೇಽಪಿ ತುಷ್ಟಿವೃಷ್ಟಿರ್ಭವಿಷ್ಯತಿ ।
ತೀರ್ಥೇಶಲಿಂಗನಿರ್ಮಾಲ್ಯಂ ಚಂದನಂ ಚ ಸಮರ್ಪಿತಂ ॥೯॥

ತದಾತಿಸಿದ್ಧಿಂ ತಲ್ಲಿಂಗಂ ತೀರ್ಥೇಶಾಧಿಷ್ಠಿತಂ ಯತಃ ।
ತೀರ್ಥೇಶ್ವರಾಭಿಮಾನಸ್ತು ಸ್ವನಿರ್ಮಾಲ್ಯೇಽಪ್ಯವಿಚ್ಯುತಃ ॥೧೦॥

---

ದ್ದೆಂದು ಅದಕ್ಕೇನೂ ನ್ಯೂನತೆ ಉಂಟಾಗುವುದಿಲ್ಲ. ಕಿಂತು ಪೂಜಾರ್ಹವೇ ಅಲ್ಲವೆ? ॥೬॥

ಮೇಲೆ ಹೇಳಿದ ಯುಕ್ತಿಯಿಂದ ನಿರ್ಮಾಲ್ಯವೂ ಪೂಜಾರ್ಹವಾಗಿರಲು ಇನ್ನು ಭಾವಲಿಂಗದ ವಿಚಾರ ಹೇಳುವುದೇನು? ಅದು ಸ್ವತಃ ಪರಮ ಪವಿತ್ರವಾದುದು. ಭಕ್ತನು ಕೇವಲ ತನ್ನ ಭಾವನೆಯಿಂದ ಲಿಂಗವನ್ನು ನಿರ್ಮಿಸುವನು. ಮತ್ತು ಅದಕ್ಕೆ ಪೂಜೆಮಾಡುವನು. ಆ ಭಾವಲಿಂಗವು ಭಕ್ತನ ಸಿದ್ಧಿಯನ್ನು ಬೆಳೆಸಿಕೊಡುವುದು. ॥೭॥

ಹೀಗೆ ಭಾವಶುದ್ಧಿಯಿಂದ ನಿರ್ಮಿತವಾದ ಭಾವಲಿಂಗವನ್ನು ಭಾವಶುದ್ಧತೆಯಿಂದ ಪೂಜಿಸಿದರೆ ಮಹತ್ತರವಾದ ಭಾಗ್ಯಗಳೂ ದೊರೆಯುವುವು. ಅಂದರೆ ಈ ಭಾಗ್ಯಗಳು ಆಯಾಯಾ ಭಕ್ತನ ಭಾವಗಳ ಮಟ್ಟಕ್ಕೆ ತಕ್ಕಂತೆ ಇರುತ್ತವೆ. ॥೮॥

ತೀರ್ಥೇಶಲಿಂಗದ ನಿರ್ಮಾಲ್ಯವು ಚಂದನವಾಗಿದ್ದರೂ, ಭಕ್ತನ ದೃಢನಂಬಿಕೆಯಂತೆ ಭಾವನೆಯಂತೆ ಅದೂ ಭಾವಲಿಂಗವಾಗುವುದು. ಅಲ್ಲದೇ ಆ ಲಿಂಗದಲ್ಲಿ ತೀರ್ಥೇಶ್ವರಲಿಂಗದ ಸನ್ನಿಧಿಯೇ ಇರುವುದೆಂದು ನಂಬಿರುವುದರಿಂದ ತೀರ್ಥೇಶನ ಸಾನ್ನಿಧ್ಯವೂ ಅದರಲ್ಲಿ ಇದ್ದೇ ಇರುವುದು. ಆದುದರಿಂದ ಈ ಲಿಂಗಕ್ಕೆ ಪೂಜೆ ಮಾಡುವುದರಿಂದಲೂ ದರ್ಶನಮಾಡುವುದರಿಂದಲೂ ಆನಂದದ ವೃಷ್ಟಿಯೇ ಆಗುವುದು. ಪರಮ ಸಿದ್ಧಿಯೂ ಲಭಿಸುವುದು. ॥೯-೧೦॥

ತತಸ್ತದಭಿಮಾನಸ್ಯ ನಿಲಯಂ ಲಿಂಗಮುತ್ತಮಂ ।
ಅಸ್ಯ ದೇವಾಧಿದೇವಸ್ಯ ತೀರ್ಥೇಶಸ್ಯಾವಲೋಕನಾತ್ ॥೧೧॥

ಸ್ಮರಣಾದಪಿ ಸಿದ್ಧ್ಯಂತಿ ಫಲಾನಿ ವಿವಿಧಾನ್ಯಪಿ ।
ತೀರ್ಥೇಶನಿಕಟೇ ಯತ್ತು ತೀರ್ಥಂ ಪಾಪವಿನಾಶನಂ ॥೧೨॥

ತದೀಕ್ಷಣಾತ್ಪಾಪನಾಶೋ ನಾನಾಸಿದ್ಧಿಮವಾಪ್ನುಯಾತ್ ।
ತತ್ತೀರೆ ಯಸ್ತನುತ್ಯಾಗಂ ತೀರ್ಥೇಶಸ್ಮರಣೋತ್ಸುಕಃ ॥೧೩॥

ಕರಿಷ್ಯತಿ ಸ ಪುಣ್ಯಾತ್ಮಾ ಯಾತಿ ತೀರ್ಥೇಶರೂಪತಾಂ ।
ಇದಂ ಪಾಶುಪತಂ ಸ್ಥಾನಂ ಮಹಾಪಾಶುಪತಾಶ್ರಿತಂ ॥೧೪॥

ತತ್ರಾಧಿಕಾರಶ್ಶೈವಾನಾಂ ವಾಸೋ ನಾನ್ಯಸ್ಯ ಸರ್ವಥಾ ।
ಅತ್ರ ಪಾಶುಪತೈರ್ಮುಕ್ತಿಃ ಪ್ರಾಪ್ತಾಪೂರ್ವಂ ಮಹಾತ್ಮಭಿಃ ॥೧೫॥

---

ಇಂಥ ಪರಮ ನಂಬಿಕೆಗೆ ಆಧಾರಭೂತವಾದದ್ದು ಆ ಲಿಂಗ. ಅದು ಪರಮ ಪವಿತ್ರವಾದುದು. ಆ ತೀರ್ಥೇಶನೂ ದೇವದೇವನಾಗಿರುವನು. ಆತನ ದರ್ಶನದಿಂದಲೂ ಧ್ಯಾನದಿಂದಲೂ ವಿವಿಧವಾದ ಪುಣ್ಯಫಲಗಳು ಸಿದ್ಧಿಸುತ್ತವೆ. ॥೧೧॥

ಆ ತೀರ್ಥೇಶಲಿಂಗದ ಸಮೀಪದಲ್ಲಿ ಒಂದು ತೀರ್ಥವಿರುತ್ತದೆ. ಅದು ಬಹಳ ಪವಿತ್ರವಾದದ್ದು. ಅದರ ದರ್ಶನದಿಂದಲೇ ಸಕಲ ಪಾಪ ನಾಶವೂ ಪುಣ್ಯ ಸಿದ್ಧಿಯೂ ಆಗುವುದು. ॥೧೨॥

ಆ ತೀರ್ಥದ ತೀರಪ್ರದೇಶದಲ್ಲಿ ತೀರ್ಥೇಶ್ವರನನ್ನು ಮನಸಾ ಧ್ಯಾನ ಮಾಡುತ್ತಾ ಯಾವನು ಮೃತಿಹೊಂದುವನೋ ಅವನು ಸರ್ವಪಾಪಗಳಿಂದಲೂ ಬಿಡಲ್ಪಡುವನಲ್ಲದೇ ಸಾಕ್ಷಾತ್ ತೀರ್ಥೇಶನ ಸಾರೂಪ್ಯವನ್ನೇ ಹೊಂದುವನು. ಈ ಸ್ಥಾನವೆಂದರೆ ಸಾಮಾನ್ಯವಾದುದಲ್ಲ. ಈ ಪ್ರದೇಶದಲ್ಲಿ ಕೇವಲ ಈಶ್ವರಭಕ್ತರು ಮಾತ್ರವೇ ವಾಸಮಾಡಬಲ್ಲರು. ಇಲ್ಲಿ ಪೂರ್ಣ ಶೈವರೇ ವಾಸವಾಗಿರುವುದರಿಂದ ಮಹಾಪುಣ್ಯತಮವೆನಿಸಿರುವುದು. ॥೧೩-೧೪॥

ಇಲ್ಲಿ ವಾಸಮಾಡಲು ಕೇವಲ ಶೈವರಿಗೇ ಅಧಿಕಾರವಿರುವುದು. ಇತರರಿಗೆ ಸರ್ವಥಾ ಅಧಿಕಾರವಿಲ್ಲ. ಈ ಪ್ರದೇಶದಲ್ಲಿ ಅನೇಕ ಮಹಾತ್ಮರಾದ ಶೈವರು ಪುಣ್ಯ ಸ್ಸಂಚಯಮಾಡಿಕೊಂಡು ಮೋಕ್ಷವನ್ನು ಪಡೆದಿರುತ್ತಾರೆ. ॥೧೫॥

ಅಗ್ರೇಽಪಿ ಮುಕ್ತಿಃ ಪ್ರಾಪ್ತವ್ಯಾ ಮಹಾಪಾಶುಪತೈರಿಹ ।
ಇತಿ ತದ್ವಚನಂ ಶ್ರುತ್ವಾ ಮುನಯೋ ಹೃಷ್ಟಮಾನಸಾಃ ॥೧೬॥

ಕಿಂ ವಾ ಪ್ರತ್ಯಾಹಿಕಂ ಕರ್ಮ ದ್ವಿಜಾನಾ ಮಿತಿ ಚೋಚಿರೇ ॥೧೭॥

ಅರುಣೋದಯವೇಲಾಯಾಮುತ್ಥಾಯ ಶಿವಚಿಂತಕೈಃ ।
ದೂರೇ ಶೌಚಾದಿಕಂ ಕೃತ್ವಾ ಸ್ನಾತ್ವಾ ಪಾಪವಿನಾಶನೇ ॥೧೮॥

ಉದ್ಧೂಲ್ಯ ಭಸ್ಮನಾಂಗಾನಿ ಮಂತ್ರಪೂತೇನ ಭಸ್ಮನಾ ।
ತ್ರಿಪುಂಡ್ರಧಾರಣಂ ಕಾರ್ಯಂ ತಥಾ ರುದ್ರಾಕ್ಷಧಾರಣಂ ॥೧೯॥

ಪಶ್ಚಾದಾಚಮನಂ ಕುರ್ಯಾಚ್ಛ್ರುತಿಮಾರ್ಗೇಣ ಸಾದರಂ ।
ಶ್ರೌತಮಾರ್ಗರತಾನಾಂ ತು ಶ್ರೌತಮಾಚಮನಂ ಮತಂ ॥೨೦॥

---

ಈ ಪುಣ್ಯಪ್ರದೇಶದಲ್ಲಿ ವಾಸಮಾಡಿಕೊಂಡಿರುವ ಶೈವರೇ ಇನ್ನು ಮುಂದೆಯೂ ಮೋಕ್ಷವನ್ನು ಪಡೆಯತಕ್ಕವರು. ಅಷ್ಟು ಮಹಾಮಹಿಮಾಶಾಲಿಯಾದುದು ಈ ಪ್ರದೇಶ ಎಂದು ಗೌತಮನು ವರ್ಣನೆ ಮಾಡುತ್ತಿರಲು, ಆ ಮುನಿಗಳೆಲ್ಲರೂ ವಿಸ್ಮಿತರಾಗಿ ಔತ್ಸುಕ್ಯದಿಂದ ಮಧ್ಯೆಯೇ ಪ್ರಶ್ನೆ ಮಾಡಿದರು. " ಓ ಗೌತಮ ಮಹರ್ಷಿಯೇ! ದ್ವಿಜರು ಯಾವ ಕರ್ಮವನ್ನು ಮಾಡಿದರೆ ಮೋಕ್ಷವು ದೊರೆಯುತ್ತದೆ? ಅವರ ದೈನಂದಿನ ಕರ್ಮವು ಯಾವುದು? ಇದನ್ನು ನಮಗೆ ದಯೆಯಿಟ್ಟು ಹೇಳು." ||೧೬-೧೭||

ಮುಮುಕ್ಷುಗಳಾದ ದ್ವಿಜರು ಪ್ರತಿನಿತ್ಯವೂ ಸೂರ್ಯೋದಯಕ್ಕಿಂತಲೂ ಮುಂಚಿತವಾಗಿ ಅರುಣೋದಯ ಸಮಯದಲ್ಲಿಯೇ ಶುಭಶಿವನಾಮಗಳನ್ನು ಧ್ಯಾನ ಮಾಡಿಕೊಂಡು ಏಳಬೇಕು. ಅನಂತರ ವಾಸಗೃಹಕ್ಕಿಂತ ಸ್ವಲ್ಪದೂರ ಹೋಗಿ ಸಕಲ ಶೌಚಗಳನ್ನೂ ವಿಧಿವತ್ತಾಗಿ ಮಾಡಬೇಕು. ಆ ಪಾಪವಿನಾಶಕವಾದ ಪುಣ್ಯ ತೀರ್ಥಜಲದಲ್ಲಿ ಸ್ನಾನ ಮಾಡಬೇಕು. ಎಂದು ಗೌತಮನು ಪೂಜಾಕ್ರಮವನ್ನು ವಿವರಿಸಲಾರಂಭಿಸಿದನು. ||೧೮||

ಪರಿಶುದ್ಧನಾಗುವಂತೆ ಸ್ನಾನಮಾಡಿದಮೇಲೆ, ಮಂತ್ರೋಚ್ಚಾರಣಾಭಿಮಂತ್ರಣಾದಿಗಳಿಂದ ಪವಿತ್ರವಾದ ಭಸ್ಮವನ್ನು ಮೈಗೆಲ್ಲಾ ಹಚ್ಚಿಕೊಳ್ಳಬೇಕು. ಹಣೆಯಲ್ಲಿ ಲಕ್ಷಣವಾಗಿ ತ್ರಿಪುಂಡ್ರಾಕಾರವಾಗಿ ಭಸ್ಮವನ್ನು ಹಚ್ಚಿಕೊಳ್ಳಬೇಕು. ಮತ್ತು ರುದ್ರಾಕ್ಷಮಾಲೆಯನ್ನು ಧರಿಸಬೇಕು. ||೧೯||

ಅನಂತರ ಶ್ರುತಿಚೋದಿತವಾದ ನಿಯಮದಿಂದ ಆಚಮನವನ್ನು ಮಾಡ

ಭವಾದಿಭಿಸ್ತ್ರಿರಾಚಾಮೇತ್ಪರಿಮೃಜ್ಯ ತ್ರಿರಂಬುನಾ ।
ಉಪಸ್ಪೃಶ್ಯ ಸಕೃನ್ನೀರಂ ಶಿರಸ್ಸಮ್ಯಕ್ ಸ್ವಚಕ್ಷುಷೀ ॥೨೦॥

ನಾಸಿಕೇ ಚ ತಥಾ ಶ್ರೋತ್ರೇಽಪ್ಯಾಲಭ್ಯ ಹೃದಯಂ ತತಃ ।
ಸವ್ಯಪಾಣಿಪ್ರೋಕ್ಷಣಂ ಚ ಪ್ರೋಕ್ಷಣಂ ಪಾದಯೋರಪಿ ॥೨೧॥

ಪಂಚಾಕ್ಷರೇಣ ವಾ ಕುರ್ಯಾತ್ತತ್ತದಂಗಾಭಿಮರ್ಶನಂ ।
ಆಪೋಹಿಷ್ಠಾದಿಭಿಃ ಕುರ್ಯಾಚ್ಛಿವಮಂತ್ರೈಸ್ತು ಮಾರ್ಜನಂ ॥೨೩॥

ಸ್ವಾಹಾಂತೇನ ಪಿಬೇದಂಬು ತತ್ಪ್ರಧಾನಮಿತಿ ಶ್ರುತಂ ।
ಅರ್ಘ್ಯಪ್ರದಾನಂ ಕೃತ್ವಾಂತೇ ಗಾಯತ್ರೀ ಜಪಮಾಚರೇತ್ ॥೨೪॥

---

ಬೇಕು. ಆಹಿತಾಗ್ನಿಯಾಗಿದ್ದು ಶ್ರೌತಕರ್ಮನಿರತನಾಗಿದ್ದರೆ ಆತನು ಶ್ರೌತವಿಧಿಯಲ್ಲಿ ಹೇಳಿರುವಂತೆ ಆಚಮನವನ್ನು ಮಾಡತಕ್ಕದ್ದು. ||೨೦||

ಭವನಾಮವೇ ಮೊದಲಾದ ಮೂರು ನಾಮಗಳನ್ನು ಹೇಳುತ್ತಾ ಮೂರು ಆಚಮನವನ್ನು ಮಾಡತಕ್ಕದ್ದು. ಹಾಗೆಯೇ ಮೂರು ಸಲ ನೀರಿನಿಂದ ಬಾಯಿಯನ್ನು ಒರೆಸಿಕೊಳ್ಳಬೇಕು. ಮತ್ತು ತಲೆಯನ್ನೂ ಕಣ್ಣುಗಳನ್ನೂ ಮಾರ್ಜನೆ ಮಾಡಿಕೊಳ್ಳಬೇಕು. ||೨೧||

ಅನಂತರ ಮೂಗು, ಕಿವಿ, ಹೃದಯ, ಎಡಗೈ, ಕಾಲು ಇವುಗಳಿಗೆ ಶಿವನಾಮಗಳಿಂದ ಜಲವನ್ನು ಪ್ರೋಕ್ಷಿಸಿಕೊಳ್ಳಬೇಕು. ||೨೨||

ಅಥವಾ ಮೇಲೆ ಹೇಳಿದ ಅಂಗಗಳ ಅಭಿಮರ್ಶನವನ್ನು ಪಂಚಾಕ್ಷರಿಯನ್ನು ಹೇಳುತ್ತಲಾದರೂ ಮಾಡಬಹುದು. ಅನಂತರ ಶಿವಮಂತ್ರಗಳಿಂದಲೂ ಆಪೋಹಿಷ್ಠಾ ಎಂಬ ಮಂತ್ರದಿಂದಲೂ ಮಾರ್ಜನರೂಪವಾಗಿ ನೀರನ್ನು ಪ್ರೋಕ್ಷಿಸಿಕೊಳ್ಳತಕ್ಕದ್ದು. ||೨೩||

ನೀರನ್ನು ಪ್ರೋಕ್ಷಿಸಿಕೊಂಡಾದ ಬಳಿಕ ಜಲವನ್ನು ವಿಹಿತವಾದ ಮಂತ್ರದಿಂದ ಅಭಿಮಂತ್ರಿಸಬೇಕು. ಆದರೆ ಸ್ವಾಹಾ ಎಂದು ಮಂತ್ರ ಮುಗಿದ ಮೇಲೆ ಆ ಅಭಿಮಂತ್ರಿಸಿದ ನೀರನ್ನು (ಅಘಮರ್ಷಣೋದಕವನ್ನು) ಕುಡಿಯಕೂಡದು. ಹಾಗೆಯೇ ಬಿಟ್ಟುಬಿಡಬೇಕು. ಇದು ಈ ವಿಧಿಯಲ್ಲಿ ಮುಖ್ಯವಾದುದು. ಅನಂತರ ಅರ್ಘ್ಯಪ್ರದಾನಮಾಡಿ ಗಾಯತ್ರಿಯನ್ನು ಜಪಿಸಬೇಕು. ||೨೪||

**ತತಃ ಪರಂ ಬಿಲ್ವಪತ್ರೈರ್ದಿವ್ಯತೀರ್ಥೋದಕೈರಪಿ ।**
**ಗಂಧಪುಷ್ಪಾದಿಭಿರ್ದಿವ್ಯೈಃ ಕುರ್ಯಾತ್ತೀರ್ಥೇಶ್ವರಾರ್ಚನಂ ॥೨೫॥**

**ಪ್ರದಕ್ಷಿಣನಮಸ್ಕಾರಾನ್ ಕೃತ್ವಾ ಭಕ್ತ್ಯಾ ಪುನಃ ಪುನಃ ।**
**ಪಂಚಾಕ್ಷರಜಪಂ ಕುರ್ಯಾತ್ ಧ್ಯಾತ್ವಾ ಶಂಕರಮಾದರಾತ್ ॥೨೬॥**

**ಹೋಮಸ್ತತಃಪರಂ ಕಾರ್ಯೋ ವೈಶ್ವದೇವಶ್ಚ ಸಾದರಂ ।**
**ವೈಶ್ವದೇವೇಽಪಿ ಯೇ ಮಂತ್ರಾಃ ಸ್ವಾಹಾಂತಾಸ್ತೇ ಭವಾದಯಃ ॥೨೭॥**

**ಭವಾದ್ಯಾಃಸ್ಯುಶ್ಚ ದೇವಾಂತಾ ಸ್ತೇ ತ್ವಷ್ಟೌ ಮನವಃ ಸ್ಮೃತಾಃ ।**
**ತಥಾ ಭವಸ್ಯ ದೇವಸ್ಯೇತ್ಯಾದ್ಯಾ ಸ್ತ್ವಷ್ಟೌ ಶ್ರುತಿಸ್ಮೃತಾಃ ॥೨೮॥**

**ತೈಃ ಕೃತ್ವಾ ಬಲಿದಾನಂ ಚ ತದಗ್ನಾವೇವ ತೈರಪಿ ।**
**ಆವಹಂತೀತಿ ಮಂತ್ರೇಣ ಹೋಮಂ ಕುರ್ಯಾತ್ ಪ್ರಯತ್ನತಃ ॥೨೯॥**

---

ಹೀಗೆ ಪ್ರಾತರಾಹ್ನಿಕವನ್ನು ಮಾಡಿದನಂತರ ಬಿಲ್ವಪತ್ರೆ, ಶ್ರೇಷ್ಠವಾದ ಜಲ, ಉತ್ತಮವಾದ ಗಂಧ ಪುಷ್ಪಾದಿಗಳು ಇವುಗಳಿಂದ ತೀರ್ಥೇಶ್ವರನನ್ನು ಪೂಜಿಸಬೇಕು. ॥೨೫॥

ಪೂಜೆಯಾದ ಬಳಿಕ ಭಕ್ತಿಯಿಂದ ಪದೇ ಪದೇ ಪ್ರದಕ್ಷಿಣೆ ಮಾಡಿ ನಮಸ್ಕರಿಸಬೇಕು. ಅನಂತರ ಆ ಶಂಕರನನ್ನು ಆದರದಿಂದ ಸ್ಮರಿಸಿಕೊಳ್ಳುತ್ತಾ ಪಂಚಾಕ್ಷರ ಮಂತ್ರವನ್ನು ಜಪಿಸಬೇಕು. ॥೨೬॥

ಅನಂತರ ವಿಧಿವತ್ತಾಗಿ ಹವನವನ್ನು ಮಾಡಬೇಕು. ಅದಾದ ಬಳಿಕ ವೈಶ್ವದೇವವನ್ನು ಮಾಡತಕ್ಕದ್ದು. ಆ ವೈಶ್ವದೇವ ಕರ್ಮದಲ್ಲಿ ಉಪಯೋಗಿಸುವ ಮಂತ್ರಗಳಿಗೆಲ್ಲಾ ಸ್ವಾಹಾಕಾರಕ್ಕೆ ಮೊದಲು ಭವನಾಮಗಳನ್ನು ಸೇರಿಸಿ ಹೇಳಬೇಕು. ॥೨೭॥

ದೇವಶಬ್ದವೇ ಅಂತವಾಗಿ ಉಳ್ಳ ಭವ ಶಬ್ದಗಳು ಅಂದರೆ ಭವಸ್ಯದೇವಸ್ಯ ಎಂಬ ಎಂಟು ನಾಮಗಳೂ ಮಂತ್ರಗಳಾಗಿವೆ. ಮತ್ತು ಅವು ಶ್ರುತಿ ಸ್ಮೃತಿ ರೂಪಗಳಾಗಿವೆ. ॥೨೮॥

ಆ ಮಂತ್ರಗಳಿಂದಲೇ ಬಲಿಯನ್ನು ಅರ್ಪಿಸಬೇಕು. ಮತ್ತು ಆವಹಂತಿ ಎಂಬ ಮಂತ್ರದಿಂದ ಹೋಮವನ್ನು ಪ್ರಯತ್ನ ಪುರಸ್ಸರವಾಗಿ ಅಂದರೆ ಆಸಕ್ತಿಯಿಂದ ಮಾಡಬೇಕು. ॥೨೯॥

ಪಶ್ಚಾತ್ತತ್ರಾಹುತೀರ್ದೇಯಾಃ ಪಿತೃಭ್ಯೋಽಪಿ ಸ್ವಧಾಸ್ತ್ವಿತಿ ।
ಏವಂ ಪ್ರತ್ಯಾಹಿಕಂ ಕರ್ಮ ಪ್ರಾತಃಕಾಲೀನಮಾಸ್ತಿಕೈಃ ॥೩೦॥

ಮಧ್ಯಾಹ್ನೇಽಪಿ ಪುನಃ ಸ್ನಾತ್ವಾ ಕರ್ತವ್ಯಂ ಶಿವಪೂಜನಂ ।
ಉಕ್ತೇನೈವ ಪ್ರಕಾರೇಣ ಸಾಯಂ ಚ ಶಿವಪೂಜನಂ ॥೩೧॥

ಆಸಾಯಮಪ್ರಮಾದೇನ ಪ್ರಾತರಾರಭ್ಯ ಸಾದರಂ ।
ನಿತ್ಯಂ ಶಿವಾರ್ಚನಂ ಕಾರ್ಯಂ ಬಿಲ್ವಪತ್ರಾದಿಸಾಧನೈಃ ॥೩೨॥

ಜಲೈಃ ಪತ್ರೈಃ ಫಲೈರನ್ಯೈಃ ಪುಷ್ಪೈರ್ದೂರ್ವಾಂಕುರೈರಪಿ ।
ಪೂಜಯೇದ್ಗಿರಿಜಾಕಾಂತಂ ಅಪ್ರಮಾದೇನ ನಿತ್ಯಶಃ ॥೩೩॥

ಏವಂ ಸಂಪೂಜ್ಯ ಯತ್ನೇನ ಬಿಲ್ವಪತ್ರಾದಿಭಿಶ್ಶಿವಂ ।
ನಯಂತಿ ಕಾಲಂ ವಿಮಲಾಃ ಶಿವಪೂಜನತತ್ಪರಾಃ ॥೩೪॥

---

ಹೀಗೆ ಹೋಮಮಾಡಿದ ಬಳಿಕ ಅದೇ ಅಗ್ನಿಯಲ್ಲಿ ಸ್ವಧಾಪೂರ್ವಕ ಮಂತ್ರದಿಂದ ಪಿತೃಗಳಿಗೂ ಆಹುತಿಗಳನ್ನು ಕೊಡಬೇಕು. ಇಷ್ಟು ಕರ್ಮಗಳು ದೈನಿಕಕರ್ಮಕಲಾಪದಲ್ಲಿ ಪ್ರಾತಃಕಾಲದಲ್ಲಿ ಅನುಷ್ಠಾನ ಮಾಡತಕ್ಕವುಗಳು. ॥೩೦॥

ಅನಂತರ ಮಧ್ಯಾಹ್ನ ಕಾಲದಲ್ಲಿಯೂ ಮತ್ತೆ ಸ್ನಾನವೇ ಮೊದಲಾದ ಶೌಚವಿಧಿಗಳನ್ನೆಲ್ಲಾ ಮಾಡಿಕೊಂಡು ಶುಚಿರ್ಭೂತನಾಗಿ ಶಿವಪೂಜೆಯನ್ನು ಮಾಡತಕ್ಕದ್ದು. ಹಾಗೆಯೇ ಸಾಯಂಕಾಲದಲ್ಲಿಯೂ ನಿಯಮಾನುಸಾರವಾಗಿ ಪೂಜಿಸಬೇಕು. ॥೩೧॥

ಪ್ರಾತಃಕಾಲದಿಂದ ಆರಂಭಮಾಡಿ ಸಾಯಂಕಾಲದ ವರೆಗೂ ವಿಧಿಗಳನ್ನು ತಪ್ಪದೇ ನಿಯಮದಿಂದ ಇದ್ದುಕೊಂಡು ಬಿಲ್ವಪತ್ರೆ ಮೊದಲಾದ ಪೂಜಾಸಾಧನಗಳಿಂದ ಶಿವಪೂಜೆಯನ್ನು ಮಾಡತಕ್ಕದ್ದು. ॥೩೨॥

ನಿರ್ಮಲವಾದ ಜಲ, ಕೋಮಲವಾದ ಪತ್ರ, ಪುಷ್ಪ, ದೂರ್ವಾಂಕುರ, ದಿವ್ಯವಾದ ಹಣ್ಣು, ಕಾಯಿ ಮುಂತಾದವುಗಳಿಂದ ನಿತ್ಯವೂ ತಪ್ಪದೇ ಪರಮೇಶ್ವರನನ್ನು ಪೂಜಿಸಬೇಕು. ॥೩೩॥

ಈ ಪ್ರಕಾರವಾಗಿ ವಿಧಿಗನುಸಾರವಾಗಿ ಬಿಲ್ವಪತ್ರೆಯೇ ಮೊದಲಾದ ಪೂಜಾಸಾಮಗ್ರಿಗಳಿಂದ ಶಿವಪೂಜೆಯಲ್ಲಿಯೇ ಆಸಕ್ತಿ ವಹಿಸಿ ಕಾಲಕಳೆಯುವವರು ಪವಿತ್ರಾತ್ಮರಾಗುವರು. ॥೩೪॥

ಯೋ ನಿತ್ಯಸೂತಕೀ ತೇನ ಶಿವೋ ನಾಭ್ಯರ್ಚಿತಃ ಪರಂ ।
ತದನ್ಯೈರರ್ಚಿತೋ ನಿತ್ಯಂ ತೇ ಸರ್ವೇಽಪ್ಯಧಿಕಾರಿಣಃ ॥೩೫॥

ಇತಿ ತದ್ವಚನಂ ಶ್ರುತ್ವಾ ತಮೂಚುರ್ಮುನಯಸ್ತದಾ ।
ನಿತ್ಯಸೂತಕಿನಃ ಕೇ ವಾ ವದ ತಾನ್ ಮುನಿಪುಂಗವ ॥೩೬॥

॥ ಗೌತಮ ಉವಾಚ ॥

ತ್ರಿಪುಂಡ್ರಧಾರಣಂ ತ್ಯಕ್ತ್ವಾ ಶ್ರೌತಂ ಸರ್ವಾರ್ಥಸಾಧನಂ ।
ಯೈಸ್ತ ಏವ ದುರಾಚಾರಾ ನಿತ್ಯಸೂತಕಿನಃ ಸ್ಮೃತಾಃ ॥೩೭॥

ನಿತ್ಯಸೂತಕಿನಾಂ ಗೇಹೇ ಜಲಂ ಯಃ ಪಾತುಮಿಚ್ಛತಿ ।
ಸೋಽಪಿ ತತ್ಸಮತಾಂ ಯಾತಿ ನಿಂದ್ಯ ಏವ ತಥೈವ ಸಃ ॥೩೮॥

---

ನಿತ್ಯವೂ ಶಿವಪೂಜೆಯನ್ನು ಮಾಡುತ್ತಿರುವವನಿಗೆ ಅಕಸ್ಮಾತ್ ಸೂತಕಾದಿ ಆಶೌಚಗಳು ಬಂದುಬಿಟ್ಟರೆ ಅಥವಾ ನಿತ್ಯಶೌಚವಿದ್ದರೆ ಆಗ ಇತರರಿಂದ ತಪ್ಪದೇ ಪೂಜೆಯನ್ನು ಮಾಡಿಸಬೇಕು. ಈ ಪೂಜೆಯನ್ನು ಯಾರುಬೇಕಾದರೂ ಮಾಡಬಹುದು. ಏಕೆಂದರೆ ಶಿವಪೂಜೆಗೆ ಎಲ್ಲರಿಗೂ ಅವಿಶೇಷವಾಗಿ ಅಧಿಕಾರವಿರುವುದು." ॥೩೫॥

ಈ ಪ್ರಕಾರವಾಗಿ ಗೌತಮನು ಹೇಳುತ್ತಿರಲು ಮಧ್ಯೆ ಸಂಶಯಗ್ರಸ್ತರಾದ ಮುನಿಗಳು "ನಿತ್ಯಸೂತಕಿಗಳು ಎಂದರೆ ಯಾರು" ಎಂಬುದನ್ನು ವಿವರಿಸಿ ಹೇಳಬೇಕೆಂದು ಗೌತಮನನ್ನು ಪ್ರಾರ್ಥಿಸಿಕೊಂಡರು. ॥೩೬॥

ಯಾರು ತ್ರಿಪುಂಡ್ರಧಾರಣೆ ಮೊದಲಾದ ಶಿವಧರ್ಮಗಳನ್ನೂ ಸರ್ವಾರ್ಥ ಸಾಧಕವಾದ ಶ್ರೌತಕರ್ಮಗಳನ್ನೂ ಅನುಷ್ಠಾನ ಮಾಡದೆ ಧರ್ಮಕರ್ಮಭ್ರಷ್ಟರಾಗಿ ದುರಾಚಾರಗಳನ್ನು ಸ್ವೇಚ್ಛೆಯಿಂದ ಮಾಡುತ್ತಿರುವರೋ ಅವರೇ ನಿತ್ಯಸೂತಕಿಗಳು. ಅವರಿಗೆ ಸದಾ ಆಶೌಚವಿರುತ್ತದೆ. ಹೀಗೆಂದು ಸ್ಮೃತಿಯಲ್ಲಿ ಹೇಳಿರುತ್ತದೆ. ॥೩೭॥

ನಿತ್ಯಸೂತಕಿಗಳಾದಂಥವರ ಮನೆಯಲ್ಲಿ ನೀರನ್ನು ಕುಡಿಯಬೇಕೆಂದು ಯಾರು ಅಪೇಕ್ಷಿಸುವನೋ, ಅವನೂ ಸಹ ಆ ನಿತ್ಯಸೂತಕಿಯಂತೆಯೇ ಆಗುತ್ತಾನೆ. ಆತನೂ ಬಹಿಷ್ಕಾರ್ಯನೂ ನಿಂದ್ಯನೂ ಆಗುವನು. ॥೩೮॥

ಶ್ರೌತಕರ್ಮಣಿ ನಾಶೌಚಮಶ್ರೌತೇ ಚ ಕ್ವಚಿದ್ಭವೇತ್ ।
ಶ್ರೌತಕರ್ಮಪರಿತ್ಯಾಗಃ ಸೂತಕೇಽಪಿ ನ ಸರ್ವಥಾ ॥೩೯॥

ಶ್ರೌತಕರ್ಮಣಿ ತತ್ಕಾಲೇ ಸ್ನಾತಶ್ಶುದ್ಧಿಮವಾಪ್ನುಯಾತ್ ।
ಕದಾಪಿ ನ ಪರಿತ್ಯಾಜ್ಯಂ ಶ್ರೌತಕರ್ಮ ಶಿವಾರ್ಚನಂ ॥೪೦॥

ಯಾವಜ್ಜೀವಂ ಶ್ರುತಿಸ್ತತ್ರ ಪ್ರಬಲಾ ತನ್ನ ಸೂತಕಂ ।
ತಿರಸ್ಕೃತಂ ಭಾವನಾಪಿ ತನ್ನ ಗೃಹ್ಣಾತಿ ಸೂತಕಂ ॥೪೧॥

ಶ್ರೌತಹೋಮೇಷು ಸರ್ವೇಷು ಶಿವಾರ್ಚನಸಮೋ ವಿಧಿಃ ।
ನ ಚಾಗ್ನಿಹೋತ್ರಹೋಮಸ್ಯ ಪರಿತ್ಯಾಗೋಽಪಿ ಸೂತಕೇ ॥೪೨॥

---

ಶ್ರೌತಕರ್ಮದ ಅನುಷ್ಠಾನದಲ್ಲಿ ಯಾವಾಗಲೂ ಆಶೌಚವೇ ಇರುವುದಿಲ್ಲ. ಅಂದರೆ ಶ್ರೌತವಲ್ಲದ ಕರ್ಮದಲ್ಲಿ ಆ ಶೌಚವು ತಪ್ಪದು. ಸೂತಕದಲ್ಲಿಯೂ ಶ್ರೌತ ಕರ್ಮವನ್ನು ತ್ಯಾಗಮಾಡಕೂಡದು. ಅನುಷ್ಠಾನ ಮಾಡಲೇ ಬೇಕು. ॥೩೯॥

ಶ್ರೌತಕರ್ಮಾನುಷ್ಠಾನ ಸಮಯದಲ್ಲಿ ಅಕಸ್ಮಾತ್ ಆಶೌಚ ಒದಗಿದರೆ ಕೂಡಲೇ ಸ್ನಾನ ಮಾಡಿ ಆಚಮನಮಾಡುವುದರಿಂದ ಆತನು ಶುದ್ಧನಾಗುತ್ತಾನೆ. ಅನಂತರ ಕರ್ಮವನ್ನು ಅನುಷ್ಠಿಸಬಹುದು. ಅಂತೂ ಶ್ರೌತಕರ್ಮವನ್ನೂ ಶಿವಾರ್ಚನೆಯನ್ನೂ ಎಂದೂ ಬಿಡಕೂಡದು. ॥೪೦॥

ಯಾವಜ್ಜೀವಂ ಎಂಬ ವಿಧಿಯು ಶ್ರೌತಕರ್ಮದಲ್ಲಿ ಪ್ರಬಲವಾದ ಚೋದಕವಾಗಿರುತ್ತದೆ. ಹಾಗೆಯೇ ಶಿವಾರ್ಚನೆಯಲ್ಲಿಯೂ ಇದೇ ವಿಧಿ ಇದೆ. ಈ ವಿಧಿಯಲ್ಲಿರುವ ಭಾವನೆಯು ಪ್ರಬಲವಾಗಿರುವುದರಿಂದ ಅದು ಸೂತಕವನ್ನು ತಿರಸ್ಕರಿಸುವುದು. ಅಂದರೆ ಸೂತಕದೊಡನೆ ಅನ್ವಯಹೊಂದಿ ಅರ್ಥವನ್ನು ವ್ಯವಸ್ಥೆಮಾಡುವುದಿಲ್ಲ. ಸ್ವತಂತ್ರವಾಗಿದ್ದುಕೊಂಡು ಕೇವಲ ಆಕಾಂಕ್ಷಿತವಾದ ಪದಾರ್ಥಗಳೊಡನೆ ಅನ್ವಯ ಹೊಂದಿ ವಾಕ್ಯಾರ್ಥವನ್ನು ಕಲ್ಪಿಸಿಬಿಡುವುದು. ಅನಂತರ ಇರುವ ಸೂತಕವು ಆ ವಾಕ್ಯಾರ್ಥವನ್ನು ಬಾಧಿಸಲಾರದು. ಅನ್ವಯುವನ್ನೂ ಹೊಂದಲಾರದು. ॥೪೧॥

ಶ್ರೌತಕರ್ಮವಾದ ಹೋಮಗಳಿಗೂ ಶಿವಾರ್ಚನೆಗೂ ವಿಧಿಯು ಒಂದೇ ಸಮವಾಗಿ ತೋರುವುದು. ಹಾಗೆಯೇ ವಿಧಿವಾಕ್ಯಾರ್ಥವೂ ಸಮಾನವಾಗಿಯೇ ಇರುವುದು. ಆ ವಾಕ್ಯಾರ್ಥ ನಿಯಮದ ಅನುಸಾರ ಅಗ್ನಿಹೋತ್ರ ಹೋಮಕ್ಕೆ ಸೂತಕದಲ್ಲಿಯೂ ತ್ಯಾಗವಿಲ್ಲ. ॥೪೨॥

ದರ್ಶಸ್ಯ ಪೂರ್ಣಮಾಸಸ್ಯ ಶಿವಲಿಂಗಾರ್ಚನಸ್ಯ ಚ ।
ಪ್ರಮಾದಾತ್ ಸೂತಕೇ ತ್ಯಾಗಂ ಕುರ್ವನ್ನರಕಮಶ್ನುತೇ ॥೪೩॥

ಪ್ರಾಣಪ್ರಯಾಣಕಾಲೇ ತು ಸ್ವಸ್ಯ ಶಕ್ತಿರ್ನ ಚೇತ್ತದಾ ।
ಕಾರಣೀಯಂ ಪ್ರಯತ್ನೇನ ಪುತ್ರಾದ್ಯೈಃ ಶಿವಪೂಜನಂ ॥೪೪॥

ಏತಸ್ಮಿನ್ ಚ್ಛ್ರೌತಧರ್ಮೇಽಪಿ ಶಿವಲಿಂಗಾರ್ಚನೇ ಶ್ರುತೇ ।
ಕಲೌ ಪಾಪಾತ್ಮನಾಂ ಬುದ್ಧಿರ್ನ ಭವಿಷ್ಯತಿ ಸರ್ವಥಾ ॥೪೫॥

ಪುರಾ ಶಪ್ತಾಃ ಶಿವಾಚಾರನಿರತೈಶ್ಯಾಂಭವೈರ್ದ್ವಿಜಾಃ ।
ತೇನ ಶಾಪೇನ ಭಕ್ತಿಸ್ತು ನ ಕಲೌ ಶಂಕರಾರ್ಚನೇ ॥೪೬॥

---

ದರ್ಶಪೂರ್ಣಮಾಸಾದಿ ಶ್ರೌತಕರ್ಮಗಳನ್ನೂ ಶಿವಾರ್ಚನೆಯನ್ನೂ ಸೂತಕದಲ್ಲಿಯೂ ನಿಷೇಧಮಾಡದೇ ಇರುವುದರಿಂದ, ಇವುಗಳನ್ನು ಸೂತಕದಲ್ಲಿಯೂ ಅನುಷ್ಠಾನ ಮಾಡಬಹುದು. ಅಕಸ್ಮಾತ್ ಪ್ರಮಾದದಿಂದ ತ್ಯಾಗಮಾಡಿದರೆ ನರಕಕ್ಕೆ ಬೀಳಬೇಕಾದೀತು. ॥೪೩॥

ಪ್ರಾಣಪ್ರಯಾಣ ಅಂದರೆ ಮರಣಸಮಯದಲ್ಲಿ ಶಿವಪೂಜೆಯನ್ನು ಮಾಡಲು ತನಗೆ ಶಕ್ತಿ ಇಲ್ಲದಿದ್ದರೆ ತನ್ನ ಪುತ್ರರಿಂದ ಅವಶ್ಯ ಮಾಡಿಸಬೇಕು. ಬಿಡಕೂಡದು. ॥೪೪॥

ಕಲಿಕಾಲದ ಜನರು ಸ್ವಾಭಾವಿಕವಾಗಿಯೇ ಪಾಪವಾಸನೆಯುಳ್ಳವರಾಗಿರುತ್ತಾರೆ. ಅವರಿಗೆ ಸತ್ಕರ್ಮದಲ್ಲಿ ಶ್ರದ್ಧಾಭಕ್ತಿಗಳಿರುವುದಿಲ್ಲ. ಆದುದರಿಂದ ಅವರು ಮೂಢರಾಗಿ ಶ್ರೌತಕರ್ಮಗಳನ್ನೂ ಶಿವಲಿಂಗಾರ್ಚನೆಯನ್ನೂ ಮಾಡಲು ಮನಗೊಡುವುದಿಲ್ಲ. ॥೪೫॥

ಪೂರ್ವಕಾಲದಲ್ಲಿ ಕೆಲವು ಶಿವಧರ್ಮ ಪರಾಯಣರಾದ ಪರಶಿವಭಕ್ತರು ಕಾರಣಾಂತರದಿಂದ ಈ ಕಲಿಗಾಲದ ದ್ವಿಜರಿಗೆ ಶಾಪಕೊಟ್ಟಿದ್ದಾರೆ. ಆ ಶಾಪದ ದೆಸೆಯಿಂದ ಕಲಿಯುಗದಲ್ಲಿ ಸಾಮಾನ್ಯ ಜನರಿಗೆ ಶಿವಾರ್ಚನೆಯಲ್ಲಿ ಭಕ್ತಿಯುಂಟಾಗಲಾರದು. ॥೪೬॥

|| ಋಷಯ ಊಚುಃ ||

**ದ್ವಿಜಾಃ ಕಥಂ ವಾ ತೈಶ್ಶಪ್ತಾಶ್ಶಾಂಭವಾಗ್ರೇಸರೈರ್ಮುನೇ ।**
**ಅಶ್ರದ್ಧಾ ಕಥಮೇತೇಷಾಂ ಜಾತಾ ಶಂಕರಪೂಜನೇ ॥೪೭॥**

|| ಗೌತಮ ಉವಾಚ ||

**ದಕ್ಷಪ್ರಜಾಪತಿಃ ಪೂರ್ವಂ ಯಾಗಾರಂಭಂ ಚಕಾರ ಸಃ ।**
**ತದಾನೀಮಾಗತಾಸ್ಸರ್ವೇ ಮುನಯಶ್ಶೌನಕಾದಯಃ ॥೪೮॥**

**ದೇವಾಸ್ಸಮಾಗತಾಸ್ತತ್ರ ಗಂಧರ್ವಾಶ್ಚಾರಣಾ ಅಪಿ ।**
**ಸಿದ್ಧಾಸ್ಸಮಾಗತಾಸ್ತತ್ರ ತದನ್ಯೇ ಕಪಿಲಾದಯಃ ॥೪೯॥**

**ದೀಕ್ಷಾಂ ಗೃಹೀತ್ವಾ ದಕ್ಷೋಽಪಿ ಸರ್ವಸೌಭಾಗ್ಯಸಂಯುತಃ ।**
**ಸುರೈಸ್ಸದಸ್ಯೈರಿಂದ್ರಾದ್ಯೈಸ್ಸಹ ಸಂತೋಷಮಾಪ ಸಃ ॥೫೦॥**

---

"ಎಲೈ ಗೌತಮನೇ, ಆ ಶಿವಭಕ್ತರು ದ್ವಿಜರಿಗೆ ಏತಕ್ಕೆ ಶಾಪ ಕೊಟ್ಟರು ? ಆ ಕಲಿಗಾಲದ ದ್ವಿಜರಿಗೆ ಶಿವಾರ್ಚನೆಯಲ್ಲಿ ಹೇಗೆ ಅಶ್ರದ್ಧೆಯು ಹುಟ್ಟಿತು? ಇದಕ್ಕೆ ಕಾರಣವೇನೆಂಬುದನ್ನು ಹೇಳು" ಹೀಗೆಂದು ಋಷಿಗಳು ಕೇಳಿದರು. ||೪೭||

ಪೂರ್ವಕಾಲದಲ್ಲಿ ದಕ್ಷಬ್ರಹ್ಮನು ಒಂದು ಯಾಗವನ್ನು ಆರಂಭಿಸಿದನು. ಆತನು ಎಲ್ಲಾ ಋಷಿಗಳಿಗೂ ದೇವತೆಗಳಿಗೂ ಯಾಗಕ್ಕೆ ಬರಲು ಆಹ್ವಾನ ಕೊಟ್ಟನು. ಅದರಂತೆ ಆ ಯಾಗಕ್ಕೆ ಶೌನಕನೇ ಮೊದಲಾದ ಎಲ್ಲಾ ಋಷಿಜನಗಳೂ ಬಂದರು. ಎಂದು ಗೌತಮನು ಮುಂದುವರಿಸಿದನು. ||೪೮||

ಆ ಯಾಗಕ್ಕೆ ದೇವತೆಗಳೆಲ್ಲರೂ ಬಂದರು. ಹಾಗೆಯೇ ಗಂಧರ್ವರೂ ಚಾರಣರೂ, ಸಿದ್ಧರೂ. ಸಾಧ್ಯರೂ ಎಲ್ಲರೂ ಬಂದರು. ಅಲ್ಲದೆ ಕಪಿಲನೇ ಮೊದಲಾದ ದಾರ್ಶನಿಕರೂ ಬಂದರು. ||೪೯||

ದಕ್ಷನು ಯಾಗಕ್ಕೆ ಬೇಕಾದ ಸಕಲ ಸಂಭಾರಗಳನ್ನೂ ಸಿದ್ಧಪಡಿಸಿಕೊಂಡು ಬಹಳ ವಿಜೃಂಭಣೆಯಿಂದ ಯಾಗದ ದೀಕ್ಷೆಯನ್ನು ಕೈಕೊಂಡನು. ಆತನ ಯಾಗ ಸಭೆಯಲ್ಲಿ ಇಂದ್ರನೇ ಮೊದಲಾದ ಸದಸ್ಯರು ಸಕಲ ಆತಿಥ್ಯಗಳಿಂದ ಸಂತುಷ್ಟರಾಗಿರುತ್ತಿದ್ದರು. ||೫೦||

ತದಾನೀಂ ಪಾರ್ವತೀ ಪ್ರಾಹ ಕೈಲಾಸನಿಲಯಂ ಶಿವಂ ।
ಅತಿ ಪ್ರಸನ್ನವದನಂ ದೇವಾನಾಮಪಿ ಶಾಸಕಂ ॥೫೧॥

ಭಗವನ್ ದೀಕ್ಷಿತೋ ಯಾಗೇ ದಕ್ಷೋ ಯಕ್ಷಾದಿಭಿಸ್ಸಹ ।
ತದ್ಯಾಗದರ್ಶನಾಪೇಕ್ಷಾ ಮಮಾಭೂದಧುನಾ ಪ್ರಭೋ ॥೫೨॥

ಇತಿ ತದ್ವಚನಂ ಶ್ರುತ್ವಾ ಕಾಲಕಾಲೋ ಮಹೇಶ್ವರಃ ।
ಪ್ರಾಹ ಗಂಭೀರಯಾ ವಾಚಾ ಕಲ್ಪಾಂತಘನಸನ್ನಿಭಃ ॥೫೩॥

ಯಾಗಸ್ತೇನ ಸಮಾರಬ್ಧಃ ಸ್ವನಾಶಾಯ ದುರಾತ್ಮನಾ ।
ಕಾ ತದಾಲೋಕನೇ ಪ್ರೀತಿಸ್ತಾಂ ಪ್ರೀತಿಮುಪಸಂಹರ ॥೫೪॥

---

ಆದರೆ ಆ ದಕ್ಷಬ್ರಹ್ಮನು ಪರಮೇಶ್ವರನನ್ನು ದ್ವೇಷಿಸುತ್ತಿದ್ದನು. ಆದುದರಿಂದ ಆತನು ಪರಮೇಶ್ವರನನ್ನು ಆಹ್ವಾನಿಸಿರಲಿಲ್ಲ. ಆದರೂ ಇಷ್ಟು ಸಂಭ್ರಮದಿಂದ ಯಾಗವು ನಡೆಯುವುದೆಂದು ಕೇಳಿ ಪಾರ್ವತಿಗೆ ಅದನ್ನು ನೋಡಬೇಕೆಂದು ಔತ್ಸುಕ್ಯವುಂಟಾಯಿತು. ಆಗ ಪಾರ್ವತಿಯು ಏಕಾಂತದಲ್ಲಿ ಸುಖಾಸೀನನಾದ ಪರಮೇಶ್ವರನ ಸಂಗಡ ಈ ಯಾಗದ ವಿಷಯವನ್ನು ಹೇಳಿದಳು. ಮತ್ತು ತನ್ನ ಅಭಿಲಾಷೆಯನ್ನೂ ತಿಳಿಸಿದಳು. ॥೫೧॥

ಭಗವನ್, ದಕ್ಷಬ್ರಹ್ಮನು ಈಗ ಒಂದು ಯಾಗವನ್ನು ಆರಂಭಿಸಿದ್ದಾನೆ. ಆ ಯಾಗಕ್ಕೆ ಯಕ್ಷರೇ ಮೊದಲಾದ ಸಕಲ ದೇವತೆಗಳೂ ಬಂದಿರುವರಂತೆ. ಆಗಲೇ ಯಾಗದೀಕ್ಷೆಯೂ ನಡೆದಿದೆ ಎಂದು ಕೇಳಿದೆ. ಆ ಯಾಗವನ್ನು ನೋಡಲು ನನಗೆ ಅಪೇಕ್ಷೆಯಾಗುತ್ತಿದೆ. ನನಗೆ ಯಾಗಕ್ಕೆ ಹೋಗಲು ಅಪ್ಪಣೆ ಕೊಡಬೇಕೆಂದು ಪ್ರಾರ್ಥಿಸುತ್ತೇನೆ. ॥೫೨॥

ಈ ಪ್ರಕಾರವಾದ ಪಾರ್ವತಿಯ ಮಾತನ್ನು ಕೇಳಿ ಪರಮೇಶ್ವರನು ಗಂಭೀರ ವಾಕ್ಯಾದನು. ಭವಿಷ್ಯವನ್ನು ಗಮನಿಸಿದನು. ಅನಂತರ ಪಾರ್ವತಿಯನ್ನು ಕುರಿತು ಹೀಗೆ ಹೇಳಿದನು. ॥೫೩॥

" ಆ ದಕ್ಷನು ಮಹಾ ದುರಹಂಕಾರಿಯು. ಮತ್ತು ದುರಾತ್ಮನೂ ಆಗಿದ್ದಾನೆ. ಆತನು ಅತ್ಯಂತ ಅಹಂಕಾರದಿಂದ ನನ್ನನ್ನು ಕರೆಯದೇ ಯಾಗವನ್ನು ಆರಂಭಿಸಿದ್ದಾನೆ. ಇದೇ ಯಾಗವೇ ಆತನ ನಾಶಕ್ಕೇ ಕಾರಣವಾಗುವುದೆಂದು ತಿಳಿ. ಆದುದ

ಅಯಾಜ್ಯಯಾಜಕಾಸ್ಸರ್ವೇ ನಾಶಮೇಷ್ಯಂತಿ ತೇ ಶಿವೇ ।
ತತ್ಸದಸ್ಯೇಽಪಿ ಸಂಹಾರೋ ಭವಿಷ್ಯತ್ಯದ್ಯ ಸರ್ವಥಾ ॥೫೫॥

ಕಲ್ಪಾವಸಾನಕಾಲೋಽಯಂ ಯಸ್ಮಿನ್ ಕಾಲೇ ದುರಾತ್ಮನಾ ।
ಮಯಿ ದ್ವೇಷಸ್ಸಮುತ್ಪನ್ನೋ ದಕ್ಷಸ್ಯಾಪಿ ದುರಾತ್ಮನಃ ॥೫೬॥

ನಾರಾಯಣಾದಿದೇವಾನಾಂ ನಾಶಸ್ಸಂಭಾವಿತಶ್ಶಿವೇ ।
ಕಿಂ ಚಾನ್ಯದಪಿ ತನ್ನಾಶೇ ಕಾರಣಂ ಕಿಂಚಿದುಚ್ಯತೇ ॥೫೭॥

ತನ್ನಾಶಾಲೋಕನಾಯಾದ್ಯ ಗಂತವ್ಯಮಿತಿ ಧೀರಪಿ ।
ನ ಕರ್ತವ್ಯಾ ತ್ವಯಾ ಗೌರಿ ಗಣನೀಯ ಸ್ಸ ಕಿಂ ಶಿವೇ ॥೫೮॥

---

ರಿಂದ ಅಂಥ ದುರಾತ್ಮನ ಯಾಗದಲ್ಲಿ ನಿನಗೇತಕ್ಕೆ ಪ್ರೇಮವುಂಟಾಯಿತು ? ಅದನ್ನು ನೋಡುವ ಉತ್ಸಾಹವನ್ನು ಬಿಟ್ಟುಬಿಡು. ॥೫೪॥

ಈರ್ಷ್ಯಾದ್ವೇಷಕಲುಷಿತರಿಗೆ ಯಾಗವನ್ನು ಮಾಡಿಸಕೂಡದೆಂದಿದ್ದರೂ, ಈ ಭ್ರಷ್ಟನಾದ ದ್ರಕ್ಷನಿಗೆ ಈಗ ಯಾಗಮಾಡಿಸುತ್ತಿದ್ದಾರೆ. ಆದುದರಿಂದ ಆತನ ಯಾಗಸಭೆಯ ಸದಸ್ಯರೆಲ್ಲರಿಗೂ ವಿಪತ್ಕಾಲ ಒದಗಿದೆ. ಆ ದಕ್ಷನು ಸಂಹೃತನಾಗುವನಲ್ಲದೇ ಆತನ ಸಭೆಯಲ್ಲಿ ಇರುವವರೆಲ್ಲರಿಗೂ ನಾಶಕಾಲವು ಬಂದಿರುತ್ತದೆ. ॥೫೫॥

ಇಂಥ ದುರಾತ್ಮನು ಯಾಗವನ್ನು ಆರಂಭಮಾಡಿರುವುದರಿಂದ ಈಗ ಕೇಡುಗಾಲವೂ ಉತ್ಪಾತಕಾಲವೂ ಬಂದೊದಗುವುದು. ಅಲ್ಲದೇ ಆ ದುರಾತ್ಮನಾದ ದಕ್ಷನು ನನ್ನನ್ನು ಬೇರೆ ದ್ವೇಷಿಸುತ್ತಾನೆ. ಇದರಿಂದಲೂ ಈಗ ದೊಡ್ಡ ಅನರ್ಥವೂ ಹತ್ಯಾಕಾಂಡವೂ ಆಗಲಿರುವುದು. ॥೫೬॥

ಈ ಭ್ರಷ್ಟನಾದ ದಕ್ಷನು ಯಾಗಕ್ಕೆ ಕರೆದ ಕೂಡಲೇ ಚಾಪಲ್ಯಪಟ್ಟು ಆ ನಾರಾಯಣನೇ ಮೊದಲಾದ ದೇವತೆಗಳು ಅವನಲ್ಲಿ ಹೋಗಿರುತ್ತಾರೆ. ಇದರಿಂದ ಅವರೂ ಬಹಳ ಕಷ್ಟವನ್ನು ಅನುಭವಿಸಬೇಕಾಗುವುದು. ಈಗ ನಡೆಯುತ್ತಿರುವ ಇದೆಲ್ಲವೂ ಆ ದಕ್ಷನ ನಾಶಕ್ಕೆ ಕಾರಣವಾಗಿರುವುದು. ॥೫೭॥

ಆ ದಕ್ಷನ ನಾಶವನ್ನು ಏತಕ್ಕೆ ನೋಡಬೇಕು ? ಆತನಿಗಂತೂ ನಾಶಕಾಲವು ಸಮೀಪಿಸಿರುತ್ತದೆ. ಇಂಥ ದುರಾತ್ಮನ ವಧೆಯನ್ನು ನೋಡಬೇಕೆಂಬ ಕುತೂಹಲವು

ಏತಾದೃಶಾಃ ಕತಿ ಶಿವೇ ನ ಸಂತಿ ಭುವಿ ದೀಕ್ಷಿತಾಃ ।
ಕಿಂ ತೇ ತತ್ಪ್ರೇಕ್ಷಣಾಯಾಪಿ ಗಮನಾಯೋದ್ಯಮೋ ಭವೇತ್॥೫೯॥

ತನ್ನಾಶಕೌತುಕಂ ದ್ರಷ್ಟುಂ ಯದ್ಯಪೇಕ್ಷಾ ತವಾಂಬಿಕೇ ।
ತರ್ಹಿ ಸೃಷ್ಟಿಂ ಕುರುಷ್ವಾದ್ಯ ಕಾಮಿನ್ಯಾಃ ಕಾಮಮಾದರಾತ್ ॥೬೦॥

ಇತ್ಯುಕ್ತಾ ಸಾ ಮಹೇಶೇನ ಸಸರ್ಜ ರಮಣೀಂ ತದಾ ।
ರಮಣೀಯಾಂ ಸ್ವಾನುರೂಪಾಂ ಸ್ವಚಿಹ್ನಪರಿವೇಷ್ಟಿತಾಂ ॥೬೧॥

---

ನಿನಗೇಕೆ ಉಂಟಾಯಿತು? ಆತನು ಏನು ಸಂಭಾವಿತನಾಗಿದ್ದಾನೆಯೇ? ಆತನನ್ನು ಯಾರು ದೊಡ್ಡವನೆಂದು ಪರಿಗಣಿಸುತ್ತಾರೆ? ॥೫೮॥

ಈ ಪ್ರಪಂಚದಲ್ಲಿ ಇಂಥ ಅನೇಕ ಯಾಗಗಳನ್ನು ಅನೇಕ ದೀಕ್ಷಿತರು ಮಾಡುತ್ತಿರುವರು. ಆ ಯಾಗಗಳನ್ನು ನೋಡಬೇಕೆಂದು ನೀನು ಎಂದೂ ಅಪೇಕ್ಷೆಪಟ್ಟಂತಿಲ್ಲ. ಅಥವಾ ಇನ್ನುಮುಂದೆ ಎಲ್ಲಾ ಯಾಗಗಳನ್ನೂ ನೋಡುವೆಯೋ? ಈ ದಕ್ಷನಂತೆ ಅನೇಕರೂ ಸಹ ಯಾಗಮಾಡುವವರಿದ್ದಾರೆ. ॥೫೯॥

ಆ ದಕ್ಷನಂತೂ ಈಗ ನಾಶಹೊಂದುತ್ತಾನೆ. ಆತನ ನಾಶವನ್ನೇ ನೋಡಬೇಕೆಂದು ನಿನಗೆ ಅಪೇಕ್ಷೆ ಇದ್ದರೆ ನಾನೇನೂ ಬೇಡವೆನ್ನುವುದಿಲ್ಲ. ಹೋಗು. ಆತನ ನಾಶವನ್ನೇ ನೋಡು. ಆದರೆ ನೀನೇ ಸಾಕ್ಷಾತ್ ಹೋಗಬೇಡ. ನಿನ್ನ ಪ್ರತಿಕೃತಿಯೊಂದನ್ನು ಸೃಷ್ಟಿಮಾಡು. ಆ ಪ್ರತಿಕೃತಿಯು ಅಲ್ಲಿಗೆ ಹೋಗಿ ನೋಡಬಹುದು. ಸಾಕು ಅಷ್ಟೆ." ॥೬೦॥

ಹೀಗೆಂದು ಪರಮೇಶ್ವರನು ಹೇಳಿದಮೇಲೆ ಪಾರ್ವತಿಯು ತನ್ನ ತೀವ್ರವಾದ ಬಯಕೆಯನ್ನು ಬಿಡಲಾರದೆ, ಯಾಗವನ್ನು ನೋಡಬೇಕೆಂಬ ಅತ್ಯಂತ ಔತ್ಸುಕ್ಯದಿಂದ ಪರಮೇಶ್ವರನು ಹೇಳಿದಂತೆ ತನ್ನ ಪ್ರತಿನಿಧಿಯನ್ನು ಕಳುಹಿಸಿ ನೋಡಬೇಕೆಂದು ನಿಶ್ಚಯಿಸಿದಳು. ಮತ್ತು ತನ್ನಂತೆಯೇ ಸಕಲ ಲಕ್ಷಣಗಳನ್ನೂ ಹೊಂದಿರುವ ಒಬ್ಬ ಸುಂದರಿಯಾದ ಸ್ತ್ರೀಪ್ರಕೃತಿಯನ್ನು ಸೃಷ್ಟಿಸಿದಳು. ಅವಳೂ ನೋಡುವುದಕ್ಕೆ ಪಾರ್ವತಿಯಂತೆಯೇ ಇದ್ದಳು. ॥೬೧॥

ನಾನಾಲಕ್ಷಣಸಂಪನ್ನಾಂ ನಾನಾಭರಣಭೂಷಿತಾಂ ।
ತಾಮುವಾಚ ತದಾ ಗೌರೀ ದಕ್ಷಯಾಗಂ ಪ್ರತಿ ತ್ವಯಾ ॥೬೨॥

ಗಂತವ್ಯಂ ತತ್ರ ಗತ್ವಾ ತು ಕೌತುಕಂ ಪಶ್ಯ ಸಾದರಾತ್ ।
ಇತ್ಯುಕ್ತಾ ಸಾ ತದಾ ಗೌರ್ಯಾ ಯಯೌ ಕಾಮಸ್ವರೂಪಿಣೀ ॥೬೩॥

ವಿಮಾನವರಮಾರುಹ್ಯ ದಾಸೀಕೋಟಿನಿಷೇವಿತಾ ।
ಗಣಕೋಟಿಸಮಾಕೀರ್ಣಾ ಛತ್ರಕೋಟಿಸಮಾಶ್ರಿತಾ ॥೬೪॥

ಸಾ ಯದಾ ಚಲಿತಾ ತತ್ರ ಮಹೋತ್ಪಾತಾನಿ ಕೋಟಿಶಃ ।
ಜಾತಾನಿ ತಾನಿ ದೃಷ್ಟ್ವಾ ತೇ ಸರ್ವೇಽಪಿ ಭಯಸಂವೃತಾಃ ॥೬೫॥

---

ಆ ಪಾರ್ವತಿಯ ಮನೋರೂಪಳಾದ ಸ್ತ್ರೀರಮಣಿಯು ಸಕಲ ಸುಲಕ್ಷಣಗಳಿಂದಲೂ ದಿವ್ಯವಾದ ವಸ್ತ್ರಾಭರಣಗಳಿಂದಲೂ ಉಜ್ವಲವಾಗಿ ಶೋಭಿಸುತ್ತಿದ್ದಳು. ಆಕೆಯನ್ನು ಕುರಿತು "ನೀನು ನನ್ನ ಮನೋರಥಸ್ವರೂಪಳಾಗಿದ್ದೀಯೆ. ಈಗ ನೀನು ಆ ದಕ್ಷಬ್ರಹ್ಮನ ಯಾಗಶಾಲೆಗೆ ಹೋಗಬೇಕು. ಮತ್ತು ಅಲ್ಲಿ ನಡೆಯುವ ಸಕಲ ಸಂಭ್ರಮಗಳನ್ನೂ ಘಟನೆಗಳನ್ನೂ ನೋಡು" ಹೀಗೆಂದು ಪಾರ್ವತಿಯು ಅಪ್ಪಣೆಯಿತ್ತಳು. ॥೬೨॥

ಈ ರೀತಿಯಾಗಿ ಪಾರ್ವತಿಯು ಅಪ್ಪಣೆಮಾಡಲು ಆ ಕಾಮಸ್ವರೂಪಿಣಿಯು ದಕ್ಷನ ಯಾಗಕ್ಕೆ ಹೊರಡಲು ಅನುವಾದಳು. ಆಗ ದಿವ್ಯವಾದ ವಿಮಾನವು ಸಿದ್ಧವಾಯಿತು. ಅದರಲ್ಲಿ ಕುಳಿತುಕೊಂಡು ಆ ಕಾಮಿನಿಯು ಅನೇಕ ಸಖಿಯರಿಂದೊಡಗೂಡಿ ಹೊರಟಳು. ಜೊತೆಯಲ್ಲಿ ಕೋಟ್ಯಂತರ ಗಣಗಳೂ ಹೊರಟವು. ಸಂಗಡ ಛತ್ರಚಾಮರವೇ ಮೊದಲಾದ ಸಂಭ್ರಮಗಳಿದ್ದವು. ॥೬೩-೬೪॥

ಆ ಕಾಮಿನಿಯು ಯಾಗಶಾಲಾಭಿಮುಖವಾಗಿ ಹೊರಟೊಡನೆಯೇ ಸುತ್ತಲೂ ಅಪಶಕುನಗಳಾದವು. ಅನೇಕ ಉತ್ಪಾತ ಚಿಹ್ನೆಗಳುಂಟಾದವು. ಇವುಗಳನ್ನು ಅವರೆಲ್ಲರೂ ನೋಡಿ "ಏನು ಅಪಾಯ ಸಂಭವಿಸಲಿರುವುದೋ?" ಎಂದು ಅತ್ಯಂತ ಭೀತರಾದರು. ॥೬೫॥

ಅಗ್ನಿವೃಷ್ಟಿರಭೂತ್ತತ್ರ ಪರಿತೋ ಯಾಗಮಂಟಪೇ ।
ಸರ್ಪವೃಷ್ಟಿರಭೂದ್ಭೂಯಃ ಕ್ರೋಶಷ್ಟಾರಶ್ಚ ವವಾಶಿರೇ ॥೬೬॥

ಗೃಧ್ರಚ್ಛಾಯಾ ಸಮಾಕ್ರಾಂತಾ ಯಾಗಭೂಪರಿತೋ ದ್ವಿಜಾಃ ।
ತದಾ ಲೋಹಿತವೃಷ್ಟಿಶ್ಚ ಮಾಂಸಾಂತ್ರಾದಿಸಮನ್ವಿತಾ ॥೬೭॥

ಕಂಟಕಾನಾಮಭೂದ್ವೃಷ್ಟಿಃ ಪುರೀಷಕ್ರಿಮಿಸಂಯುತಾ ।
ರೇತಸ್ಸಮನ್ವಿತಾ ಸಾ ಭೂನ್ಮೂತ್ರೇಣಾಪಿ ಸಮನ್ವಿತಾ ॥೬೮॥

ಏತಾದೃಶಮಹೋತ್ಪಾತಸಹಸ್ರಾಣಿ ವಿಲೋಕ್ಯ ತೇ ।
ಅಭೂತಪೂರ್ವೈರುತ್ಪಾತೈರ್ಭಯಮಾಜಗ್ಮುರಾಸ್ತಿಕಾಃ ॥೬೯॥

ಸಕಂಪಾಃ ಸ್ವೇದಧಾರಾಭಿರಾವೃತಾಃ ಶುಷ್ಕತಾಲುಕಾಃ ।
ಅತಃಪರಂ ಕಿಮಸ್ಮಾಭಿಃ ಕರ್ತವ್ಯಮಿತಿ ವಿಹ್ವಲಾಃ ॥೭೦॥

---

ಇತ್ತಲಾಗಿ ದಕ್ಷನ ಯಾಗಶಾಲೆಯಲ್ಲಿಯೂ ಉತ್ಪಾತಗಳಿದ್ದವು. ಸುತ್ತಲೂ ಅಗ್ನಿಯೇ ಸುರಿಯಿತು. ಸರ್ಪಮಯವಾದ ವೃಷ್ಟಿ ಆಯಿತು. ಸುತ್ತಲೂ ನರಿಗಳು ಕೂಗುತ್ತಿದ್ದವು. ||೬೬||

ಯಾಗಶಾಲೆಯಲ್ಲೆಲ್ಲಾ ರಣಹದ್ದುಗಳ ನೆರಳುಗಳು ಕಂಡುಬಂದವು. ಅಲ್ಲದೇ ಮಾಂಸ ಮತ್ತು ಕರುಳು ಇವುಗಳ ವೃಷ್ಟಿಯೂ ರಕ್ತದ ಮಳೆಯೂ ಆಯಿತು. ಈ ಎಲ್ಲಾ ಉತ್ಪಾತಗಳನ್ನೂ ಕಂಡು ಅಲ್ಲಿದ್ದ ದ್ವಿಜರೆಲ್ಲಾ ಅತ್ಯಂತ ಭಯಗೊಂಡರು. ||೬೭||

ಆ ಯಾಗಶಾಲೆಯಲ್ಲಿ ಮುಳ್ಳುರಾಶಿಗಳೇ ಸುರಿದವು. ಅಲ್ಲದೇ ಅಮೇಧ್ಯ, ಮೂತ್ರ ಮುಂತಾದ ಕುತ್ಸಿತವಸ್ತು ವೃಷ್ಟಿಗಳೂ ಆದವು. ||೬೮||

ಅಲ್ಲದೇ ಇನ್ನೂ ಅನೇಕವಾದ ಹಿಂದೆಂದೂ ನೋಡದ ಉತ್ಪಾತಗಳೂ ಆ ಯಾಗಶಾಲೆಯಲ್ಲಿ ಉಂಟಾಗಲು ಅಲ್ಲಿದ್ದ ಆಸ್ತಿಕರೆಲ್ಲರೂ ಮಹಾಭೀತರಾದರು. ||೬೯||

ಆ ಆಸ್ತಿಕರೆಲ್ಲರಿಗೂ ಹೆದರಿಕೆಯಿಂದ ನಡುಕವುಂಟಾಯಿತು. ಮೈಯೆಲ್ಲಾ ಬೆವರಿ ನೀರು ಹರಿಯಿತು. ಹತಾಶತೆಯಿಂದ ತುಟಿಗಳೆಲ್ಲಾ ಒಣಗಿಹೋದವು.

ತದಾನೀಮಾಗತಾ ಸಾಪಿ ನಾರೀ ಗೌರೀವಿನಿರ್ಮಿತಾ ।
ತಾಮಾಲೋಕ್ಯ ಮುದಂ ಪ್ರಾಪುರ್ಭವಾನೀ ಸೇತಿ ವಿಭ್ರಮಾತ್॥೭೧॥

ತಾಂ ದೃಷ್ಟ್ವಾ ತೇ ಸುರಾಸ್ಸರ್ವೇ ಪ್ರಣಮ್ಯ ಚ ಮುಹುರ್ಮುಹುಃ ।
ದಕ್ಷಮಾಹುಃ ಪ್ರಯತ್ನೇನ ಪೂಜನೀಯೇತಿ ಸತ್ವರಂ ॥೭೨॥

ತತಸ್ಸ ನಮ್ರವದನೋ ಲಜ್ಜಯಾ ಪರಯಾ ಯುತಃ ।
ಅಭ್ಯುತ್ಥಾನಾದಿಕಂ ಕರ್ಮ ನ ಚಕಾರ ವಿಶೇಷತಃ ॥೭೩॥

ತದಾನೀಂ ಮುನಯಸ್ಸರ್ವೇ ತಾಂ ಪ್ರಣಮ್ಯ ಮುಹುರ್ಮುಹುಃ ।
ಸ್ತುತ್ವಾ ಕೃತಾಂಜಲಿಪುಟಾಃ ವಿನಯೇನ ನತಾನನಾಃ ॥೭೪॥

---

ಇನ್ನು ನಾವು ಏನುಮಾಡಬೇಕು ? ಬಹಳ ಅಚಾತುರ್ಯವಾಯಿತಲ್ಲಾ, ಎಂದು ಚಿಂತಿಸಿ ಅತ್ಯಂತ ವ್ಯಾಕುಲರಾದರು. ॥೭೦॥

ಅಷ್ಟು ಹೊತ್ತಿಗೆ ಆ ಪಾರ್ವತಿಯಿಂದ ನಿರ್ಮಿತಳಾದ ಕಾಮಿನಿಯೂ ಆ ಯಾಗಶಾಲೆಗೆ ಬಂದು ಸೇರಿದಳು. ಆಕೆಯೇ ನಿಜವಾದ ಪಾರ್ವತಿ ಎಂದು ತಿಳಿದುಕೊಂಡು, ಈಕೆಯ ಸಾನ್ನಿಧ್ಯದಿಂದ ಮಂಗಲವುಂಟಾಗಬಹುದೆಂಬ ಆಸೆಯಿಂದ ಅಲ್ಲಿದ್ದವರು ಸಂತುಷ್ಟರಾದರು. ಈ ಉತ್ಪಾತಗಳಿಗೆಲ್ಲಾ ಪರಮೇಶ್ವರನ ಅಸಾನ್ನಿಧ್ಯವೇ ಕಾರಣವೆಂದು ಅವರು ಅನುಮೋದಿಸಿದ್ದರು. ॥೭೧॥

ಆ ಕಾಮಿನಿಯನ್ನು ಕಂಡೊಡನೆಯೇ ಎಲ್ಲಾ ದೇವತೆಗಳೂ ಅತ್ಯಂತ ಆದರದಿಂದ ಆಕೆಗೆ ನಮಸ್ಕರಿಸಿದರು. ಮತ್ತು ಈಕೆಯನ್ನು ಜಾಗ್ರತೆ ಗೌರವಿಸಿ ಪೂಜಿಸೆಂದು ದಕ್ಷಬ್ರಹ್ಮನಿಗೆ ಸೂಚನೆಕೊಟ್ಟರು. ॥೭೨॥

ಆಗ ಆ ದಕ್ಷನು ತಾನು ಪಾರ್ವತೀಪರಮೇಶ್ವರರಿಗೆ ಆಹ್ವಾನ ಕಳುಹಿಸಿಲ್ಲವೆಂದು ಮನಸ್ಸಿನಲ್ಲಿಯೇ ಯೋಚಿಸಿ ಲಜ್ಜೆಯಿಂದ ತಲೆತಗ್ಗಿಸಿದನು. ಆದರದಿಂದ ಬರಮಾಡಿಕೊಂಡು ಪೂಜಿಸಬೇಕಾಗಿದ್ದರೂ, ಅಭ್ಯುತ್ಥಾನ ಮೊದಲಾದ ವಿನಯಾಚಾರಗಳನ್ನೂ ಅವನು ಮಾಡಲಿಲ್ಲ. ಮಾಡಲಾರದೇ ಹೋದನು. ॥೭೩॥

ಆ ಕೂಡಲೇ ಅಲ್ಲಿದ್ದ ಋಷಿವರ್ಗದವರು ಅತ್ಯಾತುರದಿಂದಲೂ ದೈನ್ಯದಿಂದಲೂ ಆ ದೇವಿಯನ್ನು ಪದೇ ಪದೇ ಕೈಕಾಲುಗಳಿಗೆ ಅಡ್ಡಬಿದ್ದು ನಮಸ್ಕರಿಸಿದರಲ್ಲದೇ, ಅತ್ಯಂತ ವಿನಯದಿಂದ ಆಕೆಯನ್ನು ಸ್ತುತಿಸಿದರು. ॥೭೪॥

ಇಯಮೇವ ಹಿ ಕಲ್ಯಾಣೀ ಭವಾನೀ ಭಕ್ತವತ್ಸಲಾ ।
ಇಯಮೇವ ಪರಾ ವಿದ್ಯಾ ಪರಮಾನಂದದಾಯಿನೀ ॥೭೫॥

ಸೌಭಾಗ್ಯಜನನೀ ಸೇಯಂ ಸರ್ವಸೌಭಾಗ್ಯದಾಯಿನೀ ।
ಯತ್ಪ್ರಸಾದೇನ ಜೀವಾಮ ನಂದಾಮ ಶರದಶ್ಶತಂ ॥೭೬॥

ಸೇಯಂ ಭಾಗ್ಯವಶಾದ್ದೃಷ್ಟಾ ದುರದೃಷ್ಟವಿನಾಶಿನೀ ।
ಕಷ್ಟಾಪಹರಣೋದ್ಯುಕ್ತಾ ಸಂತುಷ್ಟಾ ವೀಕ್ಷಣಾದಿಭಿಃ ॥೭೭॥

ನಾರಾಯಣಾದ್ಯಾಸ್ಸರ್ವೇಽಪಿ ಯತ್ಪಾದಾಂಬುಜರೇಣುಭಿಃ ।
ಸೃಷ್ಟಾ ಸ್ಸೇಯಂ ಮಹಾಗೌರೀ ಶರಣಾಗತವತ್ಸಲಾ ॥೭೮॥

---

ಈ ಭಗವತಿಯೇ ಪರಮ ಕಲ್ಯಾಣಸ್ವರೂಪಳಾಗಿದ್ದಾಳೆ. ಈಕೆಗೆ ಭಕ್ತರಲ್ಲಿ ಪರಮ ವಾತ್ಸಲ್ಯವು. ಭಕ್ತರಿಗೆ ಪರಮಾನಂದ ಪ್ರದಾನಮಾಡುವವಳು. ಈಕೆಯೇ ಶ್ರೀವಿದ್ಯಾಸ್ವರೂಪಳಾಗಿದ್ದಾಳೆ. ॥೭೫॥

ಅಖಂಡ ಸೌಭಾಗ್ಯಕ್ಕೇ ಈ ಭಗವತಿಯು ಮಾತೃಸ್ವರೂಪಳಾಗಿದ್ದಾಳೆ. ಸಕಲ ಸೌಭಾಗ್ಯಗಳನ್ನೂ ಈಕೆಯೇ ಪ್ರದಾನಮಾಡುವವಳು. ಈಕೆಯ ಅನುಗ್ರಹ ದಿಂದಲೇ ನಾವು ಜೀವಿಸಿಕೊಂಡಿರುತ್ತೇವೆ. ಈಕೆಯ ಅನುಗ್ರಹದಿಂದಲೇ ಆನಂದ ಪಡೆಯುತ್ತೇವೆ. ಈಕೆಯ ಕೃಪಾತಿಶಯದಿಂದಲೇ ನಮ್ಮ ಈ ಸಂಭ್ರಮವು ನೂರಾರು ಕಾಲ ಅನುವರ್ತಿಸುವುದು. ॥೭೬॥

ಈ ಭಗವತಿಯು ಸಕಲ ದುರದೃಷ್ಟಗಳನ್ನೂ ನಾಶಮಾಡುವವಳು. ಭಕ್ತರ ಸಮಸ್ತ ಕಷ್ಟಗಳನ್ನೂ ನಾಶಮಾಡುವುದರಲ್ಲಿಯೇ ಈಕೆಯು ಸದಾ ತತ್ಪರಳಾಗಿರು ವಳು. ಈಕೆಯು ಕೇವಲ ದರ್ಶನದಿಂದಲೇ ಸಂತುಷ್ಟಳಾಗುವಳು. ಇಂಥ ಭಗವತಿ ಯನ್ನು ನಾವು ಇಂದು ನಮ್ಮ ಭಾಗ್ಯದಿಂದ ನೋಡುತ್ತಿದ್ದೇವೆ. ॥೭೭॥

ನಾರಾಯಣನೇ ಮೊದಲಾದ ಸಕಲ ದೇವತೆಗಳೂ ಈ ಭಗವತಿಯ ಚರಣ ಧೂಳಿಯಿಂದ ಸೃಷ್ಟಿಸಲ್ಪಟ್ಟಿರುವರು. ಈಕೆಯೇ ಶರಣಾಗತ ಸಂರಕ್ಷಕಳಾದ ಮಹಾ ಗೌರಿಯು. ॥೭೮॥

ನಮೋ ಗೌರ್ಯೈ ಮಹಾಗೌರ್ಯೈ ಭವಾನ್ಯೈ ಪ್ರಣತಾ ವಯಂ ।
ಪ್ರಣತಾನ್ ಪಾಹಿ ಗಿರಿಜೇ ವಿಜ್ವರಾನ್ ಕುರು ಸಾದರಂ ॥೭೯॥

ಯತ್ಕೋಪಾಂಬುಧಿಲೇಶೋಽಪಿ ಜ್ವರಃ ಸರ್ವಾಪಹಾರಕಃ ।
ತಾಂ ನತಾಃ ಸ್ಮ ವಯಂ ದುರ್ಗೇ ದುರ್ಗಾರ್ತಿಭಯಹಾರಿಣೀಂ॥೮೦॥

ಅರುಣಪ್ರಾಣಸಂಹಾರಕಾರಣೇ ಕಮಲಾನನೇ ।
ಭೀಮೋ ದೇವಿ ನಮಸ್ತುಭ್ಯಂ ಭಯಾನಿ ಹರ ಸರ್ವಥಾ ॥೮೧॥

ವೈಪ್ರಚಿತ್ತಮಹಾಘೋರಶರೀರೌಘನಿಬರ್ಹಿಣಿ ।
ಶ್ರೀರಕ್ತದಂತಿಕೇ ಗೌರಿ ನಮಸ್ತುಭ್ಯಂ ನಮೋ ನಮಃ ॥೮೨॥

---

ದೇವಿಯೇ! ನೀನು ಮಹಾಗೌರಿಯಾಗಿದ್ದೀಯೆ. ಭವನ ಪ್ರಿಯತಮೆಯಾಗಿದ್ದೀಯೆ. ನಿನಗೆ ನಾವೆಲ್ಲರೂ ಭಕ್ತಿಯಿಂದ ಅಡ್ಡಬಿದ್ದಿದ್ದೇವೆ. ಇಂಥ ನಿಸ್ಸಹಾಯರಾದ ನಮ್ಮನ್ನು ಕಾಪಾಡು. ನಮ್ಮ ಸಕಲ ವ್ಯಾಧಿಗಳನ್ನೂ ದಯೆಯಿಟ್ಟು ನಾಶಮಾಡು. ||೭೯||

ಓ ದುರ್ಗಿಯೇ! ನಿನ್ನ ಕೋಪವು ಅತ್ಯಂತ ಭಯಂಕರವಾದುದು. ಆ ಕೋಪದ ಲೇಶವೇ ಈ ಜ್ವರಾದಿ ವ್ಯಾಧಿಗಳು. ಇವೇ ಮನುಷ್ಯನ ಸರ್ವಸ್ವವನ್ನೂ ನಾಶಮಾಡುವುವು. ಅಂದಮೇಲೆ ನಿನ್ನ ಸಂಪೂರ್ಣ ಕೋಪದ ಸ್ವರೂಪವು ಇನ್ನೆಷ್ಟು ರೌದ್ರವಾಗಿರುವುದು? ಇಂಥ ಸಕಲ ದುರ್ಗತಿಗಳಿಂದ ನಮ್ಮನ್ನು ನೀನೇ ಕಾಪಾಡಬೇಕು. ಇದೋ ನಿನಗೆ ನಾವೆಲ್ಲರೂ ನಮಸ್ಕರಿಸುತ್ತೇವೆ. ||೮೦||

ಓ ದೇವಿ! ನೀನು ಅರುಣನೆಂಬ ದೈತ್ಯನನ್ನು ಸಂಹರಿಸಿದ್ದೀಯೆ. ನೀನೇ ಭಯಂಕರಸ್ವರೂಪಳಾಗಿದ್ದೀಯೆ. ನಿನಗೆ ಅನೇಕ ನಮಸ್ಕಾರಗಳು. ನಮಗೆ ಒದಗುವ ಸಕಲ ಭಯಗಳನ್ನೂ ನಿವಾರಿಸು. ||೮೧||

ವೈಪ್ರನೆಂಬ ಅಸುರನು ನಿನ್ನೊಡನೆ ಯುದ್ಧಮಾಡುವಾಗ ತನ್ನ ಮನಸ್ಸಿನಿಂದಲೇ ಅನೇಕ ದೈತ್ಯರನ್ನು ನಿರ್ಮಿಸಿಕೊಂಡು ಯುದ್ಧಮಾಡುತ್ತಿದ್ದನು. ಆ ಸಮಯದಲ್ಲಿ ನೀನು ಆ ಎಲ್ಲಾ ದೈತ್ಯರನ್ನೂ ಸಂಹಾರಮಾಡಿ ಲೋಕವನ್ನು ಕಾಪಾಡಿದೆ. ಅಂಥ ನಿನಗೆ ನಮಸ್ಕಾರ. ||೮೨||

ಮಹಾಮಾಯೇ ಮಹಾದುರ್ಗೇ ಮಧುನಾಶನಕಾರಣೇ ।
ನಮಸ್ತುಭ್ಯಂ ನಮಸ್ತುಭ್ಯಂ ಭಯಂ ಸಂಹರ ಸಂಹರ ॥೮೩॥

ಕೈಟಭಪ್ರಾಣಹರಣೇ ಪ್ರವೀಣೇ ಶಿವವಲ್ಲಭೇ ।
ನಮಸ್ತುಭ್ಯಂ ನಮಸ್ತುಭ್ಯಂ ಪೀಡಾಂ ಸಂಹರ ಸಂಹರ ॥೮೪॥

ಶಾಕಂಭರಿ ಜಗದ್ವಂದ್ಯೇ ಶಶಾಂಕಲಲಿತಾಲಕೇ ।
ನಮಸ್ತುಭ್ಯಂ ನಮಸ್ತುಭ್ಯಂ ಶಂಕಾತಂಕಾನಿ ಸಂಹರ ॥೮೫॥

ಉನ್ಮತ್ತಮಹಿಷಾರಾತಿಗರ್ವಸಂಹಾರಕಾರಣೇ ।
ನಮಸ್ತುಭ್ಯಮವಾಪನ್ನದಾರಿದ್ರ್ಯಾರ್ತಿಹರೋದ್ಯಮೇ ॥೮೬॥

---

ಓ ಮಹಾದುರ್ಗಿಯೇ! ನೀನು ಮಹಾಮಾಯೆಯೆನಿಸಿರುವೆ. ನೀನು ಮಧು ದೈತ್ಯನನ್ನು ಧ್ವಂಸಮಾಡಿ ಜನರ ಭಯವನ್ನು ನಿವಾರಣೆಮಾಡಿದೆ. ಇದೋ ಈಗಲೂ ನಾವು ನಿನಗೆ ಶತಶಃ ನಮಸ್ಕಾರಮಾಡುತ್ತೇವೆ. ನಮಗೆ ಒದಗಿರುವ ಸಮಸ್ತ ಭಯಗಳನ್ನೂ ಹೋಗಲಾಡಿಸು. ॥೮೩॥

ಓ ದೇವಿಯೇ! ನೀನು ಪರಮೇಶ್ವರನ ಪ್ರಿಯತಮೆಯಾಗಿರುವೆ. ನಿನಗೆ ತಿಳಿಯದಿರುವ ವಿದ್ಯೆಯಾಗಲಿ ಕಲೆಯಾಗಲಿ ಇರುವುದಿಲ್ಲ. ನೀನೇ ಹಿಂದೆ ಕೈಟಭಾ ಸುರನನ್ನು ಸಂಹರಿಸಿ ಜಗತ್ತಿನ ಪೀಡೆಯನ್ನು ಪರಿಹರಿಸಿದೆ. ಇದೋ ನಮ್ಮ ನಮಸ್ಕಾರವನ್ನೂ ದೈನ್ಯವನ್ನೂ ನೋಡಿ ದಯೆಯಿಟ್ಟು ನಮ್ಮ ಪೀಡೆಗಳನ್ನು ದೂರಮಾಡು. ॥೮೪॥

ಓ ಶಾಕಂಭರಿ ದೇವಿ! ನೀನು ಸಕಲ ಜಗತ್ತಿಗೂ ವಂದ್ಯಳಾಗಿದ್ದೀಯೆ. ನಿನ್ನ ಶಿರಃಕುಂಡಲದಲ್ಲಿ ಚಂದ್ರನು ವಿರಾಜಿಸುತ್ತಾನೆ. ಇಂಥ ಮನೋಹರ ಸ್ವರೂಪಳಾದ ನಿನ್ನನ್ನು ನಾವು ಶತಶಃ ನಮಸ್ಕರಿಸುತ್ತೇವೆ. ನಮ್ಮ ಸಕಲ ಕಷ್ಟ ಗಳನ್ನೂ ಶಂಕಾತಂಕೆಗಳನ್ನೂ ನಿವಾರಣೆಮಾಡು. ॥೮೫॥

ಓ ಪಾರ್ವತಿ! ನೀನು ಆ ಸೊಕ್ಕಿದ ಮಹಿಷಾಸುರನನ್ನು ಸಂಹಾರಮಾಡಿ ಆಗ ಸಕಲ ಆಪತ್ತುಗಳನ್ನೂ ನಿವಾರಣೆಮಾಡಿದೆ. ನೀನು ಸದಾ ದರಿದ್ರರ ಮತ್ತು ದುಃಖಿಗಳ ಕಷ್ಟಗಳನ್ನು ಪರಿಹರಿಸುವುದರಲ್ಲಿಯೇ ತತ್ಪರಳಾಗಿದ್ದೀಯೆ. ನಿನಗೆ ನಮಸ್ಕಾರ. ॥೮೬॥

ಸೇತುಭೂಪಾಲಸಂಹಾರಪ್ರವೀಣೇ ಛಂದಲಾಂಬಿಕೇ ।
ನಮಸ್ತುಭ್ಯಂ ಮಹಾದೇವಿ ಸರ್ವರೋಗವಿನಾಶಿನಿ ॥೮೭॥

ಭ್ರಮರಾಂಬೇ ನಮಸ್ತುಭ್ಯಂ ಶಂಬರಾರಿವಿನಾಶಿನಿ ।
ನಮಸ್ತುಭ್ಯಂ ಶಿವೇಶಾನಿ ತ್ವಯಿ ಭಕ್ತಿಂ ಪ್ರಯಚ್ಛ ನಃ ॥೮೮॥

ನಮಸ್ತೇ ಜಗದಾಧಾರೇ ಭವಭಾರವಿನಾಶಿನಿ ।
ನಮಸ್ತುಭ್ಯಂ ನಮಸ್ತುಭ್ಯಂ ಪರಮಾನಂದರೂಪಿಣೀ ॥೮೯॥

ಇತಿ ಸ್ತುತಿಪರಾನ್ ದೃಷ್ಟ್ವಾ ಮುನೀನ್ ದಕ್ಷೋ ವಿಚಕ್ಷಣಃ ।
ಪುರಪೃಷ್ಟ ಕೃತಾಮರ್ಷಾ ಉವಾಚ ವಚನಂ ದ್ವಿಜಾಃ ॥೯೦॥

॥ ದಕ್ಷ ಉವಾಚ ॥

ಅಲಂ ಸ್ತುತಿಭಿರೇತಾಭಿರೇತದುತ್ಪಾತನಾಶಕಂ ।
ಚಿಂತನೀಯಂ ಕಿಮೇತಸ್ಯ ಕಾರಣಂ ವಾ ವದಂತು ನಃ ॥೯೧॥

---

ಓ ಮಹಾದೇವಿ! ನೀನು ಆ ಗರ್ವಿಷ್ಠನಾದ ಸೇತುಭೂಪಾಲನನ್ನು ಸಂಹರಿಸಿರುವೆ. ನಿನಗೆ ಛಂದಲಾಂಬಿಕೆ ಎಂಬ ದಿವ್ಯವಾದ ನಾಮಧೇಯವಿರುವುದು. ನಮ್ಮ ಸಕಲ ರೋಗಗಳನ್ನೂ ನಿವಾರಿಸು. ॥೮೭॥

ಓ ಭ್ರಮರಾಂಬೆ! ನೀನು ಶಂಬರನೆಂಬ ದೈತ್ಯನನ್ನು ಸಂಹಾರಮಾಡಿ ಲೋಕಕ್ಕೆ ಶಾಂತಿಯನ್ನುಂಟುಮಾಡಿದೆ. ನಿನಗೆ ನಮಸ್ಕರಿಸುತ್ತೇನೆ. ನಿನ್ನಲ್ಲಿ ನಮಗೆ ಭಕ್ತಿಯನ್ನುಂಟುಮಾಡು. ॥೮೮॥

ಓ ದೇವಿಯೇ! ನೀನೇ ಸಕಲ ಜಗತ್ತಿಗೂ ಆಧಾರಭೂತಳಾಗಿರುವೆ. ನೀನು ಪರಮಾನಂದಸ್ವರೂಪಿಣಿಯು. ನೀನೇ ನಮ್ಮ ಸಂಸಾರಬಂಧನವನ್ನು ಬಿಡಿಸುವವಳು. ನಿನಗೆ ನಮಸ್ಕಾರ. ॥೮೯॥

ಈಪ್ರಕಾರವಾಗಿ ಆ ಮುನಿಗಳು ಸ್ತೋತ್ರಮಾಡುತ್ತಿರುವುದನ್ನು ದಕ್ಷಬ್ರಹ್ಮನು ನೋಡುತ್ತಲೇ ಇದ್ದನು. ಆದರೆ ಆತನು ಸ್ತುತಿಸಲಿಲ್ಲ. ಆತನ ದೌರ್ಭಾಗ್ಯದಿಂದ ಆತನಿಗೆ ದುರ್ಬುದ್ಧಿಯೇ ಹುಟ್ಟಿತು. ಆತನು ಆ ಸ್ತೋತ್ರವನ್ನು ಸಹಿಸಲಾರದೆ ಹೀಗೆ ಹೇಳಿದನು. ॥೯೦॥

ಈಗ ಸಾಕು. ನಿಮ್ಮ ಸ್ತೋತ್ರವನ್ನು ನಿಲ್ಲಿಸಿರಿ. ಮೊದಲು ಈ ಉತ್ಪಾತಕ್ಕೆ ಪ್ರತೀಕಾರವನ್ನು ಯೋಚಿಸಿರಿ. ಈ ಅನಿಷ್ಟಸೂಚಕವಾದ ಉತ್ಪಾತಗಳು ಏತಕ್ಕೆ

ಶೃಣು ದಕ್ಷ ವಿರೂಪಾಕ್ಷಂ ದೀಕ್ಷಿತಾನಾಂ ಪರಾಂಗತಿಂ ।
ವಿರೂಪಾಕ್ಷಮನಭ್ಯರ್ಚ್ಯ ಧರ್ಮಂ ಕುರ್ವಂತಿ ಯೇ ನರಾಃ ॥೯೨॥

॥ ಋಷಯ ಊಚುಃ ॥

ನಾರಾಧಿತೋ ಮಹಾದೇವಸ್ತ್ವಯಾ ಭಕ್ತೇಷ್ಟದಾಯಕಃ ।
ಅತ ಏವ ಸಮುತ್ಪನ್ನಾ ಮಹೋತ್ಪಾತಪರಂಪರಾ ॥೯೩॥

ಮಹಾದೇವಮನಭ್ಯರ್ಚ್ಯ ಯಃ ಕರ್ಮಾಂತರತತ್ಪರಃ ।
ತಸ್ಯ ನಾಶೋ ಭವತ್ಯೇವ ತತ್ಕುಲಸ್ಯಾಪಿ ಸರ್ವಥಾ ॥೯೪॥

ದಾತಾ ಯಾಗಫಲಸ್ಯಾಪಿ ಶಿವ ಏವ ತಥಾ ಸತಿ ।
ತಮನಭ್ಯರ್ಚ್ಯ ಸಂಪ್ರಾಪ್ತುಂ ಫಲಂ ಕೇನ ಮಹೀತಲೇ ॥೯೫॥

---

ಉಂಟಾದವು? ಇದಕ್ಕೆ ಕಾರಣವೇನು? ಇದನ್ನೆಲ್ಲಾ ಯೋಚಿಸಿ ಹೇಳಿ ಎಂದು ಕೂಗಿದನು. ॥೯೧॥

ಎಲೈ ದಕ್ಷನೇ! ಆ ವಿರೂಪಾಕ್ಷನಾದ ಪರಮೇಶ್ವರನು ಸಕಲ ಯಾಗ ದೀಕ್ಷಿತರಿಗೂ ಪರಮಾಶ್ರಯನಾಗಿರುತ್ತಾನೆ. ಆದುದರಿಂದ ಆತನನ್ನು ಅರ್ಚಿಸದೇ ಯಾವ ಧರ್ಮವನ್ನೂ ಮಾಡಕೂಡದು. ॥೯೨॥

ಹೀಗೆ ಸನ್ಮಾರ್ಗವು ಆಚರಣೆಯಲ್ಲಿದ್ದರೂ ನೀನು ಗರ್ವದಿಂದ ಆ ಭಕ್ತೇಷ್ಟ ದಾಯಕನಾದ ಪರಮೇಶ್ವರನನ್ನು ಆರಾಧನೆ ಮಾಡಲಿಲ್ಲ. ಆದುದರಿಂದಲೇ ಈ ಉತ್ಪಾತವು ಉಂಟಾಗಿದೆ. ॥೯೩॥

ಯಾವ ಕರ್ಮವನ್ನು ಮಾಡುವುದಾದರೂ ಅದಕ್ಕೆ ಮೊದಲು ಪ್ರಾರಂಭದಲ್ಲಿಯೇ ಪರಮೇಶ್ವರನನ್ನು ಪೂಜಿಸಬೇಕು. ಹಾಗೆ ಮಾಡದೆ ಆ ಮಹಾದೇವನನ್ನು ಉಪೇಕ್ಷಿಸಿ ಕರ್ಮಗಳನ್ನು ಮಾಡಿದರೆ ಆ ಕರ್ತನೇ ನಾಶಹೊಂದುವನು. ಅಲ್ಲದೇ ಆತನ ವಂಶವೂ ನಾಶವಾಗುವುದು. ॥೯೪॥

ಸಕಲ ಯಾಗಗಳಿಗೂ ಫಲವನ್ನು ಕೊಡುವವನೇ ಆ ದೇವದೇವನಾದ ಶಂಕರನು. ಹೀಗಿರಬೇಕಾದರೆ ಆತನನ್ನು ಪೂಜಿಸದಿದ್ದರೆ ಫಲವೆಲ್ಲಿಂದ ಬರಬೇಕು? ಆತನನ್ನು ಅರ್ಚಿಸದೇ ಈ ಪ್ರಪಂಚದಲ್ಲಿ ಯಾರಿಗೆತಾನೇ ಫಲವು ದೊರೆತಿದೆ? ಸರ್ವಥಾ ಇಲ್ಲ. ॥೯೫॥

ದುರ್ಭಗಾಣಾಂ ಮಹಾದೇವಪೂಜಾಯಾಂ ನ ಮತಿರ್ಭವೇತ್ ।
ಅತ ಏವ ವೃಥಾ ಕರ್ಮ ನ ಫಲಾಯ ಪ್ರಜಾಯತೇ ॥೯೬॥

ಸ್ಮೃತ್ವಾ ವಾ ಸಕೃದಾರಾಧ್ಯ ಗೌರೀರಮಣಮವ್ಯಯಂ ।
ದುರ್ಲಭ್ಯಾನ್ಯಪಿ ಸರ್ವಾಣಿ ಫಲಾನಿ ಪ್ರಾಪ್ನುವಂತಿ ತೇ ॥೯೭॥

ಫಲಾನಿ ಯಾನಿ ಯೈರ್ಧರ್ಮೈಃ ಪ್ರಾಪ್ಯಂತೇ ಸ್ವಗುಣೈಸ್ಸದಾ ।
ತಾನಿ ಸರ್ವಾಣಿ ಲಭ್ಯಂತೇ ಕೇವಲಂ ಶಂಕರಾರ್ಚನಾತ್ ॥೯೮॥

ಶಂಕರಾನರ್ಚನೇನಾಪಿ ಫಲಂ ಯಃ ಪ್ರಾಪ್ತುಮಿಚ್ಛತಿ ।
ಸ ವೃಷ್ಟ್ಯಾಪಿ ವಿನಾ ಧಾನ್ಯಮುತ್ಪಾದಯಿತುಮಿಚ್ಛತಿ ॥೯೯॥

ಕೋ ವಾ ಶಿವಮನಾರಾಧ್ಯ ಶಿವಂ ಸಂಪ್ರಾಪ್ತುಮಿಚ್ಛತಿ ।
ಅವಿವೇಕಿನಮೇಕಂ ತ್ವಾಂ ಋತೇ ಮೃತಿಭಯಾತುರಂ ॥೧೦೦॥

---

ಅದೃಷ್ಟ ಹೀನರಿಗೆ ಮಾತ್ರ ಶಿವಪೂಜೆಮಾಡಬೇಕೆಂಬ ಬುದ್ಧಿಹುಟ್ಟುವುದಿಲ್ಲ. ಆದುದರಿಂದಲೇ ಭಾಗ್ಯಹೀನರು ಯಾಗಮಾಡಿದರೂ ವ್ಯರ್ಥ. ಅದರಿಂದ ಯಾವ ಫಲವೂ ಹುಟ್ಟುವುದಿಲ್ಲ. ॥೯೬॥

ನಾಶರಹಿತನೂ ಪಾರ್ವತೀರಮಣನೂ ಆದ ಪರಮೇಶ್ವರನನ್ನು ಧ್ಯಾನ ಮಾಡಿದವರು ಒಂದಾವರ್ತಿ ಆರಾಧನೆಯನ್ನು ಮಾಡಿದರೂ ಸಹ ದುರ್ಲಭವಾದ ಅಪಾರವಾದ ಪುಣ್ಯಫಲಗಳನ್ನು ಪಡೆಯುತ್ತಾರೆ. ॥೯೭॥

ಯಾವ ಯಾವ ಧರ್ಮಗಳನ್ನು ಅನುಷ್ಠಾನ ಮಾಡುವುದರಿಂದ, ಯಾವ ಯಾವ ಅಂಶಗಳನ್ನು ಆಚರಿಸುವುದರಿಂದ ಯಾವ ಯಾವ ಫಲಗಳು ದೊರೆಯು ವುವೋ, ಅವುಗಳೆಲ್ಲವೂ ಶಿವಾರ್ಚನೆಯೊಂದರಿಂದಲೇ ಲಭಿಸುವುವು. ॥೯೮॥

ಶಂಕರನನ್ನು ಪೂಜಿಸದೇ ಪುಣ್ಯಫಲವನ್ನು ಪಡೆಯಬೇಕೆಂಬ ಅಪೇಕ್ಷೆಯು, ಕೇವಲ ಮಳೆಯೇ ಇಲ್ಲದೇ ಧಾನ್ಯವನ್ನು ಬೆಳೆಯಬೇಕೆಂಬ ಅಪೇಕ್ಷೆಯಂತೆಯೇ ಸರಿ. ಈ ಎರಡೂ ಒಂದೇ ಸಮಾನವಾದದ್ದು. ಇದರಿಂದ ಫಲವೇ ಇರುವುದಿಲ್ಲ. ॥೯೯॥

ನಿನ್ನೊಬ್ಬನನ್ನು ಬಿಟ್ಟು ಮತ್ತೆ ಯಾರುತಾನೇ ಕಲ್ಯಾಣಾಪೇಕ್ಷಿಗಳು ಆ ಮಂಗಳಸ್ವರೂಪನಾದ ಪರಮೇಶ್ವರನನ್ನು ಆರಾಧಿಸುವುದಿಲ್ಲ? ಪ್ರಪಂಚದಲ್ಲಿ

**ಕಸ್ಸರ್ವಮಂಗಳಾಕಾಂತಂ ಕೃತಾಂತಾಂತಕಮಾದರಾತ್ ।**
**ಅನಭ್ಯರ್ಚ್ಯ ಶಿವಂ ಪ್ರಾಪ್ಯ ಮೋದತೇ ದಕ್ಷ ತದ್ವದ ॥೧೦೧॥**

**ಕ ಸ್ಸರ್ವಮಂಗಳಾಕಾಂತಂ ನಿತಾಂತಂ ಶಾಂತಮಾದರಾತ್ ।**
**ಸಾದರಂ ಧೀರಮಾರಾಧ್ಯಮಾರಾಧ್ಯ ನ ಶಿವಂ ವ್ರಜೇತ್ ॥೧೦೨॥**

**ಪುಣ್ಯಾನಾಂ ಪರಿಪಾಕೇನ ಬಹೂನಾಮೇವ ಕೇವಲಂ ।**
**ಭಕ್ತಿರ್ಭವೇ ಭವತ್ಯೇವ ಬಹುಭಾಗ್ಯವತಾಂ ನೃಣಾಂ ॥೧೦೩॥**

**ದುರ್ಲಭಾ ಭಕ್ತಿ ರೀಶಾನೇ ಸೌಭಾಗ್ಯಪರಿಪಾಕಜಾ ।**
**ಸಾ ತು ಭಾಗ್ಯವತಾಮೇವ ಕೇಷಾಂಚಿತ್ ಖಲು ಜಾಯತೇ ॥೧೦೪॥**

---

ಎಲ್ಲರೂ ಆ ಶಂಕರನನ್ನೇ ಪೂಜಿಸಿ ಕಲ್ಯಾಣವನ್ನು ಪಡೆಯುತ್ತಾರೆ. ನೀನು ಮಾತ್ರ ಅತ್ಯಂತ ಅವಿವೇಕಿಯಾಗಿರುವೆ. ಮರಣವು ಸಮೀಪಿಸಿರುವುದರಿಂದ ನಿನ್ನ ಬುದ್ಧಿಯು ಪಲ್ಲಟವಾದಂತೆ ತೋರುತ್ತದೆ. ||೧೦೦||

ಎಲೈ ದಕ್ಷ, ಇದನ್ನಾದರೂ ಹೇಳು ನೋಡೋಣ. ಯಾರು ನಿನ್ನಂತೆ ಶಂಕರನನ್ನು ಅರ್ಚಿಸದೇ ಇದ್ದಾರೆ? ಅಥವಾ ಆತನನ್ನು ಆರಾಧಿಸದೇ ಯಾರು ಆನಂದವನ್ನು ಗಳಿಸಿಕೊಂಡಿದ್ದಾರೆ? ಆ ಪರಮೇಶ್ವರನು ಮರಣಭಯನಿವಾರಕನಾದ ಮೃತ್ಯುಂಜಯನು. ಮೇಲಾಗಿ ಮಂಗಳಪ್ರದನೂ ಸರ್ವಮಂಗಳಾಪ್ರಿಯನೂ ಆಗಿದ್ದಾನೆ. ಇಂಥವನನ್ನು ಅರ್ಚಿಸದೇ ಇರುವುದಕ್ಕಿಂತಲೂ ಬೇರೆ ಅವಿವೇಕವುಂಟೇ? ||೧೦೧||

ಆ ಪರಮೇಶ್ವರನು ಸರ್ವಮಂಗಳೆಗೇ ವಲ್ಲಭನು. ಅತ್ಯಂತ ಶಾಂತಸ್ವಭಾವವುಳ್ಳವನು. ಮೇಲಾಗಿ ಸಕಲ ಜಗತ್ಪೂಜ್ಯನು. ಇಂಥವನನ್ನು ಆರಾಧಿಸದೇ ಯಾರುತಾನೇ ಶ್ರೇಯಸ್ಸನ್ನು ಸಂಪಾದಿಸಬಲ್ಲರು? ||೧೦೨||

ಅನೇಕರಲ್ಲಿ ಎಲ್ಲಿಯೋ ಕೆಲವರಿಗೆ ಮಾತ್ರ ಅವರ ಪುಣ್ಯಕರ್ಮಗಳ ಪರಿಪಾಕದಿಂದ ಪರಮೇಶ್ವರನಲ್ಲಿ ಭಕ್ತಿ ಉದ್ಭವಿಸುವುದು. ಅದೂ ಕೇವಲ ಭಾಗ್ಯವಂತರಾದವರಿಗೆ ಮಾತ್ರ. ಶಿವನೂ ಶಿವಭಕ್ತಿಯೂ ಎಂದರೆ ಸಾಮಾನ್ಯವಾದುದಲ್ಲ||೧೦೩||

ಶಿವಭಕ್ತಿಯು ಅತ್ಯಂತ ಮಹತ್ತರವಾದುದು, ಅಲ್ಲದೇ ಅತ್ಯಂತ ದುರ್ಲಭವಾದುದು. ಅಂಥ ಶಿವಭಕ್ತಿಯು ಎಲ್ಲಿಯೋ ಕೆಲವರು ಪುಣ್ಯವಂತರಿಗೆ ಮಾತ್ರ ದೊರೆಯುವುದು. ||೧೦೪||

ಅನಂತಜನ್ಮಭಿರ್ಯೇನ ಪುಣ್ಯರಾಶಿಸ್ಸಮಾರ್ಜಿತಃ ।
ತಸ್ಯೈವ ತಾವದ್ಭಕ್ತಿಸ್ಸ್ಯಾದ್ಭವೇ ಭವವಿಮೋಚಕೇ ॥೧೦೫॥

ದೇವಾಂತರಾರಾಧನೇನ ತ್ಯಕ್ತ್ವಶಂಕರಪೂಜನೈಃ ।
ನ ಲಭ್ಯತೇ ಫಲಂ ನೂನಂ ಮಹದ್ವಾ ಸ್ವಲ್ಪಮೇವ ವಾ ॥೧೦೬॥

ಶಕ್ತಿರೀಶಪ್ರಸಾದೇನ ಸತ್ಕರ್ಮಕರಣಕ್ಷಮಾ ।
ಶಿವಪ್ರಸಾದವಿರಹೇ ಸಾ ಶಕ್ತಿರತಿದುರ್ಲಭಾ ॥೧೦೭॥

ತವಾಪಿ ಕುಂಠಿತಾಶಕ್ತಿಶ್ಶಿವಾನಭ್ಯರ್ಚನಾದಿಹ ।
ಕೋ ವಾ ಸಮರ್ಥೋ ದೇವೇಷು ಪ್ರಾಪ್ತಾಪತ್ಕುಲವಾರಣೇ ॥೧೦೮॥

---

ಆ ಪರಮೇಶ್ವರನೇ ಸಂಸಾರಬಂಧನವನ್ನು ಬಿಡಿಸುವವನು. ಇಂಥವನಲ್ಲಿ ಕೇವಲ ಮೋಕ್ಷಕ್ಕೆ ಅರ್ಹರಾದ, ಅನೇಕ ಜನ್ಮಗಳಿಂದಲೂ ಸಂಪಾದಿಸಿದ ಪುಣ್ಯ ರಾಶಿಯುಳ್ಳವರಿಗೇ ಭಕ್ತಿಯುಂಟಾಗುವುದು. ಮತ್ತು ಅವರೇ ಶ್ರೇಯಸ್ಸನ್ನೂ ಪಡೆಯುವರು. ॥೧೦೫॥

ಶಂಕರನನ್ನು ಆರಾಧಿಸದೇ ಇತರ ದೇವತೆಗಳನ್ನು ಎಷ್ಟು ಪೂಜಿಸಿದರೂ ಯಾರಿಗೂ ಫಲ ದೊರೆಯಲಾರದು. ಹೆಚ್ಚು ಫಲವಂತೂ ಇಲ್ಲ, ಕಿಂಚಿತ್ ಫಲವೂ ದೊರೆಯಲಾರದು. ॥೧೦೬॥

ಆ ಪರಮೇಶ್ವರನ ಅನುಗ್ರಹದಿಂದಲೇ ದೈಹಿಕ, ಮಾನಸಿಕ, ಆರ್ಥಿಕ ಮುಂತಾದ ಸಕಲ ಶಕ್ತಿಗಳೂ, ಪುಣ್ಯಕರ್ಮಗಳನ್ನು ಅನುಷ್ಠಾನಮಾಡಲು ದಕ್ಷತೆಯೂ ಬರುವುದು. ಆ ಶಿವಾನುಗ್ರಹವಿಲ್ಲದಿದ್ದರೆ ಯಾವ ಬಗೆಯ ಶಕ್ತಿಯೂ ದಕ್ಷತೆಯೂ ಇರುವುದಿಲ್ಲ. ಮತ್ತೂ ಮನುಷ್ಯನು ಸರ್ವಥಾ ನಿಶ್ಶಕ್ತನಾಗುವನು. ॥೧೦೭॥

ಎಲೈ ದಕ್ಷನೇ! ನೀನು ಅಂಥ ಶಿವನನ್ನು ಪೂಜಿಸದೇ ಇರುವುದರಿಂದ ನಿನ್ನಲ್ಲಿದ್ದ ಸಕಲ ಶಕ್ತಿ ಸಾಮರ್ಥ್ಯಗಳನ್ನೂ ಕಳೆದುಕೊಂಡಿದ್ದೀಯೆ. ಈಗ ಒದಗ ಲಿರುವ ಆಪತ್ತನ್ನು ಪರಿಹರಿಸಲು ನಿನಗೆ ಶಕ್ತಿ ಸಾಲದು. ಅಲ್ಲದೇ ಈ ದೇವತೆ ಗಳಿಗಾರಿಗೂ ಸಾಮರ್ಥ್ಯವಿರುವುದಿಲ್ಲ. ॥೧೦೮॥

ಆಪತ್ಪರಂಪರಾ ಸೇಯಂ ಹರಾನರ್ಚನತೋಽಧುನಾ ।
ನ ದೃಷ್ಟಾ ಸೇಯಮುನ್ಮಾದಾದಹಂಕಾರೇಣ ಚ ತ್ವಯಾ ॥೧೦೯॥

ದುಷ್ಟೈರ್ದುರಭಿಮಾನೇನ ಶಿವಾನಾರಾಧನೇ ಫಲಂ ।
ಕಥಂ ಪ್ರಾಪ್ಯಂ ತೃಷಾಂ ಶಾಂತಿರ್ಲೋಕೇ ಕಿಂ ಮೃಗತೃಷ್ಣಯಾ॥೧೧೦॥

ಮಹಾದೇವೇಽಪ್ಯಹಂಕಾರಂ ಕೃತ್ವಾ ಜೀವಿತುಮಿಚ್ಛತಿ ।
ಯಸ್ತಂ ಜ್ವಲನಸಂದಗ್ಧಂ ಮೃತಮೇವೇತಿ ಮನ್ಮಹೇ ॥೧೧೧॥

ಅಹಂಕಾರಃ ಕೃತಃ ಪೂರ್ವಂ ಮಹಾರುದ್ರೇ ದುರಾತ್ಮಭಿಃ ।
ತೇ ಸರ್ವೇ ನಿರಯಂ ಪ್ರಾಪ್ತಾಃ ಕುಂಭೀಪಾಕೇ ವಸಂತಿ ಚ ॥೧೧೨॥

---

ನೀನು ಶಿವನನ್ನು ಆರಾಧನೆಮಾಡದಿದ್ದುದರಿಂದಲೇ ಈ ಉತ್ಪಾತಗಳೂ ಆಪತ್ತುಗಳೂ ಬಂದೊದಗಿದವು. ನೀನು ಮಾತ್ರ ವೈಭವಮದದಿಂದಲೂ ಅಹಂಕಾರದಿಂದಲೂ ಯಾವುದನ್ನೂ ಲಕ್ಷ್ಯಮಾಡಲಿಲ್ಲ. ಶಿವನನ್ನೂ ಧ್ಯಾನಿಸಲಿಲ್ಲ. ||೧೦೯||

ಹೀಗೆ ದುರಭಿಮಾನದಿಂದ ನಿರ್ಲಕ್ಷ್ಯರಾದವರಿಗೆ ಹೇಗೆ ಮಂಗಳವುಂಟಾದೀತು? ಶಿವನನ್ನು ಆರಾಧಿಸದೇ ಫಲವು ಹೇಗೆ ದೊರೆತೀತು? ಪ್ರಪಂಚದಲ್ಲಿ ಮೃಗಮರೀಚಿಕೆಯಿಂದ ದಾಹಶಾಂತಿಯು ಎಲ್ಲಿಯಾದರೂ ಕಂಡುಬಂದಿದೆಯೇ? ಸರಿಯಾದ ಕಾರಣವಿಲ್ಲದೇ ಎಲ್ಲಿಯೂ ಅನುಕೂಲವಾದ ಫಲವು ದೊರೆಯಲಾರದು. ||೧೧೦||

ಅಂತಹ ಪರಮೇಶ್ವರನಲ್ಲಿಯೂ ಅಹಂಕಾರವನ್ನು ತೋರಿಸಿಕೊಂಡು, ದ್ವೇಷವನ್ನು ಕಟ್ಟಿಕೊಂಡು, ಮೇಲಾಗಿ ತಾನೂ ಬಾಳಬೇಕು, ಬದುಕಬೇಕು ಎಂದು ಯಾವನು ಅಪೇಕ್ಷಿಸುತ್ತಾನೆಯೋ, ಅಂತಹವನ ಅವಿವೇಕಕ್ಕೆ ಏನು ಹೇಳುವುದು? ಅಂಥ ಶಿವನ ಉದಾಸೀನತೆಗೆ ಪಾತ್ರನಾದವನು ಸತ್ತು ಸುಟ್ಟು ಭಸ್ಮವಾದಂತೆಯೇ ಸರಿ. ಆತನ ವಿಚಾರದಲ್ಲಿ ಯಾವ ಆಸೆ ಭರವಸೆಗಳೂ ಉಳಿಯಲಾರವು. ||೧೧೧||

ಪೂರ್ವಕಾಲದಲ್ಲಿಯೂ ಕೆಲವು ಜನ ದುರಾತ್ಮರು ಇಂಥ ಮಹಾರುದ್ರನಲ್ಲಿ ಅಹಂಕಾರ ತೋರಿಸಿದ್ದರು. ಅವರೆಲ್ಲರೂ ತಮ್ಮ ಪಾಪಕ್ಕೆ ಫಲವಾಗಿ ಈಗ ಕುಂಭೀಪಾಕ ನರಕದಲ್ಲಿ ಭೀಷಣವಾದ ಶಿಕ್ಷೆಯನ್ನು ಅನುಭವಿಸುತ್ತಾ ಇದ್ದಾರೆ. ||೧೧೨||

**ಯಸ್ಮಾದ್ವಾತೋಽಪಿ ಭೀತಸ್ಸನ್ ವಾತಿ ಸೂರ್ಯೋಽಪಿ ಚಂದ್ರಮಾಃ ।**
**ಉದೇತಿ ತಂ ಮಹಾದೇವಂ ಭಜಂತಿ ಭವಭೀರವಃ ॥೧೧೩॥**

**ಶರೀರಂ ತಸ್ಯ ಭಾರಾಯ ಕೇವಲಂ ಪರಿಕಲ್ಪಿತಂ ।**
**ನ ಯಸ್ಯ ಶಂಕರೇ ಭಕ್ತಿಃ ಕ್ಷಣಾರ್ಧಂ ಕ್ಷಣಮೇವ ವಾ ॥೧೧೪॥**

**ತಸ್ಯೈವ ಜೀವನಂ ಧನ್ಯಂ ಜನ್ಮ ಸಂಪ್ರಾಪ್ಯ ಯೇನ ವಾ ।**
**ಪೂಜಿತೋ ಗಿರಿಜಾಕಾಂತಃ ಕೃತಾಂತಾಂತಕ ಏವ ಸಃ ॥೧೧೫॥**

**ಅಧುನಾಪಿ ಮಹೇಶಾನೇ ತವ ಭಕ್ತಿರ್ನ ಜಾಯತೇ ।**
**ಅತ ಏವ ಹಿ ದೌರ್ಭಾಗ್ಯಂ ತವಾದ್ಯಾಪ್ಯನುವರ್ತತೇ ॥೧೧೬॥**

---

ಆ ಪರಮೇಶ್ವರನ ಆಜ್ಞಾಭಂಗವಾದರೆ ಎಲ್ಲಿ ಕೋಪಗೊಳ್ಳುವನೋ ಎಂಬ ಭಯದಿಂದಲೇ ಸರ್ವದಾ ವಾಯುವು ಎಲ್ಲಾ ಕಡೆಯೂ ಬೀಸುತ್ತಾನೆ. ಸೂರ್ಯನೂ ಚಂದ್ರನೂ ಆತನ ಭಯದಿಂದಲೇ ನಿತ್ಯವೂ ಅವಿಶ್ರಾಂತವಾಗಿ ಉದಯಿಸಿ ಚಲಿಸುತ್ತಾರೆ. ॥೧೧೩॥

ಯಾವಾತನಿಗೆ ಆ ಪರಮೇಶ್ವರನಲ್ಲಿ ಒಂದು ಕ್ಷಣವೋ ಅಥವಾ ಅದಕ್ಕಿಂತಲೂ ಕಮ್ಮಿ ಅರ್ಧಕ್ಷಣವೂ ಭಕ್ತಿಯುಂಟಾಗಿಲ್ಲವೋ, ಅಂತಹವನ ಹುಟ್ಟು ಕೇವಲ ಈ ಭೂಮಿಗೆ ಭಾರವಾಗಿಯೇ ತೋರುವುದು. ಆತನು ಕೇವಲ ಭೂಭಾರಕ್ಕೇ ಹುಟ್ಟಿರುವುದು. ॥೧೧೪॥

ಯಾವಾತನು ಈ ಭೂಮಿಯಲ್ಲಿ ಜನ್ಮವನ್ನು ಪಡೆದುಕೊಂಡು, ತನ್ನ ಕರ್ತವ್ಯದ ಕಡೆಗೆ ಗಮನವಿಟ್ಟು ಆ ಗಿರಿಜಾರಮಣನನ್ನು ಪೂಜಿಸುವನೋ ಅಂತಹವನ ಜನ್ಮವೇ ನಿಜವಾಗಿ ಸಾರ್ಥಕವಾದದ್ದು. ಅಲ್ಲದೇ ಅಂತಹ ಶಿವಪೂಜಕನು ತಾನೇ ಆ ಮೃತ್ಯುಂಜಯನಾಗುವನು. ॥೧೧೫॥

ಎಲೈ ದಕ್ಷನೇ, ಇನ್ನೂ ಸಹ ನಿನಗೆ ಶಿವನಲ್ಲಿ ಭಕ್ತಿಯು ಹುಟ್ಟಿರುವುದಿಲ್ಲವಲ್ಲ. ಇದಕ್ಕೆ ಏನು ಹೇಳೋಣ? ನಿನಗೆ ಕೇಡುಗಾಲ ಸಮೀಪಿಸಿರುವಂತಿದೆ. ನಿನ್ನ ದೌರ್ಭಾಗ್ಯವು ಇನ್ನೂ ಅನುಭವಿಸಿ ತೀರಿರುವುದಿಲ್ಲವೆಂದು ಕಾಣುತ್ತದೆ. ಅದಕ್ಕೇ ನಿನಗೆ ಶಿವಭಕ್ತಿಯು ಉಂಟಾಗಿರುವುದಿಲ್ಲ. ॥೧೧೬॥

ಭಕ್ತಿರ್ನ ಸಹಸಾ ತಾವದುಮಾಕಾಂತೇ ಪ್ರಜಾಯತೇ ।
ದುರದೃಷ್ಟವಿನಷ್ಟಾನಾಂ ನರಾಣಾಂ ದುಷ್ಟಕರ್ಮಣಾಂ ॥೧೧೭॥

ಬಹವೋಽಪಿ ಭವಿಷ್ಯಂತಿ ಮೃತಕಲ್ಪಾಃ ಕಲಾವಪಿ ।
ಕಿಂ ತೈರ್ಬಂಭರಸಂಕಾಶೈರಧರ್ಮನಿಲಯೈರಪಿ ॥೧೧೮॥

ತಸ್ಯೈವಾಮಿತಪುಣ್ಯಕೋಟಿಘಟಿತಂ ಜನ್ಮೇತಿ ಮನ್ಯಾಮಹೇ
ಯಸ್ಯಾಂತಃಕರಣಂ ಕ್ಷಣಾರ್ಧಮಪಿ ವಾ ವಿಶ್ವೇಶ್ವರಾರಾಧನೇ ।
ನ್ಯಾಸಕ್ತಂ ವಿಗತಸ್ಪೃಹಂ ತದಿತರಾನುತ್ಸೃಜ್ಯ ಜನ್ಮಾಪಿ ವಾ
ವ್ಯರ್ಥಂ ವ್ಯರ್ಥಮಿತಿಶ್ರುತಂ ಶ್ರುತಿಶತೈರಶ್ರಾಂತಮೇವ ಧ್ರುವಂ ॥೧೧೯॥

ಇತಿ ಶ್ರೀಶಿವರಹಸ್ಯೇ ತೃತೀಯಾಂಶೇ ಹರಾಖ್ಯೇ ಪೂರ್ವಾರ್ಧೇ
ದಕ್ಷಾಧ್ವರ ಪ್ರಶಂಸಾಯಾಂ ದಕ್ಷರ್ಷಿಸಂವಾದೇ ಶಿವೋತ್ಕರ್ಷತಾವರ್ಣನಂ
ನಾಮ ಸಪ್ತತ್ರಿಂಶೋಽಧ್ಯಾಯಃ

---

ಪೂರ್ವದಲ್ಲಿ ದುಷ್ಟಕರ್ಮಗಳನ್ನು ಮಾಡಿರುವವರಿಗೂ, ಭಾಗ್ಯಹೀನರಿಗೂ ಸುಲಭವಾಗಿ ಪರಮೇಶ್ವರನಲ್ಲಿ ಭಕ್ತಿಯು ಹುಟ್ಟಲಾರದು. ನೀನೂ ಸಹ ದುರ್ಭಾಗ್ಯದಗ್ಧನಾಗಿದ್ದೀಯೆ. ॥೧೧೭॥

ಹೀಗೆಯೇ ಶಿವಭಕ್ತಿ ಇಲ್ಲದ ಜನರು ಕಲಿಗಾಲದಲ್ಲಿಯೂ ಅನೇಕರು ಹುಟ್ಟುವರು. ಅಂತಹವರು ಜೀವಿಸಿದ್ದರೂ ಮೃತರಾದರೂ ವ್ಯತ್ಯಾಸವಿಲ್ಲ. ಏಕೆಂದರೆ ಜೀವಂತರಿದ್ದಾಗಲೂ ಶಿವನನ್ನು ಅರ್ಚಿಸುವುದಿಲ್ಲ. ಅವರೆಲ್ಲರೂ ಕೇವಲ ತೃಣಪ್ರಾಯರು. ಸಕಲ ಅಧರ್ಮಗಳಿಗೂ ಆಧಾರಭೂತರು. ಇಂತಹವರಿಗೆ ನರಕವಲ್ಲದೇ ಬೇರೆ ಗತಿಯೇ ಇಲ್ಲ. ॥೧೧೮॥

ಯಾವಾತನು ತನ್ನ ಜನ್ಮದಲ್ಲಿ ಯಾವಾಗಲಾದರೂ ಒಂದುಸಲ ಒಂದು ಕ್ಷಣ ಮಾತ್ರವಾದರೂ ಆ ಪರಮೇಶ್ವರನನ್ನು ಧ್ಯಾನಿಸಿದ್ದರೆ ಅಥವಾ ಪೂಜಿಸಿದ್ದರೆ ಆತನ ಜನ್ಮವೇ ಪುಣ್ಯಕೋಟಿಯುಕ್ತವಾಗುವುದು. ಆತನ ಜನ್ಮವು ಸಾರ್ಥಕವಾಗುವುದು. ಶಿವಪೂಜೆಯ ಸಮಯದಲ್ಲಿ ಇತರ ಹವ್ಯಾಸಗಳನ್ನು ಕೊಂಚವೂ

ಮನಸ್ಸಿನಲ್ಲಿ ಯೋಚಿಸಕೂಡದು. ಇಂತಹವನೇ ನಿಜವಾಗಿ ಧನ್ಯನು. ಮತ್ತು ಶಿವನನ್ನು ಪೂಜಿಸದವರ ಜನ್ಮವು ಸರ್ವಥಾ ನಿರರ್ಥಕವಾದದ್ದು. ಹೀಗೆಂದು ವೇದದಲ್ಲಿ ಪದೇ ಪದೇ ಹೇಳಲಾಗಿದೆ. ||೧೧೯||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಹರನಾಮಕವಾದ ಮೂರನೆಯ ಅಂಶದೊಳಗೆ ಪೂರ್ವಾರ್ಧದಲ್ಲಿ ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಅಷ್ಟತ್ರಿಂಶೋಽಧ್ಯಾಯಃ



॥ ನಾರದ ಉವಾಚ ॥

**ಇತ್ಯುಕ್ತಮುನಿವಾಕ್ಯಾನಿ ಶ್ರುತ್ವಾ ದಕ್ಷಃ ಪುನಃ ಪುನಃ ।**
**ವಿನಾಶಕೇರಯೋಗ್ಯಾನಿ ವಚನಾನ್ಯಾಹ ಸತ್ವರಂ ॥೧॥**

॥ ದಕ್ಷ ಉವಾಚ ॥

**ದಕ್ಷಃ ಪ್ರಜಾಪತಿಸ್ಸೋಽಹಂ ಮತ್ತಃ ಸರ್ವಂ ಪ್ರವರ್ತತೇ ।**
**ಮಮಾಪಿ ರುದ್ರಃ ಕಿಂ ಪೂಜ್ಯಸ್ತ್ರಿಶೂಲೀ ಸರ್ಪಭೂಷಣಃ ॥೨॥**

---

## ಮೂವತ್ತೆಂಟನೆಯ ಅಧ್ಯಾಯ

ಈರೀತಿಯಾಗಿ ದಕ್ಷನಿಗೆ ಆ ಋಷಿಜನರೆಲ್ಲರೂ ಅನೇಕ ವಿಧವಾಗಿ ಬುದ್ಧಿವಾದವನ್ನು ಹೇಳಿದರು. ವಿವೇಕದಿಂದ ಎಚ್ಚರಿಸಿದರು. ಆದರೂ ಆ ದಕ್ಷನು ಅವರ ಮಾತನ್ನು ಲಕ್ಷಿಸದೆ ತನ್ನ ವಿನಾಶವನ್ನು ತಾನೇ ತಂದುಕೊಳ್ಳುವನೋ ಎಂಬಂತೆ ಅತ್ಯಂತ ಗರ್ವದಿಂದ ಹೀಗೆ ಹೇಳಿದನು. ಎಂದು ನಾರದರು ಹೇಳಲುಪಕ್ರಮಿಸಿದರು. ||೧||

"ನಾನು ಸಾಮಾನ್ಯನೆಂದು ತಿಳಿದುಕೊಂಡಿದ್ದೀರೇನು? ನಾನು ಸಾಕ್ಷಾತ್ ಪ್ರಜಾಪತಿಯು, ಸೃಷ್ಟಿಕರ್ತನು. ನನ್ನಿಂದಲೇ ಪ್ರಪಂಚವೆಲ್ಲವೂ ಹುಟ್ಟಿರುವುದು. ಮತ್ತು ಹುಟ್ಟುತ್ತಿರುವುದು. ಇಂತಹ ಸ್ವತಂತ್ರನೂ ಸರ್ವಶಕ್ತನೂ ಆದ ನಾನೂ ಆ ರುದ್ರನನ್ನು ಪೂಜಿಸಬೇಕೋ? ಸಾಧ್ಯವಿಲ್ಲ. ನಾನು ಆತನನ್ನು ಎಂದೂ ಗೌರ

ಇತ್ಯುಕ್ತಂ ತದ್ವಚಶ್ಶ್ರುತ್ವಾ ಮುನಯಃ ಕ್ರೋಧಸಂಕುಲಾಃ ।
ಧಿಗ್ಧಿಗ್ಧಿಕ್ತವ ಜನ್ಮೇತಿ ತಮೂಚುರ್ದಕ್ಷಮುದ್ಧತಂ ॥೩॥

ಅಪೂಜ್ಯತ್ವಮತಿರ್ಯಸ್ಯ ಶಂಕರೇ ಲೋಕಶಂಕರೇ ।
ಸ ಮದ್ಯಪಜಚಂಡಾಲರೇತಃಪಾತಸಮುದ್ಭವಃ ॥೪॥

ಯಸ್ಯ ಭಕ್ತಿರ್ಮಹಾದೇವೇ ನ ಕ್ಷಣಂ ವಾ ಪ್ರಜಾಯತೇ ।
ತನ್ಮಾತಾ ಜಾರಿಣೀ ಜ್ಞೇಯಾ ಸಾ ಮದ್ಯಪಕುಲೋದ್ಭವಾ ॥೫॥

---

ವಿಸುವುದಿಲ್ಲ. ಆ ರುದ್ರನು ಯಾವಾಗಲೂ ತ್ರಿಶೂಲವನ್ನು ಹಿಡಿದುಕೊಂಡು, ಸರ್ಪಗಳನ್ನು ಮೈಗೆ ಸುತ್ತಿಕೊಂಡು ನೋಡಲು ಬೀಭತ್ಸನಾಗಿದ್ದಾನೆ. ಇಂತಹವನನ್ನು ನನ್ನಂತಹ ಸರ್ವಶಕ್ತನು ಪೂಜಿಸುವುದೆಂದರೇನು? ಇದು ಆಗತಕ್ಕದ್ದಲ್ಲ." ||೨||

ಈರೀತಿ ದಕ್ಷನು ಔದ್ಧತ್ಯದಿಂದಲೂ ದರ್ಪದಿಂದಲೂ ಆಡಿದ ಮಾತನ್ನು ಕೇಳಿ ಆ ಮುನಿಗಳಿಗೆಲ್ಲಾ ಅತ್ಯಂತ ಕೋಪಬಂದಿತು. ಅವರು ಸಿಟ್ಟಿನಿಂದ "ನಿನ್ನ ಜನ್ಮಕ್ಕೆ ಧಿಕ್ಕಾರ. ಛೀ ಎಂತಹ ಅಪಾಯಕರವಾದ ಮಾತನ್ನಾಡುವೆ. ನಿನಗೆ ವಿನಾಶ ಕಾಲವು ಸಮೀಪಿಸಿದೆ." ಎಂದು ಗರ್ಜಿಸಿದರು. ||೩||

ಎಲೈ ದಕ್ಷನೇ, ಈ ರೀತಿ ಶಿವನಿಂದೆಯನ್ನು ಮಾಡುತ್ತಿರುವ ನೀನು ಎಷ್ಟು ಪತಿತನಾಗುವೆ? ಯಾವುದನ್ನು ನೀನು ಗರ್ವದಿಂದ ಗಮನಿಸುತ್ತಿಲ್ಲ. ಸಕಲ ಲೋಕಕ್ಕೇ ಕಲ್ಯಾಣಕಾರಿಯಾದ ಶಂಕರನಲ್ಲಿ ಯಾರಿಗೆ ಅಪೂಜ್ಯತ್ವಬುದ್ಧಿ ಹುಟ್ಟುವುದೋ, ಯಾವಾತನು ಶಿವನನ್ನು ತುಚ್ಛನೆಂದು ಯೋಚಿಸುವನೋ, ಆತನೇ ಚಂಡಾಲನು. ಆತನು ಮದ್ಯಪಾಯಿಯಾದ ಚಂಡಾಲನಿಂದ ಹುಟ್ಟಿದವನೆಂದೇ ಹೇಳುತ್ತಾರೆ. ||೪||

ಶಿವನಲ್ಲಿ ಯಾವನಿಗೆ ಆತನ ಜನ್ಮದಲ್ಲಿ ಒಂದು ಸಲವೂ ಭಕ್ತಿಯು ಉಂಟಾಗುವುದಿಲ್ಲವೋ, ಯಾವಾತನು ಶಿವನು ಪೂಜ್ಯನೆಂದು ಒಂದು ಸಲವಾದರೂ ಒಪ್ಪಿಕೊಂಡಿರುವುದಿಲ್ಲವೋ, ಆತನ ತಾಯಿಯೇ ವ್ಯಭಿಚಾರಿಣಿಯು. ಆತನ ತಾಯಿಯು ಮದ್ಯಪಾಯಿಯ ಹೊಟ್ಟೆಯಲ್ಲಿ ಹುಟ್ಟಿದವಳು. ||೫||

ಯಸ್ಯಾ ಭಕ್ತಿರ್ಮಹಾದೇವೇ ಸ ಪುಲ್ಕಸಕುಲೋದ್ಭವಃ ।
ಸ ತಾವಚ್ಚಂಡಚಂಡಾಲಕುಲೇ ನಿತ್ಯಂ ಪ್ರಜಾಯತೇ ॥೬॥

ಅಪೂಜ್ಯತ್ವಂ ಮಹಾದೇವೇ ಯೋ ಮೋಹಾದಪಿ ಸಂವದೇತ್ ।
ಛಿತ್ವಾ ತದ್ರಸನಾಮಾಶು ವಿಷ್ಟಯಾ ಪೂರಯೇನ್ಮುಖಂ ॥೭॥

ಯಥಾ ರಸನಯಾ ನಿಂದಾ ಕೃತಾ ದೇವಸ್ಯ ಶೂಲಿನಃ । .
ತಜ್ಜಿಹ್ವಾ ಮೂತ್ರಧಾರಾಭಿರನುಲಿಪ್ತಾನಲಾಲಯಾ ॥೮॥

ಜ್ಞಾತೇ ಪೂಜ್ಯತಮತ್ವೇನ ಸೋಮೇ ಸೋಮಾರ್ಧಶೇಖರೇ ।
ತಸ್ಮಿನ್ನಪೂಜ್ಯತಾ ಧೀಸ್ಯಾಚ್ಚಂಡಚಂಡಾಲಜಸ್ಯ ತು ॥೯॥

---

ಅಂತಹ ಮಹಾದೇವನಾದ ಪರಮೇಶ್ವರನಲ್ಲಿ ಯಾವಾತನಿಗೆ ಪೂಜ್ಯ ಬುದ್ಧಿಯೂ ಭಕ್ತಿಯೂ ಇರುವುದಿಲ್ಲವೋ, ಆತನೇ ಚಂಡಾಲಕುಲದಲ್ಲಿ ಹುಟ್ಟಿದವನೆಂದು ಹೇಳುತ್ತಾರೆ. ಅಲ್ಲದೇ ಆತನು ಜನ್ಮಜನ್ಮಾಂತರದಲ್ಲಿ ಅತ್ಯಂತ ಕೋಪಿಷ್ಠನಾಗಿ ದೂಷ್ಯನಾಗಿರುವ ಚಂಡಾಲನ ಹೊಟ್ಟೆಯಲ್ಲಿಯೇ ಹುಟ್ಟಿ, ಸತ್ತು, ಹುಟ್ಟಿ ಮತ್ತೆ ಮತ್ತೆ ದುಃಖವನ್ನನುಭವಿಸುವನು. ॥೬॥

ಯಾವಾತನು ತನ್ನ ಅಜ್ಞಾನದಿಂದಲೋ ಅಥವಾ ಮೌಢ್ಯದಿಂದಲೋ ಆ ಪರಮೇಶ್ವರನು ಪೂಜ್ಯನಲ್ಲ ಎಂದು ಹೇಳಿದರೆ, ಆ ಕೂಡಲೇ ಆತನ ನಾಲಿಗೆಯನ್ನು ಕತ್ತರಿಸಿ ಆತನ ಬಾಯಲ್ಲಿ ಅಮೇಧ್ಯವನ್ನು ತುಂಬಬೇಕು. ಶಿವನಿಂದಕನು ಇಂತಹ ಕಠಿಣ ಶಿಕ್ಷೆಗೆ ಅರ್ಹನಾದವನು. ॥೭॥

ಆ ದೇವದೇವನಾದ ಪರಮೇಶ್ವರನನ್ನು ಯಾವ ನಾಲಿಗೆಯು ನಿಂದಿಸುವುದೋ, ಆ ನಾಲಿಗೆಗೆ ಮೂತ್ರವನ್ನು ಸುರಿಯಬೇಕು. ಮತ್ತು ಬೆಂಕಿಯಿಂದ ಸುಡಬೇಕು. ॥೮॥

ಆ ಸೌಮ್ಯಸ್ವರೂಪನಾದ ಚಂದ್ರಶೇಖರನು ಪೂಜ್ಯನು. ಅವನೇ ಪೂಜ್ಯತಮನು. ಇಂತಹ ಮಹಾದೇವನು ಅಪೂಜ್ಯನೆಂಬ ದುರ್ಬುದ್ಧಿಯು, ಕೇವಲ ಚಂಡಾಲನಿಗೆ ಅದರಲ್ಲೂ ಕೋಪಿಷ್ಠನಾದ ಚಂಡಾಲನ ಹೊಟ್ಟೆಯಲ್ಲಿ ಹುಟ್ಟಿದವನಿಗೆ ಮಾತ್ರ ಹುಟ್ಟುವುದು. ॥೯॥

ಧಿಗ್ಧಿಕ್ಚ ತತ್ಕುಲಂ ಧಿಗ್ಧಿಗ್ಧಿಗ್ಜನನೀಮುಖಂ ।
ಯಸ್ಯಾಪೂಜ್ಯತ್ವಧೀರ್ಜೈನಾಜ್ಜ್ಞಾತಾ ಪೂಜ್ಯತಮೇ ಶಿವೇ ॥೧೦॥

ಏತಾವತ್ಕಾಲಪರ್ಯಂತಂ ನ ದೃಷ್ಟಶ್ಶಿವನಿಂದಕಃ ।
ದೃಷ್ಟಸ್ತ್ವಮೇಕೋ ದುಷ್ಟಾತ್ಮಾ ಧಿಗ್ಧಿಕ್ತವ ಮುಖಂ ಕ್ಷಣಾತ್ ॥೧೧॥

ಪ್ರಾತರದ್ಯ ಮುಖಂ ದೃಷ್ಟಂ ಕಸ್ಯ ದುಷ್ಟಸ್ಯ ಯೇನ ತೇ ।
ಮುಖಂ ದೃಷ್ಟಂ ಪಾಪಬುದ್ಧೇ ಶಿವನಿಂದಾಕರಸ್ಯ ತೇ ॥೧೨॥

ಶಿವನಿಂದಾ ವಿಷಜ್ವಾಲಾ ಮಹಾಪ್ರಲಯವಹ್ನಿಭಿಃ ।
ಶಿವನಿಂದಕವಂಶಾನಾಂ ವಿನಾಶೋಽಪಿ ಭವಿಷ್ಯತಿ ॥೧೩॥

---

ಆ ಪೂಜ್ಯತಮನಾದ ಶಿವನಲ್ಲಿ ಅಪೂಜ್ಯನೆಂಬ ಬುದ್ಧಿಯು ಕೇವಲ ದೌರ್ಭಾಗ್ಯಹತಕನಿಗೂ ಪಾಪಿಷ್ಠನಿಗೂ ಹುಟ್ಟುವುದು. ಅಂತಹ ಪಾಪಿಷ್ಠನಿಗೆ ಧಿಕ್ಕಾರ. ಅಂತಹವನನ್ನು ಹಡೆದ ಆ ತಾಯಿಗೂ ಧಿಕ್ಕಾರ. ಇವರೆಲ್ಲರೂ ಪರಮ ಪಾಪಿಗಳು. ||೧೦||

ಇಷ್ಟು ದಿವಸದ ವರೆಗೆ ನಾವು ಶಿವನಿಂದಕರನ್ನು ನೋಡಲಿಲ್ಲ. ಜನರು ಯಾರೂ ನಿನ್ನ ಹಾಗೆ ಮೂಢರಾಗಿರುವುದಿಲ್ಲ. ನೀನೊಬ್ಬನೇ ಶಿವನನ್ನು ನಿಂದಿಸುತ್ತಿರುವೆ. ನೀನು ದುರಾತ್ಮನಾದ್ದರಿಂದಲೇ ಶಿವನಿಂದೆಯನ್ನು ಮಾಡುತ್ತಿದ್ದೀಯೆ. ಛೀ ! ನಿನ್ನ ಮುಖವನ್ನು ಸಹ ನೋಡಕೂಡದು. ನೀನು ಪರಮ ಪಾಪಿ. ||೧೧||

ಅಯ್ಯೋ, ನಾವು ಇಂದು ಪ್ರಾತಃಕಾಲದಲ್ಲಿ ಯಾವ ಪಾಪಿಯ ಮುಖವನ್ನು ನೋಡಿ ಎದ್ದಿದ್ದೇವೆಯೋ ಕಾಣೆವು. ಅದಕ್ಕೇ ಇಂದು ಈ ಶಿವನಿಂದಕನಾದ ಪರಮ ಪಾಪಿಯ ಮುಖವನ್ನು ನೋಡಬೇಕಾಯಿತು. ||೧೨||

ಶಿವನಿಂದೆ ಎಂದರೆ ಸಾಮಾನ್ಯವಾದುದಲ್ಲ. ಮಹಾ ಘೋರತರವಾದ ವಿಷಜ್ವಾಲೆಯೇ ಸರಿ. ಅಥವಾ ಮಹಾಪ್ರಲಯಕಾಲದಲ್ಲಿ ಸಕಲವನ್ನೂ ಭಸ್ಮಮಾಡುವ ಬೆಂಕಿಯೇ ಅದು. ಆ ವಿಷತುಲ್ಯವಾದ ಶಿವನಿಂದೆಯಿಂದ ಶಿವನಿಂದಕನ ವಂಶವೇ ನಿರ್ಮೂಲವಾಗುವುದು. ||೧೩||

ಅದ್ಯ ತ್ವಯ್ಯನುರಕ್ತಾ ಯೇ ಶಿವನಿಂದಾಕರೇ ಸುರಾಃ ।
ತದ್ವಿನಾಶೋಽದ್ಯ ಬಹುಧಾ ಭವಿಷ್ಯತಿ ನ ಸಂಶಯಃ ॥೧೪॥

ಅದ್ಯ ತಾವದಭಾಗ್ಯಂ ತೇ ದುರ್ಭಗಸ್ಯ ದುರಾತ್ಮನಃ ।
ಮನಶ್ಶಂಕರನಿಂದಾಯಾಂ ಪ್ರವೃತ್ತಂ ಪಾಪಕರ್ಮಣಃ ॥೧೫॥

ಕಿಂ ತೇ ಕುಲೇನ ಶೀಲೇನ ಶಿವನಿಂದಾಕರಸ್ಯ ತೇ ।
ಜನ್ಮನಾಪಿ ತವೈತೇನ ಧಿಗ್ಧಿಕ್ತೇ ಜನ್ಮ ಪಾಪಜಂ ॥೧೬॥

ಶುನಾಂ ವಾ ರಾಸಭಾನಾಂ ಚ ರೇತಸಾ ಜನಿರಸ್ತಿ ಹಿ ।
ಯಸ್ಯ ತಸ್ಯೇಶನಿಂದಾಯಾಂ ಮತಿರ್ಭವತಿ ದುರ್ಭಗ ॥೧೭॥

ಪ್ರಾಯಸ್ತ್ವಜ್ಜನನೀಯೋನಿಸ್ಸಿಕ್ತಾ ರಾಸಭರೇತಸಾ ।
ತೇನ ಜಾತಸ್ತ್ವಮೀಶಾನನಿಂದಾಂ ಕರ್ತುಂ ಸಮುದ್ಯತಃ ॥೧೮॥

---

ಶಿವನಿಂದಕನಾದ್ದರಿಂದ ನೀನಂತೂ ನಾಶವಾಗುವೆ. ಅಲ್ಲದೇ ನಿನ್ನಲ್ಲಿ ಪ್ರೀತ್ಯಾದರಗಳನ್ನು ತೋರಿಸುತ್ತಿರುವ ದೇವತೆಗಳೂ ಸಹ ಸದ್ಯದಲ್ಲಿಯೇ ಹಾಳಾಗಿ ಹೋಗುವರಲ್ಲ! ಅವರಿಗೂ ನಾಶಕಾಲವು ಸಮೀಪಿಸಿದೆ. ಇದರಲ್ಲಿ ಸಂದೇಹವಿಲ್ಲ. ||೧೪||

ನೀನು ಮೊದಲೇ ಪಾಪಕರ್ಮಿಯು, ಅಲ್ಲದೇ ದುರಾತ್ಮನೂ ದುರಹಂಕಾರಿಯೂ ಆಗಿದ್ದೀಯೆ. ಅದರ ಮೇಲೆ ಇಂದು ಶಿವನನ್ನೂ ನಿಂದಿಸಲು ತೊಡಗಿರುವೆ. ಅಂದರೆ ನಿನ್ನ ದೌರ್ಭಾಗ್ಯವು ಸಂಪೂರ್ಣವಾದಂತಾಯಿತು. ಇದಕ್ಕೆ ತಕ್ಕ ಫಲವನ್ನೂ ಅನುಭವಿಸುವೆ. ||೧೫||

ಛೀ! ನಿನ್ನ ಜನ್ಮಕ್ಕೆ ಧಿಕ್ಕಾರ. ನಿನ್ನ ಜನ್ಮವು ಕೇವಲ ಪಾಪದಿಂದಲೇ ಹುಟ್ಟಿರುವುದು. ಇಂತಹ ಶಿವನಿಂದಕನ ಕುಲ ಶೀಲಗಳಿಂದ ಏನು ಪ್ರಯೋಜನ. ಇಂತಹವನ ಕುಲ ಶೀಲ ನಾಮಗಳನ್ನು ಬಾಯಿಂದಲೂ ಹೇಳಬಾರದು. ||೧೬||

ನಿನ್ನ ಜನ್ಮವು ನಾಯಿಯ ಅಥವಾ ಕತ್ತೆಯ ರೇತಸ್ಸಿಂದ ಹುಟ್ಟಿರಬೇಕು. ಆದ್ದರಿಂದಲೇ ನಿನಗೆ ಶಿವನನ್ನು ನಿಂದೆಮಾಡುವ ದುರ್ಬುದ್ಧಿಯುಂಟಾಗಿರುವುದು. ||೧೭||

ನೀನು ಹುಟ್ಟಬೇಕಾದರೆ ಬಹುಶಃ ನಿನ್ನ ತಾಯಿ ಗರ್ದಭ ಸಂಸರ್ಗದಿಂದ

ಯದ್ವಾ ಮದ್ಯಪಚಂಡಾಲರೇತಸಾ ಜನ್ಮ ತೇ ತತಃ ।
ಅಪೂಜ್ಯತ್ವಮತಿರ್ಜಾತಾ ಶಿವೇ ಪೂಜ್ಯತಮೋತ್ತಮೇ ॥೧೯॥

ಅನ್ಯೋಽಪಿ ಪೂಜ್ಯಃ ಕಿಂ ಲೋಕೇ ಯತಃ ಪೂಜ್ಯತಮಶ್ಶಿವಃ ।
ತಸ್ಮಿನ್ನಪೂಜ್ಯತಾಬುದ್ಧಿರ್ಮಹಾಪಾಪಫಲಂ ಖಲು ॥೨೦॥

ವಿನಾಶಕಾಲೇ ವಿಪರೀತಬುದ್ಧಿ
ರ್ಭವತ್ಯವಶ್ಯಂ ವಿಪರೀತಕಾಲಃ ।
ಸಮಾಗತಸ್ತೇಽಯಮಸಂಶಯೋಽತ್ರ
ದುಶ್ಚಿಹ್ನಸಂದರ್ಶನಮತ್ರ ಹೇತುಃ ॥೨೧॥

---

ಗರ್ಭವತಿಯಾಗಿ ನಿನ್ನನ್ನು ಹಡೆದಿರಬೇಕು. ಅದರಿಂದಲೇ ನೀನು ಶಿವನಿಂದೆಯನ್ನು ಮಾಡತೊಡಗಿದೆ. ||೧೮||

ಅಥವಾ ಮದ್ಯಪಾಯಿಯಾದ ಚಂಡಾಲನು ನಿನ್ನನ್ನು ಉತ್ಪಾದಿಸಿರಬೇಕು. ಅನ್ಯಥಾ ಈ ದುರ್ಬುದ್ಧಿ ಎಲ್ಲಿಂದ ಬರಬೇಕು. ನೀನು ಸಂಕರಜಾತಿಯವನು. ಅದರಿಂದಲೇ ಆ ಪೂಜ್ಯತಮೋತ್ತಮನಾದ ಶಿವನಲ್ಲಿಯೂ ನಿನಗೆ ಅಪೂಜ್ಯನೆಂಬ ಬುದ್ಧಿ ಹುಟ್ಟಿರುವುದು. ||೧೯||

ಶಿವನನ್ನು ಬಿಟ್ಟು ಬೇರೆ ಯಾರು ಈ ಬ್ರಹ್ಮಾಂಡದಲ್ಲಿ ಅಖಿಲರಿಗೂ ಪೂಜ್ಯರಿದ್ದಾರೆ? ಸಮಸ್ತರಿಗೂ ಆ ಪರಮೇಶ್ವರನೇ ಪೂಜ್ಯನು, ಪೂಜ್ಯತಮನೂ ಆಗಿದ್ದಾನೆ. ಅಂತಹವನಲ್ಲಿ ಅನಾದರವೂ ಅಪೂಜ್ಯನೆಂಬ ಬುದ್ಧಿಯೂ ಉಂಟಾಗುವುದೆಂದರೆ, ಈ ಮಹಾಪಾಪಗಳ ಫಲವೇ ಸರಿ. ||೨೦||

ಮನುಷ್ಯನಿಗೆ ಕೇಡುಗಾಲ ಬಂದಕೂಡಲೇ ಆತನ ಬುದ್ಧಿಯು ಮೊದಲು ಭ್ರಂಶವಾಗುವುದು. ವಿನಾಶಕಾಲ ಬರುವಮೊದಲೇ ಮನುಷ್ಯನಿಗೆ ಏನುಮಾಡಬೇಕು, ಏನನ್ನು ಮಾಡಕೂಡದು ಎಂಬ ಪರಿಜ್ಞಾನವೇ ಉಳಿಯುವುದಿಲ್ಲ. ಹಾಗೆಯೇ ಆತನ ನಾಶಕ್ಕೆ ಅನುಕೂಲವಾದ ಕಾಲವೇ ಬಂದೊದಗುವುದು. ನಾಶಮಾಡುವುದಕ್ಕೆ ಸರಿಯಾದ ಘಟನೆ ನಡೆಯುವುದು. ಅದರಂತೆಯೇ ಈಗ ಅಪಶಕುನಗಳೆಲ್ಲಾ ಆಗುತ್ತಿವೆ. ಇದರಿಂದ ನಿನ್ನ ನಾಶಕಾಲವು ಸಮೀಪಿಸಿದೆ ಎಂದು ಅಸಂದಿಗ್ಧವಾಗಿ ತೋರುತ್ತಿದೆ. ||೨೧||

ಕೋಽನಾ ತವಾಪ್ಯಸ್ತಿ ಸುಖಸ್ಯ ಹೇತುಃ ಸಂರಕ್ಷಕಃ ಕಸ್ತವ ನಾಶಕಾಲೇ ।
ನೂನಂ ವಿರೂಪಾಕ್ಷಲಲಾಟವಹ್ನಿಜ್ವಾಲಾಕುಲೇ ತೇ ಪತನಂ ಚ ಭಾವಿ॥೨೨॥

ಯೈರ್ಯೈಶ್ಶ್ರುತಾ ಸಾಪಿ ಮಹೇಶನಿಂದಾ
ದಾನಾನಲಾಭಾ ಮುಹುರಾದರೇಣ ।
ತೇಷಾಂ ವಿನಾಶೋಽದ್ಯ ಭವಿಷ್ಯತೀತಿ
ಭವಿಷ್ಯದರ್ಥೋಽಪ್ಯವಧಾರಿತೋಽತ್ರ ॥೨೩॥

ನಾರಾಯಣೇನಾಪಿ ತವಾಸ್ತಿ ಸಖ್ಯಂ
ಚತುರ್ಮುಖೇನಾಪಿ ತಯೋಸ್ತವಾಪಿ ।
ನಾಶೋ ಭವಿಷ್ಯತ್ಯಧುನಾ ಸ ನಾಶೋ
ನೂನಂ ಭವೇಲ್ಲೋಚನಗೋಚರೋಽಪಿ ॥೨೪॥

---

ಎಲೈ ದಕ್ಷನೇ, ನಿನಗೆ ಇಂಥ ಭಯಂಕರವಾದ ವಿನಾಶಕಾಲದಲ್ಲಿ ನಿನ್ನನ್ನು ಈ ವಿಪತ್ತಿನಿಂದ ತಪ್ಪಿಸಿ ಕಾಪಾಡುವವರು ಈಗ ಯಾರಿರುವರು? ನಿನಗೆ ಇನ್ನು ಸುಖವೆಂಬುದೆಲ್ಲಿ ಬಂತು? ಧ್ವಂಸವಾಗಿ ಹೋಗುವೆ. ಆ ಪರಮೇಶ್ವರನ ಫಾಲಾಗ್ನಿ ಜ್ವಾಲೆಗೆ ಎಲ್ಲಿ ತುತ್ತಾಗಿ ಭಸ್ಮವಾಗಿ ಹೋಗುವೆಯೋ ಕಾಣೆವು. ॥೨೨॥

ಈಗ ನೀನು ಮಾಡುತ್ತಿದ್ದ ಶಿವನಿಂದೆಯನ್ನು ಇಲ್ಲಿ ಯಾರು ಕಿವಿಗೊಟ್ಟು ಆಸಕ್ತಿಯಿಂದ ಕೇಳುತ್ತಿದ್ದರೋ ಅವರಿಗೂ ಸಹ ವಿನಾಶಕಾಲವು ಬಂದಂತೆ ತೋರುತ್ತದೆ. ಆ ಶಿವನಿಂದೆಯು ಸಾಮಾನ್ಯವಲ್ಲ. ಕಾಡುಗಿಚ್ಚಿನಂತೆ ಭಯಂಕರ ವಾದುದು. ಮುಂದಿನ ಭವಿಷ್ಯವನ್ನು ನೋಡಿದರೆ ಈಗ, ನಿನಗೂ ಶಿವನಿಂದೆಯನ್ನು ಕೇಳಿದವರಿಗೂ ಸಹ ವಿಪತ್ತು ಬರುವುದು. ಮತ್ತು ನಾಶವಾಗಿಯೂ ಹೋಗಬೇಕಾ ಗುವುದು. ॥೨೩॥

ನಿನಗೆ ನಾರಾಯಣನೊಡನೆಯೂ ಬ್ರಹ್ಮನೊಡನೆಯೂ ಸ್ನೇಹವಿರುವುದು ಎಲ್ಲರಿಗೂ ಗೊತ್ತಿರುವ ವಿಚಾರ. ನಿನ್ನೊಡನೆ ಸ್ನೇಹವಿಟ್ಟುಕೊಂಡಿರುವುದರಿಂದ ಆ ಬ್ರಹ್ಮವಿಷ್ಣುಗಳಿಗೂ ಇಂದು ನಾಶಕಾಲವು ಬಂದೊದಗಿದೆ. ಬಹುಶಃ ನೀವೆಲ್ಲರೂ ಕಣ್ಣು ಮುಂದೆಯೇ ನಾಶವಾಗುವಿರಿ. ॥೨೪॥

ವೇದಾಃ ಪ್ರಮಾಣಂ ಯದಿ ತರ್ಹಿ ಸದ್ಯಃ
ಸಂಭಾವಿತಸ್ತೇ ಶಿವನಿಂದಕಸ್ಯ ।
ನಾಶೋಽಪ್ಯಘೋರಾಮಿತಯಾತನಾಸು
ಪಾತೋಽಪಿ ತಾವತ್ಸಹ ತೇ ಸುಹೃದ್ಭಿಃ ॥೨೫॥

ಏಕೋ ವಿಷಾಶೀ ಮರಣಂ ಪ್ರಯಾತಿ
ತಸ್ಮಾದ್ವಿಷಾನ್ನಾತಿಭಯಂ ಪರಂ ತು ।
ಮಹೇಶನಿಂದಾ ವಿಷತೋ ಭಯಂ
ಸ್ಯಾತ್ತತ್ತತ್ಕುಲಸ್ಯಾಪಿ ವಿನಾಶಕತ್ವಾತ್ ॥೨೬॥

ಮಹೇಶನಿಂದಾಮಿತಕಾಲಕೂಟ
ಕಟಾಹಕೂಟಪ್ರಕಟಾಟನೇನ ।
ನ ಜೀವನಂ ವಾಂಛತಿ ಕೋಽಪಿ ಲೋಕೇ
ತತ್ರ ಪ್ರವಿಷ್ಟಃ ಖಲು ನಾಶಮೇತಿ ॥೨೭॥

---

ವೇದಗಳೆಲ್ಲವೂ ಪ್ರಮಾಣವಾಗಿದ್ದ ಪಕ್ಷದಲ್ಲಿ, ವೇದದಲ್ಲಿ ಹೇಳಿರುವಂತೆ ನಿಜವಾಗಿ ನಡೆಯುಪಕ್ಷದಲ್ಲಿ ಶಿವನಿಂದಕನಾದ ನೀನು ಮತ್ತು ನಿನ್ನ ಸಹವಾಸಿಗಳೆಲ್ಲರೂ ನಾಶವಾಗುವಿರಿ. ಅಲ್ಲದೇ ಅನೇಕ ಯಾತನಾಮಯವಾದ ನರಕದಲ್ಲಿ ಬೀಳುವಿರಿ. ಇದಿಷ್ಟು ದುರ್ಘಟನೆಯೂ ಸದ್ಯದಲ್ಲಿಯೇ ನಡೆಯುವುದು. ಸಂದೇಹವಿಲ್ಲ. ॥೨೫॥

ವಿಷದಿಂದ ಹೆಚ್ಚು ಹೆದರಿಕೆ ಇಲ್ಲ. ಏಕೆಂದರೆ ಆ ವಿಷವು ಪಾನಮಾಡಿದ ಒಬ್ಬನನ್ನೇ ಸಾಯಿಸುತ್ತದೆ. ಆದರೆ ಇದಕ್ಕಿಂತಲೂ ಶಿವನಿಂದೆಯು ಅತ್ಯಂತ ಭಯಂಕರ ಮತ್ತು ಅಪಾಯಕರ. ಏಕೆಂದರೆ ಶಿವನಿಂದೆಯು ಶಿವನಿಂದಕ ವಂಶವನ್ನೇ ನಾಶಮಾಡುವುದು. ॥೨೬॥

ಮಹೇಶನಿಂದೆ ಎಂಬುದು ಭಯಂಕರವಾದ ಕಾಲಕೂಟದಂತೆಯೇ ಸರಿ. ಕೇವಲ ಕಾಲಕೂಟವೇ ಇಲ್ಲ, ಕಾಲಕೂಟವಿಷದ ದೊಡ್ಡ ದೊಡ್ಡ ಕಡಾಯವೆಂದೇ ಹೇಳಬಹುದು. ಇಂಥ ಕಡಾಯದಲ್ಲಿ, ಬಿದ್ದವನು ಎಂದೂ ಸುಖಜೀವನವನ್ನು ಹೊಂದಲಾರನು. ಏಕೆಂದರೆ ಅಂಥ ಶಿವನಿಂದಾರೂಪವಾದ ವಿಷಪೂರಿತ ಕಡಾಯದಲ್ಲಿ ಬಿದ್ದಮೇಲೆ ನಾಶವೇ ನಿಶ್ಚಿತವಲ್ಲವೆ! ॥೨೭॥

ಅಖರ್ವಗರ್ವಸ್ತವಶರ್ವನಿಂದಾ
ಮಹಾನಲೇನಾಶು ವಿನಾಶಮೇತಿ ।
ಅತಃಪರಂ ಕಿಂ ತವ ಜೀವನಾಶಾ
ನ್ಮಹೇಶನಿಂದಾವಿಷಪಾನಪೀತೇ ॥೨೮॥

ಮಹೇಶನಿಂದಾವಿಷದೋಷಲೇಶಃ
ಸ್ಮಶಾನವಾಸಾಯ ನರಂ ಸುರಂ ವಾ ।
ತಂ ಕಿನ್ನರಂ ವಾ ನರಕಾಲಯಂ ತಂ
ಚಿರಾಯ ತಾವತ್ಪ್ರಕರೋತಿ ಕಿಂ ನ ॥೨೯॥

ದುಷ್ಟಶ್ಶಠೋ ನಿಷ್ಠುರಭಾಷಣಶ್ಚ
ಶ್ರೀನೀಲಕಂಠೇ ಭಸಿತಾವಕುಂಠೇ ।
ನ ಜೀವಿತುಂ ವಾಂಛತಿ ತುಚ್ಛವೃತ್ತಿ
ಸ್ತಸ್ಯ ಪ್ರವೃತ್ತಿರ್ಮರಣಾಯ ನೂನಂ ॥೩೦॥

---

ನಿನಗೆ ಎಷ್ಟೇ ಅಹಂಕಾರವಿದ್ದರೂ ಎಲ್ಲವೂ ಕ್ಷಣದಲ್ಲಿಯೇ ಧ್ವಂಸವಾಗುವುದು. ಶಿವನಿಂದೆ ಎಂಬ ಭಯಂಕರವಾದ ಬೆಂಕಿಯು ನಿನ್ನ ಸಮಸ್ತ ದರ್ಪವನ್ನೂ ಭಸ್ಮಮಾಡುವುದು. ಶಿವನಿಂದೆ ಎಂಬ ವಿಷವನ್ನು ನೀನು ಬಹುವಾಗಿ ಪಾನಮಾಡಿದ್ದೀಯೆ. ಇನ್ನು ನೀನು ಬದುಕುವ ಯೋಚನೆ ಇರುವುದಿಲ್ಲ. ॥೨೮॥

ಮನುಷ್ಯನೇ ಆಗಲಿ, ದೇವತೆಯೇ ಆಗಲಿ, ಅಥವಾ ಕಿನ್ನರಕಿಂಪುರುಷರೇ ಆಗಲಿ, ಯಾರಾದರೂ ಸರಿಯೆ, ಶಿವನಿಂದೆ ಎಂಬ ವಿಷದ ಲೇಶವನ್ನು ಸಂಸ್ಪರ್ಶಿಸಿದರೆ, ಅಂತಹವರು ಖಂಡಿತವಾಗಿ ಸುಡುಗಾಡಿನಲ್ಲಿಯೇ ಮಲಗುವರು. ಮೃತಿಹೊಂದಿ ನರಕವನ್ನೂ ಪಡೆಯುವರು. ಮತ್ತು ಆ ನರಕದಲ್ಲಿಯೇ ಅನೇಕಕಾಲ ದುಃಖವನ್ನೂ ಅನುಭವಿಸುತ್ತಾ ನೆಲಸುವರು. ॥೨೯॥

ಆ ಭಗವಂತನೂ ಲೋಕೋತ್ತರ ಮಹಿಮೆಯುಳ್ಳವನೂ ಆದ ನೀಲಕಂಠನು ಅಪೂಜ್ಯನೆಂದು ಹೇಳುವುದೂ, ತಿಳಿಯುವುದೂ ಎಂದರೆ ಕೇವಲ ತನ್ನ ಮರಣಕ್ಕೇ ಅವರು ಪ್ರಯತ್ನಪಟ್ಟಂತೆಯೇ ಸರಿ. ಅಂಥ ಶಿವನಿಂದಕನಾದವನೇ ದುಷ್ಟನು, ದುರ್ಜನನು, ಕಠೋರಭಾಷಿಯು-ಆತನ ಆಚಾರದಿಂದಲೇ ತಿಳಿಯುವುದು-ಏನೆಂದರೆ-

ಯಂ ಸರ್ವದೇವೋತ್ತಮಮಾಮನಂತಿ
ಸರ್ವಾಮರಾರಾಧಿತಪಾದಪದ್ಮಂ ।
ತನ್ನಿಂದಯಾ ದುಃಖಮಹಾಂಬುರಾಶಿ
ತರಂಗಮಾಲಾಕುಲಿತಾ ಭವಂತಿ ॥೩೧॥

ತ್ವಯಾ ದುರಾಚಾರರತೇನ ನಿಂದಾ
ಕೃತಾ ಮಹೇಶಸ್ಯ ತಥಾ ತವಾದ್ಯ ।
ಸದ್ಯಸ್ಸವಂಶಸ್ಯ ನಿರನ್ವಯಸ್ಯ
ನಾಶಸ್ಸನಾಶೋ ನಿರಯಾವಸಾನಃ ॥೩೨॥

ಏತೇಷು ಕಸ್ತ್ರಿಷ್ಯತಿ ರಕ್ಷಕಸ್ತೇ
ಸುರೇಷು ತೇಷಾಮಪಿ ನಾಶ ಏವ ।
ತ್ವತ್ಸಂಗಮಾದದ್ಯ ಭವಿಷ್ಯತೀತಿ
ಪ್ರಾಣಪ್ರಯಾಣಾವಸರೇ ಹಿ ತೇಷಾಂ ॥೩೩॥

---

ಆತನು ಈ ಪ್ರಪಂಚದಲ್ಲಿ ಬದುಕಲು ಅಪೇಕ್ಷಿಸುವುದಿಲ್ಲ, ಅಲ್ಲದೆ ಮೃತ್ಯುವಿನ ಕಡೆಗೆ ದೃಷ್ಟಿಯಿಡುವನೆಂದು ತಿಳಿಯಬಹುದು. ||೩೦||

ಆ ಪರಮೇಶ್ವರನನ್ನು ಸಮಸ್ತ ದೇವತೆಗಳಿಂದಲೂ ಉತ್ತಮನೆಂದು ಜ್ಞಾನಿಗಳು ತಿಳಿದಿದ್ದಾರೆ. ಮತ್ತು ಉಪದೇಶಿಸುತ್ತಾರೆ. ಆತನನ್ನೇ ಸಕಲ ದೇವತೆಗಳೂ ಆರಾಧಿಸುತ್ತಾರೆ. ಇಂತಹ ದೇವೋತ್ತಮನನ್ನು ನಿಂದಿಸುವವರು ದುಃಖವೆಂಬ ಮಹಾಸಮುದ್ರದಲ್ಲಿ ಭೀಕರ ಅಲೆಗಳಿಂದ ಆಘಾತಹೊಂದಿ ಬಹುಧಾ ವ್ಯಥೆ ಪಡುತ್ತಾರೆ. ||೩೧||

ಎಲೈ ದಕ್ಷನೇ! ನೀನು ಅತ್ಯಂತ ಹೀನಕರ್ಮಿಯು, ದುರ್ಬುದ್ಧಿಯು. ಆದ್ದರಿಂದಲೇ ನೀನು ಆ ಪರಮೇಶ್ವರನನ್ನು ನಿಂದಿಸಿದ್ದೀಯೆ. ಇದಕ್ಕೆ ತಕ್ಕ ಫಲವು ನಿನ್ನ ನಾಶಮಾತ್ರವಲ್ಲದೇ ನಿನ್ನ ವಂಶವೇ ನಿರ್ಮೂಲವಾಗುವುದು. ಅಲ್ಲದೇ ಈ ನಿಮ್ಮ ನಾಶವು ನಿಮ್ಮೆಲ್ಲರನ್ನೂ ನರಕಕ್ಕೆ ತಳ್ಳಿ ಅಲ್ಲಿಯೇ ನೀವು ವಾಸಮಾಡುವಂತೆ ಮಾಡಿಬಿಡುವುದು. ||೩೨||

ಈಗ ನಿನ್ನನ್ನು ರಕ್ಷಣೆಮಾಡಬೇಕೆಂದು ಈ ದೇವತೆಗಳಲ್ಲಿ ಯಾರಾದರೂ ಪ್ರಯತ್ನಪಟ್ಟರೆ ಅವರೂ ಸಹ ನಾಶಹೊಂದುವರು. ಈಗ ನಿನ್ನ ಸಹವಾಸ ಮಾಡಿ

ಯೇ ಯೇ ಮಹಾದೇವವಿನಿಂದಕಾಸ್ತೇ
ಕಲ್ಪಾವಸಾನೇಽಪಿ ಯಮಾಲಯೇಷು ।
ಸ್ಥಿತ್ವಾ ಸ್ವಕೀಯೈಃ ಸಹ ಸರ್ವದಾಪಿ
ಸ್ವಾಕ್ರೋಶನೇನೈವ ನಯಂತಿ ಕಾಲಂ ॥೩೪॥

ಏಷಾಂ ಮುನೀನಾಂ ಶಿವನಿಂದಕೇನ
ಸಂಗೋ ಭವೇತ್ತತ್ಕುಲಜಾಸ್ತದೀಯಾಃ ।
ಅಶಾಂಭವತ್ವಂ ಸಮುಪೆತ್ಯ ನಾಶಂ
ಯಾಸ್ಯಂತಿ ಸರ್ವೇಽಪಿ ಯಮಾಲಯೇಷು ॥೩೫॥

ಯಮೋಽಪಿ ಯತ್ನೇನ ಮಹಾಗ್ನಿಮಾಲಾ
ಮುಶ್ಶೈವನಾಶಾಯ ಪರಂ ಚಕಾರ ।
ತಸ್ಯಾಂ ಶಿವಾಚಾರವಿನಿಂದಕಾನಾಂ
ನಾಸೋ ಭವಿಷ್ಯತ್ಯನುವೇಲಮೇವ ॥೩೬॥

---

ದರೆ ಸಾಕು. ಅವರ ಪ್ರಾಣಕ್ಕೆ ಅಪಾಯವೆಂದು ಎಲ್ಲರೂ ತಿಳಿದಿದ್ದಾರೆ. ಆದುದರಿಂದ ನಿನ್ನ ಪಕ್ಷವನ್ನು ಯಾರೂ ಈಗ ವಹಿಸುವಂತಿಲ್ಲ. ॥೩೩॥

ಯಾರು ಯಾರು ಪರಮೇಶ್ವರನನ್ನು ನಿಂದಿಸುವರೋ ಅವರೆಲ್ಲರೂ ಕಲ್ಪಾಂತ್ಯದವರೆಗೂ ತಮ್ಮ ಸಂಗಡಿಗರೊಂದಿಗೆ ನರಕದಲ್ಲಿಯೇ ವಾಸಮಾಡುತ್ತಾರೆ. ಅಲ್ಲಿಯೇ ಅತ್ಯಂತ ಕಠಿನಶಿಕ್ಷೆಯನ್ನು ಅನುಭವಿಸುತ್ತಾ ಯಾತನೆಯಿಂದ ಚೀರಿ ಕೊಳ್ಳುತ್ತಾ, ಕಾಲ ಕಳೆಯುತ್ತಾರೆ. ॥೩೪॥

ಇಲ್ಲಿರುವ ಯಾವ ಋಷಿಗಳೇ ಆಗಲಿ, ಶಿವನಿಂದಕನಾದ ನಿನ್ನ ಸಹವಾಸವನ್ನೂ ಪಕ್ಷವನ್ನೂ ವಹಿಸುವರೋ, ಅವರೂ ಸಹ ನಾಶವಾಗುವರು. ಅವರು ಅಶೈವರಾಗುವರಲ್ಲದೇ ಅವರ ವಂಶದವರೆಲ್ಲರೂ ಸಹ ಅಶೈವರಾಗಿ ಯಮನ ಮನೆಗೇ ಹೋಗುವರು. ॥೩೫॥

ಇಂಥ ಪರಮ ಪಾಪಿಗಳಾದ ಶಿವನಿಂದಕರಿಗೆ ಘೋರತರವಾದ ಶಿಕ್ಷೆಯನ್ನು ಮಾಡುವುದಕ್ಕಾಗಿ ಯಮನು ದೊಡ್ಡದೊಂದು ಅಗ್ನಿಕುಂಡವನ್ನು ತಯಾರು ಮಾಡಿದ್ದಾನೆ. ಈ ಶಿವನಿಂದಕರನ್ನು ಆ ಬೆಂಕಿಯಲ್ಲಿ ಹಾಕಿ ಮಹಾ ವ್ಯಥೆಪಡಿಸಿ

ಅದ್ಯ ಪ್ರಭೃತ್ಯಾಶು ಮಹೇಶನಿಂದಾ
ಮಹಾನಲಾಘಾತವಿನಷ್ಟಭಾವಾಃ
ಭವೇ ಭವೇ ಶಂಕರನಿಂದಯೈವ
ಯಮಾಂತಿಕಂ ಯಾಂತು ನಯಂತಿ ದೂತಾಃ ॥೩೭॥

ಇಮಾ(ನ್ಯ)ನಿವಾಕ್ಯಾನ್ಯಪಿ ಕುಂಭಜಾದಿ
ಮುನೀಶ್ವರೋಕ್ತಾನಿ ಸುರಾಶ್ಚ ಸರ್ವೇ ।
ಶ್ರುತ್ವಾ ಸಕಂಪಾಃ ಕಿಮಿಹಾದ್ಯ ಜಾತಮಿತಿ
ಪ್ರಲಾಪಾಪಹೃತಾಂತರಂಗಾಃ ॥೩೮॥

ಇತಿ ತದ್ವಚನಂ ಶ್ರುತ್ವಾ ಗಿರಿಜಾಪ್ರೇಷಿತಾಽಪಿ ಸಾ ।
ಶಿವನಿಂದಾವಚಶ್ಶ್ರುತ್ವಾ ಚಿಂತಯಾ ವ್ಯಾಕುಲಾ ದ್ವಿಜಾಃ ॥೩೯॥

---

ಸುಟ್ಟುಹಾಕುವನು. ಆ ಬೆಂಕಿಯ ರಾಶಿಯಲ್ಲಿಯೇ ಶಿವನಿಂದಕರು ಸರ್ವದಾ ಉರಿಯುತ್ತಾ ಇರಬೇಕಾಗುತ್ತದೆ. ॥೩೬॥

ಪರಮೇಶ್ವರನನ್ನು ನಿಂದೆ ಮಾಡಿ ಮಾಡಿ ತಮ್ಮ ಮನಸ್ಸಿನ ಸದ್ಭಾವನೆಗಳೆಲ್ಲವನ್ನೂ ಕಳೆದುಕೊಳ್ಳುವರು. ಅಂಥ ಶಿವನಿಂದಕರು ಇಂದಿನಿಂದಲೇ ಯಮನ ಮನೆಗೆ ಹೋಗುವರು. ಅಲ್ಲದೇ ಮತ್ತೆ ಮತ್ತೆ ಹುಟ್ಟಿ ಶಿವನಿಂದೆಯನ್ನೇ ಮಾಡುವರು. ಯಮದೂತರು ಅವರನ್ನು ಮತ್ತೆ ಮತ್ತೆ ನರಕಕ್ಕೆ ಹೊತ್ತುಕೊಂಡು ಹೋಗಿ ಘೋರತರವಾಗಿ ಶಿಕ್ಷಿಸುವರು. ॥೩೭॥

ಈರೀತಿ ಅಗಸ್ತ್ಯಮುನಿಯೇ ಮೊದಲಾದ ಮುನೀಶ್ವರರು ಹೇಳಿದ ಮಾತನ್ನು ಕೇಳಿ ಎಲ್ಲಾ ದೇವತೆಗಳೂ ಎಚ್ಚತ್ತರು. ಈಗ ಇಲ್ಲಿ ಏನೋ ಪ್ರಮಾದವು ನಡೆದಿದೆ. ಅಪಾಯವು ಒದಗುವ ಸಂಭವವೆಂದು ಎಲ್ಲರೂ ಮನಗೆಟ್ಟು ಹೆದರಿಕೆಯಿಂದ ಕಂಗಾಲಾದರು. ॥೩೮॥

ಆ ಸಮಯದಲ್ಲಿ ಅಲ್ಲಿಯೇ ಆ ಪಾರ್ವತಿಯಿಂದ ನಿರ್ಮಿಸಲ್ಪಟ್ಟು ಕಳುಹಿಸಿದ ಕಾಮಿನಿಯೂ ಇದ್ದಳು. ಆಕೆಯು ಆ ಋಷಿಗಳು ಹೇಳಿದ ಮಾತನ್ನೂ ಕೇಳಿದಳು. ಮತ್ತು ಆ ದಕ್ಷನು ಆಡಿದ ಶಿವನಿಂದೆಯನ್ನು ಕೇಳಿ ಬಹಳ ಚಿಂತೆಯಿಂದ ವ್ಯಾಕುಲಳಾದಳು. ॥೩೯॥

ಶಿವನಿಂದಾವಚಶ್ಶ್ರುತ್ವಾ ಯಸ್ತು ನ ವ್ಯಾಕುಲೋ ಭವೇತ್ ।
ಸ ಚಂಡಾಲತ್ವಮಾಸಾದ್ಯ ನರಕೇಷು ಪತಿಷ್ಯತಿ ॥೪೦॥

ಶಿವನಿಂದಕಸಂಗೇನ ಕ್ಷಣಂ ವಾ ಯೋಽಧಿತಿಷ್ಠತಿ ।
ಸ ಜಾರಜ ಇತಿ ಜ್ಞೇಯೋ ನರಕಾಯ ಸ ಕಲ್ಪಿತಃ ॥೪೧॥

ಪುರಾ ನರಕಲೋಕೇಷು ಶೂನ್ಯೇಷು ಯಮಕಿಂಕರಾಃ ।
ಸಮಾಗತ್ಯ ಯಮಂ ಪ್ರಾಹುರಧಿಕಾರವಿವರ್ಜಿತಾಃ ॥೪೨॥

॥ ಯಮದೂತಾ ಊಚುಃ ॥

ಶ್ರೀಕಾಲಕಾಲಧ್ಯಾನೇನ ನಯಂತಿ ದಿವಸಾನ್ನರಾಃ ।
ತೇಷಾಂ ನ ಪಾಪಸಂಬಂಧೋ ಭೂತಲೇ ದೃಶ್ಯತೇ ಯಮ ॥೪೩॥

---

ಶಿವನಿಂದೆಯನ್ನು ಕೇಳಿದ ಮೇಲೆ ವ್ಯಾಕುಲನಾಗದವನು ಯಾವನಿದ್ದಾನೆ. ಅಥವಾ ಯಾವನು ಅಂಥ ಪಾತಕವಾದ ಶಿವನಿಂದೆಯನ್ನೂ ಕೇಳಿ ವಿಚಲಿತನಾಗುವುದಿಲ್ಲವೋ, ಅಂತಹವನು ಸಾಕ್ಷಾತ್ ಚಂಡಾಲನೇ ಆಗುವನು. ಆತನಿಗೆ ನರಕವಾಸವೇ ಗತಿ. ॥೪೦॥

ಶಿವನಿಂದೆಯನ್ನು ಕೇಳಿದರೂ ಪ್ರತಿ ಆಡದೆ ಯಾವಾತನು ಸುಮ್ಮನೇ ತನ್ನಷ್ಟಕ್ಕೆ ತಾನು ಮೌನವಾಗಿರುವನೋ, ಆತನು ವ್ಯಭಿಚಾರದಿಂದ ಹುಟ್ಟಿದವನೇ ಸರಿ. ಅಂದಮೇಲೆ ಆತನು ನರಕಕ್ಕೆ ಹೋಗುವುದರಲ್ಲಿ ಸಂದೇಹವೇನು ? ॥೪೧॥

ಪೂರ್ವಕಾಲದಲ್ಲಿ ಒಂದು ಸಲ ನರಕಲೋಕವೆಲ್ಲಾ ಬರಿದಾಗಿದ್ದಿತು. ಲೋಕದಲ್ಲಿ ಯಾರೂ ಪಾಪಿಗಳೇ ಇಲ್ಲದಿದ್ದುದರಿಂದ ಯಾರೂ ನರಕಕ್ಕೆ ಹೋಗುತ್ತಿರಲಿಲ್ಲ. ಆಗ ಯಮದೂತರಿಗೆ ಏನೂ ಕೆಲಸವೇ ಇರಲಿಲ್ಲ. ಅವರ ಅಧಿಕಾರಕ್ಕೇ ಲೋಪಬಂದಿತ್ತು. ಆ ಸಮಯದಲ್ಲಿ ಯಮದೂತರೆಲ್ಲಾ ಯಮಧರ್ಮನ ಬಳಿಗೆ ಬಂದು ಹೀಗೆ ಹೇಳಿದರು. ॥೪೨॥

ಓ ಯಮಧರ್ಮನೇ, ಭೂಲೋಕದಲ್ಲಿ ಈಗ ಯಾರೂ ಪಾಪಿಗಳೇ ಇರುವುದಿಲ್ಲ. ಎಲ್ಲರೂ ಆ ಮೃತ್ಯುಂಜಯನನ್ನೇ ಸದಾ ಧ್ಯಾನಿಸುವರು. ಸದಾ ಶಿವಪೂಜೆಯನ್ನು ಮಾಡುತ್ತಲೇ ಕಾಲವನ್ನು ಕಳೆಯುತ್ತಿದ್ದಾರೆ. ಆದುದರಿಂದ ಅವರಿಗೆ ಪಾಪದ ಸಂಬಂಧವೇ ಇರುವುದಿಲ್ಲ. ॥೪೩॥

ಶಿವಲಿಂಗಾರ್ಚನಪರಾಃ ಶಿವನಾಮಜಪೋತ್ಸುಕಾಃ ।
ಶಿವಾಚಾರರತಾ ಏವ ಸರ್ವೇ ಭೂಮಂಡಲೇ ಯಮ ॥೪೪॥

ಭಸ್ಮೋದ್ಧೂಳನಪೂತಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ।
ರುದ್ರಾಕ್ಷಮಾಲಾಭರಣಾಃ ಸರ್ವೇಽಪಿ ಯಮ ಭೂತಲೇ ॥೪೫॥

ಶಂಗಲಿಂಗಾರ್ಚನಂ ತ್ಯಕ್ತ್ವಾ ನ ಕೋಽಪಿ ಭುವಿ ತಿಷ್ಠತಿ ।
ಶಂಗಾಂಗಸಂಗತಿಂ ತ್ಯಕ್ತ್ವಾ ನ ಕೋಽಪಿ ಯಮ ಭೂತಲೇ ॥೪೬॥

ಬಿಲ್ವಮೂಲೇಷು ಲಿಂಗಾನಿ ಸ್ಥಾಪಯಿತ್ವಾ ಮುಹುರ್ಮುಹುಃ ।
ಪೂಜಯಂತಿ ಪ್ರಸ್ತುವಂತಿ ಪ್ರಣಮಂತಿ ಪ್ರಯತ್ನತಃ ॥೪೭॥

ಬಾಲಕೈರಪಿ ಲಿಂಗಾನಿ ಪಾರ್ಥಿವಾನಿ ಪ್ರಯತ್ನತಃ ।
ಪೂಜ್ಯಂತೇ ಜಲದೂರ್ವಾದ್ಯೈಃ ಪುಷ್ಪೈರ್ನಾನಾವಿಧೈರಪಿ ॥೪೮॥

---

ಭೂಲೋಕದಲ್ಲಿರುವ ಎಲ್ಲಾ ಜನರೂ ಸದಾ ಶಿವಲಿಂಗಪೂಜೆಯಲ್ಲಿಯೇ ಆಸಕ್ತರಾಗಿರುತ್ತಾರೆ. ಸರ್ವದಾ ಶಿವನಾಮಾವಳಿಯನ್ನೇ ಜಪಿಸುತ್ತಾರೆ. ಶಿವ ಧರ್ಮವನ್ನೇ ಅನುಷ್ಠಿಸುತ್ತಾರೆ. ॥೪೪॥

ಭೂಲೋಕದ ಜನರು ಮೈಗೆಲ್ಲಾ ಸರ್ವದಾ ಭಸ್ಮವನ್ನು ಹಚ್ಚಿಕೊಂಡು ಪವಿತ್ರಾಂಗರಾಗಿರುತ್ತಾರೆ. ಹಣೆಯಲ್ಲಿ ಯಾವಾಗಲೂ ಲಕ್ಷಣವಾಗಿ ಭಸ್ಮತ್ರಿಪುಂಡ್ರ ವನ್ನು ಧರಿಸಿರುತ್ತಾರೆ. ದೇಹವನ್ನೆಲ್ಲಾ ರುದ್ರಾಕ್ಷಮಾಲೆಗಳಿಂದಲೇ ಅಲಂಕರಿಸಿ ಕೊಂಡಿರುತ್ತಾರೆ. ॥೪೫॥

ಶಿವಲಿಂಗವನ್ನು ಪೂಜಿಸದವನು ಭೂಮಿಯಲ್ಲಿ ಯಾರೂ ಕಾಣುವುದಿಲ್ಲ. ಹಾಗೆಯೇ ಶಿವಲಿಂಗವನ್ನು ಭಕ್ತಿಯಿಂದ ಆಲಿಂಗಿಸಿಕೊಳ್ಳದವನು ಒಬ್ಬನೂ ಇಲ್ಲ. ॥೪೬॥

ಬಿಲ್ವವೃಕ್ಷಗಳ ಕೆಳಗೆ ಶಿವಲಿಂಗವನ್ನು ಪ್ರತಿಷ್ಠೆಮಾಡಿ, ಎಲ್ಲರೂ ಆ ಲಿಂಗ ವನ್ನು ಸದಾ ಪೂಜಿಸುತ್ತಾರೆ. ಸ್ತುತಿಸುತ್ತಾರೆ. ಮತ್ತು ಭಕ್ತಿಯಿಂದ ಸಾಷ್ಟಾಂಗ ಪ್ರಣಾಮ ಮಾಡುತ್ತಾರೆ. ॥೪೭॥

ಭೂಲೋಕದಲ್ಲಿರುವ ಚಿಕ್ಕ ಚಿಕ್ಕ ಹುಡುಗರೂ ಸಹ ಮೃತ್ತಿಕಾಮಯ ವಾದ ಲಿಂಗವನ್ನು ಮಾಡಿಕೊಂಡು, ಆ ಲಿಂಗಕ್ಕೆ ಜಲ, ದೂರ್ವೆ, ಬಗೆಬಗೆಯ ಹೂವು ಇವುಗಳಿಂದ ಪೂಜೆಮಾಡುತ್ತಾರೆ. ॥೪೮॥

ನ ಪೀತಂ ಜಲಂ ಬಾಲೈಶ್ಶಿವಲಿಂಗಾರ್ಚನಂ ವಿನಾ ।
ಅನ್ನವಾರ್ತಾ ಕುತಸ್ತೇಷಾಂ ನಿದ್ರಾ ವಾರ್ತಾಪಿ ದೂರತಃ ॥೪೯॥

ಶಿವಲಿಂಗಾರ್ಚನಂ ತೇಷಾಂ ಬಾಲಾನಾಂ ಖೇಲನಂ ಖಲು ।
ತತ್ಕ್ರೀಡಯಾ ಪರಂ ಕಾಲಂ ನಯಂತಿ ಖಲು ಬಾಲಕಾಃ ॥೫೦॥

ತೇ ಬಿಲ್ವತರುಮೂಲೇಷು ಸ್ವಾಂಗಣಸ್ಥೇಷು ಸರ್ವದಾ ।
ಲಿಂಗಾರ್ಚನಾನಿ ಕುರ್ವಂತಿ ಕೋಮಲೈರ್ಬಿಲ್ವಪಲ್ಲವೈಃ ॥೫೧॥

ಸೋಷ್ಣಮನ್ನಂ ಸೋಪದಂಶಂ ನಿವೇದ್ಯಾತ್ಯಂತಭಕ್ತಿತಃ ।
ಶಿವನೈವೇದ್ಯಮಾಘ್ರಾಯ ಭುಕ್ತ್ವಾ ತಿಷ್ಠಂತಿ ಬಾಲಕಾಃ ॥೫೨॥

ತದ್ಬಿಲ್ವತರುಮೂಲಾನಿ ದೀಪಮಾಲಾಪ್ರಭಾಗಣೈಃ ।
ಸಮನ್ವಿತಾನಿ ಸತತಂ ಧೂಪಧೂಮಾಕುಲಾನ್ಯಪಿ ॥೫೩॥

---

ಆ ಚಿಕ್ಕ ಬಾಲಕರೂ ಕೂಡ ಶಿವಲಿಂಗವನ್ನು ಪೂಜಿಸದೆ, ನೀರನ್ನು ಸಹ ಕುಡಿಯುವುದಿಲ್ಲ. ಇನ್ನು ಅನ್ನವನ್ನು ಊಟಮಾಡುವುದೆಲ್ಲಿ ಬಂತು ? ಹಾಗೆಯೇ ಆ ಬಾಲಕರಿಗೆ ಶಿವಧ್ಯಾನವಿಲ್ಲದೆ ನಿದ್ರೆಯಾಗಲಿ, ಹರಟೆಯಾಗಲಿ ತೋರಲಾರದು. ||೪೯||

ಆ ಹುಡುಗರಿಗೆ ಬೇರೆ ಆಟವೇ ಇರುವುದಿಲ್ಲ. ಶಿವಲಿಂಗವನ್ನು ಪೂಜಿಸುತ್ತಿರುವುದೇ ಅವರಿಗೆ ಆನಂದಕರವಾದ ಆಟ. ಅದೇ ಆಟದಿಂದಲೇ ಅವರು ಆನಂದಮಯವಾಗಿ ಕಾಲವನ್ನು ಕಳೆಯುತ್ತಿದ್ದಾರೆ. ||೫೦||

ಆ ಬಾಲಕರು ತಮ್ಮ ಮನೆಯ ಅಂಗಳದಲ್ಲಿರುವ ಬಿಲ್ವವೃಕ್ಷಗಳ ಮೂಲಭಾಗದಲ್ಲಿ ಶಿವಲಿಂಗವನ್ನು ಸ್ಥಾಪಿಸಿಕೊಂಡು ಕೋಮಲವಾದ ಬಿಲ್ವದಳಗಳಿಂದ ಅದನ್ನು ಪೂಜಿಸುತ್ತಾರೆ. ||೫೧||

ಆ ಬಾಲಕರು ಶಿವಲಿಂಗಕ್ಕೆ ಹವಣಾಗಿ ಬಿಸಿಯಾದ ಅನ್ನವನ್ನು ಪರಿಕರ ಸಮೇತವಾಗಿ ಭಕ್ತಿಯಿಂದ ನಿವೇದನ ಮಾಡುತ್ತಾರೆ. ಮತ್ತು ಲಿಂಗಪ್ರಸಾದವನ್ನು ಶಿರಸಾವಹಿಸಿಕೊಂಡು ಆ ನಿವೇದಿತವಾದ ಅನ್ನವನ್ನೇ ಊಟಮಾಡುತ್ತಾರೆ. ||೫೨||

ಆ ಬಿಲ್ವವೃಕ್ಷಗಳ ಕೆಳಗೆ ಯಾವಾಗಲೂ ಸಾಲು ದೀಪಗಳು ದಿವ್ಯವಾಗಿ ಉರಿಯುತ್ತಿರುತ್ತವೆ. ಆ ದೀಪಗಳ ಪ್ರಕಾಶವು ಸುತ್ತಲೂ ಪ್ರಖರವಾಗಿ ಹರಡಿರು

ಭಸ್ಮಾವಗುಂಠನೋತ್ಸಾಹಾಃ ಸೋತ್ಸಾಹಾಶ್ಶಿವಪೂಜನೇ ।
ಶಿವನಾಮಾನುಸಂಧಾನನಿರ್ಧೂತಾಖಿಲಕಲ್ಮಷಾಃ ॥೫೪॥

ತಾದೃಶಾನ್ ಬಾಲಕಾನ್ ದೃಷ್ಟ್ವಾ ತೇಷಾಂ ತಾತಾಶ್ಚ ಶಾಂಕರಾಃ ।
ಶಿವವಿದ್ಯಾಭ್ಯಾಸಮೇವ ಕಾರಯಂತಿ ಮುಹುರ್ಮುಹುಃ ॥೫೫॥

ತೇಷಾಂ ಕನ್ಯಾಶ್ಚ ದಾರಾಶ್ಚ ಶಿವಪೂಜನತತ್ಪರಾಃ ।
ಕುರ್ವಂತಿ ಸತತಂ ಭಕ್ತ್ಯಾ ಭಸ್ಮನೈವಾನುಲೇಪನಂ ॥೫೬॥

ಭಸ್ಮಾನುಲೇಪನಂ ತ್ಯಕ್ತ್ವಾ ನ ತಿಷ್ಠಂತ್ಯೇವ ತಾಸ್ಸದಾ ।
ರುದ್ರಾಕ್ಷಮಾಲಾಭರಣಾಃ ದಾರಾ ಬಾಲಾಶ್ಚ ಬಾಲಿಕಾಃ ॥೫೭॥

---

ತ್ತದೆ. ಅಲ್ಲದೇ ಅಲ್ಲಿ ಯಾವಾಗಲೂ ದಿವ್ಯವಾದ ಧೂಪದ ಹೊಗೆಯಿಂದ ಸುವಾಸನೆಯು ಗಮಗಮಿಸುತ್ತಿರುವುದು. ॥೫೩॥

ಆ ಬಾಲಕರು ಯಾವಾಗಲೂ ಭಸ್ಮಲೇಪವನ್ನೇ ತಮ್ಮ ಕವಚವನ್ನಾಗಿ ಮಾಡಿಕೊಂಡಿರುತ್ತಾರೆ. ಅವರಿಗೆ ಶಿವಪೂಜೆ ಎಂದರೆ ಬಹಳ ಉತ್ಸಾಹ. ಶಿವಪುಣ್ಯನಾಮಗಳ ಧ್ಯಾನದಿಂದ ತಮ್ಮ ಸಕಲ ಪಾಪಗಳನ್ನೂ ತೊಳೆದುಕೊಂಡಿರುತ್ತಾರೆ. ॥೫೪॥

ಆ ಬಾಲಕರೇ ಇಷ್ಟು ಭಕ್ತಿಶೀಲರಾದಮೇಲೆ ಇನ್ನು ದೊಡ್ಡವರಾಗಿ ಅರಿತವರನ್ನು ಕೇಳುವುದೇನು? ಅವರೆಲ್ಲರೂ ಪರಮ ಶಿವಭಕ್ತರಾಗಿಯೇ ಇದ್ದಾರೆ. ಅಂತಹ ತಂದೆತಾಯಿಗಳು ತಮ್ಮ ಮಕ್ಕಳು ಶಿವಪೂಜೆ ಮಾಡುವುದನ್ನು ನೋಡಿ ಆನಂದಪಡುವರಲ್ಲದೇ, ಆ ಬಾಲಕರಿಗೆ ಶಿವಧರ್ಮಗಳ ಮತ್ತು ಶಿವವಿದ್ಯೆಗಳ ಅಭ್ಯಾಸವನ್ನೇ ಪುಷ್ಟಿಗೊಳಿಸುತ್ತಾರೆ. ॥೫೫॥

ಅಂಥ ಜನರ ಹೆಣ್ಣು ಮಕ್ಕಳೂ ಹೆಂಡತಿಯರೂ ಸಹ ಸದಾ ಶಿವಪೂಜೆಯನ್ನು ಮಾಡುತ್ತಿರುವರಲ್ಲದೇ ಶೈವಚಿಹ್ನೆಗಳಾದ ಭಸ್ಮಲೇಪನ ಮೊದಲಾದವುಗಳೇ ಅವರ ಪ್ರಸಾಧನ ಸಾಮುಗ್ರಿಗಳಾಗಿರುವುವು. ಅಂಗಲೇಪ, ಅಂಗರಾಗ ಇವುಗಳಿಗೆ ಬದಲಾಗಿ ಭಸ್ಮ ಮುಂತಾದವುಗಳನ್ನೇ ತಮ್ಮ ಸೌಂದರ್ಯೋಪಾಸನೆಯಲ್ಲಿ ಅಲಂಕರಣವಸ್ತುಗಳನ್ನಾಗಿ ಮಾಡಿಕೊಂಡಿರುತ್ತಾರೆ. ॥೫೬॥

ಭೂಲೋಕದ ಮಹಿಳೆಯರು, ಬಾಲಿಕೆಯರು ತಮ್ಮ ಶರೀರಕ್ಕೆ ಭಸ್ಮಲೇಪನವನ್ನು ಮಾಡಿಕೊಳ್ಳದೇ ಒಂದು ಕ್ಷಣವೂ ಇರುವುದಿಲ್ಲ. ಅವರು ಕಟಕಮುಕುಟಾ

ಪಾಕಕಾಲಸ್ವೇದನೀತತ್ರಿಪುಂಡ್ರಂ ಪುನರಾದರಾತ್ ।
ತ್ರಿಪುಂಡ್ರಧಾರಣಂ ಕೃತ್ವಾ ಪಾಕಯತ್ನಾಃ ಪುನಃ ಪುನಃ ॥೫೮॥

ಪಾಕಕಾಲೇಽಪಿ ನಾಮಾನಿ ಸ್ಮೃತ್ವಾ ಶೈವಾನಿ ಸಾದರಂ ।
ಗಾಯಂತಿ ತಾನಗಾನೇನ ಪ್ರೀಣಯಂತಿ ಸದಾಶಿವಂ ॥೫೯॥

ಪಕ್ವಾನ್ನಗಂಧಸಂಬಂಧೋ ನ ಘ್ರಾಣೇಷ್ವಸ್ತ್ವಿತಿ ಕ್ಷಣಂ ।
ನಿವೇದ್ಯ ಗಂಧಮಿಾಶಾಯ ಪಾಕಾಗಾರೇ ವಸಂತಿ ಚ ॥೬೦॥

---

ದಿಗಳಿಗೆ ಬದಲಾಗಿ ರುದ್ರಾಕ್ಷಮಾಲೆಗಳನ್ನೇ ತಮ್ಮ ಅಲಂಕಾರ ಸಾಮಗ್ರಿಗಳನ್ನಾಗಿ ಮಾಡಿಕೊಂಡಿರುತ್ತಾರೆ. ॥೫೭॥

ಆ ಸ್ತ್ರೀಯರು ಸದಾ ತ್ರಿಪುಂಡ್ರವನ್ನು ಧಾರಣೆ ಮಾಡಿಕೊಂಡೇ ತಮ್ಮ ಗೃಹಕೃತ್ಯಗಳಲ್ಲಿ ಆಸಕ್ತರಾಗುವರು. ಒಂದು ವೇಳೆ ಅಡಿಗೆ ಮುಂತಾದವುಗಳನ್ನು ಮಾಡುವಾಗ ಶ್ರಮದಿಂದ. ಬೆವರಿ ಆ ತ್ರಿಪುಂಡ್ರವು ಅಳಿಸಿಹೋದರೆ ಮತ್ತೆ ಕೂಡಲೇ ಭಸ್ಮ ತ್ರಿಪುಂಡ್ರವನ್ನು ಹಚ್ಚಿಕೊಂಡೇ ಮುಂದಕ್ಕೆ ಕೆಲಸ ಮಾಡುವರು. ತ್ರಿಪುಂಡ್ರ ವಿಲ್ಲದೇ ಒಂದು ಕ್ಷಣವೂ ಇರುವುದಿಲ್ಲ. ॥೫೮॥

ಪಾಕ ಮುಂತಾದ ಕೆಲಸಗಳನ್ನು ಮಾಡುತ್ತಿರುವಾಗಲೂ ಆ ಸ್ತ್ರೀಯರು ಶಿವಧ್ಯಾನವನ್ನು ಮಾಡುತ್ತಲೇ ಇರುತ್ತಾರೆ. ಅಲ್ಲದೇ ತಮ್ಮ ಮಧುರವಾದ ಕಂಠ ದಿಂದ ಶಿವಪರವಾದ ಹಾಡುಗಳನ್ನು ತಾನ, ಗಾನ ಮುಂತಾದ ಸಂಗೀತ ಕೌಶಲಗ ಳೊಡನೆ ಇಂಪಾಗಿ ಹಾಡುತ್ತಾ ಪರಮೇಶ್ವರನನ್ನು ಸಂತುಷ್ಟನನ್ನಾಗಿ ಮಾಡುತ್ತಾರೆ. ॥೫೯॥

ದಿವ್ಯವಾದ ಪಕ್ವಾನ್ನಗಳನ್ನು ತಯಾರಿಸುವಾಗ, ಈಶನಿಗೆ ನೈವೇದ್ಯಮಾಡುವ ಮೊದಲು ತಮಗೆ ಎಲ್ಲಿ ಆ ಅನ್ನದ ಸುವಾಸನೆಯು ಬರುವುದೋ ಎಂಬ ಶಂಕೆ ಯಿಂದ ಆ ಸ್ತ್ರೀಯರು ಮೊದಲೇ ಅವುಗಳ ಗಂಧವನ್ನು ಪರಮೇಶ್ವರನಿಗೆ ಮನಸಾ ನಿವೇದಿಸುತ್ತಾರೆ. ಅದೇ ರೀತಿ ನಾನಾ ವಿಧವಾದ ಪಾಕಗಳನ್ನು ತಯಾರಿಸುತ್ತಾರೆ. ॥೬೦॥

ಯಾವದನ್ನಂ ಕೃತಂ ಗೇಹೇ ಫಲಶಾಕಸಮನ್ವಿತಂ ।
ತಾವನ್ನಿವೇದ್ಯ ಶರ್ವಾಯ ಭುಕ್ತ್ವಾ ಕಾಲಂ ನಯಂತಿ ತೇ ॥೬೧॥

ಪ್ರತಿಗ್ರಾಸೇ ಮಹೇಶಾನ ಮಹಾದೇವೇತಿ ವಾದಿನಃ ।
ಮಹಾದೇವಧ್ವನಿಧುನೀಧ್ವನಯಃ ಪ್ರತಿಮಂದಿರೇ ॥೬೨॥

ಚಂದನಂ ಕುಸುಮಂ ವಾಸಃ ಶಿವಾಯ ವಿನಿವೇದಿತಂ ।
ಭಕ್ತ್ಯಾ ಗೃಹ್ಣಂತಿ ಶಿರಸಾ ಪ್ರಣಮಂತಿ ಸ್ತುವಂತಿ ಚ ॥೬೩॥

ರಾತ್ರೌ ದಾರವಿಹಾರೇಽಪಿ ಹರನಾಮಾನುಕೀರ್ತನಂ ।
ಕುರ್ವಂತಿ ಹಾರಾಸ್ತೇ ದಾರಾಃ ಪರಂ ಹಾರಾಃ ಸ್ವಭಾವತಃ ॥೬೪॥

ಹಾರಾಂಗನಾಲಿಂಗನೇಽಪಿ ಶಿವಲಿಂಗಂ ನ ವಿಸ್ಮೃತಂ ।
ತದಾಲಿಂಗನಜಂ ಸೌಖ್ಯಂ ಶಂಕರಾಯ ನಿವೇದ್ಯತೇ ॥೬೫॥

---

ಮನೆಯಲ್ಲಿ ಎಷ್ಟು ಬಗೆಯ ಅನ್ನಗಳನ್ನೂ ವ್ಯಂಜನಗಳನ್ನೂ ತಯಾರು ಮಾಡಿಸಿರುವರೋ ಅವುಗಳೆಲ್ಲವನ್ನೂ ಪರಮೇಶ್ವರನಿಗೆ ಮೊದಲು ನಿವೇದನಮಾಡಿ, ಆನಂತರ ಆ ಪ್ರಸಾದವನ್ನು ಭುಂಜಿಸುತ್ತಾ ಕಾಲಕಳೆಯುತ್ತಾರೆ. ॥೬೧॥

ಅವರು ಊಟಮಾಡುವಾಗ ಪ್ರತಿ ತುತ್ತನ್ನು ತಿನ್ನುವಾಗಲೂ ಮಹಾದೇವ, ಈಶಾನ ಎಂದು ಶಿವನಾಮಗಳನ್ನು ಉಚ್ಚರಿಸುತ್ತಲೇ ಇರುತ್ತಾರೆ. ಈ ಪವಿತ್ರವಾದ ನಾಮಧ್ವನಿಯು ಎಲ್ಲಾ ಮನೆಗಳಲ್ಲೂ ಗಂಗೆಯಂತೆ ಪ್ರವಹಿಸಿಕೊಂಡು ಪವಿತ್ರ ವನ್ನಾಗಿ ಮಾಡುತ್ತಿದೆ. ॥೬೨॥

ಚಂದನ, ಪುಷ್ಪ, ವಸ್ತ್ರಾಲಂಕಾರ ಇವುಗಳಲ್ಲಿ ಯಾವುದನ್ನೇ ಆಗಲಿ, ಮೊದಲು ಶಿವನಿಗೆ ಅರ್ಪಿಸಿ ಅನಂತರ ಪ್ರಸಾದರೂಪವಾಗಿ ಅವುಗಳನ್ನು ಆದರದಿಂದ ಉಪಭೋಗಿಸುತ್ತಾರೆ. ॥೬೩॥

ಆ ಭೂಲೋಕದ ಜನರು ಪರಮ ಶೈವರೆನಿಸುವರು. ರಾತ್ರಿ ಕಾಲದಲ್ಲಿ ತಮ್ಮ ಪತ್ನಿಯರೊಂದಿಗೆ ವಿಹರಿಸುತ್ತಿರುವ ಸಮಯದಲ್ಲಿಯೂ ಶಿವನಾಮವನ್ನು ಸಂಕೀರ್ತಿಸುತ್ತಲೇ ಇರುವರು. ಅವರ ಸ್ವಭಾವವೇ ಪರಮ ಶೈವಸ್ವಭಾವವಾಗಿರು ವುದು. ॥೬೪॥

ಆ ಜನರು ತಮ್ಮ ಈಶ್ವರ ಭಕ್ತರಾದ ಪತ್ನಿಯರನ್ನು ಆಲಿಂಗನೆ ಮಾಡಿ ಕೊಳ್ಳುವಾಗಲೂ ಶಿವನನ್ನು ಮರೆಯುವುದಿಲ್ಲ. ಮನಸಾ ಧ್ಯಾನಿಸುತ್ತಲೇ ಇರುತ್ತಾರೆ.

ಹರ ಸ್ಮರಹರಾಪಾರ ಗುಣಸಾಗರ ಶಂಕರ ।
ಪಾಹಿ ಪಾಹೀತಿ ತೇ ದಾರಾಃ ಸ್ಮರಂತಿ ಸುರತೇ ಹರಂ ॥೬೬॥

ತೇ ಧೀರಹಾರದಾರಾಂಗಂ ಭೂತಿಭಾಸುರಮಾದರಾತ್ ।
ದುಕೂಲಾಂಕಮಿವಾಲೋಕ್ಯ ಶಿವಂ ಸ್ಮೃತ್ವಾ ಹಸಂತಿ ತೇ ॥೬೭॥

ವಿಹಾರಯೋಗ್ಯಂ ಯದ್ದ್ರವ್ಯಂ ತನ್ನಿವೇದ್ಯ ಮಹೇಶ್ವರೇ ।
ಪ್ರಸಾದಬುದ್ಧ್ಯಾ ತೇ ಸರ್ವೇ ತತ್ ಸ್ವೀಕುರ್ವಂತಿ ಯತ್ನತಃ ॥೬೮॥

ಹರನಾಮಾನುಸಂಧಾನಾತ್ತದ್ದಾರೈಃ ಪ್ರಸವೇಷ್ವಪಿ ।
ವೇದನಾ ನೈವ ಸಂಪ್ರಾಪ್ತಾ ಸಾ ತಾಸಾಮನ್ಯಥಾ ಕುತಃ ॥೬೯॥

---

ಮತ್ತು ತಮ್ಮ ಪತ್ನಿಯ ಆಲಿಂಗನದಿಂದ ಉಂಟಾದ ಸುಖವನ್ನೂ ಸಹ ಶಿವನಿಗೇ ಅರ್ಪಿಸುತ್ತಾರೆ. ॥೬೫॥

ಭೂಲೋಕದ ಸ್ತ್ರೀಪುರುಷರು ಸಂಭೋಗಸುಖವನ್ನು ಅನುಭವಿಸುತ್ತಿರುವಾಗಲೂ ಶಿವನನ್ನೇ ಸ್ಮರಿಸಿಕೊಳ್ಳುತ್ತಾರೆ. ಹೇ ಹರ, ಶಂಭೋ, ಶಂಕರ, ಗುಣಸಾಗರ, ಮನ್ಮಥಧ್ವಂಸಿ ನಮ್ಮನ್ನು ಕಾಪಾಡು ಎಂದು ಮುಂತಾಗಿ ಧ್ಯಾನಿಸುತ್ತಾರೆ. ॥೬೬॥

ಏಕಾಂತವಾದ ವಿಲಾಸ ಕಾಲದಲ್ಲಿಯೂ ಆ ರಮಣಿಯರು ತಮ್ಮ ಶರೀರಕ್ಕೆಲ್ಲಾ ಭಸ್ಮವನ್ನು ಲೇಪಿಸಿಕೊಂಡಿರುತ್ತಾರೆ. ಆಗ ಅವರ ಅವಯವ ಸೌಂದರ್ಯವು ಮಹತ್ತರವಾದ ವಿಲಾಸವನ್ನೇ ಬೀರುತ್ತದೆ. ಆ ಸಮಯದಲ್ಲಿ ಅವರ ತರುಣಪತಿಗಳು ಅಲೌಕಿಕ ಲಾವಣ್ಯವನ್ನು ನೋಡಿ ತಮ್ಮ ಪತ್ನಿಯರು ಯಾವುದೋ ಅಲೌಕಿಕವಾದ ವಸ್ತ್ರವನ್ನು ಧರಿಸಿದ್ದಾರೋ ? ಎಂಬ ಒಂದು ವೈಚಿತ್ರ್ಯವನ್ನೇ ಅನುಭವಿಸುವರು. ॥೬೭॥

ತಮ್ಮ ಭೋಗವಿಲಾಸದಲ್ಲಿ ಯಾವ ಯಾವ ಪದಾರ್ಥಗಳನ್ನು ಉಪಭೋಗಿಸುವರೋ ಅವುಗಳನ್ನು ಮೊದಲು ಪರಮೇಶ್ವರನಿಗೆ ನಿವೇದಿಸಿ, ಅನಂತರ ಅವುಗಳನ್ನು ಈಶ್ವರಪ್ರಸಾದವೆಂದು ಶ್ರದ್ಧೆಯಿಂದ ಅನುಭವಿಸುತ್ತಾರೆ. ॥೬೮॥

ಆ ವಿಲಾಸವತಿಯರಾದ ಯುವತಿಯರು ತಮ್ಮ ಪ್ರಸವವೇದನೆಯ ಸಮಯದಲ್ಲಿಯೂ ಶಿವನಾಮವನ್ನು ಧ್ಯಾನಮಾಡುವರು. ಆ ಆಸಕ್ತಿಯಿಂದ ಅವರಿಗೆ ಪ್ರಸವವೇದನೆಯೇ ತಿಳಿಯುವುದಿಲ್ಲ. ಪ್ರಸೂತಿ ಎಂಬುದು ಮಹಾವೇದನೆ ಎಂದು

ಜಾತೇ ಕುಮಾರೇ ತನ್ನಾಮ ಶಿವಶಂಕರ ಇತ್ಯಪಿ ।
ಕೃತ್ವಾ ಭಸ್ಮಾವಲಿಪ್ತಂ ತಂ ಕುರ್ವಂತ್ಯೇವ ಕುಲಾಂಗನಾಃ ॥೭೦॥

ಜಾತಸ್ಯಾಪಿ ಶಿಶೋಸ್ತಸ್ಯ ವಿಗ್ರಹಂ ಭಸ್ಮಭೂಷಿತಂ ।
ರುದ್ರಾಕ್ಷಭೂಷಿತಂ ಕೃತ್ವಾ ಕಾರಯಂತಿ ಶಿವಾರ್ಚನಂ ॥೭೧॥

ಶಿಶುಹಸ್ತೇ ಬಿಲ್ವಪತ್ರಂ ದತ್ವಾ ಲಿಂಗಸ್ಯ ಮಸ್ತಕೇ ।
ಪ್ರಚ್ಯಾವಯಂತಿ ಯತ್ನೇನ ಧೃತಾಂಗುಲಿಕುಲಂ ಬಲಾತ್ ॥೭೨॥

ಪಶ್ಚಾಜ್ಜಾತಾಯ ಬಾಲಾಯ ಸ್ತನ್ಯಮೀಶನಿವೇದಿತಂ ।
ಪ್ರಯಚ್ಛಂತಿ ಪ್ರಯತ್ನೇನ ಶಿವಗಾನಪುರಸ್ಸರಂ ॥೭೩॥

---

ಪ್ರಸಿದ್ಧಿ ಇದ್ದರೂ ಅವರಿಗೆ ಅದರಿಂದ ಯಾವ ಯಾತನೆಯೂ ದುಃಖವೂ ತೋರುವುದಿಲ್ಲ. ॥೬೯॥

ಆ ಕುಲಶೀಲವತಿಯರಾದ ಮಹಿಳೆಯರು ತಮಗೆ ಸಂತಾನವಾಗಿ ಪುತ್ರನು ಹುಟ್ಟಿದೊಡನೆಯೇ ಆ ಪುತ್ರನಿಗೆ ಶಿವನ ಹೆಸರನ್ನೇ ಅಂದರೆ ಶಿವ ಶಂಕರ ಎಂದು ನಾಮಕರಣ ಮಾಡುತ್ತಾರೆ. ಮತ್ತು ಮಗುವಿಗೆ ರಕ್ಷೆಯಾಗಿ ಮೈಗೆಲ್ಲಾ ಭಸ್ಮವನ್ನು ಅನುಲೇಪನಮಾಡುತ್ತಾರೆ. ॥೭೦॥

ಆ ಪುತ್ರನು ಇನ್ನೂ ಮಗುವಾಗಿದ್ದಾಗಲೇ ಅವನಿಗೆ ಭಸ್ಮವನ್ನೂ ರುದ್ರಾಕ್ಷ ಮಾಲೆಗಳನ್ನೂ ತೊಡಿಸಿ ಅವನ ಕೈಯ್ಯಿಂದ ಶಿವಾರ್ಚನೆಯನ್ನು ಮಾಡಿಸುತ್ತಾರೆ. ॥೭೧॥

ಆ ಸ್ತ್ರೀಯರು ತಮ್ಮ ಮಕ್ಕಳು ಇನ್ನೂ ಚಿಕ್ಕವರಾಗಿದ್ದಾಗಲೇ ಅವರ ಕೈಯ್ಯಲ್ಲಿ ಬಿಲ್ವಪತ್ರೆಯನ್ನು ಕೊಟ್ಟು ಆ ಶಿಶುಗಳ ಕೈಬೆರಳುಗಳಿಂದ ಜಾರದಂತೆ ಮಾಡಿ, ಆ ಬಿಲ್ವಪತ್ರೆಯು ಶಿವಲಿಂಗದ ಮೇಲೆ ಸರಿಯಾಗಿ ಬೀಳುವಂತೆ ಹಾಕಿಸುತ್ತಾರೆ. ॥೭೨॥

ಹೀಗೆ ಆ ಮಕ್ಕಳ ಕೈಯಿಂದ ಪೂಜೆಮಾಡಿಸಿದ ಮೇಲೆ, ಆ ಸ್ತ್ರೀಯರು ಸ್ತನ್ಯಕ್ಷೀರವನ್ನು ಮೊದಲು ಪರಮೇಶ್ವರನಿಗೆ ನಿವೇದಿಸಿ ಅನಂತರ ಶಿವಪರವಾದ ಹಾಡುಗಳನ್ನು ಹಾಡುತ್ತಾ, ಮಕ್ಕಳಿಗೆ ಸ್ತನ್ಯಪಾನಮಾಡಿಸುವರು. ॥೭೩॥

ಔಷಧಂ ಚ ನ ಗೃಹ್ಣಂತಿ ತದ್ದಾರಾಃ ಪ್ರಸವೇಷ್ವಪಿ ।
ಕೃತ್ವಾ ಶಿವಾರ್ಚನಂ ಭಕ್ತ್ಯಾ ಶಿವತೀರ್ಥಂ ಪಿಬಂತಿ ತೇ ॥೭೪॥

ಶಿವತೀರ್ಥಾಮೃತೇ ಪೀತೇ ಕ್ವ ಸಾ ಪ್ರಸವವೇದನಾ ।
ಶಿವಭಸ್ಮಾಂಗಸಂಗೇನ ತನ್ನೈವೇದ್ಯಾಶನೇನ ಚ ॥೭೫॥

ತೇ ಜಲಂ ಕಾಲಕಾಲಾಯ ನಿವೇದ್ಯ ಪ್ರಸವಕ್ಷಣೇ ।
ಪಿಬಂತಿ ತೇನ ಪ್ರಸವಃ ಸುಖೇನೈವ ಪ್ರಜಾಯತೇ ॥೭೬॥

ಬಿಲ್ವಚ್ಛಾಯಾಸಮಾಕ್ರಾಂತಸದನೇಷ್ವೇವ ಸರ್ವದಾ ।
ತಿಷ್ಠಂತಿ ತೇಷಾಂ ಗಮನಂ ಶಿವಯಾತ್ರಾರ್ಥಮೇವ ಹಿ ॥೭೭॥

---

ಆ ಮಹಿಳೆಯರು ಪ್ರಸವಿಸಿದಾಗ ಔಷಧ, ಪಥ್ಯ, ಉಪಚಾರ ಇವುಗಳನ್ನು ಗಣಿಸುವುದಿಲ್ಲ. ಕೇವಲ ಶಿವನಿಗೆ ಅಭಿಷೇಕಮಾಡಿದ ತೀರ್ಥವನ್ನು ಕುಡಿಯುವರು. ಅದೇ ಮಹೌಷಧವೆಂದು ಅವರು ತಿಳಿದಿದ್ದಾರೆ. ॥೭೪॥

ಹೀಗೆ ಅವರು ಅಮೃತಸದೃಶವಾದ ಶಿವತೀರ್ಥವನ್ನು ಕುಡಿದಮೇಲೆ ಅವರಿಗೆ ಪ್ರಸೂತಿವೇದನೆಯೂ ನಿಶ್ಶಕ್ತಿಯೂ ಎಲ್ಲಿಯದು? ಅಲ್ಲದೇ ಅವರು ಶಿವಪ್ರಸಾದಭಸ್ಮವನ್ನು ಮೈಗೆಲ್ಲಾ ಹಚ್ಚಿಕೊಳ್ಳುತ್ತಾರೆ. ಶಿವನಿವೇದಿತವಾದದ್ದನ್ನೇ ಊಟಮಾಡುತ್ತಾರೆ. ಅದಮೇಲೆ ಬೇರೆ ಪಥ್ಯ ಉಪಚಾರ ಯಾವುದುಬೇಕು? ಇವೆಲ್ಲವೂ ಸಂಜೀವನವೇತಾನೇ! ॥೭೫॥

ಆ ಸ್ತ್ರೀಯರು ಪ್ರಸವಕಾಲದಲ್ಲಿ ಪರಮೇಶ್ವರನಿಗೆ ಅರ್ಪಿಸಿದ ಜಲವನ್ನು ಭಕ್ತಿಯಿಂದ ಕುಡಿಯುತ್ತಾರೆ. ಅದರಿಂದ ಅವರಿಗೆ ಪ್ರಸೂತಿವೇದನೆಯಿಂದ ಯಾತನೆ ಯಾಗುವುದೇ ಇಲ್ಲ. ಅಲ್ಲದೆ ಅವರಿಗೆ ಸುಖಪ್ರಸವವಾಗುವುದು. ॥೭೬॥

ಆ ಭೂಲೋಕ ನಿವಾಸಿಗಳಾದ ಸ್ತ್ರೀಪುರುಷರೆಲ್ಲಾ ಊರೂರು ತಿರುಗುವು ದೆಂದರೆ ಕೇವಲ ಶಿವಯಾತ್ರೆಗಾಗಿಯೇ. ಸದಾ ಶಿವಕ್ಷೇತ್ರಗಳನ್ನೂ ನೋಡಲು ಹೋಗುವುದೇ ಅವರ ಮುಖ್ಯಸಂಚಾರ. ಯಾವಾಗಲೂ ಬಿಲ್ವವೃಕ್ಷದ ನೆರಳು ಬೀಳು ವಂತಹ ಮನೆಗಳಲ್ಲಿಯೇ ವಾಸಮಾಡುವರು. ॥೭೭॥

ಶ್ರೀಶೈಲಾದಿಶಿವಸ್ಥಾನಾಲೋಕನಪ್ರೀತಮಾನಸಾಃ ।
ಪುನಂತಿ ಭುವನಾನ್ಯಾಶು ಸ್ವಾಲೋಕನರತಾನಪಿ ॥೭೮॥

ಚಂದ್ರಮೌಳಿಸ್ವರೂಪೇಣ ದೃಶ್ಯಂತೇ ತೇ ಮಹೋನ್ನತಾಃ ।
ಅಶಕ್ಯಾ ಖಲು ಶೇಷಸ್ಯಾಪ್ಯಹೋ ತದ್ಗುಣವರ್ಣನಾ ॥೭೯॥

ಸಂಚಾರ ಏವ ಭೂಲೋಕೇ ತ್ಯಕ್ತೋಽಸ್ಮಾಭಿರತಃಪರಂ ।
ತತ್ರಸ್ಥಕೃತ್ಯನಾರ್ತಾಪಿ ಯಮ ಸರ್ವಾತ್ಮನಾಪಿ ನ ॥೮೦॥

ಮಹೇಶಾರಾಧನಂ ತ್ಯಕ್ತ್ವಾ ಕ್ಷಣಂ ವಾ ನಿವಸಂತಿ ಯೇ ।
ತೇ ತೇಷಾಂ ಶತ್ರವಃ ಕಾಲ ನಿರ್ಮಲಾನಾಂ ಮಹಾತ್ಮನಾಂ ॥೮೧॥

---

ಆ ಶೈವರೆಲ್ಲರೂ ಶ್ರೀಶೈಲಕ್ಷೇತ್ರವೇ ಮೊದಲಾದ ಶಿವಕ್ಷೇತ್ರಗಳ ಯಾತ್ರೆ ಮಾಡಿ ಪವಿತ್ರರಾಗಿರುವರಲ್ಲದೇ ಅತ್ಯಂತ ಸಂತುಷ್ಟರಾಗಿರುತ್ತಾರೆ. ಇವರನ್ನು ದರ್ಶನಮಾಡುವವರೂ ಸಹ ಇವರ ದೆಸೆಯಿಂದ ಪೂತರಾಗಿರುತ್ತಾರೆ. ಈ ಶೈವರು ಲೋಕವನ್ನೇ ಪಾವನವನ್ನಾಗಿ ಮಾಡಿದ್ದಾರೆ. ॥೭೮॥

ಭೂಲೋಕದ ಜನರು ಅತ್ಯಂತ ಶ್ರೇಷ್ಠರಾಗಿರುವರು. ಅವರು ನೋಡುವುದಕ್ಕೆ ಚಂದ್ರಶೇಖರನಾದ ಪರಮೇಶ್ವರನಂತೆಯೇ ಕಾಣುವರು. ಅವರ ಮಹಿಮೆಯು ಅಪಾರವಾಗಿದೆ. ಆದಿಶೇಷನೂ ಅವರ ಗುಣಗಳನ್ನು ವರ್ಣಿಸಲಾರನು. ॥೭೯॥

ಓ ಯಮಧರ್ಮನೇ, ಇತ್ತೀಚೆಗೆ ನಾವು ಭೂಲೋಕಕ್ಕೆ ಸಂಚರಿಸಲು ಹೋಗುವುದನ್ನೇ ನಿಲ್ಲಿಸಬೇಕೆಂದಿದ್ದೇವೆ. ಅಲ್ಲಿ ಸಂಚರಿಸಿ ಏನೂಪ್ರಯೋಜನವಿಲ್ಲ. ಪಾಪಿಗಳನ್ನು ಹಿಡಿದುಕೊಂಡು ಬರೋಣವೆಂದರೆ ಯಾರೂ ಪಾಪಿಗಳೇ ಸಿಕ್ಕುವುದಿಲ್ಲ. ಭೂಲೋಕದವರೆಲ್ಲಾ ಪುಣ್ಯಾತ್ಮರೇ ಆಗಿದ್ದಾರೆ. ನರಕಕ್ಕೆ ಯೋಗ್ಯರಾದವರು ಯಾರೂ ಅಲ್ಲಿಲ್ಲ. ॥೮೦॥

ಸದಾ ಪರಮೇಶ್ವರನನ್ನು ಪೂಜಿಸುವುದರಿಂದ ಅವರೆಲ್ಲರೂ ಪವಿತ್ರಾತ್ಮರೂ ಮಹಾತ್ಮರೂ ಆಗಿದ್ದಾರೆ. ಅವರಿಗೆ ಪಾಪ ವಾಸನೆಯೇ ತೋರುವುದಿಲ್ಲ. ದ್ವೇಷಾಸೂಯೆಗಳಿಲ್ಲ. ಅವರು ಕೇವಲ ಶಿವನ ಅರ್ಚನೆಮಾಡದವರನ್ನು ದ್ವೇಷಿಸುತ್ತಾರೆ. ಆದುದರಿಂದಲೇ ಎಲ್ಲರೂ ಪ್ರತಿಕ್ಷಣದಲ್ಲಿಯೂ ಶಿವನ ಆರಾಧನೆಯನ್ನೇ ಮಾಡುತ್ತಾರೆ. ॥೮೧॥

ಇತಿ ತದ್ವಚನಂ ಶ್ರುತ್ವಾ ಯಮಸ್ಸಂತುಷ್ಟಮಾನಸಃ ।
ದೂತಾನಾಹಾವಿಲಂಬೇನ ಭಾವಿ ಕಾರ್ಯಮಿತಿ ದ್ವಿಜಾಃ ॥೮೨॥

ದಕ್ಷಪ್ರಜಾಪತಿರ್ನಾಮ ಪ್ರಜಾಪತಿರತಃಪರಂ ।
ಆಶ್ವೈವಸುರಸಂಕೀರ್ಣೋ ಯಾಗದೀಕ್ಷಾಂ ಕರಿಷ್ಯತಿ ॥೮೩॥

ಸ ದಕ್ಷಃ ಸ್ವವಿನಾಶಾಯ ಶಿವನಿಂದಾಂ ಕರಿಷ್ಯತಿ ।
ತತ್ಸಹಾಯಾಸ್ಸುರಾ ಸ್ಸರ್ವೇ ಕರಿಷ್ಯಂತ್ಯನುಮೋದನಂ ॥೮೪॥

ಮುನಯೋಽಪಿ ಕರಿಷ್ಯಂತಿ ತಥಾ ತದನುಮೋದನಂ ।
ತತಸ್ತೇಷಾಂ ವಿನಾಶೋಽಪಿ ಭವಿಷ್ಯತಿ ನ ಸಂಶಯಃ ॥೮೫॥

---

ಈರೀತಿಯಾಗಿ ಆ ಯಮದೂತರು ಹೇಳುತ್ತಿರಲು ಅವರ ಮಾತನ್ನು ಕೇಳಿ ಯಮನು ಮನಸ್ಸಿನಲ್ಲಿಯೇ ಸಂತೋಷಪಟ್ಟನು. ಅನಂತರ ಆ ಯಮದೂತರಿಗೆ ಭವಿಷ್ಯಕಾಲದ ಘಟನೆಯನ್ನು ಕುರಿತು ಸೂಚನೆಗಾಗಿ ಹೀಗೆಂದನು. ॥೮೨॥

" ಎಲೈ ದೂತರೇ, ದಕ್ಷಬ್ರಹ್ಮನೆಂಬ ಒಬ್ಬ ಬ್ರಹ್ಮಮಾನಸಪುತ್ರನು ಮುಂದೆ ಒಂದುಸಲ ಅಶ್ವೈವರಾದ ಕೆಲವು ಜನ ದೇವತೆಗಳೊಡನೆ ಸೇರಿಕೊಂಡು ಒಂದು ಯಾಗಕ್ಕಾಗಿ ದೀಕ್ಷೆಯನ್ನು ವಹಿಸುವನು. ॥೮೩॥

ಆ ಸಂದರ್ಭದಲ್ಲಿ ದಕ್ಷನು ತನ್ನ ವಿನಾಶಕ್ಕಾಗಿ ಶಿವನನ್ನು ನಿಂದಿಸುವನು. ಆಗ ಅಲ್ಲಿ ನೆರೆದ ಆತನ ಸಹವಾಸಿಗಳಾದ ದೇವತೆಗಳು ದಕ್ಷನು ಮಾಡಿದ ಶಿವನಿಂದೆಯನ್ನು ಅನುಮೋದಿಸುವರು. ದಕ್ಷನಿಗೆ ಪ್ರತಿಯಾಗಿ ಯಾರೂ ಏನೂ ಹೇಳುವುದಿಲ್ಲ. ಅರ್ಥಾತ್ ಅವರೂ ಶಿವನಿಂದೆಯನ್ನು ಮಾಡಿದಂತೆಯೇ ಆಗುವುದು. ॥೮೪॥

ಅಲ್ಲಿದ್ದ ಕೆಲವುಜನ ಮುನಿಗಳೂ ದಕ್ಷನ ಅಭಿಪ್ರಾಯವನ್ನು ಅನುಮೋದಿಸುವರು. ಅವರೂ ಶಿವನಿಂದೆಗೆ ಬದಲು ಹೇಳುವುದಿಲ್ಲ. ಆಗ ಅವರೂ ಶಿವನಿಂದೆಯನ್ನು ಮಾಡಿದಂತೆಯೇ ಆಗುತ್ತದೆ. ಆ ಶಿವನಿಂದೆಯ ಫಲವಾಗಿ ಆ ದೇವತೆಗಳೂ ಮುನಿಗಳೂ ಆ ಕೂಡಲೇ ಅಲ್ಲಿಯೇ ನಾಶವಾಗುವುದರಲ್ಲಿ ಸಂಶಯವಿಲ್ಲ. ॥೮೫॥

ತೇ ಸರ್ವೇ ನರಕೇಷ್ವೇವ ಪತಿಷ್ಯಂತಿ ನ ಸಂಶಯಃ ।
ತೈಃ ಪೂರಿತಮಿದಂ ಭಾವಿ ಸರ್ವಂ ನರಕಮಂದಿರಂ ॥೮೬॥

ಸ್ವಲ್ಪೈರ್ದಿನೈಶ್ಚ ತದ್ಭಾವಿ ತೇನಾವಿಚ್ಛಿನ್ನಯಾತನಾ ।
ತೈಃ ಪ್ರಾಪ್ಯ ನಿರ್ಗಮಸ್ತೇಷಾಂ ನರಕಾನ್ನ ಭವಿಷ್ಯತಿ ॥೮೭॥

ತತೋ ನರಕವಾಸೇನ ದುಃಖಿತಾ ಏವ ತೇ ಸದಾ ।
ಭವಿಷ್ಯಂತಿ ತತಸ್ತೇಷಾಂ ನ ಕೋಽಪ್ಯತ್ರಾಸ್ತಿ ಮೋಚಕಃ ॥೮೮॥

ಹಾ ಮಹೇಶ್ವರನಿಂದಾಯಾಃ ಫಲಮೇವಮಭೂದಿತಿ ।
ಆಕ್ರೋಶನಾನಿ ಕೃತ್ವೈವ ಸ್ಥಾಸ್ಯಂತಿ ನರಕಾಲಯೇ ॥೮೯॥

---

ಆ ಶಿವನಿಂದಕರೆಲ್ಲರೂ ಅವಶ್ಯವಾಗಿ ನರಕಕ್ಕೇ ಬೀಳುವವರಿದ್ದಾರೆ. ಆದುದರಿಂದ ಆ ಸಮಯದಲ್ಲಿ ಪಾಪಿಗಳಿಂದ ಈ ನರಕವೆಲ್ಲಾ ತುಂಬಿಹೋಗುವುದು. ಇಂಥ ಒಂದು ದೊಡ್ಡ ಘಟನೆಯು ಮುಂದೆ ನಡೆಯುವುದು. ನೀವು ಯೋಚಿಸಬೇಡಿ. ॥೮೬॥

ಈ ಘಟನೆಯು ಇನ್ನು ಕೆಲವೇ ದಿನಗಳಲ್ಲಿ ಸಂಭವಿಸುವುದು. ಸ್ವಲ್ಪವೇ ದಿವಸಗಳಲ್ಲಿ ಇದು ನಡೆಯುವುದು. ಆಗ ಆ ಶಿವನಿಂದಕರೆಲ್ಲಾ ಅನವರತವಾದ ನರಕಯಾತನೆಯನ್ನು ಪಡೆಯುತ್ತಾರೆ. ಅವರಿಗೆ ನರಕದಿಂದ ಬಿಡುಗಡೆಯೇ ಆಗುವುದಿಲ್ಲ. ॥೮೭॥

ಆ ಶಿವನಿಂದಕರೆಲ್ಲರೂ ಈ ನರಕಯಾತನೆಯಿಂದ ಅತ್ಯಂತ ದುಃಖಿತರಾಗುವರು. ಇಂಥ ಪಾಪಿಗಳನ್ನು ನರಕದಿಂದ ಬಿಡಿಸುವವರು ಯಾರೂ ಇರುವುದಿಲ್ಲ. ॥೮೮॥

ಅಯ್ಯೋ, ನಾವು ಪರಮೇಶ್ವರನನ್ನು ನಿಂದಿಸಿದೆವು. ಮಹಾ ತಪ್ಪುಕೆಲಸ ಮಾಡಿದೆವು. ಆ ಅಪರಾಧದಿಂದ ಇಂಥ ಘೋರತರವಾದ ಶಿಕ್ಷೆಯನ್ನು ಅನುಭವಿಸಬೇಕಾಯಿತು. ಅಯ್ಯಯ್ಯೋ, ಬಹಳ ಕಷ್ಟವಾಗುವುದಲ್ಲಾ! ಬಹಳ ಯಾತನೆ ಆಗುವುದಲ್ಲಾ! ಎಂದು ಅಳುತ್ತಾ, ಚೀರಿಕೊಳ್ಳುತ್ತಾ, ಇದೇ ನರಕದಲ್ಲಿಯೇ ಬಿದ್ದಿರುತ್ತಾರೆ. ॥೮೯॥

ಶಿವನಿಂದಾಂ ಭ್ರಮೇಣಾಪಿ ಯಃ ಕರಿಷ್ಯತಿ ತಂ ನರಂ।
ಪಾತಯಧ್ವಂ ಪ್ರಯತ್ನೇನ ಕುಂಭೀಪಾಕೇ ವಿಶೇಷತಃ ॥೯೦॥

ಇಂದ್ರೋವಾಸ್ತು ಮಹೇಂದ್ರೋ ವಾ ವಿಷ್ಣುರಸ್ತು ಪ್ರಜಾಪತಿಃ।
ಶಿವನಿಂದಾನುರಕ್ತಶ್ಚೇತ್ ಪಾತಯಧ್ವಂ ಸುರೌರವೇ ॥೯೧॥

ರೌರವಾನ್ನಿರ್ಗಮಸ್ತೇಷಾಂ ಕದಾಪಿ ನ ಭವಿಷ್ಯತಿ।
ಶಿವನಿಂದಾಪರಂ ತೇಷಾಂ ರೌರವಾವಾಸಸಾಧನಂ ॥೯೨॥

ರೌರವಾನ್ನಿರ್ಗಮಸ್ತೇಷಾಂ ಕಲ್ಪಾಂತೇಽಪಿ ನ ಸರ್ವಥಾ।
ಮಹಾರೌರವಸೃಷ್ಟಿಶ್ಚ ಕೃತಾ ಪಾತಯಿತುಂ ಸದಾ ॥೯೩॥

---

ಎಲೈ ದೂತರಿರಾ, ಶಿವನನ್ನು ಮೌಢ್ಯದಿಂದಲಾದರೂ ಸರಿಯೇ, ಯಾವನು ದೂಷಣೆಮಾಡುವನೋ ಅವನಿಗೆ ವಿಶೇಷವಾದ ಶಿಕ್ಷೆಯನ್ನು ಕೊಡಿರಿ. ಆತನ ಮೇಲೆ ಕೊಂಚವೂ ದಯೆ ತೋರಬೇಡಿ. ಆತನನ್ನು ಘೋರವಾದ ಕುಂಭೀಪಾಕ ದಲ್ಲಿ ಹಾಕಿ ಕಠಿಣತರವಾದ ಯಾತನೆಯನ್ನುಂಟುಮಾಡಿರಿ. ॥೯೦॥

ಇವನು ಇಂದ್ರನು, ಇವನು ಮಹೇಂದ್ರನು, ಇವನು ವಿಷ್ಣು, ಬ್ರಹ್ಮ ಎಂದು ಸ್ವಲ್ಪವೂ ಹಿಂದು ಮುಂದು ನೋಡಬೇಡಿ. ಪಕ್ಷಪಾತ ತೋರಬೇಡಿ, ಸ್ವಲ್ಪವೂ ದಯೆ ಇಡಬೇಡಿ. ಶಿವನಿಂದೆಯನ್ನು ಮಾಡಿದ್ದಾನೆಂದು ತಿಳಿದೊಡನೆಯೇ ಅವನನ್ನು ರೌರವ ನರಕಕ್ಕೆ ತಳ್ಳಿರಿ. ॥೯೧॥

ಶಿಕ್ಷೆಯು ಪೂರೈಸಿದ ಮೇಲೆ ನಮ್ಮ ಮೇಲೆ ನಿಷ್ಠೂರವು ಆಗುವುದೆಂದು ಹಿಂಜರೆಯಬೇಡಿ. ಆ ಪಾಪಿಗಳಿಗೆ ರೌರವ ನರಕದಿಂದ ಎಂದೂ ಬಿಡುಗಡೆಯೇ ಇರುವುದಿಲ್ಲ. ಶಿವನಿಂದೆಯನ್ನು ಮಾಡಿದ ಬಳಿಕ, ಅವನಿಗೆ ರೌರವ ನರಕದಲ್ಲಿ ವಾಸವು ನಿಶ್ಚಿತವು. ಆ ನಿಂದೆಯೇ ರೌರವ ನರಕವು ಮುಗಿಯದಿರುವುದಕ್ಕೆ ಕಾರಣವಾಗುವುದು. ॥೯೨॥

ಶಿವನಿಂದಕರಿಗೆ ಕಲ್ಪಾವಸಾನಕಾಲದಲ್ಲಿಯೂ ರೌರವ ನರಕದಿಂದ ಬಿಡುಗಡೆ ಇರುವುದಿಲ್ಲ. ಅಲ್ಲದೇ ಅವರಿಗೆ ಘೋರ ಶಿಕ್ಷೆಯನ್ನು ಕೊಡಲು ಮಹಾ ರೌರವ ನರಕವೂ ಸೃಷ್ಟವಾಗಿದೆ. ಅವರನ್ನು ಸದಾ ಅದರಲ್ಲಿಯೇ ತಳ್ಳಬೇಕು. ॥೯೩॥

ಶಿವನಿಂದಾವಿಷಜ್ವಾಲಾಸಮಾಕೀರ್ಣಾಃ ಸುರಾ ಅಪಿ ।
ಪತಿಷ್ಯಂತ್ಯೇವ ಸಹಸಾ ಮಹಾರೌರವಮಂಡಲೇ ॥೯೪॥

ತದಾ ನೃತ್ಯಂ ಪ್ರಕುರ್ವಂತೋ ಭವಂತಸ್ತಾನ್ ಸುರಾನಪಿ ।
ಪಾತಯಧ್ವಂ ಪ್ರಯತ್ನೇನ ಕುಂಭೀಪಾಕೇ ವಿಶೇಷತಃ ॥೯೫॥

ಕುಂಭೀಪಾಕೋಽಪಿ ನಾದೂರೇ ತನ್ನಿಂದಾ ತನ್ಮೃತಿಸ್ತಥಾ ।
ತೇಷಾಮಾಗಮನಂ ಚಾತ್ರ ಸರ್ವಥಾ ನ ವಿಲಂಬಿತಂ ॥೯೬॥

ಲೋಕೇ ತದನುರಕ್ತಾನಾಮನ್ಯೇಷಾಮಪಿ ಸರ್ವಥಾ ।
ಭವಿಷ್ಯತ್ಯೇವ ನರಕೇ ಯಾತನಾ ದುಸ್ಸಹಾ ಪರಂ ॥೯೭॥

ಏತಾನಿ ತಾವದಸಕೃಚ್ಛಿವನಿಂದಕಾನಾಂ
ವಾಸಾಯ ದುಃಖನಿಲಯಾನಿ ವಿನಿರ್ಮಿತಾನಿ ।

---

ಅವರು ದೇವತೆಗಳೇ ಆಗಿರಲಿ, ಆದರೂ ಶಿವನಿಂದೆ ಎಂಬ ವಿಷಜ್ವಾಲೆಯಿಂದ ಮುತ್ತಿಕೊಂಡವರು ಮಹಾ ರೌರವ ನರಕದಲ್ಲಿಯೇ ಅವಶ್ಯವಾಗಿ ಬೀಳುತ್ತಾರೆ. ||೯೪||

ಶಿವನಿಂದಕರು ದೇವತೆಗಳಾಗಿದ್ದರೂ ಅವರನ್ನೂ ನೀವು ಅವಶ್ಯವಾಗಿ ಕುಂಭೀ ಪಾಕಕ್ಕೆ ಹಾಕಬೇಕು. ಕಠೋರವಾದ ಶಿಕ್ಷೆಗಳನ್ನು ಕೊಡುವಾಗ ಅಟ್ಟಹಾಸ ಮಾಡಬೇಕು. ಶಿವನಿಂದಕರು ತಲೆತಗ್ಗಿಸುವಂತೆ ಮಾಡಬೇಕು. ಸ್ವಲ್ಪವೂ ದಯೆ ತೋರಕೂಡದು. ||೯೫||

ಆ ದಕ್ಷನೇ ಮೊದಲಾದವರು ಶಿವನಿಂದೆಯನ್ನು ಮಾಡುವ ಕಾಲವು ಇನ್ನೇನೂ ಬಹು ದೂರವಿರುವುದಿಲ್ಲ. ಹಾಗೆಯೇ ಅವರ ನಾಶವೂ ಬಹಳ ದೂರ ಇಲ್ಲ. ಸದ್ಯದಲ್ಲಿಯೇ ಆ ಶಿವನಿಂದಕರು ಈ ನರಕಕ್ಕೆ ಬರುವವರಿದ್ದಾರೆ. ಅವರಿಗೆ ಕುಂಭೀಪಾಕಪ್ರಾಪ್ತಿಯೂ ಇನ್ನೇನು ಸಮೀಪಗತವಾಗುವುದು. ||೯೬||

ಲೋಕದಲ್ಲಿ ಯಾರು ಯಾರು ಆ ದಕ್ಷನಿಗೆ ಸಹಾಯಕರೋ, ಆತನ ಅನುಗಾಮಿಗಳೂ, ಸಹಾನುಭೂತಿಯುಳ್ಳವರೂ ಯಾರಿದ್ದಾರೆಯೋ ಅವರೆಲ್ಲರಿಗೂ ಸಹ ನರಕವಾಸವೂ ಕಠಿನವಾದ ಯಾತನಾನುಭವವೂ ಆಗಲೇಬೇಕು. ||೯೭||

ಎಲೈ ದೂತರಿರಾ, ಈ ನರಕಗೃಹಗಳೆಲ್ಲವೂ ಆ ಶಿವನಿಂದಕರಿಗೆ ಶಿಕ್ಷೆ ವಿಧಿಸಲೆಂದೇ ನಿರ್ಮಿತವಾಗಿರುತ್ತವೆ. ಯಾರು ಪದೇ ಪದೇ ಶಿವನಿಂದೆಯನ್ನು

**ಸ್ಥಾನಾನಿ ನೂನಮಿತಿ ನಿಶ್ಚಿತಮೇವ ದೂತಾಃ**
**ತಾವತ್ಕಥಂಚಿದಮುಯಸ್ಸಮಯೋಽಪಿ ನೇಯಃ ॥೯೮॥**

**ಅಸ್ಮಾಕಂ ಗಿರಿರಾಜರಾಜತನಯಾಕಾಂತಾಂಘ್ರಿಪಂಕೇರುಹ**
**ಧ್ಯಾನಾನಂದಸಮುದ್ರಮುದ್ರಿತಮನೋವ್ಯಾಪಾರಸಾರಾತ್ಮನಾಂ ।**
**ಕಲ್ಪಾಂತೇಽಪಿ ನ ದುಃಖಮಿತ್ಯನುದಿನಂ ತೋಷಾಂಬುಧಿರ್ವರ್ಧತೇ**
**ತಸ್ಮಾತ್ಕೋಽಪಿ ಸುಧಾಕರಶ್ಶಿವಕಥಾನಂದಾತ್ಮಕೋ ಜಾಯತಾಂ ॥೯೯॥**

**ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಪೂರ್ವಾರ್ಧೇ**
**ದಕ್ಷಾಧ್ವರಪ್ರಶಂಸಾಯಾಂ ಋಷಿಕೃತ ದಕ್ಷನಿಂದಾವರ್ಣನೇ**
**ಯಮಯಮದೂತಸಂವಾದೇ ಅಷ್ಟತ್ರಿಂಶೋಽಧ್ಯಾಯಃ**

---

ಮಾಡಿ ಪಾಪಿಗಳಾಗಿರುತ್ತಾರೆಯೋ, ಅವರು ಇಲ್ಲಿಯೇ ನರಕದಲ್ಲಿ ಯಾತನೆಗಳನ್ನು ಅನುಭವಿಸುತ್ತಾ ವಾಸಮಾಡುತ್ತಾರೆ. ಅದಕ್ಕಾಗಿಯೇ ಈ ನರಕವನ್ನು ಏರ್ಪಡಿಸಲಾಗಿದೆ. ಆದುದರಿಂದ ಆ ಪಾಪಿಗಳು ಬರುವ ಸಮಯವನ್ನು ನಿರೀಕ್ಷಿಸುತ್ತಾ ಇರಬೇಕು. ಬಹಳ ಕಾಲ ಕಾಯಬೇಕೆಂದು ಯೋಚಿಸಬೇಡಿ. ಹೇಗೋ ಹಾಗೆ ಕಾಲ ಕಳೆಯಿರಿ. ಸದ್ಯದಲ್ಲಿಯೇ ಆ ಪಾಪಿಗಳು ಬರುವರು. ॥೯೮॥

ನಾವು ಸದಾಶಿವನೆನಿಸಿದ, ಗಿರಿಜಾರಮಣನ ಚರಣಕಮಲಗಳನ್ನೇ ಧ್ಯಾನ ಮಾಡುತ್ತಾ ಇದ್ದೇವೆ. ಆ ಧ್ಯಾನಾಮೃತರಸಾಸ್ವಾದದಿಂದ ನಮ್ಮ ಮನಸ್ಸಿನಲ್ಲಿ ಬೇರೆ ವ್ಯಾಪಾರ ಹವ್ಯಾಸಗಳೇ ಇರುವುದಿಲ್ಲ. ಇಂಥ ಶಿವಾರಾಧನೆಯಿಂದ ನಮಗೆ ಎಂದೂ ಪಾಪಸಂಸ್ಪರ್ಶವೇ ಕಾಣುವುದಿಲ್ಲ. ಅಲ್ಲದೆ ನಮಗೆ ಎಂದೂ ಕಲ್ಪಾಂತ್ಯದ ವರೆಗೂ ದುಃಖಸಂಭವವಿಲ್ಲವೆಂದು ನಮ್ಮ ಆನಂದ ಸಮುದ್ರವು ಉಕ್ಕೇರುತ್ತದೆ. ಇಂಥಾ ಆನಂದಮಯವಾದ ಸಮುದ್ರದಲ್ಲಿ ಚಂದ್ರನು ಹುಟ್ಟಲಿ, ಆ ಚಂದ್ರನು ಶಿವಕಥಾನಂದಮಯನಾಗಿರಬೇಕು. ಕ್ಷೀರಸಮುದ್ರದಲ್ಲಿ ಚಂದ್ರನು ಹುಟ್ಟಿದಂತೆ ನಮ್ಮ ಆನಂದ ಸಮುದ್ರದಲ್ಲಿ ಶಿವಕಥಾಮೃತಾಸ್ವಾದರೂಪನಾದ ಚಂದ್ರನು ಉದಯಿಸಲಿ. ॥೯೯॥

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಭಾಗದ ಪೂರ್ವಾರ್ಧದಲ್ಲಿ
ಋಷಿಕೃತ ದಕ್ಷನಿಂದನೆಯ ಸಂದರ್ಭದಲ್ಲಿ ಯಮ ಮತ್ತು ಯಮದೂತರ
ಸಂವಾದವನ್ನು ವಿವರಿಸುವ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಏಕೋನಚತ್ವಾರಿಂಶೋಽಧ್ಯಾಯಃ

॥ ಗೌತಮ ಉವಾಚ ॥

ಏವಮುಕ್ತಂ ಮುನಿವಚಃ ಶ್ರುತ್ವಾ ಗೌರೀ ವಿನಿರ್ಮಿತಾ ।
ನಾರೀ ಕಲಶಯೋನಿಂ ತಂ ಪ್ರಾಹ ಧರ್ಮಾರ್ಥಕೋವಿದಂ ॥೧॥

ಶಿವನಿಂದಾ ಕೃತಾ ಯೇನ ತಸ್ಯೋಕ್ತಾ ಯಾತನಾ ತ್ವಯಾ ।
ತಥಾ ತದನುರಕ್ತಾನಾಮುಕ್ತಾ ಸಾ ಮುಕ್ತಿವರ್ಜಿತಾ ॥೨॥

ದೈವಾದಪಿ ಶ್ರುತಾ ಯೇನ ಸಾ ನಿಂದಾ ಪುಣ್ಯನಾಶಿನೀ ।
ಸಾ ದುಃಖಹೇತುಭೂತೇತಿ ಪ್ರತೀಕಾರೋತ್ರ ಕಃ ಶ್ರುತಃ ॥೩॥

---

## ಮೂವತ್ತೊಂಬತ್ತನೆಯ ಅಧ್ಯಾಯ

ಹೀಗೆ ಋಷಿಯು ಹೇಳಿದ ಮಾತನ್ನು ಕೇಳಿ ಗೌರಿಯು ಆಶ್ಚರ್ಯಪಟ್ಟಳು. ಧರ್ಮಾರ್ಥಗಳನ್ನು ತಿಳಿದಿರುವ ಆ ಅಗಸ್ತ್ಯನನ್ನು ಕುರಿತು ಮತ್ತೆ ಹೀಗೆಂದಳು. ॥೧॥

"ಮುನಿಯೇ, ಶಿವನನ್ನು ನಿಂದಿಸಿದವರಿಗೆ ಎಂತಹ ಯಾತನೆಯು ವಿಧಿಸಲ್ಪಡುತ್ತದೆ ಎಂಬುದನ್ನು ನೀನು ಹೇಳಿರುವೆ. ಹಾಗೆಯೇ ಆತನಲ್ಲಿ ಪ್ರೀತಿಯಿಟ್ಟಿರುವವರಿಗೆ ಮುಕ್ತಿಯು ದೊರಕುವುದೆಂಬುದನ್ನೂ ತಿಳಿಸಿರುವೆ. ॥೨॥

ದೈವವಶಾತ್ ಶಿವನಿಂದೆಯನ್ನು ಕೇಳಿದರೆ ಪಾಪವು ಉಂಟಾಗುವುದಲ್ಲದೇ ಪುಣ್ಯವೂ ನಾಶವಾಗುವುದಷ್ಟೆ. ಆ ನಿಂದಾಶ್ರವಣವು ದುಃಖಕ್ಕೆ ಕಾರಣವಾಗುವುದು.

ಅಶ್ರುತೇಽಪಿ ಪ್ರತೀಕಾರೇ ಕಲ್ಪನೀಯಃ ಕಥಂಚನ ।
ತತ್ಪಾತಕಾನುರೋಧೇನ ನ ಯುಕ್ತಾ ತದಕಲ್ಪನಾ ॥೪॥

ತದಾ ತ್ರಿಸತ್ರನ್ಯಾಯೇನ ಫಲಂ ಕಲ್ಪ್ಯಮಸಂಶಯಂ ।
ಅನ್ಯಥಾ ತತ್ರ ತಸ್ಯಾಪಿ ನ ಸ್ಯಾದೇವ ಹಿ ಕಲ್ಪನಾ ॥೫॥

ಶ್ರುತಾ ಸಾ ಶಿವನಿಂದಾ ಮೇ ಲಗ್ನಾ ಶರವದಾತ್ಮನಿ ।
ಅತೋ ಗಾತ್ರಪರಿತ್ಯಾಗಃ ಕಲ್ಪನೀಯಃ ಪ್ರಯತ್ನತಃ ॥೬॥

ವರಮೇವ ಸುರಾಪಾನಂ ವರಂ ಗೋಮಾಂಸಭಕ್ಷಣಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೭॥

---

ಈ ನಿಂದಾಶ್ರವಣ ಮಾಡಿದವನಿಗೆ ಪ್ರಾಯಶ್ಚಿತ್ತವೇನಾದರೂ ಇದ್ದರೆ ಅದನ್ನು ಹೇಳಬೇಕು. ॥೩॥

ಆ ಶಿವನಿಂದೆಯನ್ನು ಕೇಳಿದಮೇಲಂತೂ ಪ್ರತೀಕಾರವನ್ನೆ ಮಾಡದಿರುವುದು ಯುಕ್ತವಲ್ಲ. ॥೪॥

ಆಗ ತ್ರಿಸತ್ರನ್ಯಾಯದಂತೆ (ಪೂರ್ಣಿಮೆ ದಿನ ಭ್ರಾಂತನಾಗಿ ದರ್ಶನಕ್ಕಾಗಿ ಸಾಮಗ್ರಿಯನ್ನು ಸಿದ್ಧಪಡಿಸಿಕೊಳ್ಳುವನು. ಅನಂತರ ಪೌರ್ಣಿಮೆಯೆಂದು ತಿಳಿದು ಆಹವನೀಯದ್ರವ್ಯವನ್ನು ಮೂರು ಭಾಗಮಾಡಿ ಮೂರು ದೇವತೆಗಳಿಗೆ ಕೊಡುವುದು) ಶಿವನಿಂದೆಯನ್ನು ಕೇಳಿದವನ ಪಾಪವನ್ನು ಮೂರುಬಗೆಯಾಗಿ ವಿಂಗಡಿಸಿ ಅದಕ್ಕೆ ವ್ಯವಸ್ಥೆ ಹೇಳಬೇಕು. ಇಲ್ಲದಿದ್ದರೆ ಅದರ ವಿಭಾಗ ಕೂಡುವುದಿಲ್ಲ. ॥೫॥

ಆ ಶಿವನಿಂದೆಯನ್ನು ಕೇಳಿದುದರಿಂದ ಅದು ಶರೀರದಲ್ಲಿ ಬಾಣದ ಹಾಗೆ ನಾಟಿಹೋಗಿದೆ. ಆದುದರಿಂದ ಪ್ರಯತ್ನಪೂರ್ವಕವಾಗಿ ದೇಹಪರಿತ್ಯಾಗವೇ ಯುಕ್ತವಲ್ಲವೇ ! ॥೬॥

ಸುರೆಯನ್ನಾದರೂ ಕುಡಿಯಬಹುದು, ಗೋಮಾಂಸವನ್ನಾದರೂ ಭಕ್ಷಿಸಬಹುದು. ಆದರೆ ಶಿವನಿಂದೆಯನ್ನು ಮಾತ್ರ ಕೇಳಲಾಗದು. ಅದು ಪಾಪಕ್ಕೆ ಕಾರಣವಾಗುವುದು. ॥೭॥

ವರಂ ಮದ್ಯಪಸಂಸರ್ಗಃ ಸ್ವರ್ಣಸ್ತೇಯಃ ಪರಂ ವರಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೮॥

ಗುರುದಾರಾಭಿಗಮನಂ ಕೇವಲಂ ವರಮುಚ್ಯತೇ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೯॥

ವರಂ ಬ್ರಾಹ್ಮಣಸಂಘಾತಶಿರಶ್ಛೇದಃ ಕುಲಕ್ಷಯಃ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೧೦॥

ವರಂ ರಾಜಕುಲೋಚ್ಛೇದಃ ರಾಜಸ್ತ್ರಿಸೇವನಂ ವರಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೧೧॥

ವರಂ ಯವನಸಂಸರ್ಗೋ ಯವನಸ್ತ್ರೀನಿಷೇವಣಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೧೨॥

---

ಹೆಂಡ ಕುಡಿಯುವವರ ಸ್ನೇಹವನ್ನಾದರೂ ಮಾಡಬಹುದು. ಬಂಗಾರವನ್ನಾದರೂ ಕದಿಯಬಹುದು. ಅವೆಲ್ಲವೂ ಶಿವನಿಂದೆ ಕೇಳುವುದಕ್ಕಿಂತ ಕಡಿಮೆ ಪಾಪವನ್ನುಂಟುಮಾಡುವುವು. ॥೮॥

ಗುರುವಿನ ಭಾರ್ಯೆಯನ್ನು ಭೋಗಿಸುವುದಕ್ಕಿಂತಲೂ ಶಿವನಿಂದೆಯು ಹೆಚ್ಚು ಪಾಪಕರ. ॥೯॥

ಬ್ರಾಹ್ಮಣರ ತಂಡವನ್ನು ವಧೆಮಾಡುವುದಕ್ಕಿಂತಲೂ ಹೆಚ್ಚು ಪಾಪದಾಯಕವಾದುದು ಶಿವನಿಂದಾಶ್ರವಣವಲ್ಲವೆ! ॥೧೦॥

ರಾಜರ ವಂಶವನ್ನಾದರೂ ನಾಶಮಾಡಬಹುದು. ಅಥವಾ ಕ್ಷುಲ್ಲಕರಾದ ರಾಜಸ್ತ್ರೀಸೇವೆಯನ್ನಾದರೂ ಮಾಡಬಹುದು. ಆದರೆ ಪಾಪಕಾರಣವಾದ ಶಿವನಿಂದೆಯನ್ನು ಕೇಳುವುದು ಮಾತ್ರ ಉಚಿತವಲ್ಲ. ॥೧೧॥

ಮಹಾಪಾಪಕಾರಣವಾದ ಶಿವನಿಂದೆಯನ್ನು ಕೇಳುವುದಕ್ಕಿಂತಲೂ ಯವನರ ಸಂಬಂಧವನ್ನಾದರೂ ಅಥವಾ ಯವನ ಸ್ತ್ರೀಸಂಭೋಗವನ್ನಾದರೂ ಅನುಭವಿಸುವುದು ಮೇಲು. ॥೧೨॥

ವರಮಶ್ವಕುಲೋಚ್ಛೇದೋ ವರಂ ಗೋಕುಲನಾಶನಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೧೩॥

ವರಂ ಬ್ರಾಹ್ಮಣವಿತ್ತಾನಾಂ ಹರಣಂ ಮರಣಂ ವರಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೧೪॥

ವರಂ ಚಾಂಡಾಲಜನ್ಮಾಪಿ ಚಂಡಾಲಸ್ತ್ರೀನಿಷೇವಣಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೧೫॥

ವರಂ ಪುಲ್ಕಸಜನ್ಮಾಪಿ ಪುಲ್ಕಸಸ್ತ್ರೀನಿಷೇವಣಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೧೬॥

ವರಂ ರಾಸಭಜನ್ಮಾಪಿ ರಾಸಭಸ್ತ್ರೀನಿಷೇವಣಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೧೭॥

---

ಪಾಪದಾಯಕವಾದ ಶಿವನಿಂದೆಯನ್ನು ಕೇಳುವುದಕ್ಕಿಂತಲೂ ಅಶ್ವಹತ್ಯೇ ಅಥವಾ ಗೋಹತ್ಯೆ ಇವುಗಳನ್ನು ಆಚರಿಸುವುದು ಅಷ್ಟು ಪಾಪಕಾರಿಯಲ್ಲ. ||೧೩||

ಬ್ರಾಹ್ಮಣರ ದ್ರವ್ಯವನ್ನಾದರೂ ಅಪಹಾರಮಾಡಬಹುದು. ಅಥವಾ ಪ್ರಾಣವನ್ನಾದರೂ ಬಿಡಬಹುದು. ಆದರೆ ಶಿವನಿಂದೆಯನ್ನು ಮಾತ್ರ ಕೇಳುವುದು ಇವೆಲ್ಲಕ್ಕೂ ಪಾಪಕರ. ||೧೪||

ಶಿವನಿಂದೆಯನ್ನು ಕೇಳುವುದಕ್ಕಿಂತ ಹೆಚ್ಚಿನ ಪಾಪವು ಬೇರೊಂದಿಲ್ಲ. ಹೊಲೆಯರ ಜನ್ಮವನ್ನೂ ಚಂಡಾಲಸ್ತ್ರೀ ಸೇವೆಯನ್ನು ಹೊಂದಿದರೂ ಶಿವನಿಂದೆ ಕೇಳುವುದರಿಂದ ಉಂಟಾಗುವ ಪಾಪಕ್ಕೆ ಸದೃಶವಾದ ಪಾಪವು ಸಿಗಲಾರದು. ||೧೫|| ಚಂಡಾಲಜನ್ಮದಲ್ಲಿಯಾದರೂ ಹುಟ್ಟಬಹುದು. ಚಂಡಾಲಸ್ತ್ರೀಸಂಪರ್ಕವನ್ನಾದರೂ ಮಾಡಬಹುದು. ಆದರೆ ಶಿವನಿಂದೆ ಕೇಳಿರುವುದರಿಂದ ಉಂಟಾದ ಪಾಪಕ್ಕಿಂತ ಅವುಗಳು ಕಡಿಮೆಯವುಗಳು. ||೧೬||

ಶಿವನಿಂದೆಯನ್ನು ಕೇಳಿ ಪಾಪಕಟ್ಟಿಕೊಳ್ಳುವುದಕ್ಕಿಂತ ಕತ್ತೆಯ ಜನ್ಮದಲ್ಲಿಯಾದರೂ ಜನಿಸಬಹುದು. ಅಥವಾ ಹೆಣ್ಣುಗರ್ದಭವನ್ನಾದರೂ ಸೇವಿಸಬಹುದು. ||೧೭||

ವರಂ ಸೂಕರಜನ್ಮಾಪಿ ಸೂಕರಸ್ತ್ರೀನಿಷೇವಣಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೧೮॥

ವರಂ ಶುನಕಜನ್ಮಾಪಿ ಶುನೀಯೋನಿನಿಷೇವಣಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೧೯॥

ವರಂ ಮಲಜಲಾವಾಸಃ ರೇತಃಪಾನಂ ಪರಂ ವರಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೨೦॥

ವರಮಾತ್ಮಶಿರಶ್ಛೇದೋಽಪ್ಯಂತತೋ ದುಃಖಸಾಧನಂ ।
ನ ವರಂ ಶಿವನಿಂದಾಯಾಃ ಶ್ರವಣಂ ಪಾಪಕಾರಣಂ ॥೨೧॥

ಇತ್ಯುಕ್ತ್ವಾ ಸಾ ಜಹೌ ದೇಹಂ ಮಹಾದೇವಂ ಮುಹುರ್ಮುಹುಃ ।
ಸ್ಮೃತ್ವಾ ನತ್ವಾ ಯೋಗಮಾಯಾ ಮಹಾಮಾಯಾ ವಿನಿರ್ಮಿತಾ ॥೨೨॥

---

ಶಿವನಿಂದೆಯನ್ನು ಕೇಳುವುದಕ್ಕಿಂತ ಹಂದಿಯ ಜನ್ಮದಲ್ಲಿ ಉದ್ಭವಿಸುವುದೂ, ಹೆಣ್ಣು ಹಂದಿಯ ಸುಖವನ್ನು ಅನುಭವಿಸುವುದೂ ಮೇಲೆನಿಸುವುದು. ||೧೮||

ನಾಯಿಯ ಜನ್ಮದಲ್ಲಿಯಾಗಲೀ ಹುಟ್ಟಬಹುದು. ಅಥವಾ ಹೆಣ್ಣು ಶುನಕವನ್ನಾದರೂ ಉಪಭೋಗಿಸಬಹುದು. ಆದರೆ ಶಿವನಿಂದೆಯನ್ನು ಕೇಳುವುದು ಮಹಾ ಪಾಪಕರ. ||೧೯||

ಶಿವನಿಂದೆಯನ್ನು ಕೇಳಿ ಪಾಪ ಗಳಿಸುವುದಕ್ಕಿಂತ ಕೊಳಕು ನೀರಿನಲ್ಲಿ ವಾಸಮಾಡುವುದೂ, ರೇತಸ್ಸನ್ನು ಪಾನಮಾಡುವುದೂ ಕೂಡ ಮೇಲು ಎಂದೆನಿಸೀತು. ||೨೦||

ಆತ್ಮಹತ್ಯಾದೋಷಕ್ಕೆ ಕಾರಣವಾದ ತನ್ನ ಶಿರಸ್ಸನ್ನಾದರೂ ಕತ್ತರಿಸಿಕೊಳ್ಳಬಹುದು. ಆದರೆ ಶಿವನಿಂದೆಯನ್ನು ಕೇಳಿ ಪಾಪ ಗಳಿಸುವುದು ಯುಕ್ತವಲ್ಲ. ||೨೧||

ಹೀಗೆ ಮಹಾಮಾಯೆಯಾದ ಗೌರಿಯಿಂದ ನಿರ್ಮಿತಳಾದ ದೇವಿಯು ಶಂಕರನನ್ನು ಬಾರಿಬಾರಿಗೂ ನೆನೆಸಿ ತಲೆಬಾಗಿ ಹೀಗೆ ಹೇಳುತ್ತಾ ದೇಹತ್ಯಾಗ ಮಾಡಿದಳು. ||೨೨||

ತತಸ್ತನ್ನಾಶಮಾಲೋಕ್ಯ ಮಹಾದೇವೋಽತಿಮನ್ಯುನಾ ।
ಸಸರ್ಜ ವೀರಭದ್ರಾಖ್ಯಂ ಮಹಾಬಲಸಮನ್ವಿತಂ ॥೨೩॥

ವೀರಭದ್ರಃ ಸಮುತ್ಪನ್ನಃ ಕೋಟಿಸೂರ್ಯಸಮಪ್ರಭಃ ।
ಅನಂತಬಾಹುಚರಣಗ್ರೀವನೇತ್ರವಿರಾಜಿತಃ ॥೨೪॥

ತಂ ತಾದೃಶಂ ವಿಲೋಕ್ಯಾಶು ಘನಗಂಭೀರಯಾ ಗಿರಾ ।
ಕ್ರೋಧೇನಾಹ ಮಹಾರುದ್ರೋ ವೀರಭದ್ರಂ ವಿಚಕ್ಷಣಃ ॥೨೫॥

ಗಚ್ಛ ಗಚ್ಛ ಪ್ರಯತ್ನೇನ ದಕ್ಷಂ ಸಂಹರ ಸಂಹರ ।
ನಾರಾಯಣಾದಿಕಾನ್ ಹತ್ವಾ ಪುನರಾಯಾಹಿ ಸತ್ವರಂ ॥೨೬॥

ಇತ್ಯಾಕರ್ಣ್ಯ ವಚಃ ಶಂಭೋಃ ಪ್ರಣಿಪತ್ಯ ಪುನಃ ಪುನಃ ।
ತದಜ್ಞಾಂ ಶಿರಸಾ ಧೃತ್ವಾ ಯಯೌ ನತ್ವಾ ಶಿವಾಮಪಿ ॥೨೭॥

---

ಬಳಿಕ ಆ ಗೌರಿಯು ನಷ್ಟಳಾದುದನ್ನು ನೋಡಿ ಮಹಾ ರುದ್ರನು ಕೋಪ ಗೊಂಡನು. ಅಲ್ಲದೇ ಅತ್ಯಧಿಕ ಬಲಶಾಲಿಯಾದ ವೀರಭದ್ರನೆಂಬುವನನ್ನು ಸೃಷ್ಟಿಸಿದನು. ||೨೩||

ಆ ವೀರಭದ್ರನು ಒಂದು ಕೋಟಿ ಸೂರ್ಯರಂತೆ ಪ್ರಕಾಶಿಸುತ್ತಿದ್ದನು. ಮತ್ತು ಅನೇಕ ಕೈ, ತೋಳು, ಕಾಲು, ಕತ್ತು, ಕಣ್ಣು ಇವುಗಳಿಂದ ವಿರಾಜಿಸುತ್ತಿದ್ದನು. ||೨೪||

ಆರೀತಿಯಾದ ರೂಪವನ್ನು ನೋಡಿ ಮಹಾರುದ್ರನು, ಕ್ರೋಧಪರವಶತೆಯಿಂದ ಮಿತಿಮೀರಿರುವ ವೀರಭದ್ರನನ್ನು ಕುರಿತು ಮೇಘಧ್ವನಿಯಂತೆ ಗಂಭೀರವಾದ ವಾಣಿಯಿಂದ ಹೀಗೆ ಅಪ್ಪಣೆಯಿತ್ತನು. ||೨೫||

"ಎಲೈ ವೀರಭದ್ರನೇ ಹೋಗು, ಹೋಗು. ಆ ದಕ್ಷಪ್ರಜಾಪತಿಯನ್ನು ಕೊಂದುಹಾಕು. ನಾರಾಯಣನೇ ಮೊದಲಾದವರನ್ನೂ ಧ್ವಂಸಮಾಡಿ ಬಾ." ||೨೬||

ಶಂಕರನು ಹಾಗೆ ಹೇಳಿದುದನ್ನು ಕೇಳಿ ವೀರಭದ್ರನು ಬಾರಿಬಾರಿಗೂ ಶಂಕರನಿಗೆ ನಮಸ್ಕಾರ ಮಾಡುತ್ತಾ ಆತನ ಆಜ್ಞೆಯನ್ನು ಶಿರಸಾವಹಿಸಿ, ಶಿವೆಗೂ ಪ್ರಣಾಮಮಾಡಿ ಅಲ್ಲಿಂದ ಹೊರಟನು. ||೨೭||

ತಮಾಯಾಂತಂ ಸಮಾಲೋಕ್ಯ ದೂರಾದ್ದಕ್ಷಾದಯಃ ಸುರಾಃ ।
ಸಕಂಪಾಃ ಶುಷ್ಕಕಂಠಾಶ್ಚ ಭಯಾಶನಿಸಮಾಹತಾಃ ॥೨೯॥

ಕಿಮದ್ಭುತಮಿದಂ ಜಾತಂ ಪ್ರಳಯಾನಲಮಂಡಲಂ ।
ಅನೇನ ಜಗತಾಂ ನಾಶೋ ಭವಿಷ್ಯತ್ಯದ್ಯ ಸರ್ವಥಾ ॥೩೦॥

ಏತಾದೃಶಂ ಪುರಾ ಕ್ವಾಪಿ ನ ದೃಷ್ಟಂ ನ ಭವಿಷ್ಯತಿ ।
ತದ್ದೇಹತೇಜಸಾಽಯಾಂತಂ ತೇಜೋಮಂಡಲಮದ್ಭುತಂ ॥೩೧॥

ಅನೇನ ಕಾಲಕೂಟಾಗ್ನಿಕೂಟಮಂಡಲಸನ್ನಿಭಂ ।
ತಜ್ಜಟಾಘಾತಮಾತ್ರೇಣ ನಕ್ಷತ್ರಾಣಿ ಪತಂತ್ಯಪಿ ॥೩೨॥

ಸೂರ್ಯಚಂದ್ರಪ್ರಭಾ ಲೀನಾ ಖದ್ಯೋತತನುಸನ್ನಿಭಾ ।
ತತ್ಪಾದಘಾತಾ ಧರಣೀ ವಿಶೀರ್ಣಾ ಸಾಗರಪ್ಲುತಾ ॥೩೩॥

---

ರುದ್ರನ ಆಜ್ಞೆಯಂತೆ ಆ ವೀರಭದ್ರನು ವೇಗವಾಗಿ ಹೊರಟು ಬರುತ್ತಿರುವುದನ್ನು ದಕ್ಷನೇ ಮೊದಲಾದವರು ನೋಡಿ ನಡುಗುತ್ತಾ ನಿಂತರು. ಅವರ ಗಂಟಲೆಲ್ಲಾ ಭಯದಿಂದ ಒಣಗಿಹೋಯಿತು. ||೨೯||

ಆಹಾ, ಇದೆಂತಹ ಅದ್ಭುತವಾಯಿತು. ಪ್ರಳಯಕಾಲದ ಬೆಂಕಿಯ ಮಂಡಲದ ಹಾಗೆ ತೋರುತ್ತಿದೆ. ಇದರಿಂದ ಖಂಡಿತವಾಗಿಯೂ ಪ್ರಪಂಚವು ಈಗ ನಾಶವನ್ನು ಹೊಂದುವುದು. ||೩೦||

ಇಂತಹ ತೇಜಸ್ಸಿನ ಸಮುದಾಯವನ್ನು ಹಿಂದೆ ಎಲ್ಲಿಯೂ ನಾವು ನೋಡಿರಲಿಲ್ಲ. ಮುಂದೆ ನೋಡಲಾರೆವು. ಆ ದೇಹದ ತೇಜಸ್ಸಿನಿಂದ ತೇಜೋಮಂಡಲವೇ ಉಕ್ಕಿಬರುತ್ತಿದೆ. ||೩೧||

ಇದು ಕಾಲಕೂಟ ವಿಷದ ಮತ್ತು ಅಗ್ನಿಸಮುದಾಯದ ಹೋಲಿಕೆಯುಳ್ಳದಾಗಿದೆ. ಆ ಶಂಕರನ ಜಟಾಘಾತಮಾತ್ರದಿಂದ ತಾರಕೆಗಳೆಲ್ಲಾ ಉರುಳುತ್ತಲಿವೆ. ||೩೨||

ಈತನ ತೇಜಸ್ಸಿನ ಮುಂದೆ ಸೂರ್ಯಚಂದ್ರರ ಬೆಳಕು ಮಿಣುಕು ಹುಳುಗಳ ಬೆಳಕಿನಂತಾಗಿ ಅಡಗಿಹೋಗಿದೆ. ಈತನ ಪಾದದ ಹೊಡೆತದಿಂದ ಭೂಮಿಯೂ ಒಡೆದು ಸಮುದ್ರದಲ್ಲಿ ಮುಳುಗುವಂತಾಗಿದೆ. ||೩೩||

ಮಹಾಪ್ರಳಯಕಾಲೋಽಯಮಧುನಾ ಸಮುಪಾಗತಃ ।
ಅತಃ ಪರಂ ಜೀವಿತಾಶಾ ವಿನಾಶಮಭಿಯಾಸ್ಯತಿ ॥೩೪॥

ಋಷೀಣಾಮಪಿ ಯಃ ಶಾಪೋ ವೃತಃ ಶಂಕರನಿಂದಯಾ ।
ಸ ಏವಾಯಂ ಕಿಮಾಯಾತಿ ವಹ್ನಿರೂಪೇಣ ಸತ್ವರಂ ॥೩೫॥

ರೇ! ರೇ! ದಕ್ಷ ದುರಾಚಾರ, ಕಿಮಿದಂ ಪಾತಕಂ ಕೃತಂ ।
ಶ್ರೀಮಹಾದೇವನಿಂದಾಯಾಃ ಸಾ ವಿನಾಶಾಯ ಜಾಯತೇ ॥೩೬॥

ಶ್ರೀಮಹಾದೇವನಿಂದಾಯಾಃ ಪ್ರಯತ್ನಃ ಕುಲನಾಶಕಃ ।
ಆಹತ್ಯ ನಿಂದಾ ಸಾ ತಾವನ್ಮಹಾಶನಿಕುಲಂ ಪರಂ ॥೩೭॥

ನ ಮಹಾಶನಿಪೀಡಾಪಿ ಪ್ರವೇಶೋ ಗಿರಿಗಹ್ವರೇ ।
ಶಿವನಿಂದಾಶನಿಃ ಕ್ವಾಪಿ ನಾಶ್ಯೈನಾನ್ಪರಿಮುಂಚತಿ ॥೩೮॥

---

ಇದು ಮಹಾಪ್ರಳಯಕಾಲದಂತೆ ತೋರುತ್ತಿದೆ. ಅಥವಾ ಪ್ರಳಯಕಾಲವೇ ಈಗ ಒದಗಿದೆಯೋ! ಇನ್ನು ಮುಂದೆ ಬದುಕುವ ಆಶೆಯು ನಾಶವನ್ನೇ ಹೊಂದುವಂತಿದೆ. ॥೩೪॥

ಈಶ್ವರನನ್ನು ಬೈದುದರಿಂದ ಶಾಪವು ಋಷಿಗಳಿಗೂ ಅಂಟಿತು. ಅದೇ ಈಗ ಬೆಂಕಿಯ ರೂಪದಿಂದ ಜಾಗ್ರತೆಯಾಗಿ ಬರುತ್ತಿರುವಂತಿದೆ. ॥೩೫॥

ಎಲೈ ದುಷ್ಟದಕ್ಷನೇ, ಎಂತಹ ಘೋರಪಾಪವನ್ನು ಆಚರಿಸಿದೆ. ನೀನು ಮಾಡಿದ ಶ್ರೀಶಂಕರನ ನಿಂದೆಯೇ ಈಗ ಎಲ್ಲರ ನಾಶಕ್ಕೂ ಕಾರಣವಾಯಿತಲ್ಲಾ! ॥೩೬॥

ಶ್ರೀಮನ್ಮಹಾದೇವನನ್ನು ನಿಂದಿಸಲು ಯತ್ನಮಾಡುವುದೇ ಕುಲನಾಶಕ್ಕೆ ಕಾರಣವಾಗುತ್ತದೆ. ಒಟ್ಟಿನಲ್ಲಿ ಆ ಶಿವನಿಂದೆಯು ವಂಶಕ್ಕೆ ವಜ್ರಾಯುಧದ ಆಘಾತವನ್ನು ತರುವಂತಿದೆ. ॥೩೭॥

ದೊಡ್ಡ ಸಿಡಿಲಿನ ಹೊಡೆತವನ್ನು ತಪ್ಪಿಸಿಕೊಳ್ಳಲು ದೊಡ್ಡ ದೊಡ್ಡ ಪರ್ವತದ ಗುಹೆ ಮೊದಲಾದುವುಗಳನ್ನು ಪ್ರವೇಶಮಾಡಬಹುದು. ಶಿವನಿಂದೆಯೆಂಬ ವಜ್ರದ ಹೊಡೆತವು ಎಲ್ಲೆಲ್ಲಿಯೂ ಇರಗೊಡುವುದಿಲ್ಲ. ಶಿವದ್ವೇಷಿಗಳನ್ನಂತೂ ಎಂದೂ ಬಿಡುವುದಿಲ್ಲ. ॥೩೮॥

ಯದಿ ಪಾತಾಳಲೋಕೇಽಪಿ ಪ್ರಯಾತಿ ಶಿವನಿಂದಕಃ ।
ತತ್ರಾಪಿ ತಸ್ಯ ನಾಶಸ್ಸ್ಯಾತ್ ತನ್ನಿಂದಾವಿಷಮಂಡಲೈಃ ॥೩೯॥

ಏವಂ ತೇಷ್ವನುತಾಪೇನ ಪೀಡಿತೇಷು ಸುರೇಷ್ವಪಿ ।
ಪುನರುತ್ಪಾತಸಂಘಾತಃ ಸಮಭೂದ್ಭಯಸೂಚಕಃ ॥೪೦॥

ತತಃ ಸಮಾಗತಃ ಕ್ರೂರೋ ವೀರಭದ್ರೋಽಗ್ನಿಲೋಚನಃ ।
ತನ್ನೇತ್ರಜ್ವಾಲಯಾ ದಗ್ಧಾ ಯಾಗಶಾಲಾ ಮನೋಹರಾ ॥೪೧॥

ತನ್ನಿಶ್ವಾಸೈಃ ಸಮುದ್ಭೂತಾ ಗಣಾಃ ಸಂಖ್ಯಾವಿವರ್ಜಿತೈಃ ।
ಗಣೈಃ ಸಹಾಭವದ್ಯುದ್ಧಂ ಸುರಾಣಾಮಪಿ ದಾರುಣಂ ॥೪೨॥

ಬ್ರಹ್ಮಾಸ್ತ್ರಮಂಡಲೋತ್ಪನ್ನೋ ಜ್ವಾಲಾರಾಶಿಸ್ತತಃಪರಂ ।
ಗಣಶಸ್ತ್ರಾನಲೇನೈವ ಶಾಂತಃ ಖದ್ಯೋತಸಂನಿಭಃ ॥೪೩॥

---

ಶಿವನಿಂದೆ ಮಾಡತಕ್ಕವನು ಪಾತಾಳಲೋಕಕ್ಕೆ ಹೋದರೂ ಅವನನ್ನು ಅದು ನಾಶಮಾಡುತ್ತದೆ. ಶಿವನಿಂದೆಯೆಂಬ ವಿಷವು ನಿಂದಿಸಿದವನನ್ನು ನಾಶಮಾಡದೆ ಎಂದಿಗೂ ಬಿಡದು. ||೪೦||

ಹೀಗೆ ಆ ದೇವತೆಗಳೆಲ್ಲರೂ ತಾವು ಮಾಡಿದ ಶಿವನಿಂದೆಯಿಂದ ಪಶ್ಚಾತ್ತಾಪ ಪಡುತ್ತಾ ಆಮೇಲೆ ಮತ್ತೆ ಅಪಶಕುನಗಳೂ, ಭಯೋತ್ಪಾತಗಳೂ ಆದದ್ದನ್ನು ನೋಡಿದರು. ||೪೦||

ಅಷ್ಟು ಹೊತ್ತಿಗೆ ಭಯಂಕರನಾದ ವೀರಭದ್ರನು ಬೆಂಕಿಯಂತಹ ಕಣ್ಣುಗಳನ್ನು ಬಿಡುತ್ತಾ ಮುಂದೆ ಬಂದನು. ಆತನ ನೇತ್ರಜ್ವಾಲೆಯಿಂದ ಒಡನೆಯೇ ಅತ್ಯಂತ ರಮಣೀಯವಾದ ಯಾಗಶಾಲೆಯು ನಾಶವನ್ನು ಹೊಂದಿತು. ||೪೩||

ಆ ವೀರಭದ್ರನ ನಿಟ್ಟುಸಿರುಗಳಿಂದ ಅನೇಕ ಅಂದರೆ ಲೆಕ್ಕವಿಲ್ಲದಷ್ಟು ಮಂದಿ ಗಣಗಳು ಹುಟ್ಟಿದವು. ಅನಂತರ ಆ ಗಣಗಳಿಗೂ ದೇವತೆಗಳಿಗೂ ಭಯಂಕರವಾದ ಯುದ್ಧವು ಆರಂಭವಾಯಿತು. ||೪೨||

ಬ್ರಹ್ಮಾಸ್ತ್ರದಿಂದ ಹುಟ್ಟಿದ ಅದ್ಭುತ ಜ್ವಾಲೆಯ ರಾಶಿಯು ಗಣಗಳು ಬಿಟ್ಟ ಅಸ್ತ್ರಜ್ವಾಲೆಯಿಂದ ಮಿನುಗುಹುಳುವಿನ ಕಾಂತಿಯಂತೆ ಮಂಕಾಗಿಹೋಯಿತು. ||೪೩||

ನಾರಾಯಣಾಸ್ತ್ರಜ್ವಾಲಾನಾಂ ಮಂಡಲೇನಾಪಿ ಕೇನ ಚಿತ್ ।
ಜ್ವಾಲಾಮಾಲಾಸಮುತ್ಪನ್ನಾ ಸಾ ತೃಣಾಸ್ತ್ರೈರ್ನಿವಾರಿತಾ ॥೪೪॥

ತತೋ ವಿಷ್ಣುಃ ಸಮಾದಾಯ ಗದಾಂ ಕೌಮೋದಕೀಮಪಿ ।
ಯುದ್ಧಾಯಾಭ್ಯಾಗತಃ ಸೋಽಪಿ ಗಣಶಸ್ತ್ರೈರ್ನಿವಾರಿತಃ ॥೪೫॥

ಪಶ್ಚಾದ್ಗರುಡಮಾರುಹ್ಯ ಶಾರ್ಙ್ಗಮಾದಾಯ ಸತ್ವರಂ ।
ಯುದ್ಧಾಯಾಭ್ಯಾಗತಶ್ಚಕ್ರೀ ತಂ ದೃಷ್ಟ್ವಾ ವಿಸ್ಮಯಂ ಗತಾಃ ॥೪೬॥

ಗರುಡಸ್ಥಃ ಸವೇಗೇನ ತತ್ಪಕ್ಷೋತ್ಥಾನಿಲೇನ ಚ ।
ಚಕಂಪೇ ಧರಣೀ ಸರ್ವಾ ಕಿಮೇತದಿತಿ ವಿಹ್ವಲಾ ॥೪೭॥

ತಂ ದೃಷ್ಟ್ವಾ ವೀರಭದ್ರೋಽಪಿ ಕೃದ್ಧಃ ಪ್ರಾಹಾತಿಭೀಷಣಃ ।
ದುರಾತ್ಮನ್ನೇಹಿ ದುಃಶೀಲ ವಿನಾಶಸ್ತೇ ಸಮಾಗತಃ ॥೪೮॥

---

ನಾರಾಯಣಾಸ್ತ್ರದ ಕಿಡಿಗಳ ಸಮೂಹವೂ ಕೂಡ ಗಣಗಳು ಬಿಟ್ಟ ಅಸ್ತ್ರಗಳ ಉರಿಯಿಂದ ಶಾಂತವಾಯಿತು. ಸಕಲ ಶಕ್ತಿಯುತವಾದ ಅಸ್ತ್ರಗಳೆಲ್ಲಾ ಈ ಗಣಗಳ ಮುಂದೆ ನಂದಿಹೋಯಿತು. ||೪೪||

ಬಳಿಕ ವಿಷ್ಣುವು ತಾನೇ ಕೌಮೋದಕೀ ಎಂಬ ತನ್ನ ಗದೆಯನ್ನು ತೆಗೆದುಕೊಂಡು ಯುದ್ಧಕ್ಕೆ ನಿಂತನು. ಆತನೂ ಕೂಡ ಗಣಗಳ ಶಸ್ತ್ರಾಸ್ತ್ರದಿಂದ ಪರಾಜಿತನಾದನು. ||೪೫||

ಬಳಿಕ ವಿಷ್ಣುವು ಗರುಡನನ್ನು ಏರಿ ಶಾರ್ಙ್ಗ ಧನುಸ್ಸನ್ನು ತೆಗೆದುಕೊಂಡು ಜಾಗ್ರತೆಯಾಗಿ ಕೋಪದಿಂದ ಯುದ್ಧಕ್ಕೆ ಬಂದನು. ಆತನನ್ನು ನೋಡಿ ಎಲ್ಲರೂ ಆಶ್ಚರ್ಯ ಹೊಂದಿದರು. ||೪೬||

ಗರುಡನ ಮೇಲೆ ಕುಳಿತಿರುವಾಗ ವಿಷ್ಣುವು ಆ ಗರುಡನ ರೆಕ್ಕೆಗಳ ಹೊಡೆತದಿಂದ ಹೊರಟ ಗಾಳಿಯಿಂದ ಭೂಮಿಯು ನಡುಗಿತು. ಎಲ್ಲರೂ ಇದೇನು ಎಂದು ಭಯದಿಂದ ವಿಹ್ವಲರಾದರು. ||೪೭||

ವೀರಭದ್ರನೂ ಕೂಡ ಅವನನ್ನು ನೋಡಿ ಕೋಪಾವಿಷ್ಟನಾದನು. ಮತ್ತು ಅತಿಭಯಂಕರವಾದ ಆಕೃತಿಯುಳ್ಳವನಾಗಿ ಎಲೈ ದುಷ್ಟನೇ, ದುರ್ವಿನೀತನೇ, ನಿನಗೆ ಕೊನೆಗಾಲವು ಸಮೀಪಿಸಿದೆ ಬಾ ಎಂದನು. ||೪೮||

ಮಯ್ಯಪ್ಯತ್ರಾಗತೇ ಶೌರ್ಯಂ ತ್ವಯಾ ಕಿಂ ವಾ ಪ್ರದರ್ಶಿತಂ ।
ಕಾಲಕೂಟಸ್ಯ ನಿಕಟೇ ವೃಶ್ಚಿಕಃ ಕಿಂ ಕರಿಷ್ಯತಿ ॥೪೯॥

ಕೋಟಿಶೋ ನಿಹತಾಃ ಪೂರ್ವಂ ಮಯಾ ನಾರಾಯಣಾದಯಃ ।
ನಿರಯಂ ತೇ ಗತಾಃ ಸರ್ವೇ ಶ್ರೀಮಹಾದೇವನಿಂದಯಾ ॥೫೦॥

ಧಿಗಯಂ ಶಲಭಾಕಾರೋ ಗರುಡೋಽಪಿ ತವಾಧುನಾ ।
ಶಾರ್ಙ್ಗಂ ಜ್ವಲತು ತೇ ಶೀಘ್ರಂ ತೃಣಕಲ್ಪೇನ ತೇನ ಕಿಂ ॥೫೧॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸೋಽಪಿ ನಾರಾಯಣಃ ಸ್ವತಃ ।
ಗರುಡೇನ ಸಹಾಗತ್ಯ ಯುದ್ಧಂ ಕರ್ತುಂ ಪ್ರಚಕ್ರಮೇ ॥೫೨॥

ತತಃ ಪಾಶೇನ ತಂ ಬದ್ಧ್ವಾ ಪಾತಯಾಮಾಸ ಭೂತಲೇ ।
ಛಿತ್ವಾ ಪಾಶಂ ತತೋ ವಿಷ್ಣುಃ ನಭೋಮಂಡಲಮಾಶ್ರಿತಃ ॥೫೩॥

---

ನಾನು ಇಲ್ಲಿಗೆ ಬಂದಮೇಲೆ ನಿನ್ನ ಶೌರ್ಯವು ಇನ್ನೂ ಪ್ರಕಾಶಿಸುವುದುಂಟೆ? ಕಾಲಕೂಟ ವಿಷದ ಸಮೀಪದಲ್ಲಿ ಚೇಳು ನಿಂತೀತೇ? ಅಥವಾ ಅದು ಏನು ಮಾಡ ಬಲ್ಲದು? ॥೪೯॥

ಹಿಂದೆ ನಾರಾಯಣನೇ ಮೊದಲಾದವರೆಲ್ಲರನ್ನೂ ನಾನು ಸೋಲಿಸಿರುವೆನು. ಅವರು ಶಿವನಿಂದೆ ಮಾಡಿದುದರಿಂದ ನರಕಕ್ಕೂ ಹೋಗಿರುವರು. ॥೫೦॥

ಕಪಟದ ಹಕ್ಕಿಯಂತಿರುವ ಗರುಡನಿಗೆ ಧಿಕ್ಕಾರವಿರಲಿ. ಅಲ್ಲದೇ ನಿನ್ನ ಶಾರ್ಙ್ಗ ಧನುಸ್ಸು ಈಗ ಬೆಳಗಲಿ ನೋಡೋಣ. ಆ ಹುಲ್ಲಿನಂತಿರುವ ಧನುಸ್ಸಿನಿಂದೇನುಪ್ರಯೋಜನವಾದೀತು? ॥೫೧॥

ಹೀಗೆ ಹೇಳಿದ ಆತನ ಮಾತನ್ನು ಕೇಳಿ ವಿಷ್ಣುವು ತಾನಾಗಿಯೇ ಗರುಡನನ್ನು ಏರಿ ಕೋಪದಿಂದ ಯುದ್ಧಮಾಡಲು ಪುನಃ ಪ್ರಾರಂಭಿಸಿದನು. ॥೫೨॥

ವೀರಭದ್ರನು ವಿಷ್ಣುವನ್ನು ಪಾಶಾಯುಧದಿಂದ ಕಟ್ಟಿ ನೆಲಕ್ಕುರುಳಿಸಿದನು. ಅನಂತರ ವಿಷ್ಣುವಾದರೋ ಆ ಪಾಶವನ್ನು ಕಡಿದು, ಅಂತರಿಕ್ಷದಲ್ಲಿ ಕಾಣಿಸಿಕೊಂಡನು. ॥೫೩॥

ತತ್ರ ಗತ್ವಾ ಶಂಖನಾದ್ಯೈಃ ಪೂರಯಾಮಾಸ ದಿಕ್ಸ್ಥಲಂ ।
ಶಾರ್ಙ್ಗಧ್ವನಿಸಮಾಕ್ರಾಂತಂ ಭೀಷಯಾಮಾಸ ಭೂತಲಂ ॥೫೪॥

ತತಃ ಕ್ರೂರನಖಾಗ್ರೇಣ ಛಿತ್ವಾ ಗರುಡವಾಹನಂ ।
ಪಾತಯಾಮಾಸ ಭೂಪೃಷ್ಠೇ ಗರುಡೇನ ಸಹ ಕ್ಷಣಾತ್ ॥೫೫॥

ತತಃ ಪರಂ ತು ತದ್ರೂಪಂ ಪರಿತ್ಯಜ್ಯಾತಿಭೀಷಣಂ ।
ವರಾಹಂ ರೂಪಮಾಸಾದ್ಯ ಕ್ಷೋಭಯಾಮಾಸ ತಾನ್ ಗಣಾನ್॥೫೬॥

ಮಹಾಪರ್ವತಸಂಕಾಶೋ ವರಾಹವಪುಷಾ ಹರಿಃ ।
ನಿಶ್ವಾಸಾನ್ಮುಮುಚೇ ಸೋಽಪಿ ಪ್ರಲಯಾನಿಲಸನ್ನಿಭಾನ್ ॥೫೭॥

ತೈಃ ಸಕಂಪಾಃ ಸಮಭವನ್ ಗಣಾಃ ಸಂಖ್ಯಾವಿವರ್ಜಿತಾಃ ।
ತುಂಡೇನ ಪಾತಯಾಮಾಸ ಪರ್ವತಾನ್ಗಣಮೂರ್ಧನಿ ॥೫೮॥

---

ಬಳಿಕ ಆ ವಿಷ್ಣುವು ಎಲ್ಲಾ ದಿಕ್ಕುಗಳನ್ನೂ ಶಂಖಧ್ವನಿಗಳಿಂದ ತುಂಬಿದನು. ಅಲ್ಲದೆ ಎಲ್ಲಾ ಭೂಮಂಡಲವನ್ನೂ ಶಾರ್ಙ್ಗ ಧನುಸ್ಸಿನ ಟಂಕಾರದಿಂದ ಬೆಚ್ಚಿಸಿದನು. ||೫೪||

ಅನಂತರ ಆ ವೀರಭದ್ರನು ತೀಕ್ಷ್ಣಗಳಾದ ಉಗುರುಗಳಿಂದ ವಿಷ್ಣುವನ್ನು ತರಿದನು. ಹಾಗೆಯೇ ಗರುಡನೊಡನೆ ಭೂಮಿಗೆ ಕೆಡವಿದನು. ||೫೫||

ಬಳಿಕ ಆ ಮಹಾವಿಷ್ಣುವು ಆ ರೂಪವನ್ನು ಬಿಟ್ಟು ಘೋರವಾದ ವರಾಹ ರೂಪವನ್ನು ತಾಳಿ ಆ ಎಲ್ಲಾ ಪ್ರಮಥಾದಿಗಳನ್ನು ಭಯಗೊಳಿಸಿದನು. ||೫೬||

ವರಾಹರೂಪವನ್ನು ಧರಿಸಿದ ವಿಷ್ಣುವು ಪರ್ವತದಷ್ಟು ದೊಡ್ಡದಾಗಿ ಬೆಳೆದನು. ಮತ್ತು ಪ್ರಳಯಕಾಲದ ಬಿರುಗಾಳಿಯಂತೆ ತೀವ್ರಗಳಾದ ಉಸಿರುಗಳನ್ನು ಬಿಡಲಾರಂಭಿಸಿದನು. ||೫೭||

ಆ ನಿಶ್ವಾಸಗಳಿಂದ ಎಲ್ಲಾ ಗಣಗಳೂ ಗಡಗಡನೆ ನಡುಗುವುದಕ್ಕಾರಂಭಿಸಿದುವು. ತನ್ನ ಮುಖದಿಂದ ದೊಡ್ಡ ದೊಡ್ಡ ಪರ್ವತಗಳನ್ನು ಎತ್ತಿ ಗಣಗಳ ಮೇಲೆ ಕೆಡವಿದನು. ||೫೮||

ಪುಚ್ಛಾಗ್ರೇಣಾತಿದೀರ್ಘೇಣ ಸಮುದ್ರಾನ್ ಸಪ್ತ ಲೀಲಯಾ ।
ಶೋಷಯಾಮಾಸ ತನ್ನೀರೈಃ ಪ್ಲಾವಯಾಮಾಸ ಭೂತಲಂ ॥೫೯॥

ಪುನಃ ಸ್ವಸನ್ನಿಭಾನೇವ ವರಾಹಾನೇವ ಕೋಟಿಶಃ ।
ಲೋಕಾಲೋಕಾಚಲನಿಭಾನ್ ಸಸರ್ಜ ಸ ತಮೋಗುಣಃ ॥೬೦॥

ನಭೋಮಂಡಲಮಾವೃತ್ಯ ಸ್ಥಿತಂ ತೈರ್ಮುನಿಪುಂಗವಾಃ ।
ತೈರ್ವರಾಹೈರ್ಜಗದ್ವ್ಯಾಪ್ತಂ ತುಂಡಮಂಡಲಸಂಹಿತೈಃ ॥೬೧॥

ತತೋ ದೃಷ್ಟ್ವಾ ಗಣಾಃ ಸರ್ವೇ ತಾನ್ ವರಾಹಾನ್ ದುರಾಸದಾನ್।
ಸರ್ವೇ ಭೂರಿಭಯಗ್ರಸ್ತಾಃ ವ್ಯಾಕುಲಾಶ್ಚಿಂತಯಾ ತದಾ ॥೬೨॥

ಹಾ! ಕಿಮೇವಮಭೂದೇತದ್ವರಾಹವ್ಯಾಕುಲಾ ಮಹೀ ।
ನೀರಂಧ್ರಾ ಸಾ ತು ತೈರೇವ ಶರಾಣಾಂ ಪ್ರಸರೋಽಪಿ ನ ॥೬೩॥

---

ತನ್ನ ಉದ್ದವಾದ ಬಾಲದ ತುದಿಯಿಂದ ಏಳು ಸಮುದ್ರಗಳನ್ನೂ ಹೊಡೆದು ಅಲ್ಲೋಲಕಲ್ಲೋಲಮಾಡಿ, ಆ ಸಮುದ್ರಗಳ ನೀರಿನಿಂದ ಭೂಮಿಯನ್ನು ಮುಳುಗಿಸಿದನು. ॥೫೯॥

ಬಳಿಕ ತನ್ನ ಸಮಾನರಾದ ಅನೇಕಕೋಟಿ ವರಾಹಗಳನ್ನು ಆ ವಿಷ್ಣುವು ಸೃಷ್ಟಿಸಿದನು. ತಮೋಗುಣಿಯಾದ ಆ ವರಾಹವು ಲೋಕಾಲೋಕಪರ್ವತದಂತಹ ಅನೇಕ ಹಂದಿಗಳನ್ನು ಒಡನೆಯೇ ನಿರ್ಮಾಣಮಾಡಿತು. ॥೬೦॥

ಎಲೈ ಋಷಿಗಳಿರಾ, ಆ ವರಾಹರೂಪಿಯಾದ ವಿಷ್ಣುವಿನಿಂದ ಉತ್ಪನ್ನಗಳಾದ ವರಾಹಗಳು ಅಂತರಿಕ್ಷದಲ್ಲಿ ತುಂಬಿಹೋದವು. ಆ ವರಾಹಗಳ ಚಕ್ರಾಕಾರವಾದ ಮುಖಗಳಿಂದ ಎಲ್ಲಾ ಲೋಕಗಳು ಮುಚ್ಚಿಹೋದುವು. ॥೬೧॥

ಆಮೇಲೆ ಎಲ್ಲಾ ಗಣಗಳೂ ಆ ವರಾಹಗಳನ್ನು ನೋಡಿ ಬಹಳ ಹೆದರಿದರು. ಹಾಗೂ ಎಲ್ಲರೂ ಭಯಾಕುಲಿತರಾಗಿ ಯೋಚಿಸಲಾರಂಭಿಸಿದರು. ॥೬೨॥

ಅಯ್ಯೋ, ಏನಾಯಿತು! ಈ ಭೂಮಿಯೆಲ್ಲಾ ವರಾಹಗಳಿಂದ ತುಂಬಿಹೋಗಿರುವುದಲ್ಲಾ! ಇವುಗಳ ಮೇಲೆ ಬಾಣಪ್ರಸಾರವು ಏನೂ ಕೆಲಸಮಾಡಲಾರದು. ॥೬೩॥

ಆಕಾಶಂ ಗಗನಂ ಚಾಸೀತ್ ಗಗನೇಪಿ ನ ಭೂತಲೇ ।
ಅವಕಾಶಃ ಕ್ಷಣಂ ವಾತ್ರ ಪದಪ್ರಕ್ಷೇಪಣಾಯ ವಾ ॥೬೪॥

ವಾರಾಹರೋಮಶಸ್ತ್ರಾಣಿ ಭಿತ್ವಾಪಿ ಘನಮಂಡಲಂ ।
ಪ್ರಯಾಂತಿ ಕುತ್ರ ಗಂತವ್ಯಮಿತಿ ಚಿಂತಾಸಮಾಕುಲಾಃ ॥೬೫॥

ತತೋ ವರಾಹರೂಪೇಣ ಭೀಷಣೇನಾತಿದಾರುಣಂ ।
ವಚೋ ನಾರಾಯಣಃ ಪ್ರಾಹ ರಣಕಂಡೂಪರಾಯಣಃ ॥೬೬॥

ಆಗತೋಸ್ಮಿ ಮಹಾವೀರೋ ರಾವಣೋ ನಿಹತೋ ಮಯಾ ।
ಯುದ್ಧೇ ಭೂಮಂಡಲೇ ಕೋ ವಾ ಮಮ ಪ್ರತಿಭಟೋ ಭವೇತ್॥೬೭॥

ಗಣಾನಾಮವಕಾಶೋದ್ಯ ನ ಯುದ್ಧೇ ಸ್ಥಾತುಮುಷ್ಯತಃ ।
ಗಣನೀಯಾಶ್ಚ ತೇ ತಾವತ್ ಮಮ ನಾರಾಯಣಸ್ಯ ನ ॥೬೮॥

---

ಆಕಾಶವು ನಿಜವಾಗಿಯೂ ಈಗ ಅವಕಾಶವಿಲ್ಲದ ಗಗನವಾಯಿತು. ಭೂಮಿಯಲ್ಲಿಯೂ ಸಹ ಒಂದು ಹೆಜ್ಜೆ ಇಡುವಷ್ಟು ಸ್ಥಳವಿಲ್ಲವಲ್ಲ! ಎಲ್ಲಾ ಭೂಮಿಯೂ ಸುಂದರವಾಗಿದೆ! ॥೬೪॥

ಹಂದಿಗಳ ಮುಳ್ಳುಮುಳ್ಳಾದ ಕೂದಲುಗಳು (ಜಮೆ) ಶಸ್ತ್ರಗಳಹಾಗಿವೆ. ಅವು ಮೇಘಮಂಡಲವನ್ನೂ ಭೇದಿಸಿಕೊಂಡು ಹೋಗುತ್ತಿವೆಯಲ್ಲಾ. ನಾವು ಎಲ್ಲಿಗೆ ಹೋಗೋಣ! ಎಂದು ಎಲ್ಲಾ ಗಣಗಳೂ ಚಿಂತಾಮಗ್ನರಾದರು. ॥೬೫॥

ಬಳಿಕ ವಿಷ್ಣುವು ವರಾಹರೂಪದಿಂದ ಕಠಿನವಾಗಿ ಮಾತನಾಡಲು ಪ್ರಾರಂಭಿಸಿದನು. ಮತ್ತು ಯುದ್ಧದ ತೀಟೆಯನ್ನು ಹೋಗಲಾಡಿಸಿಕೊಳ್ಳಲು ಬಹಳ ಮಟ್ಟಿಗೆ ಆಸಕ್ತನಾಗಿದ್ದನು. ॥೬೬॥

ಎಲೈ ವೀರಭದ್ರನೇ, ನಾನು ಮಹಾ ಪರಾಕ್ರಮಿಯಾದ ರಾವಣನನ್ನು ಕೊಂದವನು. ಯುದ್ಧದಲ್ಲಿ ನನಗೆ ಸಮಾನನಾದ ಯೋಧನು ಈ ಭೂಮಿಯಲ್ಲಿ ಯಾರೂ ಇಲ್ಲ. ಅಂತಹ ನಾನು ಈಗ ಬಂದಿದ್ದೇನೆ. ॥೬೭॥

ಈ ಯುದ್ಧದಲ್ಲಿ ನನ್ನ ಮುಂದೆ ನಿಲ್ಲುವುದಕ್ಕೂ ಸಹ ಗಣಗಳಾದ ನಿಮಗೆ ಶಕ್ತಿಯಿಲ್ಲ. ಶ್ರೀ ನಾರಾಯಣನಾದ ನನಗೆ ನಿಮ್ಮಗಳ ಲೆಕ್ಕವೇ ಇಲ್ಲ. ॥೬೮॥

ಚಕ್ರೇಣಾನೇನ ಘೋರೇಣ ಕ್ಷಣೇನ ರಣಮಂಡಲಂ ।
ಮಂಡಿತಂ ಗಣಸಂಘೇನ ಪತಿತೇನ ಭವಿಷ್ಯತಿ ॥೬೯॥

ಯಜ್ಞಶಾಲಾಪ್ರದಾಹೇನ ಗರ್ವಃ ಕಿಮುಭವತ್ತವ ।
ಯಜ್ಞಶಾಲಾಸಹಸ್ರಾಣಿ ಕರ್ತವ್ಯಾನಿ ಪುನರ್ಮಯಾ ॥೭೦॥

ಮಯಾ ಯಸ್ಯ ಸಹಾಯಾರ್ಥಮುದ್ಯುಕ್ತಂ ತಸ್ಯ ಕೇನ ವಾ ।
ಭಯಂ ಭಾವಿ ಗಣೈರೇತೈಃ ಕಿಂ ವಾ ಕಾರ್ಯಂ ಭವಿಷ್ಯತಿ ॥೭೧॥

ಕಿಮೇತೈರಪಿ ಮೇ ಯುದ್ಧಂ ಯುಕ್ತಮುಕ್ತಿಸಹಂ ಚ ನ ।
ಅವಿರುದ್ಧಾ ಕ್ಷಣಾರ್ಧೇನ ಶಕ್ತಾಸ್ತೇ ಗಮನೇಪಿ ನ ॥೭೨॥

ಇತಿ ಪ್ರಲಪ್ಯ ಬಹುಧಾ ದೂರೀಕೃತ್ಯ ಗಣಾನಪಿ ।
ಸ ವೀರಭದ್ರಾಭಿಮುಖೋ ಯಯೌ ನಾರಾಯಣಃ ಸ್ವಯಂ ॥೭೩॥

ಸ ಗತ್ವಾ ತತ್ರ ತಂ ದೃಷ್ಟ್ವಾ ವೀರಭದ್ರಂ ಭಯಾನಕಂ ।
ತತ್ರಾಪಿ ಸ್ವಬಲಂ ಪ್ರಾಹ ಮಹಾಮೋಹಸಮನ್ವಿತಃ ॥೭೪॥

---

ಈ ಭೀಕರವಾದ ಚಕ್ರದಿಂದ ಗಣಗಳಿಂದ ನಿಬಿಡವಾಗಿರುವ ಈ ರಣರಂಗದಲ್ಲಿ ಎಲ್ಲಾ ಗಣಗಳನ್ನೂ ನೆಲಕ್ಕೆ ಉರುಳಿಸುವೆನು. ॥೬೯॥

ಯಾಗಶಾಲೆಯನ್ನು ಸುಟ್ಟುದರಿಂದ ನಿಮಗೆ ಗರ್ವವು ಬಂದಿತಲ್ಲವೇ ? ಈಗ ನಾನು ಅಂತಹ ಒಂದು ಸಾವಿರ ಯಜ್ಞಶಾಲೆಗಳನ್ನು ಮತ್ತೆ ಕಟ್ಟಿಸುವೆನು. ॥೭೦॥

ನಾನು ಯಾರಿಗೆ ಸಹಾಯಕ್ಕಾಗಿ ಸಿದ್ಧನಾಗಿದ್ದೇನೋ ಆತನಿಗೆ ಯಾವನು ತಾನೇ ಭಯವನ್ನುಂಟುಮಾಡಿಯಾನು ? ಈ ಗಣಗಳಿಂದ ಏನು ತಾನೆ ನಡೆದೀತು? ॥೭೧॥

ಈ ಗಣಗಳೊಡನೆ ಯುದ್ಧಮಾಡುವುದು ನನಗೆ ಸರಿಯಲ್ಲ. ಇವರು ಒಂದು ಕ್ಷಣಾರ್ಧದಲ್ಲಿ ಸುಖವಾಗಿ ಓಡಿಹೋಗುವುದಕ್ಕೂ ಸಮರ್ಥರಾಗಿಲ್ಲ. ॥೭೨॥

ಹೀಗೆ ಅನೇಕ ತರಹವಾಗಿ ಹಿಯ್ಯಾಳಿಸಿ ಆ ನಾರಾಯಣನು ಗಣಗಳನ್ನು ಬಿಟ್ಟು ವೀರಭದ್ರನಿರುವ ಕಡೆಗೆ ತಾನಾಗಿಯೇ ಮುಂದುವರಿದನು. ॥೭೩॥

ಆತನು ಭಯಂಕರಾಕೃತಿಯನ್ನು ಹೊಂದಿ ಆ ವೀರಭದ್ರನನ್ನು ನೋಡಿದನು.

**ತಂ ಮಹಾವೀರಭದ್ರೋಽಪಿ ದೃಷ್ಟ್ವಾ ಕ್ರೂರಂ ಭಯಾನಕಂ ।**
**ವರಾಹರೂಪಂ ತಂ ರೋಷಾತ್ ನಾರಾಯಣಮನಾಮಯಃ ॥೨೫॥**

**ರೇ! ರೇ! ದುಷ್ಟ! ದುರಾಚಾರ ಕಿಮುನ್ಮತ್ತೋಽಸಿ ದುರ್ಭಗ! ।**
**ಪ್ರಳಯಾನಲಕೊಟೇನ ಕಿಂ ಕೀಟಃ ಸಮಯಾಮಿಯಾತ್ ॥೨೬॥**

**ಮಯಾ ಸಹ ನ ಯುದ್ಧಾರ್ಹೋಽ ಗರ್ವಿತೋಽ ಗರ್ವಮುತ್ಸೃಜ ।**
**ತವ ಗರ್ವ ಕಿಮೇತಸ್ಮಿನ್ ವೀರಭದ್ರೇಽಪಿ ವರ್ತತೇ ॥೨೭॥**

**ಇತ್ಯುಕ್ತಂ ವೀರಭದ್ರಂ ತಂ ದೃಷ್ಟ್ವಾ ಕ್ರೋಧಸಮನ್ವಿತಃ ।**
**ಸ ಕ್ರೋಧಾನಲಸಂದಿಗ್ಧತುಂಡಃ ಪ್ರಾಹ ಪುನರ್ಹರಿಃ ॥೨೮॥**

**ಮಮ ರೂಪಾನ್ಯಪಾರಾಣಿ ತತ್ಸಂಹಾರೇ ಬಲಂ ಕ್ವ ತೇ ।**
**ತೈರೇವಾಚ್ಛಾದಿತಂ ರೂಪಂ ತವ ತಾವದ್ಭವಿಷ್ಯತಿ ॥೨೯॥**

---

ಅಲ್ಲಿಯೂ ಅಜ್ಞಾನಮೋಹಿತನಾಗಿ ಆ ವೀರಭದ್ರನೆದುರಿಗೆ ತನ್ನ ಬಲವನ್ನು ಹೊಗಳಿಕೊಳ್ಳುತ್ತಾ ಹೀಗೆಂದನು. ॥೨೪॥

ವೀರಭದ್ರನೂ ಕೂಡ ಆ ಭಯಂಕರವಾದ ವರಾಹ ರೂಪವನ್ನು ಧರಿಸಿದ ವಿಷ್ಣುವನ್ನು ನೋಡಿ ಹೆದರದೆ ಕೋಪದಿಂದ ಹೀಗೆನ್ನುವುದಕ್ಕೆ ಪ್ರಾರಂಭಿಸಿದನು. ॥೨೫॥

ಎಲೈ ದುಷ್ಟನೇ, ದುರಾಚಾರಿಯೇ, ಹುಚ್ಚನಂತೆ ಹರಟುವೆ. ಪ್ರಳಯ ಕಾಲದ ಬೆಂಕಿಗೂ, ಚಿಕ್ಕ ಕೀಟಕ್ಕೂ ಎಲ್ಲಿಯಾದರೂ ಹೋಲಿಕೆಯುಂಟೇ? ॥೨೬॥

ನನ್ನೊಡನೆ ನೀನು ಯುದ್ಧಕ್ಕೆ ಅರ್ಹನಾಗಿಲ್ಲ. ನೀನು ಅಹಂಕಾರಿಯಾಗಿದ್ದೀಯೆ. ಆ ಗರ್ವವನ್ನು ಬಿಡು. ಆ ನಿನ್ನ ಗರ್ವವು ಈ ವೀರಭದ್ರನಲ್ಲಿ ನಡೆಯಲಾರದು. ॥೨೭॥

ಹೀಗೆ ಹೇಳಿದ ಆ ವೀರಭದ್ರನನ್ನು ನೋಡಿ ಅತ್ಯಂತ ಕೋಪದಿಂದ ಆ ವಿಷ್ಣುವು ಮುಖವೆಲ್ಲವೂ ಕೆಂಪೇರುವಂತೆ ಕ್ರೋಧ ತಾಳಿ, ಪುನಃ ವೀರಭದ್ರನನ್ನು ಕುರಿತು ಹೀಗೆಂದನು. ॥೨೮॥

ನನ್ನ ರೂಪಗಳು ಅನಂತವಾಗಿವೆ. ಅವುಗಳೆಲ್ಲವನ್ನೂ ಸಂಹರಿಸಲು ನಿನಗೆ ಸಾಧ್ಯವೇ? ನಿನ್ನಲ್ಲಿ ಬಲವೆಲ್ಲಿದೆ? ಆ ನನ್ನ ರೂಪಗಳಿಂದಲೇ ನೀನೂ ಮುಚ್ಚಿಹೋಗುವೆ. ॥೨೯॥

ಇತಿ ಸ್ವವಿಗ್ರಹೈಃ ಸರ್ವೈರಾವೃತಃ ಸತ್ವರಂ ಹರಿಃ ।
ಯುದ್ಧಾಯಾಭಿಮುಖೋ ಜಾತೋ ದಗ್ಧತುಂಡೋಽಪಿ ಮೋಹತಃ ॥೮೦॥

ತತಃ ಸ ವೀರಭದ್ರಸ್ಯ ಕೋಪಲೇಶೇನ ಕೇವಲಂ ।
ಮೂರ್ಛಿತಃ ಸ್ವಬಲೈಃ ಸಾಕಮನೇಕೈಸ್ತೈರ್ಭಯಾನಕೈಃ ॥೮೧॥

ತತಸ್ತ್ಯಕ್ತ್ವಾ ಸ ತದ್ರೂಪಂ ನೃಸಿಂಹವಪುಷಾ ಹರಿಃ ।
ಜಗರ್ಜ ಭೂತಲಂ ಸರ್ವಮಾಕ್ರಮ್ಯ ಸ್ವಸ್ವವಿಗ್ರಹೈಃ ॥೮೨॥

ತೈರ್ವಿಗ್ರಹೈರ್ಜಗದ್ವ್ಯಾಪ್ತಮಟ್ಟಹಾಸೈಶ್ಚ ದುಃಸಹೈಃ ।
ತೈಸ್ತ್ರಸ್ತಾ ಗಣಾಃ ಸರ್ವೇ ತಾನ್ ದೃಷ್ಟ್ವಾ ಭಯವಿಹ್ವಲಾಃ ॥೮೩॥

ತತಸ್ತಾನ್ ಪರ್ವತಾಕಾರಾನ್ ನೃಸಿಂಹಾನತಿಭೀಷಣಾನ್ ।
ವಿಲೋಕ್ಯ ಶರಣಂ ಪ್ರಾಪುಃ ವೀರಭದ್ರಂ ಕೃಪಾನಿಧಿಂ ॥೮೪॥

---

ಹೀಗೆ ಹೇಳಿ ತನ್ನ ಆಕೃತಿಗಳಿಂದ ವ್ಯಾಪಿಸಿಕೊಂಡು ಜಾಗ್ರತೆಯಾಗಿ ಆ ಹರಿಯು ಯುದ್ಧಕ್ಕೆ ಸನ್ನದ್ಧನಾದನು. ತನ್ನ ಮುಖವು ಸುಟ್ಟುಹೋಗಿದ್ದರೂ ಅಜ್ಞಾನವಶದಿಂದ ವೀರಭದ್ರನೊಂದಿಗೆ ಯುದ್ಧಕ್ಕೆ ಅಭಿಮುಖನಾಗಿಯೇ ನಿಂತನು. ॥೮೦॥

ಬಳಿಕ ಆ ವಿಷ್ಣುವು ವೀರಭದ್ರನ ಅಲ್ಪವಾದ ಕೋಪಾಗ್ನಿಮಾತ್ರದಿಂದಲೇ ತನ್ನ ಎಲ್ಲಾ ಸೈನ್ಯದೊಡನೆ ಮೂರ್ಛೆಯನ್ನು ಹೊಂದಿದನು. ॥೮೧॥

ಬಳಿಕ ಹರಿಯು ಆ ವರಾಹರೂಪವನ್ನು ಬಿಟ್ಟು ನೃಸಿಂಹರೂಪವನ್ನು ತಾಳಿದನು. ಹಾಗೂ ಭೂಮಿಯನ್ನೆಲ್ಲಾ ನರಸಿಂಹರೂಪಗಳಿಂದ ತುಂಬಿದನು.॥೮೨॥

ಆ ನೃಸಿಂಹಗಳಿಂದ ಪ್ರಪಂಚವೆಲ್ಲ ಮುಸಕಿಹೋಯಿತು. ಅಲ್ಲದೇ ಅವು ಅಟ್ಟಹಾಸಗಳನ್ನೂ ಮಾಡುತ್ತಿದ್ದುವು. ಅವುಗಳನ್ನು ನೋಡಿದ ಆ ಎಲ್ಲಾ ಗಣಗಳೂ ಹೆದರಿಹೋದವು. ॥೮೩॥

ಬಳಿಕ ದೊಡ್ಡ ಬೆಟ್ಟಗಳಂತಿರುವ ಭಯಂಕರಗಳಾದ ನರಸಿಂಹಗಳನ್ನು ನೋಡಿ ಗಣಗಳೆಲ್ಲವೂ ಭಯದಿಂದ ವೀರಭದ್ರನನ್ನು ಮೊರೆಹೊಕ್ಕವು. ॥೮೪॥

ಸ್ವಾಮಿನ್ ಶ್ರೀವೀರಭದ್ರಾದ್ಯ ದೃಷ್ಟಮತ್ಯದ್ಭುತಂ ಪುನಃ ।
ವಾರಾಹಕೂಟನಾಶೇಪಿ ನ ಸ್ವಸ್ಥಮಭವನ್ಮನಃ ॥೮೫॥

ನೃಸಿಂಹನೇತ್ರಜ್ವಾಲಾಭಿಃ ಜಗತ್ವ್ಯಾಪ್ತಂ ದವಾನಲೈಃ ।
ಯಥಾ ವ್ಯಾಪ್ತೋ ಗಿರಿಸ್ತಸ್ಯ ನಾಧುನಾಸ್ತಿ ನಿವಾರಕಂ ॥೮೬॥

ಅತಃ ಪರಂ ತು ತೇನೈವ ನೃಸಿಂಹೇನ ದುರಾತ್ಮನಾ ।
ಅಸ್ಮಾಕಮಪಿ ಸರ್ವೇಷಾಂ ಭಯಂ ತು ಸಮಭೂತ್ಖಲು ॥೮೭॥

ಏಕೈಕಸ್ಯ ನೃಸಿಂಹಸ್ಯ ನಖಾ ವಜ್ರಾಯುಧೋಪಮಾಃ ।
ತೈಸ್ತಾವದಧುನಾ ಭೀತಿಃ ಮಹತೀ ಸಮುಪಸ್ಥಿತಾ ॥೮೮॥

ಏವಂ ತೇಷು ಸ್ಥಿತೇಷ್ವೇವ ವದತ್ಸ್ವಪಿ ಗಣೇಷ್ವಪಿ ।
ಆಜಗಾಮ ಮಹಾಸಿಂಹೋ ನೃಸಿಂಹಗಣಸಂಯುತಃ ॥೮೯॥

---

ಸ್ವಾಮಿ ವೀರಭದ್ರನೇ, ವರಾಹಗಳ ಗುಂಪು ನಾಶವಾದರೂ ಈಗ ಅತಿ ಭಯಂಕರವಾದ ರೂಪುಗಳನ್ನು ಮತ್ತೆ ನೋಡುತ್ತಿದ್ದೇವೆ. ನಮಗೆ ಇನ್ನೂ ನೆಮ್ಮದಿಯಿಲ್ಲ. ||೮೫||

ಆ ನೃಸಿಂಹನ ಕಣ್ಣುಗಳಿಂದ ಹೊರಟ ಕಾಡುಗಿಚ್ಚು ಲೋಕವನ್ನೆಲ್ಲಾ ತುಂಬಿಬಿಟ್ಟಿದೆ. ಆ ಪರ್ವತಾಕಾರದಂತಹ ನೃಸಿಂಹಸಮೂಹವನ್ನು ನಾಶಮಾಡುವವರು ಈಗ ಯಾರೂ ಇಲ್ಲವಲ್ಲಾ ! ||೮೬||

ಆದುದರಿಂದ ಈಗ ಆ ದುಷ್ಟನಾದ ನರಸಿಂಹನಿಂದ ನಮಗೆಲ್ಲಾ ಅತಿಯಾದ ಭಯವುಂಟಾಗಿದೆ ! ||೮೭||

ಒಬ್ಬೊಬ್ಬ ನರಸಿಂಹನ ಉಗುರುಗಳೂ ವಜ್ರಾಯುಧದ ಹಾಗೆ ತೀಕ್ಷ್ಣವಾಗಿವೆ. ಅವುಗಳಿಂದಲೇ ಈಗ ನಮಗೆ ಮಹತ್ತರವಾದ ಭೀತಿಯುಂಟಾಗಿದೆ. ||೮೮||

ಹೀಗೆ ಆ ಗಣಗಳೆಲ್ಲಾ ಅಲ್ಲಿಯೇ ಇದ್ದು ವೀರಭದ್ರನೊಂದಿಗೆ ಹೇಳುವ ವೇಳೆಗೆ ಒಂದು ದೊಡ್ಡ ಸಿಂಹವು ಅನೇಕ ನರಸಿಂಹಗಳನ್ನು ಕೂಡಿಕೊಂಡು ಅಲ್ಲಿಗೆ ಬಂದೇಬಿಟ್ಟಿತು. ||೮೯||

ಆಗತ್ಯ ಯಾಹಿ ಯುದ್ಧಾಯ ಮಯಾ ಸಹ ಮಹೋನ್ನತ ।
ಕಿಂ ವಿಲಂಬೇನ ತೇ ಕೃತ್ಯಂ ವೀರಕೃತ್ಯಮಿದಂ ತು ನ ॥೯೦॥

ಮಮಾಪಿ ಶಕ್ತಿರ್ದ್ರಷ್ಟವ್ಯಾ ಯುದ್ಧಾಯಾಭಿಮುಖೋಽಸ್ಮ್ಯಹಂ ।
ಮಮ ಪ್ರತಿಭಟೋ ಲೋಕೇ ಕೋಽಪಿ ಕೋಪಾಶ್ರಯೋಽಪಿ ನ ॥೯೧॥

ಅನಾರಾಯಣಮಸ್ತ್ವದ್ಯ ಸನಾರಾಯಣಮೇವ ವಾ ।
ಭೂಮಂಡಲಮಿತಿ ಪ್ರಾಹ ನೃಸಿಂಹೋ ಭೀಮವಿಕ್ರಮಃ ॥೯೨॥

ತತಃ ಸ ವೀರಭದ್ರೋಽಪಿ ನೃಸಿಂಹಂ ಪ್ರಾಹ ಭೀಷಣಂ ।
ಅಸ್ಯೋಕ್ತಿರದ್ಯ ಸತ್ಯಾಸ್ತು ಸತ್ಯತ್ಯಾಗೋ ನ ತೇ ಮತಃ ॥೯೩॥

ಇತಿ ಶ್ರೀ ವೀರಭದ್ರೋಕ್ತ್ಯಾ ಹತೋ ನಾರಾಯಣಸ್ತದಾ ।
ನೃಸಿಂಹವಿಗ್ರಹಾಸ್ತತ್ರ ಸರ್ವೇ ತತ್ರ ಲಯಂ ಗತಾಃ ॥೯೪॥

---

ಆ ನೃಸಿಂಹವು ಬಂದು, ಎಲೈ ಮದೋನ್ಮತ್ತನೇ, ಯುದ್ಧಕ್ಕೆ ಬಾ! ಏಕೆ ತಡಮಾಡುವೆ? ಇದು ವೀರರಿಗೆ ತಕ್ಕ ಕೃತ್ಯವಲ್ಲ. ॥೯೦॥

ಯುದ್ಧದಲ್ಲಿ ನನ್ನ ಶಕ್ತಿಯನ್ನು ನೋಡು. ಯುದ್ಧಾಭಿಮುಖನಾಗಿ ನಿಂದಿರುವೆನು. ನನ್ನನ್ನು ಪ್ರತಿಭಟಿಸುವವನೊಬ್ಬನೂ ಈಗ ಇಲ್ಲ. ಅಲ್ಲದೆ ನನ್ನ ಮೇಲೆ ಕೋಪದಿಂದ ಮುಂದುವರಿಯುವವನು ಮತ್ತಾರಿರುವನು? ॥೯೧॥

ಈಗ ಈ ಭೂಮಂಡಲವು ನಾರಾಯಣನಿಲ್ಲದಂತಾಗಲಿ. ಅಥವಾ ನಾರಾಯಣ ಸಹಿತವಾಗಿರಲಿ. ಅಲ್ಲಿನ ಪರ್ಯಂತವೂ ನಾನು ಯುದ್ಧಮಾಡದೆ ಬಿಡೆನು ಎಂದು ಭಯಂಕರ ಪರಾಕ್ರಮವುಳ್ಳ ನೃಸಿಂಹನು ಮುಂದುವರಿದನು. ॥೯೨॥

ಬಳಿಕ ಆ ನರಸಿಂಹನ ಭೀಷಣವಾದ ಭಾಷಣವನ್ನು ಕೇಳಿದ ವೀರಭದ್ರನು, ಎಲೈ ನೀನು ಹೇಳಿದ ಹಾಗೆಯೇ ಆಗಲಿ. ನಿನ್ನಲ್ಲಿ ಸುಳ್ಳು ಇಲ್ಲವಷ್ಟೇ. ನಿನ್ನ ಮಾತು ಎಂದೂ ಸುಳ್ಳಾಗದಿರಲಿ. ॥೯೩॥

ಹೀಗೆ ಆಡಿದ ಆ ವೀರಭದ್ರನ ಮಾತಿನಿಂದಲೇ ಆ ನಾರಾಯಣನು ಖಿನ್ನನಾದನು. ಮತ್ತು ಆ ಎಲ್ಲಾ ನರಸಿಂಹವಿಗ್ರಹಗಳೆಲ್ಲಾ ಆ ಮಾತಿನಿಂದಲೇ ನಾಶ ಹೊಂದಿದವು. ॥೯೪॥

ಜಾಮದಗ್ನ್ಯಸ್ವರೂಪೇಣ ಪುನರಪ್ಯಾಗತೋ ಹರಿಃ ।
ಅತ್ಯುಗ್ರಪರ್ವತಾಕಾರೈಃ ಶರೀರೈರಮಿತೈರ್ಯುತಃ ॥೯೫॥

ತೈಃ ಶರೀರೈರ್ಜಗದ್ವ್ಯಾಪ್ತಂ ತಾನಿ ದೃಷ್ಟ್ವಾ ಗಣಾಸ್ತದಾ ।
ಭೀತಾಃ ಕಂಪಮನುಪ್ರಾಪ್ಯ ಸಮುದ್ಯುಕ್ತಾಃ ಪಲಾಯನೇ ॥೯೬॥

ಅಪಾರತತ್ಕುಠಾರೋರುಧಾರಾಜ್ವಾಲಾಸಮಾಕುಲಾ ।
ಇಲಾ ಸಮಭವತ್ಯಾಪಿ ವಿದೀರ್ಣಾ ಪಾದಘಾತನೈಃ ॥೯೭॥

ತತಃ ಸಮಭವದ್ಯುದ್ಧಂ ಗಣಾನಾಂ ರೋಮಹರ್ಷಣಂ ।
ರಣೇನ ತೇನ ಸಹಸಾ ವ್ಯಾಕುಲಾ ಏವ ತೇ ಗಣಾಃ ॥೯೮॥

ಕುಠಾರಧಾರಾಜ್ವಾಲಾಭಿರ್ವ್ಯಾಪ್ತಂ ನಕ್ಷತ್ರಮಂಡಲಂ ।
ತೇನ ತಾವದಭೂದ್ಭೀತಿಃ ಮಹತೀ ಸಾ ದುರಾಸದಾ ॥೯೯॥

---

ಬಳಿಕ ಹರಿಯು ಪರಶುರಾಮನ ಸ್ವರೂಪದಿಂದ ಗೋಚರಿಸಿದನು. ಆತನ ಶರೀರವು ಪರ್ವತದ ಹಾಗೆ ಮಹತ್ತರವಾಗಿತ್ತು. ॥೯೫॥

ಆ ಶರೀರಗಳಿಂದ ಎಲ್ಲಾ ಪ್ರಪಂಚವೂ ತುಂಬಿಹೋಯಿತು. ಆ ದೇಹಗಳನ್ನು ನೋಡಿ ಎಲ್ಲ ಗಣದೇವತೆಗಳು ಹೆದರಿ ಓಡಿಹೋಗಲು ಪ್ರಾರಂಭಿಸಿದರು. ॥೯೬॥

ಆ ಪರಶುರಾಮನ ಕೊಡಲಿಯು ತೀಕ್ಷ್ಣವಾದ ಅಲಗುಗಳಿಂದ ಕಠಿನವಾಗಿತ್ತು. ಅವರ ಧಾರೆಯಿಂದ ಭೂಮಿಯೆಲ್ಲಾ ತುಂಬಿ ಹೋಯಿತು. ಮತ್ತು ಆತನ ಪಾದಘಾತದಿಂದ ಭೂಮಿಯೇ ಬಿರಿದುಹೋಯಿತು. ॥೯೭॥

ಬಳಿಕ ಗಣಗಳಿಗೂ ಪರಶುರಾಮನಿಗೂ ಯುದ್ಧವು ಅತಿ ಭಯಂಕರವಾಗಿ ನಡೆಯಿತು. ಆ ಯುದ್ಧದಿಂದ ಗಣಗಳೆಲ್ಲಾ ನೊಂದುಕೊಂಡರು. ॥೯೮॥

ಆತನ ಪರಶುವಿನ ಅಲಗುಗಳಿಂದ ನಕ್ಷತ್ರಮಂಡಲವೂ ಮುಚ್ಚಿಹೋಯಿತು. ಆದರಿಂದ ಗಣಗಳಿಗೆಲ್ಲಾ ಬಹಳ ಹೆದರಿಕೆಯುಂಟಾಯಿತು. ॥೯೯॥

ತತಸ್ತಾನ್ ಕ್ಷುಭಿತಾನ್ ದೃಷ್ಟ್ವಾ ಗಣಾನ್ ಗಣಪತಿಃ ಸ್ವಯಂ ।
ವೀರಭದ್ರೋಽಪಿ ತಂ ದೃಷ್ಟ್ವಾ ಪ್ರಾಹ ಗಂಭೀರಯಾ ಗಿರಾ ॥೧೦೦॥

ತಾವದ್ಬಲಂ ತವ ಭವೇತ್ ಯಾವದ್ಭಕ್ತಿಸ್ತ್ರಿಯಂಬಕೇ ।
ಅಸ್ಯಾಂ ಗತಾಯಾಂ ತೇ ಶಕ್ತಿಃ ಕ್ಷಣೇನೈವ ವಿನಶ್ಯತಿ ॥೧೦೧॥

ಕ್ವ ತೇ ತ್ರಿಪುಂಡ್ರಂ ರುದ್ರಾಕ್ಷಾಃ ಕ್ವ ತೇ ಶಂಕರಪೂಜನಂ ।
ಕ್ವ ತೇ ರುದ್ರಗಣೈಃ ಸಾರ್ಧಂ ರಣಮುಷ್ಯತಿದಾರುಣಂ ॥೧೦೨॥

ತ್ಯಜ ತ್ರಿಪುಂಡ್ರಂ ಯದಿ ತೇ ಯುದ್ಧಕಾಂಕ್ಷಾ ಮಯಾ ಸಹ ।
ತ್ಯಜ ಲಿಂಗಾರ್ಚನಂ ಶೀಘ್ರಂ ತ್ಯಜ ರುದ್ರಾಕ್ಷಮಾಲಿಕಾಂ ॥೧೦೩॥

ಲಿಂಗಾರ್ಚನಬಲೇನೈವ ಜಾತಂ ಯುದ್ಧಬಲಂ ತವ ।
ಅನ್ಯಥಾ ತವ ಕಾ ಶಕ್ತಿಃ ಯುದ್ಧಾಯಾನ್ಯತ್ರ ವಾ ಹರೇ ॥೧೦೪॥

---

ಬಳಿಕ ಅಲ್ಲೋಲಕಲ್ಲೋಲವನ್ನು ಹೊಂದಿರುವ ಆ ಗಣಗಳನ್ನು ನೋಡಿ ಗಣಗಳಿಗೆ ಅಧಿಪತಿಯಾದ ವೀರಭದ್ರನು ಗಂಭೀರವಾದ ಧ್ವನಿಯಿಂದ ಹೀಗೆಂದನು. ||೧೦೦||

"ಈಶ್ವರನಲ್ಲಿ ನಿನಗೆ ಎಲ್ಲಿಯವರೆಗೆ ಭಕ್ತಿಯಿರುವುದೋ ಅಲ್ಲಿಯವರೆಗೆ ನಿನ್ನಲ್ಲಿ ಶಕ್ತಿಯಿರುವುದು. ಆ ಶಿವನಲ್ಲಿ ಭಕ್ತಿಕುಂಠಿತವಾದರೆ, ಮರುಕ್ಷಣದಲ್ಲಿಯೇ ನೀನು ನಾಶವನ್ನು ಹೊಂದುವೆ. ||೧೦೧||

ಎಲೈ ಪರಶುರಾಮನೇ, ನಿನ್ನ ಆ ತ್ರಿಪುಂಡ್ರವೆಲ್ಲಿ, ಎಲ್ಲಿ ನಿನ್ನ ರುದ್ರಾಕ್ಷಗಳು. ನೀನು ಮಾಡಿದ ಶಂಕರ ಪೂಜೆ ಎಂತಹುದು? ಆ ರುದ್ರನ ಗಣಗಳೆಲ್ಲಿ? ಅವರೊಡನೆ ಕೂಡಿ ಯುದ್ಧಮಾಡುವುದಾದರೂ ನಿನಗೆ ಹೇಗೆ ಸಾಧ್ಯ? ||೧೦೨||

ನನ್ನೊಡನೆ ಯುದ್ಧಮಾಡಬೇಕೆಂದು ನಿನಗೆ ಆಸೆಯಿದ್ದರೆ ಆ ತ್ರಿಪುಂಡ್ರವನ್ನು ಅಳಿಸು. ಲಿಂಗಾರ್ಚನೆ ಮಾಡುವುದನ್ನು ನಿಲ್ಲಿಸು. ಜಾಗ್ರತೆ ಈ ರುದ್ರಾಕ್ಷಮಾಲೆಯನ್ನು ತೆಗೆದುಹಾಕು. ||೧೦೩||

ಶಿವಲಿಂಗಾರ್ಚನೆಯ ಬಲದಿಂದಲೇ ನಿನಗೆ ಯುದ್ಧಮಾಡುವುದಕ್ಕೆ ಈಗಶಕ್ತಿಯು ಒದಗಿದೆ. ಇಲ್ಲದಿದ್ದರೆ ನಿನಗೆ ಹೇಗೆ ಬಲ ಒದಗೀತು! ಮತ್ತು ಯುದ್ಧ ಮಾಡುವುದಕ್ಕಾದರೂ ಹೇಗೆ ಸಾಧ್ಯ ನಿನಗೆ? ||೧೦೪||

**ಶಿವಚಿಹ್ನಮಿದಂ ನೋ ಚೇತ್ ತವ ನಾಶಃ ಕ್ಷಣೇನ ಕಿಂ ।**
**ತಸ್ಮಾತ್ತಲ್ಲಿಂಗಮಾಲೋಕ್ಯ ಸಾಮರ್ಥ್ಯಂ ಮಮ ಕುಂಠಿತಂ ॥೧೦೫॥**

**ಬ್ರಹ್ಮಾಂಡಮಂಡಲೇ ಕೋ ವಾ ರಣೇ ಮಾಂ ಜೇತುಮಿಚ್ಛತಿ ।**
**ಕತಿ ವಾ ನಿಹತಾಃ ಪೂರ್ವಂ ಮಯಾ ನಾರಾಯಣಾದಯಃ ॥೧೦೬॥**

**ಶಿವಪೂಜಾಬಲಂ ತ್ಯಕ್ತ್ವಾ ಬಲಮನ್ಯತ್ಪ್ರದರ್ಶಯ ।**
**ಯದಿ ತೇ ರಣಕಂಡೂತಿಃ ನ ಸ್ವಭಾವಬಲಂ ಚ ತೇ ॥೧೦೭॥**

**ಪ್ರಬಲಂ ಶ್ರೀಮಹಾರುದ್ರಶಿವಲಿಂಗಾರ್ಚನಂ ಬಲಂ ।**
**ತದ್ಭಿನ್ನೇ ನ ಬಲಂ ಲೋಕೇ ದೃಷ್ಟಂ ವಾ ಶ್ರುತಮೇವ ವಾ ॥೧೦೮॥**

**ಲಿಂಗಾರ್ಚಕೋ ದುರ್ಲಭೋಽಪಿ ಪ್ರಬಲಪ್ರಬಲಸ್ತತಃ ।**
**ತೇನ ಯುದ್ಧೇನ ಬುದ್ಧಿರ್ಮೇ ಯತಃ ಸಿದ್ಧಿರ್ನ ತೇ ನ ಮೇ ॥೧೧೯॥**

---

ಈ ಶಿವಚಿಹ್ನೆಯು ಇಲ್ಲದಿದ್ದಲ್ಲಿ ಒಂದೇ ಒಂದು ಕ್ಷಣದಲ್ಲಿ ನಿನ್ನನ್ನು ನಾಶಮಾಡುತ್ತಿದ್ದೆನು. ಆ ಶಿವಲಿಂಗದ ದರ್ಶನದಿಂದ ನನ್ನ ಬಲವೆಲ್ಲಾ ಕುಂಠಿತ ವಾಯಿತು. ||೧೧೫||

ಈ ಬ್ರಹ್ಮಾಂಡದಲ್ಲಿ ನನ್ನನ್ನು ಯಾವನು ತಾನೇ ರಣದಲ್ಲಿ ಜಯಿಸಲು ಬಯಸುವನು ? ಎಷ್ಟು ಜನರು ನನ್ನಿಂದ ಕೊಲ್ಲಲ್ಪಟ್ಟಿರುವರು ? ಈ ಮೊದಲು ನಾರಾಯಣಾದಿಗಳನ್ನು ನಾನೇ ಸೋಲಿಸಿದವನು. ||೧೦೬||

ಶಿವಪೂಜೆಯಿಂದ ಉಂಟಾದ ಬಲವೊಂದನ್ನು ಬಿಟ್ಟು ಬೇರೆ ಬಲವನ್ನು ನೀನು ತೋರಿಸು. ನಿನಗೆ ಯುದ್ಧದ ತೀಟೆಯು ಇದ್ದ ಪಕ್ಷಕ್ಕೆ ನಿನ್ನ ಸ್ವಂತ ಬಲ ವನ್ನು ಪ್ರದರ್ಶಿಸು. ಶಿವಪೂಜೆಯ ಬಲವನ್ನು ಬಿಟ್ಟರೆ ನಿನಗೆ ಸ್ವಂತ ಬಲವೆಲ್ಲಿ ಬರುವುದು ? ||೧೦೭||

ಶ್ರೀ ಮಹಾರುದ್ರನ ಶಿವಲಿಂಗಾರ್ಚನದಿಂದ ಬಂದ ಬಲವೇ ಪ್ರಬಲವಾದದ್ದು. ಅದಕ್ಕಿಂತ ದೊಡ್ಡ ಬಲವು ಲೋಕದಲ್ಲಿ ಇಲ್ಲ. ಅದನ್ನು ನೋಡಿಯೂ ಇಲ್ಲ. ಕೇಳಿಯೂ ಇಲ್ಲ. ||೧೦೮||

ಲಿಂಗಾರ್ಚನಮಾಡತಕ್ಕವನು ಎಲ್ಲ ಪ್ರಬಲರಿಗಿಂತಲೂ ಅಧಿಕ ಬಲಶಾಲಿಯು. ಅವನು ಸಿಗುವುದು ದುರ್ಲಭ. ಆತನೊಡನೆ ಯುದ್ಧ ಹೂಡಲು ಬುದ್ಧಿಯೇ ಹುಟ್ಟು ವುದಿಲ್ಲ. ಅದರಿಂದ ನನಗೂ ನಿನಗೂ ಈಗ ಸಿದ್ಧಿಯು ಲಭಿಸಲಾರದು. ||೧೦೯||

ಯದಿ ಗರ್ವಸ್ತವ ಭವೇತ್ ಕಂಡೂತಿರಪಿ ತೇ ರಣೇ ।
ತದಾ ಲಿಂಗಂ ವಿಹಾಯಾತ್ರ ಯುದ್ಧಾಯಾಯಾಹಿ ಸಾದರಂ ॥೧೧೦॥

ಇತಿ ತದ್ವಚನಂ ಶ್ರುತ್ವಾ ಗರ್ವಪರ್ವತಸಂನಿಭಃ ।
ಸ್ವಾಭಾವಿಕಂ ಮಮ ಬಲಂ ನ ಮೇ ಲಿಂಗೇ ನ ತದ್ಬಲಂ ॥೧೧೧॥

ಇತ್ಯುಕ್ತ್ವಾ ಲಿಂಗಮುತ್ಸೃಜ್ಯ ತ್ಯಕ್ತ್ವಾ ರುದ್ರಾಕ್ಷಮಾಲಿಕಾಂ ।
ತ್ರಿಪುಂಡ್ರಧಾರಣಂ ತ್ಯಕ್ತ್ವಾ ಯುದ್ಧಾಯ ಸಮುಪಸ್ಥಿತಃ ॥೧೧೨॥

ತತಃ ಶ್ರೀವೀರಭದ್ರಸ್ತಂ ಶಿವಲಿಂಗವಿವರ್ಜಿತಂ ।
ಚಕಾರ ಭಸ್ಮಸಾದಾಶು ಜಾಮದಗ್ನ್ಯಂ ಕ್ಷಣೇನ ತು ॥೧೧೩॥

ತತಃ ಸಮಾಗತಸ್ತತ್ರ ಜಮದಗ್ನಿರ್ಮಹಾಮುನಿಃ ।
ಆಗತ್ಯ ಪ್ರಣಿಪತ್ಯಾಹ ವೀರಭದ್ರಂ ಮಹಾಗಣಂ ॥೧೧೪॥

---

ನಿನಗೆ ಅಹಂಕಾರವಿದ್ದರೆ ಅಥವಾ ಯುದ್ಧದಲ್ಲಿ ಕುತೂಹಲವಿದ್ದರೆ ಅಥವಾ ಯುದ್ಧದಲ್ಲಿ ಉತ್ಸಾಹವಿರುವುದೇ ಆದರೆ ಆ ಶಿವಲಿಂಗವನ್ನು ಬಿಟ್ಟು ಯುದ್ಧಕ್ಕಾಗಿ ಸನ್ನದ್ಧನಾಗು." ||೧೧೦||

ಹೀಗೆ ವೀರಭದ್ರನಂದ ಮಾತನ್ನು ಕೇಳಿ, ಬೆಟ್ಟದಂತಿರುವ ಆತನು ಬಹಳ ಜಂಭದಿಂದ ಹೀಗೆಂದನು. ನನ್ನ ಬಲವು ಸ್ವಾಭಾವಿಕವಾದದ್ದೇ ಹೊರತು ಶಿವಲಿಂಗದ ಪೂಜೆ ಮೊದಲಾದವುಗಳಿಂದ ಬಂದದ್ದಲ್ಲ. ನನ್ನ ಲಿಂಗದಲ್ಲಿ ಅಂತಹ ಬಲವೂ ಇಲ್ಲ. ||೧೧೧||

ಹೀಗೆ ಹೇಳಿ ಆ ಪರಶುರಾಮನು ಲಿಂಗವನ್ನು ತೆಗೆದು ಎಸೆದನು. ರುದ್ರಾಕ್ಷ ಮಾಲೆಯನ್ನೂ ಕಿತ್ತೊಗೆದನು. ತ್ರಿಪುಂಡ್ರವನ್ನೂ ಅಳಿಸಿದನು. ಹಾಗೆಯೇ ಯುದ್ಧಕ್ಕೆ ಸನ್ನದ್ಧನೂ ಆದನು. ||೧೧೨||

ಬಳಿಕ ಶ್ರೀ ವೀರಭದ್ರನು ಶಿವಲಿಂಗವನ್ನು ಬಿಟ್ಟ, ಜಮದಗ್ನಿ ಪುತ್ರನಾದ ಪರಶುರಾಮನ ದೇಹವನ್ನು ಕ್ಷಣಮಾತ್ರದಲ್ಲಿ ಸುಟ್ಟು ಬೂದಿಮಾಡಿದನು. ||೧೧೩||

ಆಗ ಜಮದಗ್ನಿ ಋಷಿಯು ಬಂದು ಆ ಮಹಾಗಣಾಧಿಪನಾದ ವೀರಭದ್ರನಿಗೆ ಎರಗಿ ವಿಜ್ಞಾಪಿಸಿಕೊಳ್ಳಲಾರಂಭಿಸಿದನು. ||೧೧೪||

ಯಸ್ಯಾಭಿಮಾನೋ ನಿರ್ಮಾಣಃ ಗಣೈಃ ಸಹ ರಣಾಯ ಸಃ ।
ನಾಶಮೇಷ್ಯತಿ ತಸ್ಯಾಪಿ ಬಲಂ ಸಂಭಾವಿತಂ ಕಥಂ ॥೧೧೫॥

ಶಿವಲಿಂಗಂ ಪರಿತ್ಯಕ್ತಂ ತೇನ ತಾವದ್ದುರಾತ್ಮನಾ ।
ತತ್ಪರಿತ್ಯಾಗತಸ್ತಸ್ಯ ಬಲಹಾನಿರಭೂತ್ಖಲು ॥೧೧೬॥

ರೂಪಂ ಬಲಂ ಚ ಭಾಗ್ಯಂ ಚ ಲಭ್ಯತೇ ಶಿವಪೂಜಯಾ ।
ತತ್ತ್ಯಾಗೇ ದುರ್ಬಲಃ ಸದ್ಯಃ ದುರ್ಭಾಗ್ಯೋಽಪಿ ಭವಿಷ್ಯತಿ ॥೧೧೭॥

ಲಿಂಗಾರ್ಚನಬಲೇನೈವ ಸರ್ವಂ ಸಿದ್ಧಿಮವಾಪ್ನುಯಾತ್ ।
ತದಭಾವೇ ಬಲಂ ಕಸ್ಯ ಲೋಕೇ ಸಂಭಾವಿತಂ ಭವೇತ್ ॥೧೧೮॥

ಯೇ ಯೇ ಲಿಂಗಾರ್ಚನಂ ತ್ಯಕ್ತ್ವಾ ವ್ಯರ್ಥಂ ಗರ್ವಂ ಸಮಾಶ್ರಿತಾಃ ।
ತೇ ಸರ್ವೇ ವಿಲಯಂ ಯಾಂತು ವೀರಭದ್ರಾಸ್ತ್ರಧಾರಯಾ ॥೧೧೯॥

---

ವೀರಭದ್ರಸ್ವಾಮಿಯೇ, ನಿನ್ನ ಗಣಗಳೊಂದಿಗೆ ಅಹಂಕಾರವನ್ನು ಮಾತ್ರ ಪ್ರದರ್ಶಿಸಿ ಈ ಪರಶುರಾಮನು ನಾಶವಾದನಲ್ಲವೆ? ಇವನಲ್ಲಿ ಶೌರ್ಯವೆಲ್ಲಿ ಬಂತು? ||೧೧೫||

ದುಷ್ಟನಾದ ನನ್ನ ಮಗನು ಶಿವಲಿಂಗವನ್ನು ಕಿತ್ತುಬಿಸುಟನು. ಅದನ್ನು ತೆಗೆದುಹಾಕಿದುದರಿಂದಲೇ ಆವನಿಗೆ ಬಲಕ್ಷೀಣತೆಯು ಉಂಟಾಯಿತಲ್ಲವೇ. ||೧೧೬||

ಶಿವಪೂಜೆಯಿಂದ ಸುಂದರರೂಪವೂ, ಶಕ್ತಿಯೂ ಸಂಪತ್ತೂ ಲಭಿಸುವುವು. ಅಂತಹ ಶಿವಪೂಜೆಯನ್ನು ಬಿಟ್ಟರೆ ಆಗಲೇ ಬಡವನಾಗಿ ನಿರ್ಭಾಗ್ಯನಾಗುವನಲ್ಲವೇ? ||೧೧೭||

ಎಲ್ಲ ಸಿದ್ಧಿಯನ್ನು ಹೊಂದಬೇಕಾದರೂ ಲಿಂಗಾರ್ಚನೆಯ ಬಲವು ಮುಖ್ಯವಾಗಿ ಬೇಕು. ಅದೇ ಇಲ್ಲದಿದ್ದರೆ ಲೋಕದಲ್ಲಿ ಯಾವನಿಗೆತಾನೇ ಬಲವು ಲಭಿಸೀತು? ||೧೧೮||

ಯಾರು ಯಾರು ಲಿಂಗಾರ್ಚನೆ ಮಾಡುವುದನ್ನು ಬಿಟ್ಟು ಸುಮ್ಮನೆ ದುರಹಂಕಾರದಿಂದ ಮೆರೆಯುತ್ತಾರೆಯೋ, ಅವರು ಶ್ರೀ ವೀರಭದ್ರನ ಅಸ್ತ್ರಧಾರೆಗಳಿಂದ ನಾಶಹೊಂದಲಿ. ||೧೧೯||

ಶ್ರೀವೀರಭದ್ರಪ್ರತಿಮಃ ಕೋ ವಾ ಲೋಕೇ ಭವಿಷ್ಯತಿ ।
ಕಸ್ತೇನ ಸಹ ಯುದ್ಧಂ ವಾ ಕರ್ತುಮುಪ್ಯುದ್ಯತೋ ಭವೇತ್ ॥೧೨೦॥

ಅಶಾಂಭವಾಃ ಸುರಾಃ ಸರ್ವೇ ಹಂತವ್ಯಾಃ ಪ್ರೀತಿಪೂರ್ವಕಂ ।
ತೇಷಾಂ ಸಂಹರಣೇ ತಾವತ್ಪ್ರಯತ್ನೋಽಪ್ಯನಪೇಕ್ಷಿತಃ ॥೧೨೧॥

ಶಿವನಿಂದಾಗ್ನಿನಾ ದಗ್ಧಾಃ ಪೂರ್ವಮೇವ ಸುರಾಸ್ತತಃ ।
ನಿಮಿತ್ತಮಾತ್ರಮೇವಾತ್ರ ವೀರಭದ್ರ ಭವಾನ್ಪರಂ ॥೧೨೨॥

ತತೋ ವಾಮನರೂಪೇಣ ಸ ವಿಷ್ಣುಃ ಸಮುಪಾಗತಃ ।
ಯುಯಾಚೇ ವೀರಭದ್ರಂ ತಂ ಯುದ್ಧಮೇವ ಪ್ರಯತ್ನತಃ ॥೧೨೩॥

ತತಃ ಸ ವವೃಧೇ ವಿಷ್ಣುರ್ವ್ಯಾಪ್ಯ ನಕ್ಷತ್ರಮಂಡಲಂ ।
ತತಸ್ತಸ್ಯ ಶಿರಶ್ಛಿನ್ನಂ ವೀರಭದ್ರೇಣ ಯತ್ನತಃ ॥೧೨೪॥

---

ಶ್ರೀವೀರಭದ್ರನಿಗೆ ಸಮನಾದವನು ಈ ಲೋಕದಲ್ಲಿ ಯಾವನೂ ಇಲ್ಲ. ಇರಲಾರನು. ಯಾವನು ಆತನೊಡನೆ ಯುದ್ಧಮಾಡಲು ಸಿದ್ಧನಾಗುವನು? ॥೧೨೦॥

ದೇವತೆಗಳೆಲ್ಲಾ ಅಶೈವರಾಗಿರುವರು. ಅದುದರಿಂದಲೇ ಅವರನ್ನು ನಿಜವಾಗಿ ಕೊಲ್ಲಲೇಬೇಕು. ಅವರನ್ನು ಸಂಹರಿಸಬೇಕಾದರೆ ಆಯಾಸವೇನೂ ಆಗಲಾರದು. ॥೧೨೧॥

ಈ ದೇವತೆಗಳು ಶಿವನಿಂದೆಯಿಂದಲೇ ಸುಟ್ಟುಹೋದವರಂತೆ ಆಗಿದ್ದಾರೆ. ಎಲೈ ವೀರಭದ್ರನೇ, ಈಗ ಇವರ ನಾಶಕ್ಕೆ ಶಿವನಿಂದೆಯೇ ಕಾರಣ ಅಂದರೆ ನೀನು ನೆವಕ್ಕೆ ಮಾತ್ರ ಕಾರಣನಾಗಿದ್ದೀಯೆ. ಎಂದು ಜಮದಗ್ನಿಯು ವೀರಭದ್ರನಲ್ಲಿ ಹೇಳಿಕೊಂಡನು. ॥೧೨೨॥

ಬಳಿಕ ವಿಷ್ಣುವು ವಾಮನರೂಪವನ್ನು ಧರಿಸಿ ಮತ್ತೆ ಬಂದನು. ಮತ್ತು ವೀರಭದ್ರನೊಡನೆ ಯುದ್ಧಭಿಕ್ಷೆಯನ್ನು ಬೇಡಿದನು. ॥೧೨೩॥

ಮತ್ತೂ ವಾಮನನು ನಕ್ಷತ್ರಮಂಡಲವನ್ನೂ ಮುಟ್ಟುವಂತೆ ಬೆಳೆದನು. ಆಗ ಆ ವೀರಭದ್ರನು ಪ್ರಯತ್ನಪಟ್ಟು ಆತನ ಶಿರಸ್ಸನ್ನು ಕತ್ತರಿಸಿದನು. ॥೧೨೪॥

ತತೋ ರಾಮಸ್ವರೂಪೇಣ ನಾರಾಯಣಮುಪಾಗತಂ ।
ದೃಷ್ಟ್ವಾ ಪ್ರಾಹ ಮಹಾವೀರೋ ವೀರಭದ್ರಸ್ತಮಾದರಾತ್ ॥೧೨೫॥

ಶೂಲಂ ತೃಷಾಸಮಾಕ್ರಾಂತಂ ತವ ರಕ್ತೇನ ಕೇವಲಂ ।
ತೃಪ್ತಂ ಭವಿಷ್ಯತಿ ಪ್ರಾಯಃ ತಸ್ಯ ಕೃತ್ಯಂ ತದೇವ ಹಿ ॥೧೨೬॥

ಇತ್ಯುಕ್ತಂ ತದ್ವಚಃ ಕೃತ್ವಾ ಸ ಬಾಲಿಶವದಾಹತಂ ।
ಅಜ್ಞಾತ್ವಾ ವೀರಭದ್ರಸ್ಯ ಪ್ರಬಲಂ ಬಲಮುತ್ತಮಂ ॥೧೨೭॥

ಖರಃ ಕ್ಷಣೇನ ನಿಹತೋ ದೂಷಣೋಽಪ್ಯತಿಭೀಷಣಃ ।
ತಾಟಿಕಾ ನಿಹತಾ ಪೂರ್ವಂ ಕೋಟಿಕೋಟಿನಿಭಾ ಕ್ಷಣಾತ್ ॥೧೨೮॥

ಹತಾ ಶೂರ್ಪನಖಾ ದುಷ್ಟಾ ಮಾರೀಚೋ ನಿಹತೋ ಮಯಾ ।
ಸಪ್ತತಾಲವನಂ ಭಿನ್ನಮಚ್ಛೇದ್ಯಂ ವಕ್ರಮುನ್ನತಂ ॥೧೨೯॥

---

ಬಳಿಕ ನಾರಾಯಣನು ರಾಮನರೂಪದಿಂದ ಬಂದನು. ಆಗ ವೀರಭದ್ರನು ಆವನನ್ನು ನೋಡಿ ಆದರದಿಂದ ಹೀಗೆಂದನು. ॥೧೨೫॥

ರಾಮನೇ, ಈ ಶೂಲಾಯುಧವು ಬಹಳ ಬಾಯಾರಿಕೆಗೊಂಡಿದೆ. ಈಗ ಅದು ನಿನ್ನ ರಕ್ತವನ್ನು ಕುಡಿದು ತೃಪ್ತವಾಗುವುದು. ಸಾಮಾನ್ಯವಾಗಿ ಅದಕ್ಕೆ ಈಗ ಕೆಲಸವೆಂದರೆ ಅದೇ ಹೊರತು ಬೇರೆ ಇಲ್ಲ. ॥೧೨೬॥

ಹೀಗೆಂದ ವೀರಭದ್ರನ ಮಾತನ್ನು ಕೇಳಿ ಆ ರಾಮನು ವೀರಭದ್ರನ ಮಹಾ ಬಲವನ್ನು ತಿಳಿಯದೇ ಮೂರ್ಖನಂತೆ ಆತನನ್ನು ಕುರಿತು ಹೀಗೆ ಹೇಳಿದನು. ॥೧೨೭॥

"ಒಂದೇ ಒಂದು ಕ್ಷಣದಲ್ಲಿ ಖರ ಮತ್ತು ಅತಿ ಭಯಂಕರನಾದ ದೂಷಣ ಇವರನ್ನು ನಾನು ಕೊಂದಿದ್ದೇನೆ. ಅಲ್ಲದೆ ಆ ಘೋರ ತಾಟಕಿಯನ್ನೂ ನಿಮಿಷ ಮಾತ್ರದಲ್ಲಿ ನಾಶಮಾಡಿರುವೆನು. ॥೧೨೮॥

ಶೂರ್ಪನಖೆಯನ್ನೂ ಮಾರೀಚನನ್ನೂ ನಾಶಪಡಿಸಿದ್ದೇನೆ. ಅಲ್ಲದೆ ಏಳು ತಾಲವೃಕ್ಷಗಳನ್ನೂ ಒಂದೇ ಬಾಣದಿಂದ ಭೇದಿಸಿದ್ದೇನೆ. ಯಾರಿಂದಲೂ ಕತ್ತರಿಸಲು ಸಾಧ್ಯವಿಲ್ಲದ ಆ ಸಪ್ತವೃಕ್ಷಗಳ ಗುಂಪನ್ನು ಚಮತ್ಕಾರವಾಗಿ ಕೆಡವಿದ್ದೇನೆ. ॥೧೨೯॥

ಅಂಗುಷ್ಠೇನ ತದಾ ಕ್ಷಿಪ್ತೋ ದುಂದುಭಿಃ ಪರ್ವತಾಕೃತಿಃ ।
ವಾಲೀ ವಿನಿಹತಃ ಪೂರ್ವಂ ಸೇತುರ್ಬದ್ಧೋ ಮಹಾಂಬುಧೌ॥೧೩೦॥

ಮದೀಯೇನೈವ ಕಪಿನಾ ಲಂಕಾ ದಗ್ಧಾ ದುರಾಸದಾ ।
ಅಕ್ಷೋಽಪಿ ನಿಹತಸ್ತೇನ ಕುಮಾರೋ ರಾವಣಸ್ಯ ಸಃ ॥೧೩೧॥

ಇಂದ್ರಜಿನ್ನಿರ್ಜಿತಸ್ತೇನ ಲಂಕಾಯಾಂ ತೋರಣಂ ಮಹತ್ ।
ಭಿನ್ನಂ ತೇನೈವ ವೀರೇಣ ತತ್ತುಲ್ಯಾಃ ಕೋಟಿಶೋ ಮಮ ॥೧೩೨॥

ರಾವಣೋ ನಿಹತಃ ಪೂರ್ವಂ ಸರ್ವಲೋಕೈಕರಾವಣಃ ।
ಕುಂಭಕರ್ಣಾದಯಃ ಸರ್ವೇ ನಿಹತಾಶ್ಚೈವ ರಾಕ್ಷಸಾಃ ॥೧೩೩॥

ರಣಕಾಲೇಽಪಿ ಸಂಪ್ರಾಪ್ತೇ ಕಾಲಾಗ್ನಿಃ ಸೋಽಹಮೇವ ಹಿ ।
ಮದ್ಬಾಹುಬಲಮಾಲೋಕ್ಯ ಪ್ರಯಾಂತಿ ರಿಪವಃ ಪರಂ ॥೧೩೪॥

---

ಹಿಂದೆ ಅಂಗುಷ್ಠದಿಂದ ಪರ್ವತದಂತೆ ಬಿದ್ದಿದ್ದ ದುಂದುಭಿಯ ಶರೀರವನ್ನು ಒಂದು ಯೋಜನದ ತನಕ ಹಾರಿಸಿರುವೆನು. ವಾಲಿಯನ್ನು ಕೊಂದೆನಲ್ಲದೆ ದೊಡ್ಡ ಸಮುದ್ರಕ್ಕೆ ಸೇತುವೆಯನ್ನೇ ಕಟ್ಟಿದೆನು. ॥೧೩೦॥

ನನ್ನ ಸೇವಕನಾದ ಒಂದು ಕಪಿಯೇ ದುರ್ಭೇದ್ಯವಾದ ಆ ಲಂಕಾಪಟ್ಟಣವನ್ನು ಸಹ ಸುಟ್ಟಿತು. ಮತ್ತು ರಾವಣನ ಮಗನಾದ ಅಕ್ಷಯಕುಮಾರನನ್ನೂ ಕೊಂದಿತು. ॥೧೩೧॥

ಆ ಕಪಿಯೇ ಇಂದ್ರಜಿತ್ತನ್ನು ಗೆದ್ದನು. ಲಂಕೆಯಲ್ಲಿರುವ ದೊಡ್ಡ ಹೆಬ್ಬಾಗಿಲನ್ನು ಮುರಿದನು. ಅವನಂತಹ ಕೋಟಿ ಮಂದಿ ವೀರರು ಈಗ ನನ್ನವರಾಗಿದ್ದಾರೆ. ॥೧೩೨॥

ಹಿಂದೆ ಎಲ್ಲಾ ಲೋಕಗಳನ್ನೂ ಅಳಿಸಿರುವ ರಾವಣನನ್ನು ನಾನು ಕ್ಷಣಕಾಲದಲ್ಲಿ ಕೊಂದೆನು. ಕುಂಭಕರ್ಣನೇ ಮೊದಲಾದ ಅನೇಕ ಮಂದಿ ರಾಕ್ಷಸರನ್ನು ಧ್ವಂಸಮಾಡಿದೆನು. ॥೧೩೩॥

ಯುದ್ಧಕಾಲವು ಬಂದಾಗ ನಾನು ಪ್ರಳಯಕಾಲದ ಅಗ್ನಿಯೇ ಸರಿ. ನನ್ನ ಬಾಹುಬಲವನ್ನು ನೋಡಿ ಎಲ್ಲಾ ಶತ್ರುಗಳೂ ಓಡಿಹೋಗುವರು. ॥೧೩೪॥

ಮಯಾ ಸಹ ನ ತೇ ಯುದ್ಧೇ ಜಯವಾರ್ತಾಪಿ ದೂರತಃ ।
ವಿದ್ಧಿ ನಾರಾಯಣಂ ತ್ವಂ ಮಾಂ ವೀರಭದ್ರ ಯಥಾರ್ಥತಃ ॥೧೩೫॥

ಯುದ್ಧಕಾಲೇಪಿ ಸಂಪ್ರಾಪ್ತೇ ಯಮೋಪಿ ಸ್ಯಾತ್ತ್ವವಿಹ್ವಲಃ ।
ಶಕ್ತಿಶ್ಚೇತ್ತವ ಯುದ್ಧಾರ್ಥಂ ಮಾಂ ಯಾಹಿ ತ್ವರಯಾಽಧುನಾ ॥೧೩೬॥

ಇತಿ ಪ್ರಲಪಮಾನಂ ತಂ ವೀರಭದ್ರೋಽಪಿ ಸಸ್ಮಿತಃ ।
ಲಲಾಟವೀತಿಹೋತ್ರಾಯ ಕಾಮಂ ರಾಮಂ ದದೌ ದ್ವಿಜಾಃ ॥೧೩೭॥

ತತೋ ನೇತ್ರಾಗ್ನಿನಾ ರಾಮೋ ದಗ್ಧಬಾಹುರಿಳಾತಲೇ ।
ಪಪಾತ ದಗ್ಧಮೂರ್ಧಾಪಿ ದಗ್ಧವಕ್ಷಸ್ಥಳಃ ಕ್ಷಣಾತ್ ॥೧೩೮॥

ತತಶ್ಚತುರ್ಮುಖೋ ದೃಷ್ಟ್ವಾ ಪತಿತಂ ಭೂತಲೇ ಮೃತಂ ।
ರಾಮಂ ನಾರಾಯಣಾಕಾರಂ ರಮಾಶ್ರುಪರಿವೇಷ್ಟಿತಂ ॥೧೩೯॥

---

ನನ್ನೊಡನೆ ಯುದ್ಧದಲ್ಲಿ ನಿನಗೆ ಜಯವೆಂಬ ಹೆಸರೂ ಸಹ ದೂರವೇ ಸರಿ. ನನ್ನನ್ನು ನಿಜವಾಗಿಯೂ ನಾರಾಯಣನೆಂದು ತಿಳಿ (ನಾರಾನಿ, ತತ್ವಾನಿ ತಾನಿ ಅಯನಂ ಸ್ಥಾನಂ ಯಸ್ಯಸಃ ॥ ಅಥವಾ ನಾರಾಃ ಆಪೋ ಅಯನಂ ಯಸ್ಯ । ಆತಏವಾರ್ಣವೇ ತಸ್ಮಿನ್ ಯತ್ತದಸ್ಯಾಯನಂಗತಃ । ನಾರಾಸ್ತಾಃ ಸೃಷ್ಟಿಕರಣಾಃ ತೇನ ನಾರಾಯಣಃ ಸ್ಮೃತಃ) ॥೧೩೫॥

ಸಮರಕಾಲವು ಒದಗಲು ನನ್ನ ಮುಂದೆ ಯಮನೂ ಕೂಡ ನಿಲ್ಲಲು ಹಿಂದೆ ಮುಂದೆ ನೋಡುವನು. ನಿನಗೆ ಬಲವಿದ್ದದ್ದೇ ಆದರೆ ಜಾಗ್ರತೆ ನನ್ನೊಡನೆ ಯುದ್ಧಕ್ಕೆ ಬಾ.” ॥೧೩೬॥

ಹೀಗೆ ಹರಟುತ್ತಿರುವ ಆ ರಾಮನನ್ನು ವೀರಭದ್ರನು ನೋಡಿ ನಸುನಕ್ಕು ಕೂಡಲೇ ಹಣೆಯಲ್ಲಿರುವ ಅಗ್ನಿಗೆ ಅವನನ್ನು ಆಹುತಿಯಾಗಿ ಕೊಟ್ಟನು. ॥೧೩೭॥

ಎಲೈ ದ್ವಿಜೋತ್ತಮರೇ, ಬಳಿಕ ವೀರಭದ್ರನ ಹಣೆಗಣ್ಣಿನ ಅಗ್ನಿಯಿಂದ ರಾಮನ ತೋಳುಗಳು ಸುಟ್ಟುಹೋದವು. ಹಾಗೆಯೇ ಅವನು ಭೂಮಿಯ ಮೇಲೆ ಬಿದ್ದನು. ಆತನ ತಲೆ ಮತ್ತು ಎದೆಯೂ ಕೂಡ ಗಾಯವಾದುವು. ॥೧೩೮॥

ಬಳಿಕ ಬ್ರಹ್ಮನು ಭೂಮಿಯಲ್ಲಿ ಸತ್ತಂತೆ ಬಿದ್ದಿರುವ ನಾರಾಯಣಸ್ವರೂಪ ನಾದ ರಾಮನನ್ನು ನೋಡಿದನು. ಲಕ್ಷ್ಮಿಯು ಕಣ್ಣೀರಿನಿಂದ ಆತನ ದೇಹವು ನೆನೆದಿತ್ತು. ॥೧೩೯॥

ಪ್ರಾಹಾಶ್ರುಧಾರಯಾ ಕ್ರಾಂತೋ ರಾಮಂ ದೃಷ್ಟ್ವಾ ಮೃತಂ ಪುನಃ ।
ನಾರಾಯಣಸ್ವರೂಪಸ್ತ್ವಂ ಭಯವ್ಯಾಕುಲತೋ ಮುಹುಃ ॥೧೪೦॥

ಹಾ ! ಮೃತೋಽಸಿ ಕ್ಷಣಾರ್ಧೇನ ಶೌರ್ಯೇ ಶೌರ್ಯಂ ಕ್ವ ತೇ ಗತಂ ।
ಶ್ರುತಾಯಾಃ ಶಿವನಿಂದಾಯಾಃ ಫಲಮೇವಮಭೂತ್ಕಿಲ ॥೧೪೧॥

ಕಿಂ ತು ಗರ್ವೋಕ್ತಯೋ ಯಾಸ್ತೇ ವೀರಭದ್ರೇಶಸಂನಿಧೌ ।
ತಾಸ್ತಾಗ್ನಿಸ್ವರೂಪೇಣ ದಾಹಾಯ ಸಮುಪಸ್ಥಿತಾ ॥೧೪೨॥

ವೀರಭದ್ರೇಶ್ವರಃ ಸೋಽಯಂ ಮಹಾರುದ್ರಗಣಃ ಪ್ರಿಯಃ ।
ತೇನ ಸಾಕಂ ಗರ್ವವಾರ್ತಾ ಕೃತಾಸ್ತತ್ಫಲಮೀದೃಶಂ ॥೧೪೩॥

ರೇ ರೇ ದಕ್ಷ ದುರಾಚಾರ ಕಿಮಿತ್ಯಧ್ವರದೀಕ್ಷಿತಃ ।
ಭವತ್ಸಹಾಯಕರಣಾತ್ ಮೃತೋ ನಾರಾಯಣಃ ಸ್ವಯಂ ॥೧೪೪॥

---

ಬಿದ್ದಿರುವ ರಾಮನನ್ನು ನೋಡಿ ನೀನು ನಾರಾಯಣನ ಸ್ವರೂಪವುಳ್ಳವನಾಗಿದ್ದೀಯೆ, ಎಂದು ಹೇಳುತ್ತಾ ಕಣ್ಣೀರು ತುಂಬಿಕೊಂಡು ಬ್ರಹ್ಮನು ಒಡನೆಯೇ ಭಯಾಕ್ರಾಂತನಾದನು. ॥೧೪೦॥

ಅಯ್ಯೋ ರಾಮ, ನೀನು ಒಂದರೆಗಳಿಗೆಯಲ್ಲಿ ತೀರಿಕೊಂಡೆಯಾ! ನಿನ್ನ ಪರಾಕ್ರಮವೂ, ಬಲವೂ ಎಲ್ಲಿ ಹೋಯಿತು? ಇದೆಲ್ಲಾ ಶಿವನಿಂದೆಯನ್ನು ಕೇಳಿದುದರಿಂದ ಬಂದ ಫಲವಲ್ಲವೇ? ॥೧೪೧॥

ಮತ್ತು ವೀರಭದ್ರನ ಮುಂದೆ ನೀನು ಜಂಭದ ಮಾತುಗಳನ್ನಾಡಿದೆ. ಆ ಮಾತುಗಳೇ ಅಗ್ನಿರೂಪದಿಂದ ನಿನ್ನನ್ನು ದಹಿಸಲು ಸಮರ್ಥವಾದವು. ॥೧೪೨॥

ಈ ವೀರಭದ್ರನು ಮಹಾರುದ್ರಗಣಗಳಿಗೆಲ್ಲಾ ಪ್ರೀತಿಪಾತ್ರನಾಗಿರುವನು. ಅಂತಹವನೊಡನೆ ನೀನು ಗರ್ವದ ಮಾತುಗಳನ್ನಾಡಿದೆ. ಅದರ ಫಲವು ಹೀಗಾಯಿತು. ॥೧೪೩॥

ಎಲೈ ದುಷ್ಟ ದಕ್ಷನೇ, ನಿನಗೆ ಸಹಾಯಮಾಡಿ ಈ ಯೋಗೇಶ್ವರನಾದ ನಾರಾಯಣನು ಮೃತನಾದನಲ್ಲಾ! ॥೧೪೪॥

ಗರ್ವಸ್ಯ ಪರಿಪಾಕೋಽಪಿ ನಾಶಾಯ ಸಮಭೂತ್ತವ ।
ಅಯಂ ಕ್ಷಣೇನ ನಿಹತಸ್ತ್ವದಧ್ವರಸಮಾಗಮಾತ್ ॥೧೪೫॥

ದುರಾಚಾರೇಣ ತರಸಾ ಶಿವನಿಂದಾ ಕೃತಾ ತ್ವಯಾ ।
ತ್ವಯಾ ಯಾಗೋ ವಿನಷ್ಟೋಽಯಂ ತವ ನಾಶೋ ಭವಿಷ್ಯತಿ ॥೧೪೬॥

ಗಣನಾ ತವ ಕುತ್ರೋಽಸ್ತಿ ಗತೇ ನಾರಾಯಣೇಽಧುನಾ ।
ಸರ್ವೇಷಾಮಪಿ ಸಂಪ್ರಾಪ್ತಂ ಮರಣಂ ನಾತ್ರ ಸಂಶಯಃ ॥೧೪೭॥

ಅತೋ ದುರ್ಜನಸಂಸರ್ಗಃ ಪರಿತ್ಯಾಜ್ಯೋ ಮನೀಷಿಭಿಃ ।
ಯಸ್ಮಾದನಿಷ್ಟಮೇತಾವದಧುನಾ ಸಮುಪಾಗತಂ ॥೧೪೮॥

ಅನಿಷ್ಟಾಂಬುಧಿಪಾತಾಯ ಜಾತೋ ದುರ್ಜನಸಂಗಮಃ ।
ಅಹೋ ಮಹದಿದಂ ಕಷ್ಟಮಶಾಂಕರಸಮಾಗಮಃ ॥೧೪೯॥

---

ಗರ್ವದ ಪರಿಪಾಕವು ನಾಶಕ್ಕೇ ಕಾರಣವಾಯಿತು. ನಿನ್ನ ಯಾಗಕ್ಕೆ ಬಂದ ಈತನು ನಿನ್ನ ಗರ್ವದ ವಶದಿಂದ ಕ್ಷಣಕಾಲದಲ್ಲಿ ನಾಶಹೊಂದಿದನಲ್ಲಾ ! ॥೧೪೫॥

ದುಷ್ಟಾಚಾರನೇ, ನೀನು ಹಿಂದೆ ಮುಂದೆ ನೋಡದೆ ಶಿವನಿಂದೆಯನ್ನು ಮಾಡಿದೆ. ಆದುದರಿಂದ ನಿನ್ನ ಯಾಗವು ಕೆಟ್ಟುಹೋಯಿತು. ನೀನೂ ಸದ್ಯದಲ್ಲೇ ನಾಶ ಹೊಂದುವೆ. ॥೧೪೬॥

ನಾರಾಯಣನೇ ಮೃತನಾದಮೇಲೆ ನಿನ್ನ ಪಾಡೇನು. ನೀನು ಲೆಕ್ಕಕ್ಕಿಲ್ಲದವನು. ಈಗ ಎಲ್ಲರಿಗೂ ಮರಣವು ಒದಗಿದೆ. ಇದರಲ್ಲಿ ಸಂದೇಹವಿಲ್ಲ. ॥೧೪೭॥

ಆದುದರಿಂದ ಒಳ್ಳೆಯವರು ದುಷ್ಟರ ಸಹವಾಸವನ್ನು ಬಿಡಬೇಕು. ಏಕೆಂದರೆ ಆ ದುಷ್ಟ ಸಹವಾಸದಿಂದೀಗ ಅನಿಷ್ಟವು ಒದಗಿದೆ. ॥೧೪೮॥

ಕೆಟ್ಟವರ ಸಂಗವು ಅನಿಷ್ಟವೆಂಬ ಸಮುದ್ರದಲ್ಲಿ ಮನುಷ್ಯನನ್ನು ಕೆಡಹುವುದು. ಆಹಾ ! ಶೈವರಲ್ಲದವರ ಸಹವಾಸವು ಮಹಾಕಷ್ಟಕರ. ಎಂತಹ ವಿಪತ್ತು ಈಗ ಒದಗಿತು. ॥೧೪೯॥

ಅನಿಷ್ಟದೌರ್ಭಾಗ್ಯಪರಂಪರಾಣಾಂ
ಅಭಾಗ್ಯದುಃಖಾಬ್ಧಿಪರಂಪರಾಣಾಂ ।
ತತ್ಕಾರಣಂ ಸ್ಯಾದ್ಯದಶಾಂಕರೇಣ
ಸಹಾಭಿಲಾಪಾಸನಭೋಜನಾದಿಃ ॥೧೫೦॥

ಅಶಾಂಕರೇಣ ಪ್ರಣಯೋ ಯದಿ ಸ್ಯಾತ್
ತದಾ ಪರಂ ದುಃಖಪರಂಪರಾಸ್ಯಾತ್ ।
ಸಾ ಕೇನ ವಾ ನಾಶಮುಪೈತಿ ತಸ್ಯಾಃ
ಪ್ರವೃದ್ಧಿಮೇವಾತ್ರ ವದಂತಿ ವೃದ್ಧಾಃ ॥೧೫೧॥

ಅಶಾಂಭವಸಮಾಗಮೇ ಯದಿ ಸುಖಂ ಕ್ಷಣಂ ವಾ ತದಾ
ವಿಷೇಪ್ಯಗಳಿತೇ ಸುಖಂ ಕಿಮಿತಿ ಜೀವನಾಶೋಽಪಿ ನ ।
ಅಶಾಂಕರಪುರಃಸರಾದಪಿ ವದಂತಿ ನೀಚಂ ಜನಾಃ
ಸ ವೃಶ್ಚಿಕರತೋದ್ಭವಃ ಶುನಕರಾಸಭೋತ್ಪಾದಿತಃ ॥೧೫೨॥

---

ಶೈವರಲ್ಲದವರೊಡನೆ ಮಾತನಾಡುವುದು, ಕೂಡುವುದು, ಊಟಮಾಡುವುದು ಇವೆಲ್ಲಾ ಅರಿಷ್ಟ ಮತ್ತು ದಾರಿದ್ರ್ಯ ಇವುಗಳ ಅಭಿವೃದ್ಧಿಗೆ ಕಾರಣವಾಗುವುವು. ॥೧೫೦॥

ಶೈವೇತರರೊಡನೆ ವಿಶ್ವಾಸ ಬೆಳೆಸಿದರೆ ಮೇಲಿಂದ ಮೇಲೆ ವಿಪತ್ತುಗಳೇ ಪ್ರಾಪ್ತವಾಗುವುವು. ಆ ವಿಪತ್ತನ್ನು ನಾಶಮಾಡಲು ಯಾವನೂ ಸಮರ್ಥನಾಗಲಾರನು. ಮತ್ತು ಆ ವಿಪತ್ತು ಹೆಚ್ಚು ಹೆಚ್ಚು ಬೆಳೆಯುತ್ತಲೇ ಹೋಗುವುದೆಂದು ಹಿರಿಯರು ಹೇಳುವರು. ॥೧೫೧॥

ಶೈವನಲ್ಲದವರ ಸಂಗಮದಿಂದ ಸುಖವು ಲಭಿಸುವುದಾದರೆ ವಿಷವು ಏರಿದಾಗ ಸುಖವಾಗಬೇಕು. ವಿಷದಿಂದ ಜೀವಕ್ಕೆ ಧಕ್ಕೆ ತಗಲಲಾರದೆ? ಅಶೈವರ ಎದುರಿಗೆ ನಿಂತು ನೀಚಭಾಷೆಯನ್ನು ಆಡಿದವನೂ ಸಹ ಚೇಳು ಮತ್ತು ನಾಯಿ ಅಥವಾ ಕತ್ತೆಯ ಜನ್ಮದಿಂದ ಹುಟ್ಟಿದವನೆಂದು ತಿಳಿಯಬೇಕು. ॥೧೫೨॥

**ಅಶಾಂಕರಸುಖಂ ಜ್ವಲತ್ವನಲರಾಶಿಮಧ್ಯೇ ಪತತು**
**ಅಮೇಧ್ಯಕುಹರೇ ಪತತ್ವನುದಿನಂ ನ ತದ್ವೀಕ್ಷಣಂ ।**
**ಕದಾಪಿ ಮಮ ಜಾಯತಾಂ ಇತಿ ವದಂತಿ ಧ್ಯಾನಂ ಪರಂ**
**ತ ಏವ ಸುಖರಾಶಯೋಽಪ್ಯಮಿತಪುಣ್ಯಪೂರ್ಣಾರ್ಣವಾಃ ॥೧೫೩॥**

**ಏತಾದೃಶಾಪತ್ಕಾಲೋಽಯಮಶಾಂಕರಸಮಾಗಮಾತ್ ।**
**ಮೇರುವತ್ಪತಿತಃ ಸೋಽಯಂ ಮೃತೋ ನಾರಾಯಣಃ ಸ್ವಯಂ ॥೧೫೪॥**

**ಮುರಕಂಸಾದಯೋ ದೈತ್ಯಾ ಯಚ್ಛೌರ್ಯಶ್ರವಣಾದಪಿ ।**
**ಪಲಾಯಯಂತಿ ತರಸಾ ಸೋಽಯಂ ನಾರಾಯಣೋ ಮೃತಃ ॥೧೫೫॥**

**ಯಸ್ಯ ಶಂಖಧ್ವನಿಂ ಶ್ರುತ್ವಾ ಯಾಂತಿ ದೈತ್ಯಾ ದಿಗಂತರಂ ।**
**ಸೋಽಯಂ ನಾರಾಯಣಸ್ತೇನ ವೀರಭದ್ರೇಣ ಸಂಹತಃ ॥೧೫೬॥**

---

ಅಶೈವರಿಂದ ಉಂಟಾದ ಸುಖವು ಅಭಿವೃದ್ಧವಾಗಲಿ, ಅಥವಾ ಅಗ್ನಿಮಧ್ಯದಲ್ಲಿ ಬೀಳಲಿ ಅಥವಾ ಅಮೇಧ್ಯ ಬಿಲದಲ್ಲಿ ಬೇಕಾದರೂ ಸೇರಲಿ. ಆ ಕಡೆ ನೋಡುವುದು ಸಹಾ ನಮಗೆ ಬೇಡ. ಯಾವಾಗಲೂ ಅವರ ಸಂಪರ್ಕವು ನಮಗಾಗದಿರಲಿ ಎಂದು ಹೇಳುವವರು ಧನ್ಯರು. ಅವರೇ ಅಮಿತ ಪುಣ್ಯರಾಶಿಗಳಿಗೆ ಸಮುದ್ರದಂತಿರುವವರು. ||೧೫೪||

ಅಂಥ ಅಶೈವರ ಸಹವಾಸದಿಂದ ಇಂತಹ ಆಪತ್ಕಾಲವು ಸಂಪ್ರಾಪ್ತವಾಯಿತು. ಆ ನಾರಾಯಣನು ಮೇರುಪರ್ವತದ ಹಾಗೆ ಬಿದ್ದು ಮೃತಿಯನ್ನು ಹೊಂದಿದನು. ||೧೫೪||

ಮುರ, ಕಂಸನೇ ಮೊದಲಾದ ರಾಕ್ಷಸರು ಯಾವನ ಶೌರ್ಯವನ್ನು ಕೇಳಿದೊಡನೆಯೇ ಓಡಿಹೋಗುತ್ತಿದ್ದರೋ ಅಂತಹ ನಾರಾಯಣನು ಈಗ ಮೃತಪಟ್ಟನಲ್ಲ! ||೧೫೫||

ಯಾವನ ಶಂಖಧ್ವನಿಯನ್ನು ಕೇಳಿದೊಡನೆ ರಕ್ಕಸರೆಲ್ಲಾ ಓಡಿಹೋಗುತ್ತಿದ್ದರೋ, ಅಂತಹ ನಾರಾಯಣನನ್ನು ಈ ವೀರಭದ್ರನು ಕೊಂದುಬಿಟ್ಟನಲ್ಲಾ! ||೧೫೬||

ಗೋವರ್ಧನಾಚಲೋ ಯೇನ ಕರಾಗ್ರೇಣ ಧೃತಃ ಪುರಾ ।
ಸೋಽಯಂ ನಾರಾಯಣಸ್ತೇನ ವೀರಭದ್ರೇಣ ಸಂಹತಃ ॥೧೫೭॥

ರಾವಣಸ್ತಾಡಿತೋ ಯೇನ ಸರ್ವಲೋಕೈಕರಾವಣಃ ।
ಸೋಽಯಂ ನಾರಾಯಣಸ್ತೇನ ವೀರಭದ್ರೇಣ ಸಂಹತಃ ॥೧೫೮॥

ಹಿರಣ್ಯಾಕ್ಷೋ ಹತೋ ಯೇನ ಹಿರಣ್ಯಕಶಿಪುಸ್ತಥಾ ।
ಸೋಽಯಂ ನಾರಾಯಣಸ್ತೇನ ವೀರಭದ್ರೇಣ ಸಂಹತಃ ॥೧೫೯॥

ಏವಂ ದುಃಖೇನ ಬಹುಧಾ ಪ್ರಲಪಂತಂ ಚತುರ್ಮುಖಂ ।
ಬಧ್ವಾ ಪಾಶೇನ ಬಹುಧಾ ವೀರೇಶಃ ಪ್ರಾಹ ಸಸ್ಮಿತಃ ॥೧೬೦॥

ದುಷ್ಟಸ್ತ್ವಷ್ಟಾತಿನಷ್ಟೋಽಪಿ ಭ್ರಷ್ಟೋಽಪಿ ಸಂಯುತಃ ಪುರಾ ।
ಶಿವನಿಂದಾವಿಷಂ ಪೀತ್ವಾ ಕ್ಷಣೇನ ಸಹ ಸಂಯುತಃ ॥೧೬೧॥

---

ಗೋವರ್ಧನಪರ್ವತವನ್ನು ಈ ಹಿಂದೆ ಕೈಬೆರಳಿನ ಕೊನೆಯಿಂದ ಎತ್ತಿ ಹಿಡಿದ ಕೃಷ್ಣರೂಪಿಯಾದ ಆ ನಾರಾಯಣನನ್ನು ಈಗ ವೀರಭದ್ರನು ಸಂಹರಿಸಿದನು. ॥೧೫೭॥

ಹಿಂದೆ ಎಲ್ಲಾ ಲೋಕಗಳನ್ನೂ ಅಳಿಸುತ್ತಿದ್ದ ರಾವಣನನ್ನು ಕೊಂದ ನಾರಾಯಣನು ಈಗ ಈ ವೀರಭದ್ರನಿಂದ ಕೊಲ್ಲಲ್ಪಟ್ಟನೇ! ॥೧೫೮॥

ಪೂರ್ವದಲ್ಲಿ ಹಿರಣ್ಯಾಕ್ಷ, ಹಿರಣ್ಯಕಶಿಪು ಇವರನ್ನು ವರಾಹ, ಮತ್ತು ನಾರಸಿಂಹಾವತಾರಗಳಿಂದ ಸಂಹರಿಸಿದ ವಿಷ್ಣುವು ಈಗ ಆ ವೀರಭದ್ರನಿಂದ ಮೃತಿಯನ್ನು ಹೊಂದಿದನು. ॥೧೫೯॥

ಹೀಗೆ ಬಹಳ ದುಃಖಪಡುತ್ತಿರುವ ಬ್ರಹ್ಮನನ್ನು ಆ ವೀರಭದ್ರನು ಪಾಶದಿಂದ ಕಟ್ಟಿ ನಸುನಗುತ್ತಾ ಹೀಗೆ ಹೇಳಿದನು. ॥೧೬೦॥

ಎಲೈ ಬ್ರಹ್ಮನೇ, ಆ ದುಷ್ಟನಾದ ವಿಷ್ಣುವು ಯುದ್ಧದಲ್ಲಿ ಮೊದಲೊಂದು ಬಾರಿ ಸೋತರೂ ಮತ್ತೆ ಶಿವನಿಂದೆಯ ವಿಷವನ್ನು ಕುಡಿದು ಈಗ ಮೃತಪಟ್ಟನು. ॥೧೬೧॥

ರೇ ! ರೇ ! ದುರ್ಭಗ ದುಷ್ಟಾತ್ಮನ್ ಶಿಪಿವಿಷ್ಟೋಽಪಿ ವಿಸ್ಮೃತಃ ।
ಅಷ್ಟಮೂರ್ತಿಃ ಸ್ವಕಷ್ಟಾನಾಂ ಸರ್ವಥಾ ವಿನಿವಾರಕಃ ॥೧೬೨॥

ತವ ಶಿಕ್ಷಾ ತಥಾ ಕಾರ್ಯಾ ದಕ್ಷಃ ಕಿಂ ತವ ಮೋಚಕಃ ।
ಸೋಽಪಿ ಕೋ ವಾ ವರಾಕಸ್ತೇ ಮೋಚಕತ್ವೇನ ನಿಶ್ಚಿತಃ ॥೧೬೩॥

ತವಾಪಿ ಕಿಂ ಭ್ರಮೋ ವೃತ್ತೋ ದಕ್ಷಃ ಶಂಕರನಿಂದಕಃ ।
ಯೇನ ಮಿತ್ರಮಭೂಚ್ಛತ್ರುಮಿತ್ರಕಾರ್ಯಕರಃ ಕಥಂ ॥೧೬೪॥

ಇತ್ಯುಕ್ತ್ವಸ್ತಚ್ಛಿರಚ್ಛೇದಂ ಚಕಾರ ಕ್ಷಣಮಾತ್ರತಃ ।
ತತೋ ಹಾಹಾ ಕೃತಂ ಸರ್ವೇ ಸುರಸೈನ್ಯಂ ಪರಾಹತಂ ॥೧೬೫॥

ತತೋ ದಕ್ಷೋ ವಿನಿಹತಸ್ತದನ್ಯೇ ನಿಹತಾಸ್ತಥಾ ।
ಅಶಾಂಕರಾಶ್ಚ ಮುನಯಃ ಶಿವನಿಂದಾಗ್ನಿಸಂಹತಾಃ ॥೧೬೬॥

---

ಎಲೈ ಮೂರ್ಖನೇ, ಸದಾಶಿವನೂ ಅಷ್ಟಮೂರ್ತಿಯೂ ಆದ ಪಶುಪತಿಯನ್ನು ಮರೆತೆಯಾ ! ಆ ಶಿವನು ಎಲ್ಲಾ ಕಷ್ಟಗಳನ್ನೂ ನಾಶಮಾಡತಕ್ಕವನಲ್ಲವೆ ? ||೧೬೨||

ನಾರಾಯಣನಿಗೆ ಮಾಡಿದ ಶಿಕ್ಷೆಯನ್ನು ನಿನಗೆ ಮಾಡಬೇಕು. ನಿನ್ನನ್ನು ಬಿಡಿಸಿಕೊಳ್ಳಲು ದಕ್ಷನಿರುವನೆಂದು ತಿಳಿದಿರುವೆ. ಆ ಬಡಪಾಯಿಯಾದ ದಕ್ಷನು ಕೇವಲ ದುರ್ಬಲನೆಂದು ನಿಶ್ಚೈಸಿಲ್ಲವೇ ? ||೧೬೩||

ಶಂಕರನನ್ನು ನಿಂದಿಸಿದ ದಕ್ಷನು ಬಿಡಿಸಿಕೊಳ್ಳುವನೆಂದು ನೀನೂ ಕೂಡ ಭ್ರಮಿಸಿರುವೆಯಲ್ಲ. ನೀನು ಶತ್ರುವನ್ನು ಮಿತ್ರನೆಂದು ತಿಳಿದ ಮೇಲೆ ಶತ್ರುಮಿತ್ರ ಕಾರ್ಯವು ನಿರ್ವಾಹವಾಗುವುದೆಂತು ? ||೧೬೪||

ಹೀಗೆ ಹೇಳಿ ಆ ಬ್ರಹ್ಮನ ಶಿರಸ್ಸನ್ನು ವೀರಭದ್ರನು ಕತ್ತರಿಸಿದನು. ಬಳಿಕ ದೇವತೆಗಳ ಸೈನ್ಯದಲ್ಲಿ ಹಾಹಾಕಾರವೆದ್ದಿತು. ಗಣಗಳು ಸುರಸೈನ್ಯವನ್ನು ಧ್ವಂಸ ಮಾಡಿದರು. ||೧೬೫||

ಬಳಿಕ ದಕ್ಷನನ್ನೂ ಕೊಂದರು. ಹಾಗೆ ಉಳಿದ ಎಲ್ಲಾ ಸೈನಿಕರನ್ನೂ ಧ್ವಂಸಮಾಡಿದರು. ಆಮೇಲೆ ಶಿವನಿಂದಕರಾದ ಋಷಿಗಳೂ ನಾಶವಾದರು. ||೧೬೬||

ಉತ್ಪಾತಾಶ್ಚ ತತಃ ಶಾಂತಾ ಶಾಂತಾ ದಿಗ್ಜನಿತಸ್ವನಾಃ ।
ಪ್ರಸನ್ನಾಶ್ಚ ದಿಶಃ ಸರ್ವಾ ಗಂಧರ್ವಾ ಲಲಿತಂ ಜಗುಃ ॥೧೬೭॥

ದೇವದುಂದುಭಯೋ ನೇದುಃ ಪುಷ್ಪವೃಷ್ಟಿಶ್ಚ ಖಾಚ್ಚ್ಯುತಾಃ ।
ತತೋ ಯಯೌ ಮಹಾದೇವಂ ವೀರಭದ್ರೋ ಮಹಾಬಲಃ ॥೧೬೮॥

ತತಃ ಪ್ರಣಮ್ಯ ಶಿರಸಾ ವೃತ್ತಾಂತಂ ಚ ನಿವೇದಿತಂ ।
ಕೃತಾಂಜಲಿಪುಟೋ ಭೂತ್ವಾ ಕೃತಕಾರ್ಯಃ ಪುರಃ ಸ್ಥಿತಃ ॥೧೬೯॥

ತತಃ ಶಿವಾಯ್ಯೈ ತತ್ಸರ್ವಂ ವಿನಿವೇದ್ಯ ಸದಾಶಿವಃ ।
ತಾಮಾಲಿಂಗ್ಯ ಮುದಂ ಪ್ರಾಪ ಪರಮಾನಂದಸಾಗರಃ ॥೧೭೦॥

---

ಆಮೇಲೆ ಅಪಶಕುನಗಳು ಮಾಯವಾದುವು. ದಿಕ್ಕುಗಳು ಶಾಂತವಾದುವು. ದಿಕ್ಕುಗಳಲ್ಲಿ ಜಯಶಬ್ದವು ತುಂಬಿತು. ಆ ದಿಕ್ಕುಗಳೆಲ್ಲಾ ಸ್ವಚ್ಛವಾದವು. ಗಂಧರ್ವರೂ ಕೂಡ ಸಂಗೀತವನ್ನು ಹಾಡಿದರು. ||೧೬೭||

ದೇವತೆಗಳು ದುಂದುಭಿಗಳನ್ನು ಮೊಳಗಿಸಿ ಆನಂದಪಟ್ಟರು. ಹೂಮಳೆ ಸುರಿಯಿತು. ಬಳಿಕ ಆ ಮಹಾಬಲಶಾಲಿಯಾದ ವೀರಭದ್ರನು ಶಿವನ ಸಮೀಪಕ್ಕೆ ನಡೆತಂದನು. ||೧೬೮||

ಹಾಗೆ ಬಂದ ವೀರಭದ್ರನು ಶಿವನಿಗೆ ತಲೆಬಾಗಿ ಎಲ್ಲಾ ಸಮಾಚಾರನ್ನೂ ವಿಜ್ಞಾಪಿಸಿದನು. ಕೈಜೋಡಿಸಿಕೊಂಡು ಸ್ವಾಮಿಯು ಹೇಳಿದ ಕೆಲಸವನ್ನು ನೆರವೇರಿಸಿದೆನೆಂದು ಹೇಳಿ ತಾನು ಶಂಕರನ ಮುಂದೆ ನಿಂತುಕೊಂಡನು. ||೧೬೯||

ಬಳಿಕ ಶಿವನು ಆ ಸಮಾಚಾರವನ್ನು ಪಾರ್ವತಿಗೆ ತಿಳಿಸಿ ಆಕೆಯನ್ನು ಆಲಿಂಗಿಸಿಕೊಂಡು ಹೆಚ್ಚು ಸಂತೋಷವನ್ನು ಹೊಂದಿದನು. ||೧೭೦||

ಲೋಕದಲ್ಲಿ ಶಿವನಿಂದಕನ ಜನ್ಮವು ಕೆಟ್ಟುದು. ಅದರಿಂದ ಅಸಾಧ್ಯವಾದ ಯಾತನೆಯೂ, ದಾರಿದ್ರ್ಯವೂ, ನಿತ್ಯ ತೊಂದರೆಗಳೂ ಸಂಭವಿಸುವುವು. ಪ್ರತಿದಿನವೂ ಆಪತ್ತು ಮತ್ತೆ ಮತ್ತೆ ಒದಗುವುದು. ಆದರೆ ಕೇವಲ ಶಿವಪೂಜೆಯಲ್ಲಿ ಆಸಕ್ತರಾದ ಸತ್ಪುರುಷರು ಸಿಕ್ಕುವುದು ದುರ್ಲಭ. ||೧೭೧||

ಲೋಕೇ ಶಂಕರನಿಂದಕಸ್ಯ ಕುಜನಿಃ ಸಾ ದಾರುಣಾ ಯಾತನಾ
ದೌರ್ಭಾಗ್ಯಂ ಸಕಲಾರ್ತಿರೋಗನಿವಹಃ ಕ್ಲೇಶಾಪಕೀರ್ತ್ಯಾದಯಃ ।
ಆಪತ್ಪಾಪಪರಂಪರಾಪ್ಯನುದಿನಂ ಸಂಭಾವಿತಾ ಸಾ ತತಃ
ಸಂತಃ ಸಂತಿ ಶಿವಾರ್ಚನೈಕನಿರತಾ ತೇ ದುರ್ಲಭಾಃ ಶಾಂಭವಾಃ॥೧೭೦॥

ರೇ ರೇ ಶರೀರ ಹರ ಸಾದರ ನಿರ್ವಿಕಾರ
ಹಾರೋಪಚಾರಕರಣಪ್ರವಣಪ್ರಣಾಮಾಃ ।
ತುಭ್ಯಂ ನ ಲಭ್ಯಮುಭಯೋರಪಿ ಸನ್ನಿಧಾನಂ
ಯತ್ರ ನ್ಮನಃ ಸ್ಮರಹರಸ್ಮರಣಪ್ರವೀಣಂ ॥೧೭೧॥

ಇತಿ ಶ್ರೀಶಿವರಹಸ್ಯೇ ತೃತೀಯಾಂಶೇ ಹರಾಖ್ಯೇ ಪೂರ್ವಾರ್ಧೇ
ದಕ್ಷಾಧ್ವರ ಪ್ರಶಂಸಾಯಾಂ ವೀರಭದ್ರೋತ್ಪತ್ತಿ ವಿಷ್ಣ್ವಾದಿಸುರಯುದ್ಧ
ವರ್ಣನಂ ನಾಮ ಏಕೋನಚತ್ವಾರಿಂಶೋಽಧ್ಯಾಯಃ

---

ಎಲೈ ಶರೀರವೇ, ನಿರ್ವಿಕಾರಸ್ವರೂಪನಾದ ಶಿವನ ಪೂಜೆ, ಉಪಚಾರ, ನಮಸ್ಕಾರ ಇವುಗಳು ನಿನಗೆ ಲಭಿಸುವುದು ಕಷ್ಟ. ಯಾವನ ಮನಸ್ಸು ಶಿವಸ್ಮರಣದಲ್ಲಿ ಆಸಕ್ತವಾಗಿದೆಯೋ ಅಂತಹವನಿಗೆ ಇಹಪರಗಳಲ್ಲಿ ಸೌಖ್ಯವು ಲಭಿಸಬೇಕಲ್ಲದೆ ಇತರರಿಗೆ ಎಂದೂ ದೊರೆಯಲಾರದು. ಆದುದರಿಂದ ಎಲೈ ಮನಸ್ಸೇ! ನೀನು ಸರ್ವದಾ ಶಂಕರನನ್ನು ಭಜಿಸುತ್ತಿರು. ಎಂದು ನಾರದರು ಋಷಿಗಳಿಗೆ ಉಪದೇಶಿಸಿದರು. ॥೧೭೧॥

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಭಾಗದ ಪೂರ್ವಾರ್ಧದಲ್ಲಿ
ದಕ್ಷನ ಯಾಗವರ್ಣನಾ ಪ್ರಶಂಸೆಯೊಳಗೆ ವೀರಭದ್ರನ ಉತ್ಪತ್ತಿ ಮತ್ತು
ವಿಷ್ಣುವೇ ಮೊದಲಾದ ದೇವತೆಗಳೊಡನೆ ಯುದ್ಧ ಇವುಗಳ
ವರ್ಣನೆಯೆಂಬ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಚತ್ವಾರಿಂಶೋಽಧ್ಯಾಯಃ

|| ನಾರದ ಉವಾಚ ||

**ಇತಿ ನಾರಾಯಣಾದೀನಾಂ ಲಯಂ ದಕ್ಷಾಧ್ವರಸ್ಯ ಚ ।**
**ಶ್ರುತ್ವಾ ವಿಸ್ಮಯಮಾಪನ್ನಾಃ ಪ್ರಾಹುರ್ಗೌತಮಮಾಸ್ತಿಕಾಃ ॥೧॥**

**ಸನತ್ಕುಮಾರಃ ಸನಕೋ ವಸಿಷ್ಠಶ್ಚ ಸನಂದನಃ ।**
**ವಾಲಖಿಲ್ಯಾದಿಭಿಃ ಸಾಕಂ ಪ್ರಾಹುರ್ಗೌತಮಮಾಸ್ತಿಕಂ ॥೨॥**

---

## ನಲವತ್ತನೆಯ ಅಧ್ಯಾಯ

ಹೀಗೆ ನಾರಾಯಣನೇ ಮೊದಲಾದವರ ಮತ್ತೂ ದಕ್ಷಯಜ್ಞದ ನಾಶವನ್ನು ಕೇಳಿ ಎಲ್ಲಾ ಆಸ್ತಿಕರಾದ ಋಷಿಗಳೂ ಆಶ್ಚರ್ಯಪಟ್ಟು ಗೌತಮನನ್ನು ಕುರಿತು ಹೀಗೆಂದರು; ಎಂದು ನಾರದಮಹರ್ಷಿಯು ಮುಂದಿನ ಕಥೆಯನ್ನು ವಿವರಿಸಲಾರಂಭಿಸಿದನು. ||೧||

ಸನತ್ಕುಮಾರ, ಸನಕ, ವಸಿಷ್ಠ, ಸನಂದನ, ವಾಲಖಿಲ್ಯ ಮೊದಲಾದವರೊಡನೆ ಕೂಡಿ ಆ ಋಷಿಗಳು ಆಸ್ತಿಕನಾದ ಗೌತಮನನ್ನು ಕುರಿತು ಹೀಗೆ ಪ್ರಶ್ನಿಸಿದರು. ||೨||

ನಾರಾಯಣಾದಯಃ ಸರ್ವೇಽಪ್ಯಧಿಕಾರಪರಾಯಣಾಃ ।
ತೇಷಾಂ ನ ರಕ್ಷಣಂ ವೃತ್ತಂ ಮರಣಾವಸರೇ ಸತಿ ॥೩॥

ವೃತ್ತಮೇವ ಮರಣಂ ಚ ಸುರಾಣಾಂ
ಶೂಲಪಾಣಿಕರುಣಾವಿರಹೇಣ ।
ರಕ್ಷಣಂ ಚ ತದಧೀನಮತಃ ಸ್ಯಾತ್
ಜನ್ಮ ತಾನಿ ಸಕಲಾನಿ ಯತಃ ಸ್ಯುಃ ॥೪॥

ಶಿವನಿಂದಾನಲೇನೈವ ತೇಷಾಂ ನಾಶೇ ಪುನಃ ಕುತಃ ।
ವೀರಭದ್ರಃ ಸಮುತ್ಪನ್ನಸ್ತಸ್ಯ ಕೃತ್ಯಂ ಚ ಕಿಂ ವದ ॥೫॥

ಕಿಂ ಚಾಧಿಕಾರೇ ಪೂರ್ವಸ್ಮಿನ್ ನಿಯುಕ್ತಾಃ ಕೇ ಪುನಸ್ತತಃ ।
ತತ್ಸರ್ವಂ ವದ ಯತ್ನೇನ ವಿಚಾರ್ಯೈವ ಪುನಃ ಪುನಃ ॥೬॥

---

ನಾರಾಯಣನೇ ಮೊದಲಾದವರು ಅಧಿಕಾರವನ್ನು ನಿರ್ವಹಿಸತಕ್ಕವರು. ಅವರಿಗೆ ಮರಣಕಾಲವು ಒದಗಿದರೆ ರಕ್ಷಣಮಾಡುವುದು ಸಾಧ್ಯವಲ್ಲವೆಂದು ಈಗ ವೃತ್ತಾಂತವನ್ನು ತಿಳಿದೆವು. ॥೩॥

ಶ್ರೀ ಶಂಕರನ ಅನುಗ್ರಹವಿಲ್ಲದುದರಿಂದ ದೇವತೆಗಳಿಗೆ ಮರಣವು ಉಂಟಾಯಿತು. ಸಮಸ್ತ ಜನ್ಮಗಳ ಉತ್ಪತ್ತಿಗೂ ಶ್ರೀ ಶಂಕರನೇ ಕಾರಣನಾದುದರಿಂದ ಆ ದೇವತೆಗಳನ್ನು ರಕ್ಷಿಸುವುದೂ ಆತನಿಗೇ ಸಲ್ಲುವುದು. ॥೪॥

ಶಿವನಿಂದೆಯೆಂಬ ಅಗ್ನಿಯಿಂದಲೇ ಆ ದೇವತೆಗಳ ನಾಶವಾಗುವುದಾದರೆ ಆ ವೀರಭದ್ರನು ಏತಕ್ಕೆ ಹುಟ್ಟಿದನು? ಅವನಿಗೆ ಇದ್ದ ಕೆಲಸ ಅಥವಾ ಅಧಿಕಾರ ಯಾವುದು? ಎಂಬುದನ್ನು ಹೇಳು. ॥೫॥

ಮತ್ತು ಹಿಂದಿನ ಅಧಿಕಾರದಲ್ಲಿ ಯಾರು ನಿಯುಕ್ತರಾಗಿದ್ದರು? ಪುನಃ ಎಲ್ಲಾ ವಿಚಾರವನ್ನೂ ಸ್ವಲ್ಪ ಶ್ರಮವಹಿಸಿಯಾದರೂ ಹೇಳಬೇಕು ಎಂದು ಋಷಿಗಳು ಗೌತಮನನ್ನು ಪದೇ ಪದೇ ಬೇಡಿಕೊಂಡರು. ॥೬॥

|| ಗೌತಮ ಉವಾಚ ||

ಶಿವನಿಂದಾನಲಜ್ವಾಲಾಕುಲಸಂಕುಲಿತಾಃ ಸುರಾಃ ।
ತತಃ ಪರಂ ವೀರಭದ್ರೋ ನಿಮಿತ್ತಮಪಿ ತಲ್ಲಯೇ ॥೭॥

ಉತ್ಪತ್ತಿಸ್ಥಿತಿಸಂಹಾರಾನ್ ಕರೋತಿ ಚ ಮಹೇಶ್ವರಃ ।
ನಿಮಿತ್ತಮಾತ್ರಂ ಸಂಪಾದ್ಯ ಕಿಂಚಿತ್ ಕಿಂಚಿತ್ ಕ್ವಚಿತ್ ಕ್ವಚಿತ್॥೮॥

ಉದುಂಬರಫಲಾಂತರಸ್ಥಗಿತಜಂತುಸಂತಾನವತ್
ಪ್ರಯಾತಿ ಲಯಮಿಂದಿರಾಸಹಿತ ಏವ ನಾರಾಯಣಃ ।
ಜರಾಮರಣಜನ್ಮನಾಮನುದಿನಂ ಪ್ರಸಂಗಾ ಭವೇತ್
ಅನಂಗಹರನಿಂದಯಾ ಪರಮಿತಿ ಪ್ರಮಾ ಮೇ ದ್ವಿಜಾಃ ॥೧೦॥

ಉದುಂಬರತರುರ್ಯದಾ ದವಕುಲ್ಯೈರಭೂದ್ವ್ಯಾಕುಲೋ
ಫಲೈರಪಿ ಸದಾ ಸಕೃತ್ಫಲಕುಲಕ್ಷಯೇ ತದ್ಗತಾಃ ।
ಪ್ರಯಾಂತಿ ಮಶಕಾಃ ಪರಂ ಮರಣಮೇವ ತದ್ವತ್ಸುರಾಃ
ಶಿವಾಪತಿವಿನಿಂದಯಾ ಖಲು ಲಯಂ ಪ್ರಯಾಂತ್ಯನ್ವಹಂ ॥೧೧॥

---

ಆಗ ಗೌತಮನು ಕಥೆಯನ್ನು ಹೀಗೆ ಮುಂದುವರಿಸಿದನು. "ಎಲೈ ಋಷಿ ವರ್ಯರೇ, ದೇವತೆಗಳೆಲ್ಲರೂ ಮೊದಲೇ ಶಿವನಿಂದೆಯಿಂದ ದಗ್ಧರಾಗಿದ್ದರು. ಆದರೆ ಆಮೇಲೆ ವೀರಭದ್ರನು ಅವರ ಮೃತಿಗೆ ನೆಪಮಾತ್ರ ಕಾರಣನಾದನು. ||೭||

ಈಶ್ವರನು ತಾನಾಗಿಯೇ ಉತ್ಪತ್ತಿ, ಸ್ಥಿತಿ, ಲಯ ಇವುಗಳನ್ನು ಮಾಡುತ್ತಾನೆ. ಆದರೂ ಕೆಲವು ಕಡೆ ಎಲ್ಲೆಲ್ಲೊ ಒಬ್ಬೊಬ್ಬನು ನೆಪಮಾತ್ರ ಲಯಾದಿಗಳಿಗೆ ಕಾರಣನಾಗುವನು. ಅಷ್ಟೇ. ||೮||

ಅತ್ತಿಹಣ್ಣಿನೊಳಗಡೆ ಇರುವ ಹುಳುಗಳ ಹಾಗೆ ನಾರಾಯಣನು ಲಕ್ಷ್ಮಿ ಯೊಂದಿಗೆ ಲಯವನ್ನು ಹೊಂದುವನು. ಶ್ರೀ ಸ್ಮರದಾಹಕನಾದ ಶಿವನ ನಿಂದೆಯಿಂದ ಪ್ರತಿದಿನವೂ ವಾರ್ಧಕ್ಯ, ಮರಣ, ಹುಟ್ಟುಗಳು ಸಂಭವಿಸುವುವು ಎಂದು ನನಗೆ ನಂಬಿಕೆ ಇದೆ. ||೧೦||

ಅತ್ತಿಯ ಮರಕ್ಕೆ ಬೆಂಕಿ ಹಿಡಿದೊಡನೆಯೇ ಅದರ ಹಣ್ಣು ಕಾಯಿಗಳೂ ಹೇಗೆ ನಾಶಹೊಂದುವುವೋ, ಹಾಗೆಯೇ ಬ್ರಹ್ಮಾದಿಗಳಿಗೆ ತೊಂದರೆ ಬಂದೊಡನೆಯೇ

ಕಃ ಶಂಕರದ್ವೇಷವಿಷಾಣಿ ಪೀತ್ವಾ
ಪುನಃ ಪುನರ್ಮೃತ್ಯುವಶಂ ನ ಯಾತಿ ।
ನ ಜಾತು ಜಾನಾತಿ ವಿವೇಕಹೀನೋ
ದೀನೋ ಮಹಾದೇವಮಹಾಪ್ರಭಾವಂ ॥೧೨॥

ಮತ್ವಾ ಕಿಲಾನ್ಯಾಮರತುಲ್ಯಮೇವ
ಮಾರೋ ಮಹಾದೇವಮಹಾಪ್ರಮೋಹೈಃ ।
ಪತಂಗವತ್ಪ್ರಾಪ ಸ ಚಿತ್ರಭಾನು
ಜ್ವಾಲಾಕುಲೋ ವ್ಯಾಕುಲ ಏವ ನಾಶಂ ॥೧೩॥

ತಸ್ಮಾನ್ಮಹೇಶನಿಂದಾಗ್ನೌ ಸರ್ವೇ ನಾರಾಯಣಾದಯಃ ।
ಪತಿತಾಸ್ತೇ ಮೃತಾಸ್ತೇಷಾಂ ಶಿವನಿಂದಾಪರಂ ವಿಷಂ ॥೧೪॥
ತತಃ ಪರಂ ಸತ್ಯಲೋಕೇ ವೈಕುಂಠೇ ಸ್ವರ್ಗಮಂಡಲೇ ।
ಸ್ವನಿರ್ಮಿತೇ ರಕ್ಷಣಾಯ ಸ್ಥಾಪಯಾಮಾಸ ತಾನ್ ಗಣಾನ್ ॥೧೫॥

---

ದೇವತೆಗಳ ನಾಶವು ಆಗುವುದು. ಮತ್ತು ಸೊಳ್ಳೆಗಳು ಒಂದೇ ಒಂದು ಕ್ಷಣದೊಳಗೆ ನಾಶಹೊಂದುವ ಹಾಗೆ ಸುರರೂ ಸಹ ಶ್ರೀ ಪರಮೇಶ್ವರನ ನಿಂದೆಯಿಂದ ಏಕಕಾಲದಲ್ಲಿ ನಿರ್ನಾಮಹೊಂದುವರು. ॥೧೧॥

ಯಾವನು ತಾನೇ ಶಂಕರನನ್ನು ದ್ವೇಷಿಸಿ ಆತನ ವೈರವೆಂಬ ವಿಷವನ್ನು ಕುಡಿದು ಮೃತ್ಯುವಿಗೆ ಅಧೀನನಾಗುವುದಿಲ್ಲ? ಬುದ್ಧಿಯಿಲ್ಲದ ದೀನನು ಮಹಾದೇವನ ಮಾಹಾತ್ಮ್ಯವನ್ನು ಎಂದೂ ತಿಳಿಯಲಾರನು. ॥೧೨॥

ಮನ್ಮಥನು ಮಹಾದೇವನನ್ನು ಇತರ ದೇವತೆಗಳಂತೆ ಅಜ್ಞಾನದಿಂದ ತಿಳಿದು ಆ ಶಿವನ ಪ್ರಭಾವವೆಂಬ ಅಗ್ನಿಜ್ವಾಲೆಗೆ ಸಿಕ್ಕಿ ಪತಂಗದ ಹುಳುವಿನ ಹಾಗೆ ಸುಡಲ್ಪಟ್ಟನು. ॥೧೩॥

ಆದುದರಿಂದ ನಾರಾಯಣಾದಿಗಳು ಶಿವನಿಂದೆಯೆಂಬ ಅಗ್ನಿಗೆ ಬಿದ್ದು ಮೃತಪಟ್ಟರು. ಎಲ್ಲದಕ್ಕಿಂತಲೂ ಶಿವನಿಂದೆಯಂತಹ ವಿಷವು ಬೇರೆ ಇಲ್ಲ. ॥೧೪॥

ಬಳಿಕ ಶಿವನು ಪುನಃ ತಾನು ಸೃಷ್ಟಿಮಾಡಿದ ವೈಕುಂಠ, ಸತ್ಯಲೋಕ, ಸ್ವರ್ಗಲೋಕ ಇವುಗಳ ರಕ್ಷಣೆಗಾಗಿ ಆಯಾಯಾಗಣಗಳನ್ನು ನೇಮಿಸಿದನು. ॥೧೫॥

ಚಿರಕಾಲಂ ಗಣಾಸ್ಸ್ಥಿತ್ವಾ ತತ್ರ ತತ್ರ ಯಥಾಕ್ರಮಂ ।
ವಿಷಾದೇನೈಕದಾ ಸರ್ವೇ ಮಿಲಿತಾಃ ಶಿವಮಂದಿರೇ ॥೧೬॥

ತದಾ ಸ್ವಸ್ವವಿಷಾದಾನಾಂ ಕೃತ್ವಾಽನ್ಯೋಽನ್ಯಂ ಪ್ರಕಾಶನಂ ।
ಜಗ್ಮುಃ ಕೈಲಾಸನಿಲಯಂ ಶಿವಧ್ಯಾನಪುರಃಸರಂ ॥೧೭॥

ದದೃಶುರ್ನಂದಿಕೇಶಂ ತೇ ಕೈಲಾಸದ್ವಾರಮಂಟಪೇ ।
ದೃಷ್ಟ್ವಾ ತೇ ವಿನಯಾನ್ನತ್ವಾ ಕೃತಾಂಜಲಿಪುಟಾಸ್ಸ್ಥಿತಾಃ ॥೧೮॥

ತಾನುವಾಚ ಸ ನಂದೀಶಃ ಕಿಮಾಗತಮಿಹೇತ್ಯಪಿ ।
ಯತ್ರ ಯತ್ರ ಸ್ಥಿತಂ ಪೂರ್ವಂ ತತ್ತ್ಯಾಗೋಽನುಚಿತಃ ಖಲು ॥೧೯॥

॥ ಗಣಾ ಊಚುಃ ॥

ತಪ್ತಂ ತಪಃ ಪುರಾ ಘೋರಂ ತೇನ ಪ್ರೀತಃ ಸದಾಶಿವಃ ।
ಗಾಣಾಪತ್ಯಂ ದದೌ ತಸ್ಯ ಫಲಂ ಶಂಕರಪೂಜನಂ ॥೨೦॥

---

ಅಲ್ಲಿ ಬಹಳ ಕಾಲದ ವರೆಗೂ ಆ ಗಣಗಳು ಶಿವನ ಆಜ್ಞೆಯಂತೆ ಅಲ್ಲಿಯೇ ಇದ್ದು ಒಂದುಸಲ ಶಂಕರದೇವಾಲಯದಲ್ಲಿ ದುಃಖದಿಂದ ಎಲ್ಲಾ ಒಟ್ಟಿಗೆ ಸೇರಿದರು. ॥೧೬॥

ಆಗ ಎಲ್ಲರೂ ತಮ್ಮ ತಮ್ಮ ದುಃಖಗಳನ್ನು ತಿಳಿಯಪಡಿಸುತ್ತಾ ಶಿವನನ್ನು ಧ್ಯಾನಮಾಡುತ್ತಾ ಕೈಲಾಸದಲ್ಲಿರುವ ಶಿವನಲ್ಲಿಗೆ ಹೋದರು. ॥೧೭॥

ಕೈಲಾಸದ ಹೆಬ್ಬಾಗಿಲಿನ ಮಂಟಪದಲ್ಲಿ ಕುಳಿತುಕೊಂಡಿರುವ ನಂದಿಕೇಶ್ವರ ನನ್ನು ನೋಡಿ ಅವರು ವಿನಯದಿಂದ ಕೈಮುಗಿದುಕೊಂಡು ನಿಂತರು. ॥೧೮॥

ಅವರನ್ನು ಕುರಿತು ನಂದಿಕೇಶ್ವರನು, ಎಲೈ ಗಣಗಳಿರಾ, ನೀವು ಇಲ್ಲಿಗೆ ಬರುವುದು ಉಚಿತವಲ್ಲ. ನೀವು ಹಿಂದೆ ಎಲ್ಲಿ ಎಲ್ಲಿ ನೆಲೆಸಿದ್ದಿರೋ ಆ ಸ್ಥಳವನ್ನು ಬಿಡುವುದು ಯೋಗ್ಯವಲ್ಲ ಎಂದನು. ಆಗ ಶಿವಗಣಗಳು ಹೀಗೆಂದರು. ॥೧೯॥

" ಹಿಂದೆ ನಾವು ಘೋರತಪಸ್ಸನ್ನು ಮಾಡಿದೆವು. ಅದಕ್ಕೆ ಪ್ರೀತನಾದ ಶಿವಂಕರನು ಗಣಗಳಿಗೆ ಒಡೆತನದಿಂದಿರುವ ಅಧಿಕಾರವನ್ನು ಕೊಟ್ಟನು. ಅದಕ್ಕೆ ಶಂಕರಪೂಜೆಯೇ ಫಲವು. ॥೨೧॥

ತ್ಯಕ್ತ್ವಾ ಶಿವಾರ್ಚನಂ ಪುಣ್ಯಂ ಸ್ಥಿತಿಃ ಕೈಲಾಸಮಂದಿರೇ ।
ಕಃ ಸ್ಥಾತುಮಿಚ್ಛತಿ ಪ್ರಾಜ್ಞೋ ವೈಕುಂಠಾದಿಷು ಮೂಢವತ್ ॥೨೨॥

ನ ತಪಸ್ತಪ್ತಮಸ್ಮಾಭಿಃ ಕರ್ತುಂ ವೈಕುಂಠರಕ್ಷಣಂ ।
ಕೋ ವಾ ಕ್ಷೀರಂ ಪರಿತ್ಯಾಜ್ಯ ಕಾಂಜಿಕಾಮಭಿವಾಂಛತಿ ॥೨೩॥

ವೈಕುಂಠಾಧಿಪತಿತ್ವಮೇತ್ಯ ಬಹುಧಾ ಪೂರ್ವಂ ಸ್ಥಿತಂ ಸಾದರಂ
ಯತ್ತ್ಯಕ್ತಂ ತದನಂತರಂ ಶಿವಪದಂ ಪ್ರಾಪ್ತುಂ ತಪಸ್ತತ್ಕೃತಂ ।
ತತ್ತ್ಯಕ್ತ್ವಾ ಪುನರೇವ ತತ್ರ ನ ತಥಾ ವಾಂಛಾಪಿ ತುಚ್ಛೇ ಕಥಂ
ಪ್ರೀತಿಃ ಸ್ವಚ್ಛಮತುಚ್ಛಮೇತ್ಯ ಕುರುತೇ ವಾಂಛಾ ಕ್ವ ತುಚ್ಛೇ ಸುಧೀಃ ॥೨೪॥

ವೈಕುಂಠಮಾರ್ಗೋಽಪಿ ಸಕುಂಠಿತೋಽಸ್ತಿ
ಸ ಸ್ವರ್ಗಮಾರ್ಗೋಽಪಿ ಸ ಸತ್ಯಲೋಕಃ ।
ನ ಚಾಸ್ಮದಿಚ್ಛಾವಿಷಯಃ ಪರಂ ತು
ಕೈಲಾಸವಾಸಸ್ತಪಸಾ ಸಲಭ್ಯಃ ॥೨೫॥

---

ಯಾವನು ಮೂಢನ ಹಾಗೆ ಕೈಲಾಸದಲ್ಲಿ ಪುಣ್ಯಕರವಾದ ಶಿವಪೂಜೆ ಮಾಡುತ್ತಾ ಇರುವುದನ್ನು ಬಿಟ್ಟು ವೈಕುಂಠವೇ ಮೊದಲಾದ ಪ್ರದೇಶಗಳಲ್ಲಿ ಇರಲು ಅಪೇಕ್ಷಿಸುವನು ? ॥೨೨॥

ನಾವು ವೈಕುಂಠದಲ್ಲಿ ರಕ್ಷಕರಾಗಿ ಇರಬೇಕೆಂದು ತಪಸ್ಸುಮಾಡಲಿಲ್ಲ. ಯಾವನುತಾನೆ ಶುದ್ಧವಾದ ಹಾಲು ಸಿಗುವುದನ್ನು ಬಿಟ್ಟು, ಗಂಜಿಯನ್ನು ಅಪೇಕ್ಷಿಸುವನು ? ॥೨೩॥

ನಾವು ಹಿಂದೆ ವೈಕುಂಠಲೋಕದ ಆಧಿಪತ್ಯವನ್ನು ಹೊಂದಿ ಬಹುಕಾಲವಿದ್ದೆವು. ಆಮೇಲೆ ಶಿವಪದಪ್ರಾಪ್ತಿಗಾಗಿ ಮತ್ತು ತಪಸ್ಸುಮಾಡಿದೆವು. ಅದರಿಂದ ನಮಗೆ ಶಿವಸಾನ್ನಿಧ್ಯವು ಲಭಿಸಿತು. ಈಗ ವಿಮಲವಾದ ಇದನ್ನು ಬಿಟ್ಟು ಹೀನವಾದ ಆ ವೈಕುಂಠದ ಅಧಿಕಾರವು ನಮಗೆ ಇಷ್ಟವಿಲ್ಲ. ಪಂಡಿತನು ಸ್ವಚ್ಛವಾದ ಮತ್ತು ಕೀಳಲ್ಲದಿರುವವಸ್ತುವಿನಲ್ಲಿ ಮೊದಲು ಪ್ರೀತಿಯನ್ನು ಬೆಳಸಿ ಅನಂತರ ಹೇಯವಾದ ಶುದ್ಧವಲ್ಲದವಸ್ತುವಿನಲ್ಲಿ ಪ್ರೀತಿ ಬೆಳೆಸಬೇಕೆಂಬ ಯೋಚನೆಯನ್ನು ಮಾಡಲಾರನು. ತುಚ್ಛವಾದ ವಿಷಯದಲ್ಲಿ ಪ್ರೀತಿಗೂ ಪಂಡಿತನಿಗೂ ಸಂಬಂಧವೆಲ್ಲಿಯದು ? ॥೨೪॥

ಆ ವೈಕುಂಠ, ಸತ್ಯಲೋಕ, ಸ್ವರ್ಗ ಇವುಗಳ ಪ್ರಾಪ್ತಿಯ ದಾರಿಯೇ

ಸುವರ್ಣಕೀರ್ಣೋನ್ನತರತ್ನಪೀಠೇ
ಸ್ಥಿತ್ವಾಪಿ ವಾಂಛಾ ಕುರುತೇ ವಿವೇಕೀ ।
ಸ ಗೋಕ್ಷುರೇಪ್ಯೂಷರನಿಷ್ಠುರೋಽಪಿ
ಪೇಶೇಽಪಿ ದೇಶೇ ನಿಜದೇಶವಾಸೀ ॥೨೬॥

ಅಲಂ ಕಿಲಾಲಂ ಖಲು ಸತ್ಯಲೋಕೇ
ವಿಲೋಕನೇನಾಪ್ಯಶಶಾಂಕಮೌಳಿಃ ।
ಆರಾಧಿತಃ ಕಿಂ ತಪಸಾ ತದರ್ಥಂ
ವ್ಯರ್ಥಂ ತದಾ ಜೀವನಮೇವ ಕಿಂ ನ ॥೨೭॥

ದುಗ್ಧಾನ್ನಾಶನಮೇವ ಯಸ್ಯ ಸುಖದಂ ಪ್ರಾಪ್ತಂ ಚ ತತ್ಕಿಂ ಸುಧೀಃ
ತ್ಯಕ್ತ್ವಾ ಗೋಕ್ಷುರಭಕ್ಷಣಾಯ ಯತತೇ ತದ್ವತ್ಕಿಲಾಸ್ಮತ್ಪ್ರಿಯಃ ।
ಕೈಲಾಸಾಚಲವಾಸ ಏವ ಸತತಂ ಸರ್ವಾತ್ಮನಾ ವಾಂಛಿತಃ
ತದ್ವಿಘ್ನಃ ಕಿಮುಪಾಗತೋಽಯಮಧುನಾ ವೈಕುಂಠವಾಸಾತ್ಮಕಃ ॥೨೮॥

---

ಮುಚ್ಚಿಹೋಗಿದೆ. ನಮಗೆ ಅವುಗಳನ್ನು ಹೊಂದಬೇಕೆಂಬ ಬಯಕೆಯೇ ಇಲ್ಲ. ತಪಸ್ಸಿನಿಂದ ಹೊಂದಬಹುದಾದದ್ದು ಕೈಲಾಸದಲ್ಲಿ ವಾಸಮಾಡುವಿಕೆಯೊಂದೇ. ॥೨೫॥

ಸ್ವದೇಶಪ್ರೇಮಿಯು ಪರದೇಶದಲ್ಲಿ ತಾನು ಬಂಗಾರಮಯವಾದ ರತ್ನಸಿಂಹಾಸನವನ್ನು ಅಲಂಕರಿಸಿದ್ದರೂ ತೃಪ್ತಿಹೊಂದದೆ ತನ್ನ ದೇಶವು ಗೋಕ್ಷುರವೆಂಬ ಒಂದುಜಾತಿಯ ಮುಳ್ಳಿನಮಯವಾಗಿದ್ದರೂ ಅಥವಾ ಮರಳುಗಾಡಾಗಿದ್ದರೂ ಆತನು ಸ್ವದೇಶವನ್ನೇ ಬಯಸುತ್ತಾನೆ. ॥೨೬॥

ಆ ಸತ್ಯಲೋಕಾದಿಗಳ ದರ್ಶನವೂ ಸಹ ನಮಗೆ ಬೇಡ. ಅವುಗಳ ದರ್ಶನಕ್ಕಾಗಿ ಇಷ್ಟು ತಪಸ್ಸುಮಾಡಿ ಶಿವನನ್ನು ಆರಾಧಿಸಿದೆವೆ? ಹಾಗಾದರೆ ನಮ್ಮ ಜೀವನವೆಲ್ಲವೂ ವ್ಯರ್ಥವಾಗುವುದಲ್ಲವೇ? ॥೨೭॥

ಬುದ್ಧಿವಂತನಾದವನು ತನಗೆ ಇಷ್ಟವಾದ ಮತ್ತು ಸುಲಭವಾಗಿ ಸಿಕ್ಕಿರುವ ಹಾಲನ್ನವನ್ನು ಬಿಟ್ಟು ಗೋಕ್ಷುರವೆಂಬ ಮುಳ್ಳನ್ನು ಭಕ್ಷಿಸಲು ಯತ್ನಿಸುತ್ತಾನೆಯೇ? ಎಂದಿಗೂ ಇಲ್ಲ. ಹಾಗೆಯೇ ಈಗ ನಮಗಿಷ್ಟವಾದ ಕೈಲಾಸವಾಸವು ಯಾವಾಗಲೂ ನಮಗೆ ಸನ್ನಿಹಿತವಾಗಿದೆ. ಅದಕ್ಕೆ ಈ ವೈಕುಂಠದಲ್ಲಿ ವಾಸಮಾಡಬೇಕೆಂಬುದು ವಿಘ್ನರೂಪದಿಂದ ನಮಗೆ ತೋರುತ್ತಿದೆ. ॥೨೮॥

ಅತಿಘೋರತರಂ ತಪಃ ಕೃತಂ ಖಲು ಕೈಲಾಸನಿವಾಸಸಾಧನಂ ।
ತದಿದಂ ಕಥಮಂತರಾಯತೋ ವಿಪರೀತಾಯ ಫಲಾಯ ಕೇವಲಂ ॥೨೯॥

ವೈಕುಂಠಾಧಿಪತಿತ್ವಮಾತ್ರಮಧುನಾ ಕಿಂ ವಾಂಛಿತಂ ತತ್ಫಲಂ
ತದ್ವ್ಯಸ್ಮಾತ್ಪ್ರಲಯೇ ವಿನಶ್ಯತಿ ಪರಂ ಮಭ್ಯೇಪಿ ದೋಷಾನ್ವಯೇ ।
ತಸ್ಮಾತ್ತತ್ಫಲು ತುಚ್ಛಮಿತ್ಯವಧೃತಂ ವಾಂತಾನ್ನವತ್ಕೇವಲಂ
ತ್ಯಾಜ್ಯಂ ತ್ಯಾಜ್ಯಮತಃ ಪರಂ ಪುನರಪಿ ತ್ಯಾಜ್ಯಂ ತತೋಽಸ್ಮಾದೃಶೈಃ ॥೩೦॥

ಇತಿ ತದ್ಗಿರಮಾಕರ್ಣ್ಯ ನಂದಿಕೇಶಃ ಪ್ರಹೃಷ್ಟಧೀಃ ।
ತಾನುವಾಚ ಮುದಾ ಯುಕ್ತಾನ್ ಕುರ್ವನ್ನಿವ ಮುಹುರ್ಮುಹುಃ ॥೩೧॥

॥ ನಂದಿಕೇಶ ಉವಾಚ ॥

ಭವಿಷ್ಯತ್ಯಲ್ಪಕಾಲೇನ ಭವತಾಮಪಿ ವಾಂಛಿತಂ ।
ಅಧುನಾ ತು ಯಥಾ ಸ್ಥಾನೇ ಸ್ಥಾತವ್ಯಂ ಭಕ್ತಿಪೂರ್ವಕಂ ॥೩೨॥

---

ಕೈಲಾಸವಾಸವು ಸಿಗಬೇಕೆಂದು ನಾವು ಬಹಳ ಘೋರವಾದ ತಪಸ್ಸನ್ನು ಮಾಡಿದೆವು. ಆದರೆ ಈಗ ಈ ವೈಕುಂಠವಾಸವು ವಿಘ್ನವಾಗಿ ಪರಿಣಮಿಸಿದ್ದರಿಂದ ನಮ್ಮ ತಪಸ್ಸು ನಮಗೆ ವಿಪರೀತಫಲವನ್ನು ಕೊಟ್ಟಂತಾಯಿತು. ॥೨೯॥

ಈಗ ನಮಗೆ ವೈಕುಂಠದ ಅಧಿಕಾರವು ಲಭಿಸಬೇಕೆಂದು ಇಷ್ಟಪಡಲಿಲ್ಲ. ಆ ತಪಸ್ಸಿಗೆ ಇದು ಫಲವಾಗುವುದಾದರೆ ಆ ವೈಕುಂಠವೂ ಪ್ರಳಯಕಾಲದಲ್ಲಿ ನಾಶವನ್ನು ಹೊಂದುವುದು. ಮತ್ತು ಅದು ಅನೇಕ ದೋಷಗಳಿಂದ ಕೂಡಿದುದೂ ಆಗಿದೆ. ಆದುದರಿಂದ ವಾಂತಿಮಾಡಿದ ಅನ್ನದಂತೆ ಅದು ತುಚ್ಛವೆಂದು ನಾವು ತಿಳಿದಿದ್ದೇವೆ. ನಮ್ಮಂಥವರಿಗೆ ಅದು ನಿಜವಾಗಿಯೂ ತ್ಯಾಜ್ಯವೆನಿಸಿರುವುದು. ಎಂದಿಗೂ ಅದು ನಮಗೆ ಬೇಡ. ಖಂಡಿತವಾಗಿಯೂ ಬೇಡ." ॥೩೦॥

ಹೀಗೆಂದ ಆ ಗಣಗಳ ಮಾತನ್ನು ಕೇಳಿ ನಂದಿಕೇಶ್ವರನು ಸಂತುಷ್ಟನಾಗಿ ಆ ಗಣಗಳನ್ನು ಸಂತೋಷವುಳ್ಳವರನ್ನಾಗಿ ಮಾಡಲು ಹೀಗೆ ಮಾತನಾಡಿದನು. ॥೩೧॥

ಶಿವಕಿಂಕರರೇ, ಸ್ವಲ್ಪಕಾಲದಲ್ಲಿಯೇ ನಿಮಗೆ ಇಷ್ಟವಾದುದು ಸಿದ್ಧಿಸುವುದು. ಆದರೆ ಈಗ ನೀವು ನಿಮ್ಮ ನಿಮ್ಮ ಸ್ಥಾನದಲ್ಲಿಯೇ ಭಕ್ತಿಯಿಂದ ಇರಬೇಕು. ॥೩೨॥

ಉಮಾಶಿವಾರಾಧನಸಕ್ತಚಿತ್ತ
ಶ್ಶಿವೋಽಪಿ ತತ್ಪೂಜನಮಾದರೇಣ ।
ಗೃಹ್ಣಾತಿ ಮಧ್ಯಾಹ್ನಗತೇ ಸುಸೂರ್ಯೇ
ನಿವೇದನಸ್ಯಾಪಸರೋಽಪಿ ನಾಯಂ ॥೩೩॥

ಮಮಾಪಿ ಕರ್ತವ್ಯಮುಮಾಸಹಾಯ
ಪಾದಾರವಿಂದಸ್ಮರಣಂ ಪ್ರಸೂನೈಃ ।
ಲಿಂಗಂ ಸಮಭ್ಯರ್ಚ್ಯ ವಿಶೇಷಕಾಲೋ
ಮಧ್ಯಾಹ್ನಗೇ ತಿಗ್ಮಕರೇತ್ವಯಂ ಹಿ ॥೩೪॥

ಭವದ್ಭಿರಧುನಾ ಕಥಂ ಗಿರಿಶಪೂಜನಂ ತ್ಯಜ್ಯತೇ
ಶಿವಾರ್ಚನಪರಾಯಣಾಃ ನನು ಶಿವಂ ಪ್ರಯಾಂತ್ಯನ್ವಹಂ ।
ಕೃತಂ ಸದನುವೇಲಮಯ್ಯಮಲಕಾಲಕಾಲಾರ್ಚನಂ
ಕರೋತಿ ಸುಖಸಂಪದಾಂ ಪದಮನಲ್ಪಕಾಲಾತ್ಪರಂ ॥೩೫॥

---

ಉಮಾಮಹೇಶ್ವರನ ಧ್ಯಾನಾಸಕ್ತರಾದವರು ಮಧ್ಯಾಹ್ನದ ಕಾಲವಾದ್ದರಿಂದ ಶಿವಪೂಜೆಯನ್ನು ಭಕ್ತಿಯಿಂದ ಮಾಡುತ್ತಿರುವರು. ಆ ಪೂಜೆಯನ್ನು ಶಂಕರನು ಪರಿಗ್ರಹಿಸುತ್ತಿರುವನು. ಹೀಗಿರುವಲ್ಲಿ ನಿಮ್ಮ ವಿಷಯವನ್ನು ವಿಜ್ಞಾಪಿಸಲು ಇದು ತಕ್ಕ ಕಾಲವಲ್ಲ. ಆದುದರಿಂದ ನೀವು ಇದ್ದಲ್ಲಿಯೇ ಇರಿ. ॥೩೩॥

ನಾನೂ ಸಹ ಸೂರ್ಯನು ನಡುನೆತ್ತಿಯ ಮೇಲೆ ಬಂದಿರುವಾಗ ಶ್ರೀ ಉಮಾಮಹೇಶ್ವರನ ಪಾದಕಮಲಗಳನ್ನು ಸ್ಮರಣೆಮಾಡಿ ಹೂಗಳಿಂದ ಪೂಜಿಸಿ ಅಭಿಷೇಕಾದಿಗಳಿಂದಲೂ ಲಿಂಗವನ್ನು ಅರ್ಚಿಸಬೇಕು. ॥೩೪॥

ಈಗ ನೀವಾದರೂ ಶಿವನ ಅರ್ಚನೆಯನ್ನು ಹೇಗೆ ಬಿಡುವಿರಿ. ಶಿವನ ಪೂಜೆಯಲ್ಲಿ ಆಸಕ್ತರಾದವರು ಶಿವನನ್ನು ಸೇರುವರಷ್ಟೆ. ಆಯಾ ಕಾಲಕ್ಕನುಸರಿಸಿ ಕಾಲಕಾಲನಾದ ಶಿವನನ್ನು ಪೂಜಿಸಬೇಕು. ಹಾಗೆ ಮಾಡಿದರೆ ಜಾಗ್ರತೆಯಾಗಿ ಆತನು ಸುಖಸಂಪತ್ತುಗಳನ್ನು ಒದಗಿಸುವನು. ॥೩೫॥

ಅಹೋ ಚಿರಂ ಜೀವತು ಚಂದ್ರಮೌಳಿ
ಪಾದಾಂಬುಜಾರಾಧನಸಕ್ತಚಿತ್ತಃ ।
ಉಪಾತ್ತವಿತ್ತಃ ಶಿವಪೂಜನಾರ್ಥಂ
ಶಾಂತಃ ಸ ಯೋಗೀ ಸ ಕಿಲಾಽಪ್ರಮತ್ತಃ ॥೩೬॥

ವಿಲಂಬೇನ ಸಾಂಬಾಪರಾಧೋಽಪಿ ಭಾವೀ
ಸ ಹೇರಂಬತಾತೋ ವಿಲಂಬಾಸಹಿಷ್ಣುಃ ।
ನ ಚಾಂಬಾಪಿ ಲಂಬೋದರಲಂಬನೇನಾ
ಪ್ಯಪಾಕರ್ತುಮಿಷ್ಟಂ ಕರೋತ್ಯೇವ ಕಿಂ ತಂ ॥೩೭॥

ಯಥೇಷ್ಟೋ ವಿಹಾರೋ ನ ಕಾರ್ಯೋ ನ ಕಾರ್ಯಃ
ಸ್ವಕಾರ್ಯಾತುರೈಃ ಕಾರ್ಯ ಏವಾವಿಲಂಬಃ ।
ಪ್ರಭುಪ್ರೀತಿರೇವ ಪ್ರಭೂತಿಂ ಕರೋತಿ
ಪ್ರಭೂತಿಃ ಪ್ರಭೋರೇವ ಭೂತಾ ಪ್ರಭೂತಾ ॥೩೮॥

---

ಆ ಚಂದ್ರಶೇಖರನ ಪಾದಕಮಲವನ್ನು ಪೂಜೆಮಾಡುವುದರಲ್ಲಿ ತೊಡಗಿದ ಮನುಷ್ಯನು ಬಹಳಕಾಲ ಜೀವಿಸಲಿ. ಶಿವಪೂಜೆಗಾಗಿಯೇ ಹಣವನ್ನು ಸಂಗ್ರಹಿಸಬೇಕು. ಹಾಗೂ ಶಾಂತನೂ ಇಂದ್ರಿಯಗಳನ್ನು ಜಯಿಸಿದವನೂ, ಜಾಗರೂಕನೂ ಆಗಿರಬೇಕು. ॥೩೬॥

ಪೂಜೆಯು ಕಾಲವಿಳಂಬದಿಂದ ಸದಾಶಿವನಿಗೆ ಅಪರಾಧಮಾಡಿದಂತೆ ಆಗುವುದು. ಆ ಹೇರಂಬನ ತಂದೆಯಾದ ಶಿವನು ಕಾಲವಿಳಂಬವನ್ನು ಸಹಿಸಲಾರನು. ಅಂಬೆಯಾದ ಗೌರಿಯೂ ಗಣಪತಿಯ ಲಾಲನೆಯಿಂದ ವೇಳೆಮೀರಿ ಮಾಡಬೇಕಾಗಿರುವ ಕೆಲಸವನ್ನೂ ಸಹ ಹೊತ್ತಾಗಿ ಮಾಡುವುದಿಲ್ಲ. ॥೩೭॥

ಮನಸ್ಸಿಗೆ ಬಂದಂತೆ ವಿಹರಿಸಬಾರದು. ಖಂಡಿತವಾಗಿಯೂ ವಿಹರಿಸಲಾಗದು. ತಮ್ಮ ಕೆಲಸವು (ಜಾಗ್ರತೆ) ತ್ವರೆಯಿಂದ ಆಗಬೇಕು ಎನ್ನುವವರು ನಿದಾನವಾಗಿ ವರ್ತಿಸಬೇಕು. ಒಡೆಯನು ಒಲಿದರೆ ಬೇಕಾದಷ್ಟು ಐಶ್ವರ್ಯವು ಲಭಿಸುವುದು. ಒಡೆಯನ ಅನುಗ್ರಹ ಸಂಪಾದನೆಗೆ ನಾವು ಯತ್ನಿಸಬೇಕು.” ॥೩೮॥

ಇತಿ ತದ್ವಚನಂ ಶ್ರುತ್ವಾ ಪ್ರಣಮ್ಯ ಚ ಪುನಃ ಪುನಃ ।
ಸ್ವಸ್ವಸ್ಥಾನೇ ಯಥಾಪೂರ್ವಂ ಸ್ಥಿತಾಃ ಸರ್ವೇಽಪಿ ತೇ ಗಣಾಃ ॥೩೯॥

ತತಃ ಪರಂ ಮಹಾದೇವಸ್ತೀರ್ಥೇಶಾಕಾರಮಾಸ್ಥಿತಃ ।
ತಪಸಾ ಪೂತಹೃದಯಾನ್ ದದರ್ಶ ಮುನಿಪುಂಗವಾನ್ ॥೪೦॥

ತತೋ ಮಹೇಶೋ ಭವನಾಶಿನೀಂ ತಾಂ
ಶ್ರುತಿಪ್ರಸಿದ್ಧಾಮಿತಭೂತಿಕೋಟಿಂ ।
ಆಶ್ರಿತ್ಯ ಧೀರಾನ್ ತಪಸಾಪಿ ಧೀರಾನ್
ದದರ್ಶ ವಿಪ್ರಾನ್ ಶತಶಃ ಸಕಾಮಾನ್ ॥೪೧॥

ಧರ್ಮಮೂರ್ತಿರಿತಿಖ್ಯಾತಸ್ತತ್ರ ಕಶ್ಚಿದ್ವಿಜೋತ್ತಮಃ ।
ಶಿವಾಚಾರರತಃ ಶಾಂತೋ ಜಟಿಲೋ ಭೂತಿಭೂಷಣಃ ॥೪೨॥

ತೇನ ತತ್ರ ತಪಸ್ತಪ್ತಂ ಕಲ್ಪಾನಾಮಯುತಂ ದ್ವಿಜಾಃ ।
ತಥೈವ ಕೇಚಿತ್ತತ್ತೀರೇ ಶಿವಪೂಜಾಪರಾಯಣಾಃ ॥೪೩॥

---

ಹೀಗೆಂದ ನಂದಿಕೇಶ್ವರನ ಮಾತನ್ನು ಕೇಳಿ ಆ ಎಲ್ಲಾ ಗಣಗಳೂ ನಂದೀಶನಿಗೆ ವಂದಿಸಿ ತಮ್ಮ ತಮ್ಮ ಸ್ಥಾನಗಳಿಗೆ ಮೊದಲಿನಂತೆ ತೆರಳಿದರು. ॥೩೯॥

ಅಲ್ಲಿಂದ ಮುಂದೆ ಶ್ರೀ ಶಂಕರನು ತೀರ್ಥೇಶನೆಂದು ಪ್ರಸಿದ್ಧನಾಗಿ ತಪಸ್ಸಿನಿಂದ ಪರಿಶುದ್ಧರಾದ ಮುನಿಶ್ರೇಷ್ಠರಿಗೆ ದರ್ಶನವನ್ನೀಯುತ್ತಾ ಇಲ್ಲಿ ನೆಲಸಿರುವನು. ॥೪೦॥

ಬಳಿಕ ಮಹೇಶ್ವರನು ವೇದದಲ್ಲಿ ಪ್ರಸಿದ್ಧವಾದ ಭವನಾಶಿನೀಕ್ಷೇತ್ರವನ್ನು ಹೊಂದಿದನು. ಅಲ್ಲಿ ಜಿತೇಂದ್ರಿಯರಾದ ಮತ್ತು ತಪಸ್ಸಿನಿಂದ ಉಗ್ರರಾದ ಬ್ರಾಹ್ಮಣೋತ್ತಮರು ಅವರ ಕಾಮನಾಸಿದ್ಧಿಗೋಸ್ಕರ ತಪಸ್ಸು ಮಾಡುತ್ತಿದ್ದರು. ಅವರನ್ನು ಶಂಕರನು ನೋಡಿದನು. ॥೪೧॥

ಅವರಲ್ಲಿ ಧರ್ಮಮೂರ್ತಿ ಎಂದು ಪ್ರಸಿದ್ಧನಾದ ಒಬ್ಬ ಬ್ರಾಹ್ಮಣನಿದ್ದನು. ಆತನು ಶಿವಾರ್ಚನೆಯಲ್ಲಿ ಆಸಕ್ತನಾಗಿಯೂ ಶಾಂತಸ್ವಭಾವದವನೂ ಆಗಿದ್ದನು. ಜಟಾಧಾರಿಯಾಗಿ ಮೈಗೆ ವಿಭೂತಿಯನ್ನು ಅಲಂಕರಿಸಿಕೊಂಡಿದ್ದನು. ॥೪೨॥

ಆತನು ಅನೇಕ ಕಲ್ಪದಿಂದಲೂ ತಪಸ್ಸು ಮಾಡಿದ್ದನು. ಆ ಭವನಾಶಿನಿಯ

**ಭಸ್ಮೋದ್ಧೂಳಿತಸರ್ವಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ।**
**ರುದ್ರಾಕ್ಷಮಾಲಾವೀತಾಂಗಾಃ ಶಿವಲಿಂಗಾರ್ಚನಪ್ರಿಯಾಃ ॥೪೪॥**

**ನಿರಾಹಾರಾ ಜಲಾಹಾರಾ ವಾತಾಹಾರಾಶ್ಚ ಕೇಚನ ।**
**ಪರ್ಣಾಹಾರಾಸ್ತೃಣಾಹಾರಾಃ ಕಣಾಹಾರಾಶ್ಚ ಕೇಚನ ॥೪೫॥**

**ಕೇಚಿದ್ಧ್ಯಾತ್ವಾ ಮಹಾದೇವಮಾನಂದಾಶ್ರುಸಮಾಪ್ಲುತಾಃ ।**
**ಕೇಚಿನ್ನೃತ್ಯಂತಿ ನಂದಂತಿ ಪ್ರವದಂತಿ ಹಸಂತಿ ಚ ॥೪೬॥**

**ವಲ್ಕಲಾನ್ಯೇವ ವಾಸಾಂಸಿ ವಾಸಃ ಪರ್ಣಾನಿ ಕಸ್ಯ ಚಿತ್ ।**
**ಕೇಚಿದ್ದಿಗಂಬರಾಸ್ತತ್ರ ಕೇಚಿತ್ತತ್ರ ಕರಾಂಬರಾಃ ॥೪೭॥**

---

ತೀರದಲ್ಲಿ ಇಂತಹ ಅನೇಕರು ಶಿವಪೂಜೆಯಲ್ಲಿ ಆಸಕ್ತರಾಗಿ ಬಹುಕಾಲದಿಂದ ನೆಲಸಿದ್ದರು. ॥೪೩॥

ಅವರೆಲ್ಲರೂ ಭಸ್ಮವನ್ನು ಶರೀರಕ್ಕೆಲ್ಲಾ ಲೇಪಿಸಿಕೊಂಡಿದ್ದರು. ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿದ್ದರಲ್ಲದೇ, ರುದ್ರಾಕ್ಷಮಾಲೆಯನ್ನೂ ಧಾರಣೆಮಾಡಿಕೊಂಡಿದ್ದರು. ಹೀಗೆ ಎಲ್ಲರೂ ಶಿವಾರ್ಚನೆಯಲ್ಲಿಯೇ ಬಹಳ ಮಟ್ಟಿಗೆ ಪ್ರಿಯರಾಗಿದ್ದರು. ॥೪೪॥

ಅವರಲ್ಲಿ ಕೆಲವರು ಕೇವಲ ಆಹಾರವನ್ನೇ ತೆಗೆದುಕೊಳ್ಳದೆ ಇದ್ದರು. ಇನ್ನು ಕೆಲವರು ನೀರನ್ನು ಕುಡಿದೂ, ಮತ್ತೆ ಕೆಲವರು ಗಾಳಿಯನ್ನು ಸೇವಿಸುತ್ತಾ ಹಲವರು ಎಲೆಗಳನ್ನು ಭಕ್ಷಿಸುತ್ತ, ಅನೇಕರು ಹುಲ್ಲನ್ನೇ ತಿನ್ನುತ್ತಾ ಕೆಲವು ಮಂದಿ ಕಣಗಳಲ್ಲಿ ಧಾನ್ಯಕಣಗಳನ್ನು ಆಯ್ದು ತಿನ್ನುತ್ತಾ ತಪಸ್ಸು ಮಾಡುತ್ತಿದ್ದರು. ॥೪೫॥

ಕೆಲವರು ಶ್ರೀ ಮಹಾದೇವನನ್ನು ಧ್ಯಾನಿಸಿ ಆನಂದಾಶ್ರುವನ್ನು ಸುರಿಸುತ್ತಿದ್ದರು. ಕೆಲವರು ಕುಣಿಯುತ್ತಿದ್ದರು. ಮತ್ತೆ ಕೆಲವರು ಸಂತೋಷಿಸುತ್ತಿದ್ದರು. ಇನ್ನು ಕೆಲವರು ಶಂಕರನ ವಿಷಯವಾಗಿ ಮಾತನಾಡುತ್ತಾ ಆನಂದಿಸುತ್ತಿದ್ದರು. ॥೪೬॥

ಅಲ್ಲಿರುವ ಬ್ರಾಹ್ಮಣರಲ್ಲಿ ಕೆಲವರು ವಲ್ಕಲ (ನಾರುಮಡಿ) ಗಳನ್ನೇ ಉಟ್ಟಿದ್ದರು. ಮತ್ತೆ ಕೆಲವರು ಎಲೆಗಳನ್ನುಧರಿಸಿದ್ದರು. ಉಳಿದ ಅನೇಕರು ದಿಗಂಬರರಾಗಿದ್ದರು. ಕೆಲವರು ತಮ್ಮ ಕೈಯ್ಯನ್ನೇ ವಸ್ತ್ರವನ್ನಾಗಿ ಉಪಯೋಗಿಸುತ್ತಿದ್ದರು. ॥೪೭॥

ಊರುಮಾತ್ರಾಂಬರಾಃ ಕೇಚಿತ್ ಕೇಚಿತ್ತರುವರಾಂಬರಾಃ ।
ಭೂತಿಮಾತ್ರಾಂಬರಾಃ ಕೇಚಿದ್ರುದ್ರಾಕ್ಷಾಭರಣಾಂಬರಾಃ ॥೪೮॥

ತೇ ಸರ್ವೇ ಲಿಂಗಪೂಜಾಯಾಂ ನಿರತಾಃ ಶಿವತತ್ಪರಾಃ ।
ಶಿವನಾಮಜಪೋದ್ಯುಕ್ತಾಃ ಸದಾಶಿವಕಥೋತ್ಸುಕಾಃ ॥೪೯॥

ಸಾಂಬಂ ಹೃತ್ಕಮಲೇ ಧ್ಯಾತ್ವಾ ಕೃತ್ವಾ ಮಾನಸಪೂಜನಂ ।
ಪ್ರನೃತ್ಯಂತೋಽಪಿ ಗಾಯಂತಿ ಶಿವನಾಮಾನಿ ಸಾದರಂ ॥೫೦॥

ತಾನ್ ದೃಷ್ಟ್ವಾ ಸ ಮಹಾದೇವೋ ದೂರಾದೇವ ವೃಷಧ್ವಜಃ ।
ನಂದಿಕೇಶಮುವಾಚೇದಂ ವಚನಂ ಪ್ರೀತಿಪೂರ್ವಕಂ ॥೫೧॥

॥ ಶ್ರೀಸದಾಶಿವ ಉವಾಚ ॥

ನಂದಿಕೇಶ ಮಹಾಶೈವ ಪಶ್ಯ ಪಶ್ಯ ಶಿವಾರ್ಚಕಾನ್ ।
ಶಿವಲಿಂಗಾರ್ಚನೇ ತೇಷಾಂ ವಿಶ್ವಾಸಃ ಖಲು ವರ್ಧತೇ ॥೫೨॥

---

ಕೆಲವರು ತೊಡೆಯ ಪೂರ್ತಿ ಬಟ್ಟೆಯನ್ನು ಉಟ್ಟಿದ್ದರು. ಕೆಲವರು ಮರದ ತೊಗಟೆಗಳನ್ನೂ, ಇನ್ನು ಕೆಲವರು ವಿಭೂತಿಯನ್ನೂ ಮತ್ತೆ ಕೆಲವರು ರುದ್ರಾಕ್ಷಾಭರಣವನ್ನೂ ಧರಿಸಿದ್ದರು. (ಅವರು ಬೇರೆ ಬಟ್ಟೆಗಳನ್ನೇ ಧರಿಸಿರಲಿಲ್ಲ.) ॥೪೮॥

ಅವರೆಲ್ಲರೂ ಶಿವಲಿಂಗಪೂಜೆಯಲ್ಲಿಯೂ ಶಿವನಾಮಜಪ, ಶಿವಕಥಾಶ್ರವಣ ಇವುಗಳಲ್ಲಿಯೂ ಆಸಕ್ತರಾಗಿದ್ದರು. ॥೪೯॥

ಅವರು ಹೃದಯಕಮಲದಲ್ಲಿ ಅಂಬಾಸಹಿತನಾದ ಶಿವನನ್ನು ಧ್ಯಾನಿಸಿ ಮನಸಾ ಪೂಜಿಸಿ ಕುಣಿಯುತ್ತಾ ಶಿವನಾಮಗಳನ್ನು ಹಾಡುತ್ತಾ ಸಂತೋಷದಿಂದಿದ್ದರು. ॥೫೦॥

ಅವರನ್ನು ಆ ಈಶ್ವರನು ದೂರದಿಂದಲೇ ನೋಡುತ್ತಾ ನಂದಿಕೇಶನೊಡನೆ ಪ್ರೀತಿಯಿಂದ ಹೀಗೆಂದನು. ॥೫೧॥

ಎಲೈ ನಂದೀಶನೇ, ಮಹಾಶೈವನಾದ ನೀನು ಆ ಶಿವಾರ್ಚಕರಾದ ಬ್ರಾಹ್ಮಣರನ್ನು ಪ್ರೀತಿಯಿಂದ ನೋಡು. ಅವರಿಗೆ ಶಿವಾರ್ಚನೆಯಲ್ಲಿ ಹೇಗೆ ಪ್ರೀತಿಯು ಬೆಳೆಯುತ್ತಿದೆ ! ॥೫೨॥

ಲಿಂಗಪೂಜನಮೇತೇಷಾಂ ಸರ್ವೇಷಾಂ ನೃತ್ತಮಿತ್ಯತಃ ।
ತಾಪಸಾ ಸಫಲಾ ನೂನಂ ಲಿಂಗಾರ್ಚನಸಮನ್ವಯಾತ್ ॥೫೩॥

ನ ಕೇವಲೇನ ತಪಸಾ ಕೇವಲೈರಧ್ವರೈರಪಿ ।
ದಾನೈರ್ವಾ ಕೇವಲೈಃ ಪ್ರೀತಿಃ ಮಮ ಲಿಂಗಾರ್ಚನಂ ವಿನಾ ॥೫೪॥

ತುಂಗಲಿಂಗಾರ್ಚನಪ್ರೀತಿರ್ಯಥಾ ಮಮ ಸದಾ ತಥಾ ।
ಪ್ರೀತಿಸ್ತು ನ ಭವಂತ್ಯೇವ ವೇದಪಾರಾಯಣೈರಪಿ ॥೫೫॥

ತುಲಾಕೋಟಿಪ್ರದಾನೈರ್ವಾ ಪ್ರೀತಿರ್ಮಮ ನ ಸರ್ವಥಾ ।
ಲಿಂಗಾರ್ಚನಾದ್ಯಥಾಪ್ರೀತಿ ಸ್ತಥಾ ಪ್ರೀತಿರ್ನ ಕೇನ ಚಿತ್ ॥೫೬॥

ಭೋಗಕಾಮೋಪಿ ಯಃ ಪೂಜಾಂ ಶಿವಲಿಂಗೇ ಕರಿಷ್ಯತಿ ।
ತಸ್ಮಿನ್ನಪಿ ಮಮ ಸ್ನೇಹಃ ಸ್ನೇಹಪಾತ್ರಂ ಯತಃ ಸ್ವತೇ ॥೫೭॥

---

ಎಲ್ಲರಿಗೂ ಈ ಲಿಂಗಪೂಜೆಯು ವಿಹಿತವಾಗಿದೆ. ತಪಸ್ಸುಗಳನ್ನು ಮಾಡಿದ ಇವರು ಈ ಲಿಂಗಾರ್ಚನೆ ಮಾಡಿದುದರಿಂದ ಕೃತಾರ್ಥರಾದರು. ॥೫೩॥

ಸುಮ್ಮನೆ ಬರಿಯ ತಪಸ್ಸು, ಯಾಗ, ದಾನ ಇವುಗಳಿಂದ ನನಗೆ ಪ್ರೀತಿಯಾಗುವುದಿಲ್ಲ. ಅವೆಲ್ಲಾ ಲಿಂಗಾರ್ಚನೆಯೊಂದಿಗೆ ನಡೆದರೆ ಆಗ ಅವು ನನಗೆ ಇಷ್ಟಗಳಾಗುವುವು. ॥೫೪॥

ಉನ್ನತವಾದ ಲಿಂಗಾರ್ಚನದಿಂದ ನನಗೆ ಪ್ರೀತಿಯುಂಟಾಗುವ ಹಾಗೆ ವೇದಪಾರಾಯಣಗಳಿಂದ ನನಗೆ ಆನಂದವಾಗುವುದಿಲ್ಲ. ॥೫೫॥

ತುಲಾಭಾರವನ್ನು ಒಂದುಕೋಟಿ ಸಂಖ್ಯೆಯಲ್ಲಿ ಮಾಡಿಸಿದರೂ ನನಗೆ ಪ್ರಿಯವಾಗದು. ಲಿಂಗಾರ್ಚನೆಯಿಂದ ಉಂಟಾಗುವ ಪ್ರೀತಿಯು ಇನ್ನಾವುದರಿಂದಲೂ ಲಭಿಸುವುದಿಲ್ಲ. ॥೫೬॥

ಸುಖಾಭಿಲಾಷೆಯೇ ಮೊದಲಾದ ಕಾಮನೆಯಿಂದಲಾದರೂ ಶಿವಲಿಂಗಾರ್ಚನೆಯನ್ನು ಮಾಡಿದರೂ ಆತನಲ್ಲಿ ನನಗೆ ಪ್ರೀತಿಯುಂಟಾಗುವುದು. ಅದರಿಂದ ಆತನು ತನ್ನ ಕೋರಿಕೆಗಳನ್ನೆಲ್ಲಾ ಪಡೆಯುವನು. ॥೫೭॥

ಭೋಗಸ್ತಾವದಭೂತಪೂರ್ವವಿಭವಃ ಸಂಭಾವಿತಃ ಸರ್ವದಾ ।
ಲಿಂಗಾರಾಧನತಃ ಸಲಿಂಗಮಹಿಮಾ ಜ್ಞಾತೋ ನ ಕೇನಾಪ್ಯತಃ ।
ಲಿಂಗಾರಾಧನತತ್ಪರಾಃ ಸುರಪದಂ ಸಂಪ್ರಾಪ್ಯ ತಿಷ್ಠಂತ್ಯಮೀ ।
ಕಶ್ಚಿದ್ವಿಷ್ಣುರಿಹಾಸ್ತು ಕಶ್ಚನವಿಧಿಃ ಕಶ್ಚಿನ್ಮಹೇಂದ್ರೋಽಧುನಾ ॥೫೮॥

ಕೇಚಿದ್ದಿಕ್ಪತಯೋ ಭವಂತು ಬಹವೋ ದೇವಾ ಭವಂತ್ವಾಶ್ವಮೀ(?)
ತದ್ದಾರಾ ಕಮಲಾದಯೋಽಪಿ ಬಹವಸ್ತಾವದ್ಭವಂತು ಪ್ರಿಯಾಃ
ನಕ್ಷತ್ರಾಣಿ ಭವಂತು ಕೇಚನ ತಥಾ ಕೇಚಿತ್ ಗ್ರಹಾ ಏವ ತೇ ।
ತತ್ರತ್ಯಾಃ ಸುರಸಂಸದಿ ಪ್ರಿಯತಮಾಃ ತಿಷ್ಠಂತು ಕೇಚಿತ್ತಥಾ ॥೫೯॥

ಇತ್ಯುಕ್ತಃ ಸ ಮಹೇಶೇನ ನಂದಿಕೇಶಸ್ತಥಾಸ್ತ್ವಿತಿ ।
ಪ್ರೇಷಿತಃ ಸ ಮಹೇಶಾನಮುನಿಮಂಡಲಮಾಗಮತ್ ॥೬೦॥

---

ಲಿಂಗಾರಾಧನೆ ಮಾಡುವುದರಿಂದ ಹಿಂದೆಂದೂ ಕಂಡರಿಯದಂತಹ ಸುಖ ವೈಭವವು ಅನಾಯಾಸವಾಗಿ ಲಭಿಸುವುದು. ಆ ಲಿಂಗಮಹಿಮೆಯನ್ನು ಪೂರ್ಣವಾಗಿ ತಿಳಿಯಲು ಯಾರಿಗೂ ಹಿಂದೆ ಸಾಧ್ಯವಾಗಲಿಲ್ಲ. ಲಿಂಗಾರಾಧನೆಯಲ್ಲಿ ಆಸಕ್ತರಾದವರು ದೇವತೆಗಳ ಸ್ಥಾನವನ್ನು ಆಕ್ರಮಿಸಿ ನಿಂತಿದ್ದರೂ, ಯಾವನೊಬ್ಬ ದೇವತೆಯೂ, ಹೆಚ್ಚೇನು! ವಿಷ್ಣ್ವಾದಿದೇವಶ್ರೇಷ್ಠರೂ ಸಹ ಏನೂ ಮಾಡಲಾರರು. ॥೫೮॥

ಈ ಲಿಂಗಾರ್ಚಕರಲ್ಲಿ ಕೆಲವರು ದಿಕ್ಪತಿಗಳಾಗಲಿ, ಉಳಿದ ಬಹುಮಂದಿ ದೇವತೆಗಳ ರೂಪವನ್ನು ಹೊಂದಲಿ. ಅವರ ಪತ್ನಿಯರು ಲಕ್ಷ್ಮೀ, ಸರಸ್ವತಿ ಮುಂತಾದ ದೇವತೆಗಳ ಪತ್ನಿಯರಂತಿರಲಿ. ಉಳಿದವರು ನಕ್ಷತ್ರಗಳಾಗಲಿ ಮತ್ತೆ ಹಲವರು ನವಗ್ರಹಗಳ ಸ್ವರೂಪವನ್ನು ತಾಳಲಿ. ಅಲ್ಲಿರುವವರೆಲ್ಲಾ ದೇವಸಭೆಯಲ್ಲಿ ಇಷ್ಟರಾದ ಸುಂದರಿಯರಾಗಲಿ. ॥೫೯॥

ಹೀಗೆ ಹೇಳಿ, ಶಂಕರನು ನಂದೀಶ್ವರನನ್ನು ಋಷಿಗಳಿರುವ ಸ್ಥಳಕ್ಕೆ ಕಳುಹಿಸಿ ತಾನು ಹೇಳಿದಂತೆ ತಿಳಿಸೆನಲು ನಂದಿಕೇಶನು ಶಿವಾಜ್ಞೆಯಂತೆ ಆ ಋಷಿಗಳಿದ್ದಲ್ಲಿಗೆ ತೆರಳಿದನು. ॥೬೦॥

ವಿಲೋಕ್ಯ ನಂದಿಕೇಶಂ ತಂ ಧರ್ಮರೂಪಂ ಪ್ರಣಮ್ಯ ತೇ ।
ತುಷ್ಟುವುಃ ಪೂಜಯಿತ್ವಾ ತಂ ಸರ್ವೇಽಪಿ ಮುನಿಪುಂಗವಾಃ ॥೬೧॥

ತತ್ರ ಧರ್ಮರತೋ ನಾಮ ಕಶ್ಚಿದಾಸೀದ್ದ್ವಿಜೋತ್ತಮಃ ।
ತಮಾಹ ತುಭ್ಯಂ ವಿಷ್ಣುತ್ವಂ ದತ್ತಮಿತ್ಯಭಿನಂದಯತ್ ॥೬೨॥

ಏವಂ ವಿಧಿತ್ವಮಿಂದ್ರತ್ವಂ ಚಂದ್ರತ್ವಾದೀನ್ಯಪಿ ಸ್ವತಃ ।
ದತ್ವಾ ತಾನ್ ಪ್ರೇಷಯಾಮಾಸ ತಂ ತಂ ಲೋಕಂ ಮನೋಹರಂ॥೬೩॥

ವೈಕುಂಠಾದಿಷು ಲೋಕೇಷು ನಂದಿಕೇಶಪ್ರಸಾದತಃ ।
ಅಧಿಕಾರಂ ಸಮಾಸಾದ್ಯ ಸ್ಥಿತಾಸ್ತೇ ಮುನಿಪುಂಗವಾಃ ॥೬೪॥

ಶಿವಲಿಂಗಾರ್ಚನಫಲಂ ತಥಾ ತೇಷಾಮಭೂದ್ದ್ವಿಜಾಃ ।
ಈಪ್ಸಿತಾರ್ಥಾನ್ ದದಾತ್ಯೇವ ಲಿಂಗಪೂಜಾ ಮಹೇಶಿತುಃ ॥೬೫॥

---

ಆ ಋಷಿಗಳು ನಂದಿಕೇಶ್ವರನು ಬಂದಿರುವುದನ್ನು ತಿಳಿದು ಧರ್ಮಸ್ವರೂಪನಾದ ಆತನಿಗೆ ನಮಸ್ಕಾರಮಾಡಿ, ಪೂಜಿಸಿ ಎಲ್ಲರೂ ಸಂತೋಷಪಟ್ಟರು. ॥೬೧॥

ಆ ಋಷಿಗಳ ಮಧ್ಯೇ ಇರುವ ಧರ್ಮರತನೆಂಬ ಬ್ರಾಹ್ಮಣೋತ್ತಮನನ್ನು ಕುರಿತು ನಿನಗೆ ವಿಷ್ಣುತ್ವವನ್ನು ಕೊಟ್ಟಿರುವೆನೆಂದು ನಂದಿಯು ಹೇಳಿ ಆತನನ್ನು ಸಂತೋಷಪಡಿಸಿದನು. ॥೬೨॥

ಹೀಗೆಯೇ ಬ್ರಹ್ಮ, ಇಂದ್ರ, ಚಂದ್ರ ಮೊದಲಾದವರ ಅಧಿಕಾರವನ್ನೆಲ್ಲಾ ಆ ಋಷಿಗಳಿಗೆ ಕೊಟ್ಟು ಅವರವರನ್ನು ಆಯಾ ಲೋಕಗಳಿಗೆ ಕಳುಹಿಸಿದನು. ॥೬೩॥

ಆ ಮುನಿಶ್ರೇಷ್ಠರು ನಂದಿಕೇಶ್ವರನ ಅನುಗ್ರಹವನ್ನು ಪಡೆದು ತಮ್ಮ ತಮ್ಮ ಅಧಿಕಾರವನ್ನು ಹೊಂದಿ ಆಯಾ ಲೋಕದಲ್ಲಿ ಸುಖವಾಗಿದ್ದರು. ॥೬೪॥

ಬ್ರಾಹ್ಮಣರೇ, ಆ ಮುನಿಗಳಿಗೆ ಲಿಂಗಪೂಜಾಫಲದಿಂದ ಅಂತಹ ಪದವಿಯು ಲಭಿಸಿತು. ಮಹಾದೇವನ ಲಿಂಗಪೂಜೆಯು ನಾವು ಬೇಡಿದುದನ್ನು ಖಂಡಿತವಾಗಿಯೂ ನೀಡುವುದು ಎಂದು ನಂದಿಕೇಶನು ಹೇಳಿದನು. ॥೬೫॥

|| ನಾರದ ಉವಾಚ ||

ಇತಿ ಪುಣ್ಯಕಥಾಂ ಶ್ರುತ್ವಾ ಸರ್ವಪಾಪಪ್ರಣಾಶಿನೀಂ ।
ಹೃಷ್ಟಾಂತಃಕರಣಾಃ ಸರ್ವೇ ಪ್ರಾಹುರ್ಗೌತಮಮಾದರಾತ್ ॥೬೬॥

ಅಗ್ನಿಕೇಶಾದಯಃ ಸರ್ವೇ ಮುನಯಃ ಶಾಂಭವೋತ್ತಮಾಃ ।
ಬ್ರಾಹ್ಮಣಾನಾಂ ವಿಶೇಷೇಣ ಮುಕ್ತಿಸ್ಸ್ಯಾತ್ಕಥಮಿತ್ಯಪಿ ॥೬೭॥

|| ಗೌತಮ ಉವಾಚ ||

ಶಾಂಕರಾಣಾಂ ಕರತಲೇ ಮುಕ್ತಿರಾಮಲಕೋಪಮಾ ।
ವೇದಾಂತೇಷ್ವೇವ ನಿರ್ಣೀತಾ ಸಾ ಮುಕ್ತಿಃ ಸುಲಭಾ ಖಲು ॥೬೮॥

ಯದಿ ದೈವಾನ್ಮಹಾದೇವೇ ಭಕ್ತಿರವ್ಯಭಿಚಾರಿಣೀ ।
ತದಾ ತಯಾ ಮುಕ್ತಿಕಾಂತಾ ಸಹ ತಿಷ್ಠತಿ ಸರ್ವದಾ ॥೬೯॥

---

ಹೀಗೆ ಸಮಸ್ತ ಪಾಪಗಳನ್ನೂ ನಾಶಮಾಡುವ ಪುಣ್ಯಕಥೆಯನ್ನು ಕೇಳಿದ ಆ ಎಲ್ಲಾ ಋಷಿಗಳೂ ಸಂತೋಷಪಟ್ಟು, ಪುನಃ ಗೌತಮನನ್ನು ಆದರದಿಂದ ಕೇಳಿದರು. ||೬೬||

ಅಗ್ನಿಕೇಶನೇ ಮೊದಲಾದ ಎಲ್ಲಾ ಋಷಿಗಳೂ ಶಿವಭಕ್ತರಾಗಿದ್ದರು. ಅವರೆಲ್ಲರೂ ಮುಕ್ತಿಯನ್ನು ಹೊಂದಿದರು ಎಂದು ಹೇಳಿದೆಯಲ್ಲಾ! ಆ ಬ್ರಾಹ್ಮಣರಿಗೆ ವಿಶೇಷವಾಗಿ ಮುಕ್ತಿಯು ಹೇಗೆ ಲಭಿಸಿತು ಎಂದು ಋಷಿಗಳು ಗೌತಮನನ್ನು ಮತ್ತೆ ಕೇಳಿದರು. ಆಗ ಗೌತಮನು ಹೀಗೆಂದನು. ||೬೭||

"ಶೈವಭಕ್ತರಿಗೆ ಮುಕ್ತಿಯೆಂಬುದು ಕೈಯಲ್ಲಿ ಹಿಡಿದಿರುವ ಬದರೀಹಣ್ಣಿನ ಹಾಗೆ ಸುಲಭವಾಗಿ ಗೋಚರಿಸುವುದು. ವೇದಾಂತಶಾಸ್ತ್ರದಲ್ಲಿ ನಿರ್ಣಯಿಸಲ್ಪಟ್ಟಿರುವ ಮುಕ್ತಿಸ್ವರೂಪವೂ ಅದನ್ನು ಹೊಂದುವ ಮಾರ್ಗವೂ ಶೈವರಿಗೆ ಗೊತ್ತು. ||೬೮||

ಅದೃಷ್ಟ ವಿಶೇಷದಿಂದ ಶ್ರೀಪರಮೇಶ್ವರನಲ್ಲಿ ಸ್ಥಿರವಾದ ಭಕ್ತಿಯು ಹುಟ್ಟುವುದಾದರೆ ಆ ಭಕ್ತಿಯಿಂದ ಮುಕ್ತಿಕಾಂತೆಯು ಮನುಷ್ಯರೊಡನೆ ಯಾವಾಗಲೂ ಇರುವಳು. ||೬೯||

ಸಾಚೇನ್ಮ್ಲಾನಂ ತದಾ ಭಕ್ತಿಸ್ತಯಾಸಹ ನ ತಿಷ್ಠತಿ ।
ನೀಚೇನ ಸಹ ಸಂವಾಸೋ ಮಹತಾಂ ನೋಚಿತೋ ಯತಃ ॥೭೦॥

ಸಾಪಿ ಭಕ್ತಿರ್ಮಹಾದೇವೇ ಬಹುಜನ್ಮಾರ್ಜಿತಃ ಫಲೈಃ ।
ಪರಂ ಪುಣ್ಯೈರ್ಭವತಿ ಸಾ ವಸ್ತುತಸ್ತ್ವತಿದುರ್ಲಭಾ ॥೭೧॥

ಘೋರೇಣ ತಪಸಾ ದಾನೈರಭ್ಯಸ್ತೈರ್ವಿವಿಧೈರಪಿ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೭೨॥

ರುದ್ರಾಕ್ಷಧಾರಣಾಭ್ಯಾಸಾದ್ಯಾವಜ್ಜೀವಂ ಪ್ರಯತ್ನತಃ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೭೩॥

ಅಭ್ಯಸ್ತೋದ್ಧೂಲನೇನಾಪಿ ಯಾವಜ್ಜೀವಂ ಪ್ರಯತ್ನತಃ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೭೪॥

---

ಆ ಶಂಭುಭಕ್ತಿಯು ಕುಂಠಿತವಾಗಿದ್ದರೆ ಅವರೊಡನೆ ಮುಕ್ತಿಕಾಂತೆಯು ವಾಸಿಸಲಾರಳು. ಕೀಳುಜನರೊಡನೆ ವಾಸಿಸುವಿಕೆಯು ಮಹಾತ್ಮರಿಗೆ ಉಚಿತವಲ್ಲ ವಷ್ಟೇ. ॥೭೦॥

ಶ್ರೀಮಹಾದೇವನಲ್ಲಿ ಆ ಭಕ್ತಿಯು ಹುಟ್ಟುವುದಾದರೆ ಬಹುಜನ್ಮಗಳಲ್ಲಿ ಮಾಡಿದ ಪುಣ್ಯಕರ್ಮಗಳ ಫಲವಿದ್ದರೆ ಮಾತ್ರ ಅದು ಸಾಧ್ಯ. ವಿಚಾರಿಸಿ ನೋಡಿದರೆ ವಸ್ತುಗತ್ಯಾ ಸಿಕ್ಕುವುದು ಕಷ್ಟಸಾಧ್ಯ. ॥೭೧॥

ಅತ್ಯುಗ್ರವಾದ ತಪಸ್ಸು, ದಾನ, ಅಭ್ಯಾಸ (ಯೋಗಾಭ್ಯಾಸ) ಇವುಗಳಿಂದ ಶಿವನಲ್ಲಿ ಭಕ್ತಿಯು ಹುಟ್ಟಬೇಕೇ ಹೊರತು ಬೇರೆ ಇಲ್ಲ. ಅಂತಹ ಭಕ್ತಿಯೇ ಸ್ಥಿರವಾಗಿ ನಿಲ್ಲುವುದು. ॥೭೨॥

ತನ್ನ ಜೀವಮಾನವಿರುವತನಕ ಪ್ರತಿನಿತ್ಯವೂ ರುದ್ರಾಕ್ಷಮಾಲೆಗಳನ್ನು ಧರಿಸುವುದು ಮತ್ತು ಶಿವನಲ್ಲಿಯೇ ಸ್ಥಿರಮನಸ್ಸಿಡುವುದು. ಈ ಅಭ್ಯಾಸಗಳಿಂದ ಶ್ರೀಮಹಾದೇವನಲ್ಲಿ ಸ್ಥಿರವಾದ ಭಕ್ತಿಯು ಉದಯಿಸುವುದು. ॥೭೩॥

ಯೋಗಾಭ್ಯಾಸಮಾಡುವಿಕೆ ಮತ್ತು ಭಸ್ಮೋದ್ಧೂಲನಮಾಡಿಕೊಳ್ಳುವುದು, ಇವುಗಳಿಂದ ಶ್ರೀಮಹಾದೇವನಲ್ಲಿ ಸ್ಥಿರವಾದ ಭಕ್ತಿಯು ಮನುಷ್ಯನಿಗೆ ಲಭಿಸುತ್ತದೆ. ॥೭೪॥

ಅನ್ನರಾಶಿಪ್ರದಾನೇನ ಶಾಂಭವೇಭ್ಯಃ ಪ್ರಯತ್ನತಃ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೭೫॥

ಗೋಕೋಟೀನಾಂ ಪ್ರದಾನೇನ ಶಾಂಭವೇಭ್ಯಃ ಪ್ರಯತ್ನತಃ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೭೬॥

ನಾನಾರತ್ನಪ್ರದಾನೇನ ಶಾಂಭವೇಭ್ಯಃ ಪ್ರಯತ್ನತಃ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೭೭॥

ದಿವ್ಯಪ್ರಾಸಾದದಾನೇನ ಶಾಂಭವೇಭ್ಯಃ ಪ್ರಯತ್ನತಃ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೭೮॥

ಸಸ್ಯಪೂರ್ಣಮಹೀದಾನೇ ಶಾಂಭವೇಭ್ಯಃ ಪ್ರಯತ್ನತಃ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೭೯॥

ಕನ್ಯಾಕೋಟಿಪ್ರದಾನೇನ ಶಾಂಭವೇಭ್ಯಃ ಪ್ರಯತ್ನತಃ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೮೦॥

---

ಶೈವಭಕ್ತರಿಗೆ ವಿಶೇಷವಾಗಿ ಅನ್ನದಾನಮಾಡುವುದರಿಂದ ಶ್ರೀಶಿವನಲ್ಲಿ ಅಚಂಚಲವಾದ ಭಕ್ತಿಯು ಹುಟ್ಟುವುದು. ॥೭೫॥

ಶಾಂಭವರಿಗೆ ಪ್ರಯತ್ನದಿಂದಲಾದರೂ ಒಂದು ಕೋಟಿ ಗೋವುಗಳನ್ನು ದಾನಮಾಡಿದರೆ ಶ್ರೀಶಿವನಲ್ಲಿ ಆಗ ಅವರಿಗೆ ಸ್ಥಿರವಾದ ಭಕ್ತಿಯು ಲಭಿಸುತ್ತದೆ.॥೭೬॥

ಶಂಕರನ ಭಕ್ತರಿಗೆ ಅನೇಕ ತರಹದ ರತ್ನಗಳನ್ನು ದಾನಮಾಡುವುದರಿಂದ ಶಿವಭಕ್ತಿಯು ಅಚಂಚಲವಾಗಿ ನಮಗೆ ಲಭಿಸುವುದು. ॥೭೭॥

ಮನೋಹರವಾದ ಉಪ್ಪರಿಗೆ ಮನೆಯನ್ನು ಕಟ್ಟಿಸಿ ಅದನ್ನು ಶೈವರಿಗೆ ದಾನಮಾಡಿದ್ದೇ ಆದರೆ, ಅದರಿಂದ ಸ್ಥಿರವಾದ ಶಿವಭಕ್ತಿಯು ನಮ್ಮಲ್ಲಿ ಹುಟ್ಟುವುದು. ॥೭೮॥

ಸಸ್ಯಗಳಿಂದ ತುಂಬಿದ ಭೂಮಿಯನ್ನು ಶೈವರಿಗೆ ದಾನಮಾಡಿದರೆ ಪರಮೇಶ್ವರಭಕ್ತಿಯು ನಮ್ಮಲ್ಲಿ ಸ್ಥಿರವಾಗಿ ನಿಲ್ಲುವುದು. ॥೭೯॥

ಪರಶಿವಪೂಜಕರಿಗೆ ಒಂದು ಕೋಟಿ ಕನ್ಯಾದಾನವನ್ನು ಮಾಡಿದರೆ ಆ ಪುಣ್ಯದಿಂದ ಶಿವನಲ್ಲಿ ಸ್ಥಿರವಾದ ಭಕ್ತಿಯು ನಮ್ಮಲ್ಲಿ ಹುಟ್ಟುವುದು. ॥೮೦॥

ಸರ್ವೇಷ್ವಪಿ ಚ ಕಾಲೇಷು ಮಹಾಶಾಂಭವಸೇವಯಾ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೮೧॥

ಬಿಲ್ವವೃಕ್ಷವನಾನಾಂ ಚ ಕರಣೇ ಶಿವಮಂದಿರೇ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೮೨॥

ಪ್ರಸೂನರಾಶಿದಾನೇನ ಶಿವಲಿಂಗೇ ಶಿವಾತ್ಮಕೇ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೮೩॥

ಸರೋವರಾಣಾಂ ಕರಣೈಃ ಶ್ರೀಮಹಾದೇವಮಂದಿರೇ
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೮೪॥

ಸರ್ವಭೂಷಣದಾನೇನ ಶಾಂಭವೇಭ್ಯಃ ಪ್ರಯತ್ನತಃ
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೮೫॥

ತಟಾಕವಾಪೀನಿರ್ಮಾಣೈಃ ಶ್ರೀಮಹಾದೇವಮಂದಿರೇ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೮೬॥

---

ಎಲ್ಲಾ ಕಾಲದಲ್ಲಿಯೂ ಮಹಾತ್ಮರಾದ ಶೈವರನ್ನು ಸೇವೆಮಾಡುವುದರಿಂದ ಶಂಕರನಲ್ಲಿ ನಿಶ್ಚಲವಾದ ಭಕ್ತಿಯು ಹುಟ್ಟುವುದು. ॥೮೧॥

ಈಶ್ವರ ದೇವಾಲಯದಲ್ಲಿ ಬಿಲ್ವವೃಕ್ಷಗಳ ತೋಟಗಳನ್ನು ಮಾಡಿಸುವುದರ ಫಲದಿಂದ ಶ್ರೀಶಿವನಲ್ಲಿ, ನಿಶ್ಚಲವಾದ ಭಕ್ತಿಯು ಜನಿಸುವುದು. ॥೮೨॥

ಶಿವಸ್ವರೂಪವಾದ ಶಿವಲಿಂಗದಮೇಲೆ ಪುಷ್ಪರಾಶಿಯನ್ನು ಹಾಕಿ ಪೂಜಿಸಿದರೆ ಅದರ ಪುಣ್ಯದಿಂದ ಶಿವನಲ್ಲಿ ಅಚಂಚಲವಾದ ಭಕ್ತಿಯುದಯಿಸುವುದು. ॥೮೩॥

ಶ್ರೀಶಿವನ ದೇವಾಲಯದಲ್ಲಿ ಕೊಳಗಳನ್ನು ಮಾಡಿಸಿದ ಸುಕೃತದಿಂದ ಶಿವವಿಷಯಕವಾದ ನಿಶ್ಚಲಭಕುತಿಯು ನಮ್ಮಲ್ಲಿ ಹುಟ್ಟುವುದು. ॥೮೪॥

ಶ್ರೀಶಂಕರನ ಭಕ್ತರಿಗೆ ಎಲ್ಲಾವಿಧವಾದ ಆಭರಣಗಳನ್ನೂ ದಾನಮಾಡಿದರೆ ಅದರಿಂದ ಶ್ರೀಪರಮೇಶ್ವರನಲ್ಲಿ ನಿಶ್ಚಲವಾದ ಭಕ್ತಿಯು ಲಭಿಸುವುದು. ॥೮೫॥

ಶ್ರೀಪರಮೇಶ್ವರನ ದೇವಸ್ಥಾನದಲ್ಲಿ ಬಾವಿ, ಕೆರೆ ಇವುಗಳನ್ನು ತೋಡಿಸುವುದರಿಂದಲೂ ಶ್ರೀಶಿವಭಕ್ತಿಯು ಸ್ಥಿರವಾಗಿ ನಮಗೆ ಲಭಿಸುವುದು. ॥೮೬॥

ದೀಪಮಾಲಾಪ್ರದಾನೈಶ್ಚ ಶ್ರೀಮಹಾದೇವಮಂದಿರೇ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೮೭॥

ರಮ್ಯಹರ್ಮ್ಯವಿನಿರ್ಮಾಣೈಃ ಶ್ರೀಮಹಾದೇವಮಂದಿರೇ ।
ಭವಿಷ್ಯತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೮೮॥

ಪುರಾ ಕುರೂಣಾಮಧಿಪೋ ವಸಿಷ್ಠಂ ಮುನಿಪುಂಗವಂ ।
ದದರ್ಶ ವಿಪಿನಶ್ರೇಷ್ಠೇ ಬಿಲ್ವಮೂಲಸಮಾಶ್ರಿತಂ ॥೮೯॥

ಪ್ರಣಮ್ಯ ದಂಡವದ್ಭೂಮೌ ಕೃತ್ವಾ ಭಕ್ತ್ಯಾ ಪ್ರದಕ್ಷಿಣಂ ।
ಪೂಜಯಾಮಾಸ ಬಿಲ್ವಾದ್ಯೈಃ ಶಿವಭಕ್ತವರಂ ಗುರುಂ ॥೯೦॥

ತತೋ ಬಭಾಷೇ ವಿನಯಾತ್ ಕೃತಾಂಜಲಿಪುಟೋ ನೃಪಃ ।
ಮೃಗಯಾರ್ಥಂ ಮಹಾರಣ್ಯಂ ಪ್ರವಿಷ್ಟೋಽಸ್ಮ್ಯಧುನಾ ಗುರೋಃ ॥೯೧॥

ಭವದ್ದರ್ಶನಮಾತ್ರೇಣ ಸಾಪಿ ಬುದ್ಧಿರ್ಲಯಂ ಗತಾ ।
ಇದಂ ಬಿಲ್ವತರುವ್ಯಾಪ್ತಂ ವನಂ ಮುನಿಜನಾಶ್ರಿತಂ ॥೯೨॥

---

ಮಹಾದೇವನ ದೇವಾಲಯದಲ್ಲಿ ದೀಪೋತ್ಸವವನ್ನು ಮಾಡಿಸಿದ್ದೇ ಆದರೆ ಶ್ರೀಮಹಾದೇವನಲ್ಲಿ ಸ್ಥಿರವಾದ ಭಕ್ತಿಯು ನಮಗೆ ಲಭಿಸುವುದು. ॥೮೭॥

ಶ್ರೀಶಂಕರನ ದೇವಾಲಯದ ಮುಂದೆ ಮನೋಹರವಾದ ಸೌಧವನ್ನು ಕಟ್ಟಿಸಿದರೆ ಅದರ ಪುಣ್ಯದಿಂದ ಶಂಕರನಲ್ಲಿ ಸ್ಥಿರವಾದ ಭಕ್ತಿಯು ನಮಗೆ ಹುಟ್ಟುವುದು. ॥೮೮॥

ಹಿಂದೆ ಒಂದುಸಾರಿ ಕುರುರಾಜನಾದ ಧೀರನೊಬ್ಬನು ಶ್ರೇಷ್ಠವಾದ ವನದಲ್ಲಿ ಬಿಲ್ವವೃಕ್ಷದ ಕೆಳಗೆ ಕುಳಿತುಕೊಂಡಿದ್ದ ವಸಿಷ್ಠ ಋಷಿಗಳನ್ನು ನೋಡಿದನು. ॥೮೯॥

ಒಡನೆಯೇ ಅವರಿಗೆ ಭಕ್ತಿಯಿಂದ ದಂಡಪ್ರಣಾಮ ಮಾಡಿ, ಬಿಲ್ವಾದಿಗಳಿಂದ ಶಿವಪೂಜಾಗ್ರಗಣ್ಯನೂ, ಗುರುವೂ ಆದ ವಸಿಷ್ಠಮುನಿಯನ್ನು ಪೂಜಿಸಿದನು. ॥೯೦॥

ಬಳಿಕ ಕೈಮುಗಿದುಕೊಂಡು “ ಎಲೈ ಗುರುವೇ! ನಾನು ಬೇಟೆಯಾಡುವುದಕ್ಕಾಗಿ ಈ ದೊಡ್ಡ ಅರಣ್ಯವನ್ನು ಪ್ರವೇಶಮಾಡಿದೆನು. ॥೯೧॥

ತಮ್ಮ ದರ್ಶನಮಾತ್ರದಿಂದಲೇ ಆ ಬೇಟೆಯ ಬುದ್ಧಿಯು ನಷ್ಟವಾಯಿತು.

ವಿಭೂತಿರಾಶಯೋ ದೃಷ್ಟಾಃ ಶ್ರೌತಾನಲಸಮುದ್ಭವಾಃ ।
ರುದ್ರಾಕ್ಷತರವೋ ದೃಷ್ಟಾಃ ಸರ್ವಕಷ್ಟನಿವಾರಕಾಃ ॥೯೩॥

ತತ್ತನ್ಮೂಲೇಷು ಲಿಂಗಾನಿ ನಾರ್ಮದಾನಿ ವಿಶೇಷತಃ ।
ದೃಷ್ಟಾನಿ ಬಿಲ್ವಪತ್ರಾದ್ಯೈಃ ಪೂಜಿತಾನಿ ಚ ಕೋಟಿಶಃ ॥೯೪॥

ತಾನಿ ಲಿಂಗಾನಿ ತದ್ಬಿಲ್ವಛಾಯಾಸಂಛಾದಿತಾನ್ಯಪಿ ।
ಏತೇಽಪಿ ತರವೋ ಧನ್ಯಾಃ ಶಿವಪೂಜೋಪಯೋಗಿನಃ ॥೯೫॥

ಮುನಯೋ ವೀತರಾಗಾಶ್ಚ ಭಸ್ಮೋದ್ಧೂಲಿತವಿಗ್ರಹಾಃ ।
ತ್ರಿಪುಂಡ್ರಫಾಲಾಃ ಸರ್ವೇಽಪಿ ಸರ್ವೇ ರುದ್ರಾಕ್ಷಭೂಷಣಾಃ ॥೯೬॥

ವಾತಾಶನಾ ಜಲಾಹಾರಾ ನಿರಾಹಾರಾಶ್ಚ ಕೋಟಿಶಃ ।
ಪೂಜಯಂತಿ ಮಹಾದೇವಂ ಶಿವಲಿಂಗಸ್ವರೂಪಿಣಂ ॥೯೭॥

---

ಈ ಬಿಲ್ವವೃಕ್ಷಗಳಿಂದ ಪೂರ್ಣವಾದ ವನವೆಲ್ಲಾ ಮುನಿಜನರಿಂದ ವ್ಯಾಪ್ತವಾಗಿರುವುದು. ॥೯೨॥

ವೇದವಿಹಿತವಾದ ಅಗ್ನಿಹೋತ್ರಾದಿಗಳಿಂದ ಪವಿತ್ರವಾದ ಹೋಮಾಗ್ನಿಗಳ ಭಸ್ಮರಾಶಿಗಳನ್ನೂ, ಹಾಗೂ ಸಮಸ್ತ ಪಾಪಗಳನ್ನೂ ನಾಶಮಾಡುವ ರುದ್ರಾಕ್ಷ ವೃಕ್ಷಗಳ ಸಮೂಹವನ್ನೂ ನೋಡಿದೆನು. ॥೯೩॥

ಆ ಮರಗಳ ಮೂಲದಲ್ಲಿ ಕೋಟಿಗಟ್ಟಲೇ ಇರುವ ನಾರ್ಮದಲಿಂಗಗಳನ್ನು ನೋಡಿದೆನು. ಅವೆಲ್ಲವೂ ಬಿಲ್ವಪತ್ರೆ ಮುಂತಾದುವುಗಳಿಂದ ಪೂಜಿತವಾಗಿದ್ದುವು. ॥೯೪॥

ಆ ಲಿಂಗಗಳೆಲ್ಲವೂ ಬಿಲ್ವವೃಕ್ಷದ ನೆರಳುಗಳಿಂದ ಮುಚ್ಚಲ್ಪಟ್ಟಿದ್ದವು. ಆಹಾ! ಶಿವಪೂಜೆಗೆ ಉಪಯೋಗವಾಗುವ ಈ ಮರಗಳೇ ಧನ್ಯವಾದವುಗಳು. ॥೯೫॥

ಆ ವೃಕ್ಷಮೂಲಗಳಲ್ಲಿರುವವರೆಲ್ಲಾ ನಿಷ್ಕಾಮರಾದ ಮಹರ್ಷಿಗಳು. ಅವರೆಲ್ಲಾ ಭಸ್ಮಗಳನ್ನು ಮೈಗೆ ಲೇಪಿಸಿಕೊಂಡಿರುವರು. ಹಾಗೂ ತ್ರಿಪುಂಡ್ರವನ್ನು ಹಣೆಯಲ್ಲಿ ಧರಿಸಿರುವರು. ಮತ್ತು ಎಲ್ಲರೂ ರುದ್ರಾಕ್ಷಗಳಿಂದ ಭೂಷಿತರಾಗಿರುವರು. ॥೯೬॥

ಕೆಲವರು ಅವರಲ್ಲಿ ಗಾಳಿಯನ್ನೂ, ಜಲವನ್ನೂ ಭಕ್ಷಿಸುವರು. ಇನ್ನು ಕೆಲವರು ಆಹಾರವನ್ನೇ ತೆಗೆದುಕೊಳ್ಳುವುದಿಲ್ಲ. ಹೀಗೆ ಬಹುಸಂಖ್ಯೆಯಲ್ಲಿರತಕ್ಕ ಅವರೆಲ್ಲಾ ಶ್ರೀಶಿವರೂಪಿಯಾದ ಮಹಾಲಿಂಗವನ್ನು ಪೂಜೆಮಾಡುತ್ತಿರುವರು. ॥೯೭॥

ಧ್ಯಾತ್ವಾ ಸಾಂಬಂ ಮಹಾದೇವಮಾನಂದಾಶ್ರುಪರಿಪ್ಲುತಾಃ ।
ಪ್ರಣಮಂತಿ ಪ್ರಸ್ತುವಂತಿ ನೃತ್ಯಂತಿ ಚ ಹಸಂತಿ ಚ ॥೯೮॥

ಆಸ್ಫೋಟನಾನಿ ಕುರ್ವಂತಿ ಮದೋನ್ಮಾದಾಶ್ರಯಾ ಇವ ।
ಉಚ್ಚೈಃ ಪಠಂತಿ ಶ್ರೀರುದ್ರಂ ತತ್ತದರ್ಥವಿಬೋಧನಾತ್ ॥೯೯॥

ಬಿಲ್ವಪತ್ರಾಣಿ ರಮ್ಯಾಣಿ ಕ್ಷಾಲಿತಾನಿ ಪುನಃ ಪುನಃ ।
ಪ್ರಕ್ಷಿಪಂತಿ ಪ್ರಯತ್ನೇನ ಶಿವಲಿಂಗೇಷು ಭೂರಿಶಃ ॥೧೦೦॥

ಶಿವಲಿಂಗೇಷು ಯಾ ದೃಷ್ಟಿಸ್ತೇಷಾಂ ಸುಕೃತಕರ್ಮಣಾಂ ।
ಸಾ ನಾನ್ಯತ್ರ ಪ್ರಯಾತ್ಯೇವ ಧರ್ಮಧಾರಾನುವರ್ತಿನೀ ॥೧೦೧॥

ತೇಷಾಂ ದೃಷ್ಟಿರ್ಮಹಾಲಿಂಗೇ ಕಾಮಿನಾಂ ಕಾಮಿನೀಷ್ವಿವ ।
ದೃಷ್ಟಿರ್ನಾನ್ಯತ್ರ ಸಂಯಾತಿ ಧಾರಾರೂಪಾ ಪ್ರವರ್ತತೇ ॥೧೦೨॥

---

ಅಂಬಿಕೆಯೊಡನಿರುವ ಮಹಾದೇವನನ್ನು ಅವರು ಧ್ಯಾನಿಸಿ, ಆನಂದಾಶ್ರುವಿನಿಂದ ನೆನೆದುಹೋಗಿರುವರು. ಮತ್ತು ಶ್ರೀಶಿವನಿಗೆ ನಮಸ್ಕಾರಮಾಡುತ್ತಾ ಸ್ತೋತ್ರ ಮಾಡುವರು, ಕುಣಿಯುವರು, ಮತ್ತು ಸಂತೋಷದಿಂದ ನಗುವರು. ॥೯೮॥

ಹುಚ್ಚುಹಿಡಿದವರಹಾಗೆ ಚಪ್ಪಾಳೆಗಳನ್ನು ತಟ್ಟುತ್ತಿರುವರು. ಹಾಗೂ ಶ್ರೀರುದ್ರದ ಅರ್ಥವನ್ನು ತಿಳಿದು ಉಚ್ಚಸ್ವರದಿಂದ ಆ ರುದ್ರಮಂತ್ರವನ್ನು ಪಠಿಸುತ್ತಿರುವರು. ॥೯೯॥

ಮನೋಹರಗಳಾದ ಮತ್ತು ಸುಂದರವಾದ ಬಿಲ್ವಪತ್ರೆಗಳನ್ನು ಬಾರಿಬಾರಿಗೂ ಶಿವಲಿಂಗಗಳ ಮೇಲೆ ಹಾಕುವರು. ಅಂದರೆ ಬಿಲ್ವಪತ್ರೆಗಳಿಂದ ಲಿಂಗಾರ್ಚನೆಯನ್ನು ಸದಾ ಮಾಡುವರು. ॥೧೦೦॥

ಪುಣ್ಯಕರ್ಮಗಳನ್ನು ಆಚರಿಸಿರುವ ಆ ಋಷಿಗಳ ದೃಷ್ಟಿಯು ಧರ್ಮವನ್ನೇ ಅವಲಂಬಿಸಿರುವಂತೆ ಶಿವಲಿಂಗವನ್ನೇ ಯಾವಾಗಲೂ ಈಕ್ಷಿಸುತ್ತದೆ. ಸ್ಥಳಾಂತರಕ್ಕೆ ಅವರ ನೋಟವು ಪ್ರಸರಿಸುವಂತಿಲ್ಲ. ॥೧೦೧॥

ಆ ಋಷಿಗಳ ದೃಷ್ಟಿಯು ಮಹಾಲಿಂಗದಲ್ಲಿ, ಕಾಮುಕರ ದೃಷ್ಟಿಯು ಸುಂದರ ಸ್ತ್ರೀಯರನ್ನು ಎಡಬಿಡದೆ ಹಿಂಬಾಲಿಸುವಂತೆ ಅಡಗುತ್ತಿದೆಯೇ ಹೊರತು ಬೇರೆಕಡೆ ಹೋಗಲಾರದು. ॥೧೦೨॥

ಇದಂ ಭಾಗ್ಯಂ ಮಯಾ ದೃಷ್ಟಂ ದುರದೃಷ್ಟವಿನಾಶಕಂ ।
ಮಮಾಪ್ಯಾಗಮನೇ ಕಾಲೋ ಭೂಯಾನೇವಾಭವನ್ಮುನೇ ॥೧೦೩॥

ತೇ ದೃಶ್ಯಂತೇ ಮಯಾ ತೈಸ್ತು ನ ದೃಷ್ಟೋಽಹಂ ಮಹಾಮುನೇ ।
ಅತಃ ಪರಂ ತು ವಿರತಿಃ ಸಂಸಾರಾದಭವನ್ಮಮ ॥೧೦೪॥

ಸಂಸಾರಪಾಶಬದ್ಧಾನಾಂ ಲೋಕಾನಾಂ ಮೋಕ್ಷಸಾಧನಂ ।
ಕಿಮಸಾಧಾರಣಂ ದೃಷ್ಟಂ ತನ್ಮಹ್ಯಂ ವಿನಿವೇದಯ ॥೧೦೫॥

॥ ವಸಿಷ್ಠ ಉವಾಚ ॥

ಸಂಸಾರಪಾಶನಾಶಾಯ ಪಶುಪಾಶವಿಮೋಚಕಂ ।
ಕಾಲಕಾಲಂ ಮಹಾರುದ್ರಂ ನಿತ್ಯಂ ಪಶುಪತಿಂ ಭಜ ॥೧೦೬॥

ಸಂಸಾರಪಾಶನಿರ್ಮೂಲಕಾರಣಂ ಲಿಂಗಪೂಜನಂ ।
ತೇನ ತತ್ಪಾಪಶಾಂತಿಃ ಸ್ಯಾತ್ ತದನ್ಯೇನ ನ ಸರ್ವಥಾ ॥೧೦೭॥

---

ಇಂತಹ ಪಾಪವನ್ನು ನಿವಾರಣೆಮಾಡುವ ಸಾಮರ್ಥ್ಯವುಳ್ಳ ಸುಂದರದೃಶ್ಯವನ್ನು ನಾನು ಬರುವಾಗ ಅನೇಕವಾಗಿ ನೋಡಿದೆನು. ॥೧೦೩॥

ನಾನು ಮಾತ್ರ ಆ ಋಷಿಗಳನ್ನು ನೋಡಿದೆನೇ ಹೊರತು ಅವರು ಮಾತ್ರ ನನ್ನನ್ನು ನೋಡಲಿಲ್ಲ. ಆಗಲೇ ನನಗೆ ಸಂಸಾರದಲ್ಲಿ ಬಹಳ ವೈರಾಗ್ಯವು ಹುಟ್ಟಿತು. ॥೧೦೩॥

ಸಂಸಾರವೆಂಬ ಹಗ್ಗದಿಂದ ಕಟ್ಟಿಬಿದ್ದ ಜನಗಳಿಗೆ ಆದರದಿಂದ ಬಿಡಿಸಿಕೊಳ್ಳಲು ಸಾಧ್ಯವಾದ ಯಾವುದೋ ಒಂದು ವಿಲಕ್ಷಣವಾದ ಉಪಾಯವು ತಮ್ಮಿಂದ ನೋಡಲ್ಪಟ್ಟಿದೆಯಲ್ಲಾ! ಅದನ್ನು ನನಗೆ ತಿಳಿಯಹೇಳಬೇಕು" ಎಂದು ಆ ಕುರುರಾಜನು ಬೇಡಿಕೊಂಡನು. ॥೧೦೫॥

ಎಲೈ ರಾಜನೇ, ಸಂಸಾರವೆಂಬ ಪಾಶವನ್ನು ಬಿಡಿಸಿಕೊಂಡು, ಅನಾದಿಸಿದ್ಧವಾಗಿರುವ ಪಶುತ್ವವನ್ನು ಕಳೆದುಕೊಳ್ಳಬೇಕಾದರೆ ನೀನು ಯಮನಿಗೂ ಯಮನಾದ ಪಶುಪತಿಯನ್ನು ಭಜನೆಮಾಡು ಎಂದು ಮುಂತಾಗಿ ವಸಿಷ್ಠನು ಉಪದೇಶಿಸಿದನು. ॥೧೦೬॥

ಸಂಸಾರಬಂಧವನ್ನು ನಾಶಮಾಡಲು ಲಿಂಗಪೂಜೆಯೇ ಮುಖ್ಯಸಾಧನ. ಆ ಲಿಂಗಪೂಜೆಯಿಂದಲೇ ಸಂಸಾರದಲ್ಲಿಯ ಪಾಪಗಳು ನಾಶಹೊಂದುವುವು. ಅದನ್ನು ಬಿಟ್ಟರೆ ಬೇರೆ ಮತ್ತೊಂದು ಅದಕ್ಕೆ ಸದೃಶವಾದುದು ಇಲ್ಲ. ॥೧೦೭॥

ರಾಜ್ಯಂ ಭೋಗಂ ವಿಹಾಯಾತ್ರ ಶಿವಲಿಂಗಾರ್ಚನಂ ಕುರು ।
ಅನಿತ್ಯರಾಜ್ಯಭೋಗೇಷು ವಿರತೋ ಭವ ಸರ್ವದಾ ॥೧೦೮॥

ಯದಸ್ತಿ ಭಾಗ್ಯಮಧುನಾ ತೇನ ಶಂಕರಮರ್ಚಯ ।
ಶಿವಸತ್ಕೃತಭಾಗ್ಯಾನಾಂ ಭಾಗ್ಯಂ ಮುಕ್ತಿಶ್ಚ ಜಾಯತೇ ॥೧೦೯॥

ಇದಮೇವ ಹಿ ಭಾಗ್ಯಾನಾಮಾರ್ಜಿತಾನಾಂ ಫಲಂ ನೃಪ ।
ಯತ್ಸಂತತಮುಮಾಕಾಂತಲಿಂಗಾಭ್ಯರ್ಚನಮಾದರಾತ್ ॥೧೧೦॥

ಶಿವಲಿಂಗಾರ್ಚನೇನೈವ ಸರ್ವಥಾ ಕಾಲಯಾಪನೇ ।
ನ ಕಾಲಾದಪಿ ಭೀತಿಃ ಸ್ಯಾದನ್ಯಥಾ ಸಾ ಬಲೀಯಸೀ ॥೧೧೧॥

ಅದ್ಯ ಪ್ರಭೃತಿ ವಿತ್ತಾನಾಮಾರ್ಜಿತಾನಾಂ ಶಿವಾರ್ಚನೇ ।
ಉಪಯೋಗೋ ಯದಿ ತದಾ ಸಫಲಂ ಸ್ಯಾತ್ತದರ್ಜನಂ ॥೧೧೨॥

---

ನೀನು ರಾಜ್ಯಸುಖವನ್ನು ತ್ಯಜಿಸಿ ಲಿಂಗಾರ್ಚನೆಯನ್ನು ಮಾಡು. ಏಕೆಂದರೆ ಆ ರಾಜ್ಯಸುಖಗಳು ನಶ್ವರವಾದವುಗಳು. ಆದುದರಿಂದಲೇ ಅವುಗಳಿಂದ ವೈರಾಗ್ಯ ವನ್ನು ಹೊಂದು. ॥೧೦೮॥

ಈಗ, ನಿನಗೆ ಎಷ್ಟು ಐಶ್ವರ್ಯವಿದೆಯೋ ಅಷ್ಟರಲ್ಲೇ ಶಿವಪೂಜೆಯನ್ನು ಮಾಡು. ಶಿವಪೂಜೆಯಿಂದ ಸುಕೃತವನ್ನು ಸಂಪಾದಿಸಿದವರಿಗೆ ಐಶ್ವರ್ಯವೂ ಮುಕ್ತಿಯೂ ಹಸ್ತಗತವಲ್ಲವೆ! ॥೧೦೯॥

ರಾಜನೇ, ಯಾವಾಗಲೂ ಉಮಾಕಾಂತನಾದ ಶಿವನ ಲಿಂಗಾರ್ಚನೆಯಿಂದ ಮನುಷ್ಯನು ಈ ಜನ್ಮದಲ್ಲಿಯೇ ಅದರ ಭೋಗವನ್ನು ಅನುಭವಿಸುವನು. ॥೧೧೦॥

ಯಾವಾಗಲೂ ಲಿಂಗಾರ್ಚನಮಾಡುತ್ತಾ ಕಾಲ ಕಳೆದರೆ ನಿಜವಾಗಿಯೂ ಆತನಿಗೆ ಯಮನಿಂದಲೂ ಭೀತಿಯಿಲ್ಲ. ಇಲ್ಲದಿದ್ದರೆ ಮೃತ್ಯುಭೀತಿಯು ಎಲ್ಲದ ಕ್ಕಿಂತಲೂ ಬಲವಾದದ್ದು ಎಂದೆನಿಸುವುದು. ॥೧೧೧॥

ಈ ದಿನ ಮೊದಲುಗೊಂಡು ಸಂಪಾದಿಸಿದ ಹಣವನ್ನೆಲ್ಲಾ ಶಿವಪೂಜೆಗಾಗಿ ಸಮರ್ಪಿಸಿದರೆ ಆಗ ಆ ಧನಾರ್ಜನೆಯು ಸಫಲವಾಗುತ್ತದೆ. ॥೧೧೨॥

ಅನ್ಯಥಾ ತದ್ಧನಂ ಸರ್ವಂ ಪ್ರಯಾಸೇನ ಸಮಾರ್ಜಿತಂ ।
ದುಃಖೇನ ಲಯಮಾಸಾದ್ಯ ನ ಸುಖಾಯ ಭವಿಷ್ಯತಿ ॥೧೧೩॥

ಶಂಕರಾಯ ಮಹಾರ್ಹಾಣಿ ಹರ್ಮ್ಯಾಣಿ ಮಣಿಕೋಟಿಭಿಃ ।
ಕಾರಯಸ್ವಾತಿಯತ್ನೇನ ತತ್ತೇಷಾಂ ಫಲಮಕ್ಷತಂ ॥೧೧೪॥

ದಿವ್ಯರತ್ನರಥೈರ್ನಿತ್ಯಂ ಮಹಾದೇವೋತ್ಸವಾನ್ಯತಃ ।
ಅನ್ವಯೇ ತವ ಭಾಗ್ಯೇನ ಯದಿ ಸ್ಯಾದನ್ವಯೋ ಮಹಾನ್ ॥೧೧೫॥

ಅನ್ನರಾಶಿಪ್ರದಾನೇನ ಶಿವನೈವೇದ್ಯಕಲ್ಪನಂ ।
ಕುರು ಯತ್ನೇನ ಸತತಂ ತೇನ ತುಷ್ಟಃ ಶಿವೋ ಭವೇತ್ ॥೧೧೬॥

ಕಿಮನ್ಯದತ್ರ ಕರ್ತವ್ಯಂ ಯಾವದಸ್ತಿ ಧನಂ ತವ ।
ತಾವನ್ನಿವೇದಯೇಶಾಯ ತೇನ ಧನ್ಯಂ ಚ ಜೀವನಂ ॥೧೧೭॥

---

ಇಲ್ಲದಿದ್ದರೆ ಬಹಳ ಆಯಾಸದಿಂದ ಸಂಪಾದಿಸಿದ ಹಣವೆಲ್ಲಾ ದುಃಖದಿಂದ ನಷ್ಟವಾಗುತ್ತದೆಯೇ ಹೊರತು ಸುಖವಾಗಿ ಅದು ಪರಿಣಮಿಸಲಾರದು. ॥೧೧೩॥

ಶಿವನಿಗಾಗಿ ಸುಂದರವಾದ ಮತ್ತು ಬೆಲೆಬಾಳುವ ಸೌಧಗಳನ್ನೂ, ಮಣಿ ಕೋಟೆಗಳನ್ನು ಖರ್ಚುಮಾಡಿ ಕಟ್ಟಿಸು. ಅದರಿಂದ ನಿನಗೆ ಬರುವ ಫಲವೆಂದಿಗೂ ನಾಶವಾಗಲಾರದು. ॥೧೧೪॥

ಮನೋಹರವಾದ ರತ್ನಗಳಿಂದ ಮಾಡಿಸಿದ ರಥಗಳಿಂದ ನೀನು ಮಹಾ ದೇವನಿಗೆ ಉತ್ಸವವನ್ನು ಮಾಡಿಸು. ನೀನು ಭೋಗ್ಯದ್ರವ್ಯಗಳನ್ನೂ ಆತನಿಗೆ ಅರ್ಪಿಸು. ಅಲ್ಲದೆ ಮಹಾವಂಶದಲ್ಲಿ ಹುಟ್ಟಿದ ನಿನಗೆ ಇದು ಅತ್ಯಂತ ಯೋಗ್ಯ ವಾದುದು. ॥೧೧೫॥

ಅನ್ನರಾಶಿಗಳನ್ನು ಶಿವನ ನೈವೇದ್ಯಕ್ಕಾಗಿ ಕಲ್ಪಿಸು. ಆಯಾಸಪಟ್ಟಾದರೂ ಈ ಕೆಲಸವನ್ನು ನೀನು ಮಾಡಬೇಕು, ಇದರಿಂದ ಶಿವನು ಸುಪ್ರೀತನಾಗಬಹುದು. ॥೧೧೬॥

ಒಟ್ಟಿನಲ್ಲಿ ನಿನ್ನ ಕರ್ತವ್ಯವೇನೆಂದರೆ ನಿನ್ನಲ್ಲಿರುವ ಎಲ್ಲಾ ಧನವನ್ನೂ ಶಿವನಿಗೆ ಅರ್ಪಿಸು. ಅದರಿಂದ ನಿನ್ನ ಜೀವನವು ಧನ್ಯವಾಗುತ್ತದೆ. ॥೧೧೭॥

ತಸ್ಯೈವ ಜನ್ಮ ಸಫಲಂ ಯದಾರ್ಜಿತಧನೈಃ ಸದಾ ।
ದಿವ್ಯೋಪಚಾರಸಂಪನ್ನಂ ಯದಿ ಸ್ಯಾದ್ಗಿರಿಶಾರ್ಚನಂ ॥೧೧೮॥

ಗಿರಿಶಾರ್ಚನಸಾಮರ್ಥ್ಯಾತ್ ಸಂಸಾರಭಯನಾಶನಂ ।
ನ ಕಾಲಭೀತಿರ್ವಾರ್ತಾಪಿ ನೃಪ ಸಂಸಾರಿಣಾಮಪಿ ॥೧೧೯॥

ಸರ್ವೈರ್ಯತ್ನೈಶ್ಚ ಕರ್ತವ್ಯಂ ಜೀವತಾ ಶಿವಪೂಜನಂ ।
ಶಿವಾರ್ಚನೇ ಕೃತೇ ಸರ್ವಂ ಧರ್ಮಜಾಲಂ ಕೃತಂ ಭವೇತ್ ॥೧೨೦॥

ಶಿವಪೂಜಾಪರೋ ಧರ್ಮಃ ಸರ್ವಧರ್ಮೋತ್ತಮಃ ಪರಃ ।
ಧರ್ಮಾಭಾಸತಯಾ ಜ್ಞೇಯಂ ತದನ್ಯದಿತಿ ಮನ್ಯತಾಂ ॥೧೨೧॥

ಅಯಮೇವೋಪದೇಶಸ್ತೇ ಸಂಸಾರಾದ್ವಿರತೋ ಭವ ।
ಸಂಸಾರೇ ನ ವಿಷಾಕಾರೇ ಲೇಶತೋಽಪಿ ಸುಖಂ ನೃಪ ॥೧೨೨॥

---

ಯಾವನು ತಾನು ಸಂಪಾದಿಸಿದ ಹಣವನ್ನೆಲ್ಲಾ ಖರ್ಚುಮಾಡಿ ಶ್ರೀಶಂಕರನಿಗೆ ದಿವ್ಯೋಪಚಾರಸಹಿತವಾದ ಪೂಜೆಯನ್ನು ಮಾಡುವನೋ ಆತನ ಜನ್ಮವೇ ಸಾರ್ಥಕವಾದುದು. ॥೧೧೮॥

ಶಿವಾರ್ಚನೆಯ ಬಲದಿಂದ ಸಂಸಾರಿಗಳಿಗೂ ಕೂಡ ಯಮನ ಹೆದರಿಕೆಯೂ, ಸಂಸಾರದ ಕಷ್ಟವೂ ದೂರಹೋಗುವುವು. ॥೧೧೯॥

ಮನುಷ್ಯನು ತಾನು ಬದುಕಿರುವಾಗಲೇ ಶಿವಪೂಜೆಯನ್ನು ಮಾಡಬೇಕು. ಶಿವಾರ್ಚನೆಯೊಂದನ್ನು ಮಾಡಿದರೆ ಎಲ್ಲಾ ಧರ್ಮವನ್ನೂ ಸಂಗ್ರಹಿಸಿದಂತೆಯೇ ಆಗುತ್ತದೆ. ॥೧೨೦॥

ಶಿವಪೂಜಾಪರವಾದ ಧರ್ಮವು ಎಲ್ಲಾ ಧರ್ಮಗಳಿಗಿಂತಲೂ ಶ್ರೇಷ್ಠವಾದುದೆಂದು ಅಭಿಪ್ರಾಯ. ಉಳಿದ ಧರ್ಮಗಳೆಲ್ಲಾ ಧರ್ಮಗಳ ಹಾಗೆ ತೋರುತ್ತವೆಯೇ ಹೊರತು ನಿಜವಾದ ಧರ್ಮಗಳಲ್ಲ, ಎಂದು ಭಾವಿಸು. ॥೧೨೧॥

ರಾಜನೇ, ನಿನಗೆ ಇದೇ ಉಪದೇಶವು, ಇದರ ಬಲದಿಂದ ನೀನು ಸಂಸಾರದಿಂದ ನಿವೃತ್ತನಾಗು. ಈ ಸಂಸಾರವು ವಿಷಮಯವಾಗಿದೆ. ಇದರಲ್ಲಿ ಸುಖವು ಸ್ವಲ್ಪವೂ ಕಾಣುವುದಿಲ್ಲ. ॥೧೨೨॥

ಗೋತ್ರೇ ಕಳತ್ರೇ ಪುತ್ರೇ ವಾ ಮಿತ್ರೇ ವಾ ಚಿತ್ರಕರ್ಮಣಿ ।
ಅತಿರಾತ್ರಾದಿಸತ್ರೇ ವಾ ವಿರತಃ ಸುಖಮಶ್ನುತೇ ॥೧೨೩॥

ಕದಾಚಿದಪಿ ಭಾಗ್ಯೇನ ಶಿವಾರ್ಚನರತೋ ಯದಿ ।
ತದಾ ಸ್ಯಾಜ್ಜೀವನಂ ಧನ್ಯಮನ್ಯಥಾ ವ್ಯರ್ಥಮೇವ ತತ್ ॥೧೨೪॥

ಕಲತ್ರವಕ್ತ್ರೇ ತಾಂಬೂಲರಸನಿಷ್ಠೀವನಾಲಯೇ ।
ವಿರತೋ ಭವ ವೃದ್ಧೋಽಸಿ ತತ್ರಾಸ್ಥಾಂ ತ್ಯಜ ಸಂತ್ಯಜ ॥೧೨೫॥

ಮಾಂಸಗ್ರಂಥಿಸ್ವರೂಪೇಷು ವಕ್ಷೋಜೇಷು ವಿಶೇಷತಃ ।
ವಿರತೋ ಭವ ತದ್ಗಾತ್ರೇ ಮೂತ್ರಪಾತ್ರೇ ತ್ರಪಾಂ ಭಜ ॥೧೨೬॥

ಯೌವನೋನ್ಮಾದಕಾಲೇಷು ಮದನಜ್ವರಪೀಡಯಾ ।
ಯದ್ಯತ್ಕೃತ್ಯಸಹಸ್ರಾಣಿ ನಾಧುನಾ ತತ್ಪ್ರಯೋಜನಂ ॥೧೨೭॥

---

ವಂಶ, ಹೆಂಡತಿ, ಮಗ, ಸ್ನೇಹಿತ, ಚಿತ್ರಕೆಲಸ, ಅತಿರಾತ್ರವೇ ಮೊದಲಾದ ಯಾಗಗಳಲ್ಲಿ ವೈರಾಗ್ಯ ಹೊಂದಿ, ಶಿವಾರ್ಚನೆಯಲ್ಲಿ ಮನಸ್ಸಿಟ್ಟವನು ಸುಖವನ್ನು ಅನುಭವಿಸುತ್ತಾನೆ. ||೧೨೩||

ಒಂದುಸಲವಾದರೂ ಅದೃಷ್ಟವಿಶೇಷದಿಂದ ಶಿವಪೂಜೆಯಲ್ಲಿ ಆಸಕ್ತನಾದರೆ ಆಗಲೇ ಆತನ ಜನ್ಮ ಧನ್ಯವಾಗುವುದು. ಇಲ್ಲದಿದ್ದರೆ ಅದು ವ್ಯರ್ಥವೇ ಸರಿ.||೧೨೪||

ತಾಂಬೂಲರಸವನ್ನು ಇಡಲು ಯೋಗ್ಯವಾದ ಕಾಂತೆಯ ಮುಖದಲ್ಲಿ ಆಶೆಯನ್ನು ಇಡಬೇಡ. ಏಕೆಂದರೆ ನೀನು ವೃದ್ಧನಾಗಿದ್ದೀಯೆ. ಅದು ಕೇವಲ ತಾಂಬೂಲರಸದ ಪಾತ್ರೆಯೇ ಹೊರತು ಸುಖಸಾಧನವಸ್ತುವಲ್ಲ. ||೧೨೫||

ಮಾಂಸದ ಮುದ್ದೆಯಾಗಿರುವ ಆ ಕಾಂತೆಯ ಸ್ತನಗಳಲ್ಲಿ ಆಶೆ ಇಡಬೇಡ. ಹಾಗೂ ಮೂತ್ರವನ್ನು ಸುರಿಸುವ ಗುಹ್ಯೇಂದ್ರಿಯವನ್ನು ನೋಡಿ ನಾಚಿಕೆಯನ್ನು ಹೊಂದು. (ಸ್ತನೌ ಮಾಂಸಗ್ರಂಥೀ ಕನಕಕಲಶಾವಿತ್ಯುಪಮಿತೌ. ಸ್ರವನ್ಮೂತ್ರಕ್ಲಿನ್ನಂ ಕರಿವರಶಿರಸ್ಪರ್ಧಿಜಘನಂ ಎಂದು ಭರ್ತೃಹರಿಯು ಹೇಳಿದ್ದಾನೆ.) ||೧೨೬||

ತಾರುಣ್ಯಾವಿರ್ಭಾವಕಾಲದಲ್ಲಿ ಕಾಮಜ್ವರಪೀಡಿತನಾಗಿ ಮಾಡಿದ ಅನೇಕ ಚೇಷ್ಟೆಗಳೂ ಈಗ ಏನೂ ಉಪಯೋಗಕ್ಕೆ ಬರಲಾರವು. ಯಾವ ಧರ್ಮವನ್ನೂ ವೃದ್ಧಿಗೊಳಿಸಲಾರವು. ||೧೨೭||

**ಕಲತ್ರಪಾತ್ರಗಾತ್ರೇಷು ಮೂತ್ರಪಾತ್ರೇಷು ಸರ್ವಥಾ ।**
**ಸ್ವನೇತ್ರಪ್ರಸರೋ ಮಾಸ್ತು ವೃದ್ಧಸ್ಯ ತರುಣೀ ವಿಷಂ ॥೧೨೮॥**

**ವಿಷಪಾನಪ್ರವೃತ್ತಿಸ್ತೇ ಸಂಮತಾ ನಾಧುನಾ ನೃಪ ।**
**ಅತಃ ಪರಂ ಪರಿತ್ಯಾಜ್ಯಮಂಗನಾಧರವೀಕ್ಷಣಂ ॥೧೨೯॥**

**ಅಂಗನಾಲಿಂಗನಾಪೇಕ್ಷಾಂ ಕ್ಷೀಣಾಂ ಕುರುವಿಲಕ್ಷಣಾಂ ।**
**ಪ್ರತಿಕ್ಷಣಂ ಕ್ಷಣಾರ್ಧೇನವಾ ವಿರೂಪಾಕ್ಷಂ ಭಜಾದರಾತ್ ॥೧೩೦॥**

**ದಾರಾಧರಃ ಪರಿತ್ಯಾಜ್ಯಃ ಸರ್ವದಾ ದಾರುಣಾಮಪಿ ।**
**ಯಾತನಾಂ ಕಾರಯತ್ಯೇವ ಸ ತಾವದಧುನಾ ತ್ಯಜ ॥೧೩೧॥**

**ಯಜ ಮೃತ್ಯುಂಜಯಂ ನಿತ್ಯಂ ತ್ಯಜ ಮೃತ್ಯುಭಯಂ ಸದಾ ।**
**ಅಧುನಾ ತತ್ಪರಿತ್ಯಾಗೇ ಮೃತ್ಯುಭೀತಿಃ ಕುತೋಽಪಿ ನ ॥೧೩೨॥**

---

ಪತ್ನಿಯ ಅಯೋಗ್ಯವಾದ ಮತ್ತು ಗ್ರಾಮ್ಯವಾದ, ಯಾವಾಗಲೂ ಮೂತ್ರ ಪಾತ್ರೆಯೆನಿಸಿ ಅಸಹ್ಯಕರವಾದ ಗುಹ್ಯೇಂದ್ರಿಯದಲ್ಲಿ, ನೀನು ದೃಷ್ಟಿಯನ್ನಿಡಬೇಡ. ಏಕೆಂದರೆ ವೃದ್ಧನಿಗೆ ತರುಣಿಯು ವಿಷಪ್ರಾಯಳು. ॥೧೨೮॥

ಎಲೈ! ರಾಜನೇ, ವಿಷಕುಡಿಯುವುದರಲ್ಲಿ ನಿನಗೆ ಪ್ರವೃತ್ತಿಯು ಈಗ ಸಂಮತವಲ್ಲ. ಆದುದರಿಂದ ಯುವತಿಯ ಅಧರವನ್ನು ಎಂದೂ ಈಕ್ಷಿಸಬೇಡ. ॥೧೨೯॥

ವಿಲಕ್ಷಣವಾದ ಯುವತಿಯ ಆಲಿಂಗನಾಪೇಕ್ಷೆಯನ್ನು ನೀನು ಬಯಸಬೇಡ. ಅದು ನಶ್ವರವಾದುದು. ಪ್ರತಿಕ್ಷಣವೂ, ಅಥವಾ ಕ್ಷಣಾರ್ಧವಾದರೂ ಶ್ರೀಶಿವನನ್ನು ಧ್ಯಾನಿಸು. ॥೧೩೦॥

ಖಂಡಿತವಾಗಿಯೂ ಪತ್ನಿಯ ಅಧರಪಾನವನ್ನು ಬಿಡಬೇಕು. ಅದು ಸಹಿಸಲಸಾಧ್ಯವಾದ ಯಾತನೆಯನ್ನುಂಟುಮಾಡುವುದು. ಆದುದರಿಂದ ನೀನು ಸರ್ವಥಾ ಈಗ ಅದನ್ನು ಬಿಡು. ॥೧೩೧॥

ಯಾವಾಗಲೂ ಶ್ರೀಮೃತ್ಯುಂಜಯನನ್ನು ಪೂಜಿಸು. ಆಗ ಮೃತುವಿನಿಂದ ನೀನು ಭಯಹೊಂದಲಾರೆ. ಈಗ ದಾರಾದಿಸಂಗವನ್ನು ಬಿಡು. ನಿನಗೆ ಯಾವ ಕಡೆಯಿಂದಲೂ ಮೃತ್ಯುಭೀತಿಯು ಇರಲಾರದು. ॥೧೩೨॥

ಕದಾಚಿದ್ಯೌವನೇ ಪೀಡಾ ನಿಬಿಡಾ ದಾರಸಂಗ್ರಹೇ ।
ಅತಃ ಸರ್ವಾತ್ಮನಾ ತ್ಯಾಜ್ಯಃ ಸಂಗ್ರಹಃ ಸ ತು ದುಃಸಹಃ ॥೧೩೩॥

ಅಸಹ್ಯಯಾತನಾಂ ಕೋ ವಾ ಸೋಢುಮಿಚ್ಛತಿ ದುರ್ಭಗಃ ।
ಅದ್ಯಾಪಿ ವಿಷಯಾಪೇಕ್ಷಾ ವೃದ್ಧಸ್ಯಾನುಚಿತಾ ಮುಹುಃ ॥೧೩೪॥

ತಾವತ್ತದ್ವಿಷಯಾಪೇಕ್ಷಾ ಯಾವದ್ಯೌವನಪೀಡಯಾ ।
ದುಃಖಿತಃ ಸ್ಯಾನ್ನರಸ್ತಸ್ಯಾಂ ಶಾಂತಾಯಾಂ ತದ್ವಿಮೋಚನಂ ॥೧೩೫॥

ಜ್ಞಾನಸ್ಯ ಪರಿಪಾಕೋಽಯಂ ಯದಿ ಮೃತ್ಯುಂಜಯಾರ್ಚನೇ ।
ಪ್ರೀತಿಸ್ಸ್ಯಾತ್ತರುಣಸ್ಯೇವ ತರುಣೀಷ್ವಪಿ ಭಾಗ್ಯತಃ ॥೧೩೬॥

ಅತಃ ಸಂಸಾರವಾರ್ತಾಯಾಃ ಪರಿತ್ಯಾಗಂ ಕುರು ಸ್ವತಃ ।
ಕುತ್ಸಿತತ್ವಮತಿಂ ತತ್ರ ಕುರು ಸಂವೀಕ್ಷ್ಯ ತತ್ತ್ವತಃ ॥೧೩೭॥

---

ಒಂದುಸಲ ಯೌವನದಲ್ಲಿ ಕಾಂತೆಯರನ್ನು ಸಂಗ್ರಹಿಸುವ ಬಾಧೆಯು ಹೆಚ್ಚಿರುತ್ತದೆ. ಆ ಸಂಗ್ರಹವು ದುಃಖವನ್ನುಂಟುಮಾಡುತ್ತದೆಯಾದುದರಿಂದ ಸರ್ವಥಾ ಅದನ್ನು ಬಿಡಬೇಕು. ॥೧೩೩॥

ಅದೃಷ್ಟಹೀನನಾದವನೂ ಕೂಡ ಸಹಿಸಲಾಗದ ಯಾತನೆಯನ್ನು ಅನುಭವಿಸಲು ಅಪೇಕ್ಷಿಸುವನೇ ? ವೃದ್ಧನಾದವನಿಗೆ ಈಗಲೂ ವಿಷಯೋಪಭೋಗಗಳನ್ನು ಬಯಸುವಿಕೆಯು ಯುಕ್ತವಲ್ಲ. ॥೧೩೪॥

ಎಲ್ಲಿಯ ವರೆಗೆ ಯೌವನವು ಪೀಡಿಸುವುದೋ ಅಲ್ಲಿಯತನಕ ವಿಷಯಗಳನ್ನು ಭೋಗಿಸಬೇಕೆಂಬ ಬಯಕೆ ಇರುವುದು. ಅಲ್ಲಿಯತನಕ ಮನುಷ್ಯನು ದುಃಖಪಡುವನು. ಅದು ಶಾಂತವಾದನಂತರ ಆ ದುಃಖದಿಂದ ಅವನಿಗೆ ವಿಮೋಚನೆಯಾಗುವುದು. ॥೧೩೫॥

ಮೃತ್ಯುಂಜಯನ ಪೂಜೆಯಲ್ಲಿ ಈ ತಿಳಿವು ವೃದ್ಧಿಹೊಂದಿದರೆ ಆಗ, ತರುಣನಿಗೆ ಹರೆಯದ ತರುಣಿಯಲ್ಲಿ ಪ್ರೀತಿಯು ಹುಟ್ಟುವ ಹಾಗೆ ಆ ಮೃತ್ಯುಂಜಯನಲ್ಲಿ ವಿಶ್ವಾಸವು ಹುಟ್ಟುವುದು. ॥೧೩೬॥

ಆದುದರಿಂದ ಸಂಸಾರದ ಈ ಸುದ್ದಿಯಿಂದ ನೀನು ತಾನಾಗಿಯೇ ದೂರನಾಗಿರಬೇಕು. ತಿಳಿವಳಿಕೆಯಿಂದ ಸಂಸಾರವನ್ನು ನೋಡಿ ಅದರಲ್ಲಿ ಹೇಯಬುದ್ಧಿಯನ್ನಿಡು. ॥೧೩೭॥

**ಅನಾಯಾಸೇನ ಸಂಸಾರಶೋಕಸಾಗರನಾಶನಂ ।**
**ಶಂಕರಂ ಭಜ ವಿಶ್ವಾಸಂ ಕುರು ಮದ್ವಾಚಿ ಸರ್ವದಾ ॥೧೩೮॥**

**ಏತೇ ತು ತರುಣಾ ಏವ ಮುನಯೋ ಯೌವನಕ್ಷಯಂ ।**
**ಕೃತ್ವೈವ ಶ್ರೀವಿರೂಪಾಕ್ಷಂ ವೃಕ್ಷಮೂಲೇ ಭಜಂತಿ ತೇ ॥೧೩೯॥**

**ಅವಶಿಷ್ಟಮಿದಂ ತಾವತ್ ಪುರುಷತ್ವಂ ನರೇಷ್ವತಃ ।**
**ವೈರಾಗ್ಯಭಾಗ್ಯಸಂಪನ್ನಾಃ ತಿಷ್ಠಂತಿ ಮುನಯೋ ವನೇ ॥೧೪೦॥**

**ಏತೇಷಾಮಪಿ ಸೌಂದರ್ಯಂ ಯೌವನಂ ಚ ಮನೋಹರಂ ।**
**ಪಶ್ಯ ಪಶ್ಯ ತಥಾಪ್ಯೇತೇ ಸಂಸಾರಾದ್ವಿರತಾಃ ಪರಂ ॥೧೪೧॥**

**ಮೂರ್ಖಾಣಾಂ ತು ಪರಂ ದಾರೇಷ್ವನುರಾಗೋಪಿ ರೋಗಭೂಃ ।**
**ಅನೇನೈವಾನುರಾಗೇಣ ರೋಗೋಪಿ ಪ್ರಬಲೋ ಭವೇತ್ ॥೧೪೨॥**

---

ಸುಲಭವಾಗಿ ಸಂಸಾರದ ದುಃಖಗಳನ್ನು ನಾಶಮಾಡುವ ಶಂಕರನನ್ನು ಸೇವಿಸು. ಎಲೈ ರಾಜನೇ, ನನ್ನ ಮಾತಿನಲ್ಲಿ ವಿಶ್ವಾಸವನ್ನಿಡು. ॥೧೩೮॥

ಈ ಋಷಿಗಳೂ ಕೂಡ ಯೌವನದಲ್ಲಿರುವವರಾಗಿಯೇ ಶ್ರೀವಿರೂಪಾಕ್ಷನನ್ನು ಈ ಮರದಡಿಯಲ್ಲಿ ಭಜಿಸುತ್ತಾ ಯೌವನವನ್ನು ಕಳೆದರು. ॥೧೩೯॥

ಇಲ್ಲಿ ತಪಸ್ಸುಮಾಡುತ್ತಿರುವ ಪುರುಷರಲ್ಲಿ ಪುರುಷತ್ವರೂಪವಾದ ಧರ್ಮ ಮಾತ್ರ ಉಳಿದಿದೆಯೇ ಹೊರತು, ತತ್ಕಾರ್ಯಗಳಾವುವೂ ತೋರಿಬರುವುದಿಲ್ಲ. ಈ ಮುನಿಗಳೆಲ್ಲಾ ವೈರಾಗ್ಯಭಾಗ್ಯದಿಂದ ಕೂಡಿದವರಾಗಿ ವನದಲ್ಲಿ ವಾಸಮಾಡುತ್ತಿರುವರು. ॥೧೪೦॥

ಇವರ ಸುಂದರವಾದ ಯೌವನವನ್ನು ನೋಡು. ಈ ಯುವಕಮುನಿಗಳೆಲ್ಲಾ ಸಂಸಾರಸುಖದಿಂದ ವಿರಕ್ತಿಯನ್ನು ಹೊಂದಿದವರಾಗಿದ್ದಾರೆ. ॥೧೪೧॥

ಅವಿವೇಕಿಗಳಿಗೆ ತಮ್ಮ ತಮ್ಮ ಪತ್ನಿಯರಲ್ಲಿ ಪ್ರೀತಿಯೂ ಕೂಡ ಹೇಗೆ ದುಃಖಪ್ರದವೋ, ಹಾಗೆಯೇ ಈ ಸಂಸಾರದಲ್ಲಿ ಪ್ರೀತಿಯೂ ದುಃಖವನ್ನು ಕೊಡಬಲ್ಲುದಾಗಿದೆ. ॥೧೪೨॥

ಕಿಮಂಗನಾನುರಾಗೇಣ ರೋಗಕಾರಣಕಾರಣಂ ।
ಅಂಗನಾಂಗಮಿತಿ ಖ್ಯಾತಮನಂಗಸದನಂ ಸದಾ ॥೧೪೩॥

ಅಂಗನಾಪಾಂಗಸಂಗೇನಾಪ್ಯನಂಗಾಂಗತರಂಗಿಣೀ ।
ತುಷಾಂಗಾರತರಂಗಾಣಾಂ ವಿಹಾರಾಯ ಪ್ರಜಾಯತೇ ॥೧೪೪॥

ಅತಃ ಸರ್ವಾತ್ಮನಾ ಸಂಗೋಪ್ಯನಂಗಾಂಗೇನ ಸಾದರಂ ।
ನ ಕರ್ತವ್ಯಃ ಕದಾಚಿಚ್ಚೇದ್ರುತುಕಾಲೇ ಸ ಜಾಯತಾಂ ॥೧೪೫॥

ಪ್ರಜಾಸಂಪತ್ತಿರೇವೈಕಾ ಫಲಂ ಭಾರ್ಯಾಂಗಸಂಗಮೇ ।
ತತಃ ಪರಂ ನ ತಸ್ಯಾಪಿ ಫಲಮಿತ್ಯವಧಾರಯ ॥೧೪೬॥

ಗೃಹಾಣ ಶಾಂಭವೀಂ ದೀಕ್ಷಾಂ ವಿರೂಪಾಕ್ಷಂ ಸಮರ್ಚಯ ।
ಮೋಕ್ಷಕಾಂತಾವಿಹಾರೇಣ ಹರ ಸಂಭಾವನಾಂ ಕುರು ॥೧೪೭॥

---

ಯುವತಿಯರಲ್ಲಿ ಪ್ರೀತಿ ಬೆಳಸುವಿಕೆಯು ರೋಗಕ್ಕೆ ಕಾರಣ. ಆ ಪ್ರೀತಿಗೆ ಕಾರಣವಾದದ್ದು ಯುವತಿಯರ ಗುಹ್ಯೇಂದ್ರಿಯವೇ ಹೊರತು ಮತ್ತಾವ ಗುಣಗಳೂ ಅಲ್ಲ. ॥೧೪೩॥

ಯುವತಿಯ ಕಡೆಗಣ್ಣಿನ ನೋಟದಿಂದ ಉಂಟಾಗುವ ಮನ್ಮಥಚೇಷ್ಟೆಯೆಂಬ ನದಿಯಲ್ಲಿ ಕ್ರೀಡಿಸುವಿಕೆಯು ಹೊಟ್ಟಿನೊಳಗಣ ಬೆಂಕಿಯ ನದಿಯಲ್ಲಿ ಆಟವಾಡಿದಹಾಗೆಯೇ ಅಲ್ಲವೇ ! ॥೧೪೪॥

ಆದುದರಿಂದ ತರುಣಿಯ ಸಂಭೋಗವನ್ನು ಖಂಡಿತವಾಗಿಯೂ ತ್ಯಜಿಸಬೇಕು. ಆ ಸ್ತ್ರೀಸಂಭೋಗವು ಬೇಕಾದರೆ ಋತುಕಾಲದಲ್ಲಿ ಮಾತ್ರ ಸಂಭವಿಸಲಿ. ॥೧೪೫॥

ಭಾರ್ಯೆಯ ಸಮಾಗಮದಿಂದ ಪ್ರಜಾಸಂಪತ್ತು ಮಾತ್ರ ಒಂದೇ ಪ್ರಯೋಜನವಾಗಿರಬೇಕು. ಅದನ್ನು ಬಿಟ್ಟರೆ ಬೇರೆ ಯಾವ ಪ್ರಯೋಜನವೂ ಲಭಿಸಲಾರದು ಎಂದು ನಿಶ್ಚಯಿಸಿರಬೇಕು. ॥೧೪೬॥

ರಾಜನೇ ! ಆದುದರಿಂದ ಶೈವದೀಕ್ಷೆಯನ್ನು ಸ್ವೀಕರಿಸು. ಶಿವನನ್ನು ಪೂಜಿಸು. ಮೋಕ್ಷವೆಂಬ ಕಾಂತೆಯೊಡನೆ ವಿಹರಿಸಿ ಈಶ್ವರಾನುಗ್ರಹವನ್ನು ಹೊಂದು. ॥೧೪೭॥

ಮಹಾದೇವೋ ಮಹಾದಾತಾ ಮಹಾನಂದಪ್ರದೋ ಮುದಾ ।
ಪರಮಾನಂದರೂಪೋಽಯಂ ಸ್ವಾರ್ಜನಾದ್ಭುಕ್ತಿಮುಕ್ತಿದಃ ॥೧೪೮॥

ಮುಕ್ತಿರಪ್ಯವಿರಕ್ತಾನಾಂ ದುರ್ಲಭಾ ಖಲು ದೇಹಿನಾಂ ।
ವಿರಕ್ತಿರಪಿ ಸಂಸಾರೇ ಹರಾನ್ಯಾರಾಧನೇ ನ ತು ॥೧೪೯॥

ಹರಾನ್ಯಾರಾಧನತ್ಯಾಗೋ ವೈರಾಗ್ಯಮಿತಿ ನಿಶ್ಚಯಃ ।
ಶಿವಲಿಂಗಾರ್ಚನಾಭ್ಯಾಸಸ್ತ್ವನುರಾಗ ಇತಿ ಸ್ಮೃತಃ ॥೧೫೦॥

ಅನುರಾಗಃ ಶಂಭುಲಿಂಗೇ ಮಂಗಳಾಯ ಪ್ರಜಾಯತೇ ।
ಸ ಸರ್ವಮಂಗಳಾಕಾಂತಸ್ತಸ್ಮಿನ್ ಗೃಹ್ಣಾತಿ ಪೂಜನಂ ॥೧೫೧॥

ಶಿವಲಿಂಗಾರ್ಚನರತೋಽಪ್ಯನಂಗಾಪಾಂಗಸಂಗತಃ ।
ಯದಿ ದೈವಾತ್ತದಾ ತಸ್ಯ ನಾನುರಾಗಃ ಪ್ರವರ್ಧತೇ ॥೧೫೨॥

---

ಮಹೇಶ್ವರನು ಮಹಾದಾನಿಯು ಅಲ್ಲದೆ ಆನಂದದಾಯಕನೂ ಹೌದು. ಈತನು ಆನಂದಸ್ವರೂಪನಾಗಿರುವನಲ್ಲದೆ ತನ್ನನ್ನು ಪೂಜೆಮಾಡಿದವರಿಗೆ ಬೇಕಾದುದನ್ನು ನೀಡುವನು. ॥೧೪೮॥

ವೈರಾಗ್ಯವನ್ನು ತಾಳಿದ ಸಂಸಾರಿಗಳಿಗೆ ಎಂದೂ ಮುಕ್ತಿಯು ಸಿಕ್ಕಲಾರದು. ಮತ್ತು ಶಿವನಲ್ಲದೇ ಬೇರೆ ದೇವರನ್ನು ಪೂಜಿಸಿದರೂ ಸಂಸಾರದಲ್ಲಿ ವಿರಕ್ತಿಯು ದೊರೆಯಲಾರದು. ॥೧೪೯॥

ಶಿವನನ್ನು ಬಿಟ್ಟು ಬೇರೆ ದೇವತೆಗಳನ್ನು ಪೂಜಿಸುವುದನ್ನು ತ್ಯಜಿಸುವುದೂ ಒಂದು ವೈರಾಗ್ಯವೆಂದು ಹೇಳಲ್ಪಟ್ಟಿದೆ. ಶಿವಲಿಂಗವನ್ನು ಪೂಜಿಸುವಿಕೆಯೇ ಅನುರಾಗವೆಂದು ನಿಶ್ಚಿತವಾಗಿದೆ. ॥೧೫೦॥

ಶಿವಲಿಂಗದಲ್ಲಿಡುವ ಪ್ರೀತಿಯು ಕಲ್ಯಾಣಕ್ಕೆ ಸಾಧಕ. ಆ ಸರ್ವಮಂಗಳೆಯ ಕಾಂತನು ಭಕ್ತಿಯಿಂದಾಚರಿಸಿದ ಪೂಜೆಯನ್ನು ಅನುರಾಗದಿಂದ ಸ್ವೀಕರಿಸುವನು. ॥೧೫೧॥

ಈಶ್ವರಲಿಂಗಾರ್ಚನೆಯಲ್ಲಿ ಆಸಕ್ತನಾದವನು ಮನ್ಮಥನ ಕಟಾಕ್ಷಕ್ಕೆ ಪಾತ್ರನಾದರೆ ಅವನಿಗೆ ಶಿವಾನುರಾಗವು ವೃದ್ಧಿಹೊಂದುವುದಿಲ್ಲ. ಆದ್ದರಿಂದ ಶಿವಪೂಜಕನು ನಿಜವಾಗಿಯೂ ಸ್ತ್ರೀಸೌಖ್ಯವನ್ನು ದೂರಮಾಡಬೇಕು. ॥೧೫೨॥

ಶಿವಾರ್ಚನರಸಾಪಾನಸುಧಾಸಾಗರಸಂಗತಃ ।
ತತ್ಸುಧಾಧಾರಯಾ ತೃಪ್ತಿಃ ಕ್ಷಾರನೀರಾನಪೇಕ್ಷಯಾ ॥೧೫೩॥

ಯಥಾ ಕ್ಷೀರೇಣ ಸಂತೃಪ್ತಃ ಕ್ಷಾರನೀರಂ ಪರಿತ್ಯಜೇತ್ ।
ತಥಾ ಲಿಂಗಾರ್ಚನಾಸಕ್ತಾಸ್ತದ್ವಿರುದ್ಧಂ ಪರಿತ್ಯಜೇತ್ ॥೧೫೪॥

ಯಥಾ ತೃಷಾರ್ತೋ ಗ್ರೀಷ್ಮೇಣ ವಿಮಲಂ ಶೀತಲಂ ಜಲಂ ।
ಗೃಹ್ಣಾತಿ ತದ್ವತ್ ಗೃಹ್ಣಾತಿ ಶಿವಪೂಜಾಮೃತಂ ಸುಧೀಃ ॥೧೫೫॥

ಶಿವಪೂಜಾಮೃತಂ ತ್ಯಕ್ತ್ವಾ ಯಸ್ತಿಷ್ಠತಿ ಸ ಮೂಢಧೀಃ ।
ಸ ಸಂಸಾರಮಹಾಪಾಶಬಂಧಮುಕ್ತಃ ಕಥಂ ಭವೇತ್ ॥೧೫೬॥

ಶಿವಪೂಜಾರ್ಚನರತಃ ಕಾರ್ಯಾಂತರವಿವರ್ಜಿತಃ ।
ಮೃತ್ಯುಕಾಲೇಪಿ ಸಂಪ್ರಾಪ್ತೇ ನ ಬಿಭೇತಿ ಯಮಾದಪಿ ॥೧೫೭॥

---

ಶಿವಾರ್ಚನೆಯಲ್ಲಿ ಆಸಕ್ತನಾಗಿ ಅಮೃತಸಾಗರದ ಸಂಗಮದಿಂದ ಶಿವರಸವನ್ನು ಪಾನಮಾಡುವವನು ಆ ಅಮೃತರಸದಿಂದಲೇ ತೃಪ್ತಿಹೊಂದುವನು. ಆತನಿಗೆ ಉಪ್ಪಿನ ನೀರು ಬೇಕಾಗುವುದಿಲ್ಲ. ॥೧೫೩॥

ಹಾಲಿನಿಂದ ತೃಪ್ತಿಹೊಂದಿದವನು ಉಪ್ಪಿನ ರಸವನ್ನು ಹೇಗೆ ಅಪೇಕ್ಷಿಸುವುದಿಲ್ಲವೋ ಹಾಗೆ ಶಿವಪೂಜೆಯಲ್ಲಿ ಆಸಕ್ತನಾದವನು ಅದಕ್ಕೆ ವಿರುದ್ಧವಾದವುಗಳನ್ನು ಇಚ್ಛಿಸುವುದಿಲ್ಲ. ॥೧೫೪॥

ಬೇಸಗೆಯಲ್ಲಿ ಬಾಯಾರಿಕೆಯಿಂದ ಬಳಲಿದಾತನು ತಂಪಾದ ಸ್ವಚ್ಛನೀರನ್ನು ಬಯಸುವಂತೆ ಪಂಡಿತನು ಶಿವಪೂಜೆಯೆಂಬ ಅಮೃತವನ್ನು ಅಪೇಕ್ಷಿಸುವನು. ॥೧೫೫॥

ಶಿವಪೂಜೆಯೆಂಬ ಅಮೃತವನ್ನು ದೂರಮಾಡುವವನು ದಡ್ಡನು. ಆತನು ಸಂಸಾರದ ಮಹಾಬಂಧದಿಂದ ಹೇಗೆತಾನೇ ಬಿಡುಗಡೆಯನ್ನು ಹೊಂದುವನು? ॥೧೫೬॥

ಶಿವಪೂಜೆಮಾಡತಕ್ಕವನು ಇತರ ಕಾರ್ಯಕಲಾಪಗಳನ್ನು ಬಿಡಬೇಕು. ಆತನಿಗೆ ಮರಣಕಾಲವು ಸಮೀಪಿಸಿದರೂ ಯಮನಿಂದ ಹೆದರಲಾರನು. ॥೧೫೭॥

ಪುರಾ ಕೀಕಟದೇಶೇಷು ವಿಚಿತ್ರರಥನಾಮಕಃ ।
ಭೂಪತಿರ್ಭಾಗ್ಯಸಂಪನ್ನಃ ಪುತ್ರಪೌತ್ರಾದಿಸಂಯುತಃ ॥೧೫೮॥

ತಸ್ಯ ರಾಜ್ಯಂ ಮಹತ್ತಸ್ಯ ತಸ್ಮಿನ್ ರಾಜ್ಯೇ ಶಿವಾಲಯಾಃ ।
ಕೋಟಿಶಃ ಸಂಸ್ಥಿತಾಸ್ತೇಷು ಶಿವಲಿಂಗಾನಿ ಕೋಟಿಶಃ ॥೧೫೯॥

ತೇಷು ಸರ್ವೇಷು ರತ್ನಾನಾಂ ಪ್ರಾಕಾರಾಃ ಕೋಟಿಶಃ ಸ್ಮೃತಾಃ ।
ದೀಪಸ್ತಂಭಾಶ್ಚ ತೇಷ್ವೇವ ಕೋಟಿಶೋ ರತ್ನನಿರ್ಮಿತಾಃ ॥೧೬೦॥

ರತ್ನಾನಾಮೇವ ರಮ್ಯಾಣಿ ಹರ್ಮ್ಯಾಣಿ ವಿವಿಧಾನ್ಯಪಿ ।
ತೇಷು ರತ್ನಮಯಾ ಏವ ನಂದಿಕೇಶಾಶ್ಚ ಕೋಟಿಶಃ ॥೧೬೧॥

ರಮ್ಯೇ ಶಿವಾಲಯಪ್ರಾಂತೇ ಬಿಲ್ವವೃಕ್ಷಾಶ್ಚ ಕೋಟಿಶಃ ।
ತತ್ರೈವ ನಿತ್ಯಪುಷ್ಪಾಣಿ ನಿತ್ಯಪುಷ್ಪವನಾನ್ಯಪಿ ॥೧೬೨॥

---

ಹಿಂದೆ ಕೀಕಟದೇಶದಲ್ಲಿ ವಿಚಿತ್ರರಥನೆಂಬ ಹೆಸರುಳ್ಳ ಒಬ್ಬ ರಾಜನಿದ್ದನು. ಅವನು ಸಮಸ್ತ ಸಂಪತ್ತನ್ನೂ ಪುತ್ರಪೌತ್ರಾದಿ ಸಕಲ ಭಾಗ್ಯವನ್ನೂ ಹೊಂದಿದ್ದನು. ||೧೫೮||

ಆತನಿಗೆ ದೊಡ್ಡ ರಾಜ್ಯವಿತ್ತು. ಆ ರಾಜ್ಯದಲ್ಲೆಲ್ಲಾ ಅನೇಕ ಶಿವದೇವಸ್ಥಾನಗಳಿದ್ದುವು. ಅವುಗಳಲ್ಲಿ ಕೋಟಿಗಟ್ಟಲೆ ಶಿವಲಿಂಗಗಳನ್ನು ಸ್ಥಾಪಿಸಿದ್ದರು. ||೧೫೯||

ಆ ಎಲ್ಲಾ ದೇವಾಲಯಗಳಲ್ಲೂ ರತ್ನಮಯಗಳಾದ ಪ್ರಾಕಾರಗಳಿದ್ದುವು. ಅನೇಕ ರತ್ನಮಯಗಳಾದ ದೀಪಸ್ತಂಭಗಳಿದ್ದುವು. ||೧೬೦||

ಅವುಗಳಲ್ಲಿ ರತ್ನಮಯಗಳಾದ ದೊಡ್ಡ ದೊಡ್ಡ ಸೌಧಗಳಿದ್ದುವು. ಅವೆಲ್ಲಾ ನಾನಾವಿಧವಾದ ಆಕಾರಗಳಲ್ಲಿದ್ದವಲ್ಲದೆ ಕೋಟಿಗಟ್ಟಲೆ ರತ್ನಮಯಗಳಾದ ನಂದಿಕೇಶ್ವರ ಮೂರ್ತಿಗಳಿಂದಲೂ ತುಂಬಿದ್ದುವು. ||೧೬೧||

ರಮಣೀಯವಾದ ಆ ಶಿವಾಲಯದ ಬಳಿ ಅನೇಕ ಬಿಲ್ವವೃಕ್ಷಗಳಿದ್ದುವು. ಅವೆಲ್ಲಾ ಯಾವಾಗಲೂ ಹೂಗಳನ್ನು ಬಿಡುತ್ತಿದ್ದುವಾದುದರಿಂದ ಆ ವನವೇ ನಿತ್ಯಪುಷ್ಪವನದಂತೆ ತೋರುತ್ತಿದ್ದಿತು. ||೧೬೨||

ದೀಪಮಾಲಾಸಹಸ್ರಾಣಿ ತತ್ತದೀಶ್ವರಮಂದಿರೇ ।
ನಾಟ್ಯಾಂಗನಾಃ ಸಹಸ್ರಾಣಿ ಸುತೂರ್ಯಧ್ವನಿಕೋಟಿಶಃ ॥೧೬೩॥

ತೇಷು ಸರ್ವೇಷು ರಮ್ಯೇಷು ಮಹಾದೇವಾಲಯೇಷು ಸಃ ।
ಭೂಪಾಲಃ ಪೂಜನಂ ಕೃತ್ವಾ ತುಷ್ಟೋ ಭವತಿ ಸರ್ವದಾ ॥೧೬೪॥

ಪಂಚಾಮೃತಾಭಿಷೇಕಾದ್ಯೈಃ ದಿವ್ಯಚಂದನಕರ್ದಮೈಃ ।
ಪುಷ್ಪೈರಪಾರೈರ್ಬಹುಭಿಃ ದಿವ್ಯಾಭರಣಕೋಟಿಭಿಃ ॥೧೬೫॥

ಧೂಪರಾಶಿಃ ಸಮುತ್ಪನ್ನೋ ಧೂಮರಾಜಿಭಿರಾದರಾತ್ ।
ದಿವ್ಯಾನ್ನಪರ್ವತೈರ್ದಿವ್ಯೈರಪೂಪಾದಿಸಮುಚ್ಚಯೈಃ ॥೧೬೬॥

ಕದಳೀಸಹಕಾರಾದಿಫಲರಾಶಿಭಿರುನ್ನತೈಃ ।
ನಾಳಿಕೇರಾಂಬುಕುಲ್ಯಾಭಿಃ ಕ್ಷೀರಕುಲ್ಯಾಸಹಸ್ರಕೈಃ ॥೧೬೭॥

---

ಒಂದು ಸಾವಿರ ದೀಪಮಾಲೆಗಳನ್ನು ಆಯಾ ಶಿವದೇವಾಲಯದಲ್ಲಿ ನಿತ್ಯವೂ ಹಚ್ಚುತ್ತಿದ್ದರು. ಅನೇಕ ನರ್ತಕಿಯರು ಕುಣಿಯುತ್ತಿದ್ದರು. ತೂರ್ಯಧ್ವನಿಯೇ ಮುಂತಾದ ಶಬ್ದಗಳು ಮೊಳಗುತ್ತಿದ್ದುವು. ॥೧೬೩॥

ಆ ಎಲ್ಲಾ ರಮಣೀಯಗಳಾದ ದೇವಾಲಯಗಳಲ್ಲಿ ಆ ರಾಜನು ಶಿವಪೂಜೆಯನ್ನು ಮಾಡಿ ಸಂತೋಷವನ್ನು ಹೊಂದುತ್ತಿದ್ದನು. ॥೧೬೪॥

ಹಾಲು, ತುಪ್ಪ, ಮೊಸರು, ಜೇನು, ಸಕ್ಕರೆ ಇವೇ ಮೊದಲಾದ ಪಂಚಾಮೃತಗಳಿಂದ ಅಭಿಷೇಕ ಮಾಡಿ ಚಂದನ ದ್ರವವನ್ನು ಲೇಪಿಸಿ, ಹೇರಳವಾದ ಹೂಗಳಿಂದಲೂ ಅಮೋಘವಾದ ಆಭರಣಗಳಿಂದಲೂ ಪೂಜೆಮಾಡುತ್ತಿದ್ದನು. ॥೧೬೫॥

ಧೂಪರಾಶಿಯನ್ನು ಹಾಕಿದುದರಿಂದ ಹೊಗೆಯ ಸಮೂಹವು ಮೇಲಕ್ಕೆ ಏಳುತ್ತಿದ್ದಿತು. ಮತ್ತು ಮನೋಹರವಾದ ಅನ್ನಗಳನ್ನೂ ರುಚಿರುಚಿಗಳಾದ ಕಜ್ಜಾಯದ ರಾಶಿಗಳನ್ನು ಹಾಕಿ ನೈವೇದ್ಯ ಮಾಡುತ್ತಿದ್ದನು. ॥೧೬೬॥

ಬಾಳೆಹಣ್ಣು, ಮಾವು ಇವೇ ಮೊದಲಾದ ಹಣ್ಣುಗಳ ರಾಶಿಗಳನ್ನೂ ಹಾಗೆಯೇ ಎಳನೀರಿನ ಕಾಲುವೆ, ಹಾಲಿನ ಕಾಲುವೆ ಇವುಗಳನ್ನೂ ಸಹ ಅರ್ಪಿಸುತ್ತಿದ್ದನು. ॥೧೬೭॥

ತಾಂಬೂಲಗಿರಿಭಿರ್ದಿವ್ಯೈರೇಲಕಾದಿಸಮುಚ್ಚಯೈಃ ।
ನೀರಾಜನೈರ್ದರ್ಪಣೈಶ್ಚ ರತ್ನಚ್ಛತ್ರೈಶ್ಚ ಸಾದರಂ ॥೧೬೮॥

ವಿವಿಧೈರುಪಚಾರೈಶ್ಚ ಪೂಜಯಿತ್ವಾ ಮಹೇಶ್ವರಂ ।
ಕೃತ್ವಾ ಶಿವಾರ್ಚನಂ ಭುಂಕ್ತೇ ನಿಶಿ ಪ್ರತ್ಯಹಮಾದರಾತ್ ॥೧೬೯॥

ತಸ್ಯ ಪುತ್ರಾ ಮಹಾವೀರಾ ಶಾಂಕರಾಶ್ಚ ವಿಶೇಷತಃ ।
ತೇಽಪಿ ಸರ್ವೇ ಮಹಾದೇವೇ ಮಹಾಪೂಜಾಪರಾಯಣಾಃ ॥೧೭೦॥

ತಸ್ಯ ಕನ್ಯಾಭವತ್ಕಾಪಿ ನಾಮ್ನಾ ಕಮಲಲೋಚನಾ ।
ತಸ್ಯಾಃ ಸೌಂದರ್ಯಮುತ್ಕೃಷ್ಟಂ ನಾಸ್ತಿ ನಾರೀಷು ತತ್ಸಮಾಃ ॥೧೭೧॥

ಗರ್ಭೇ ಸ್ಥಿತ್ವಾಪಿ ಸಾ ನಾರೀ ಶಿವಪೂಜನತತ್ಪರಾ ।
ತತ್ರ ಧ್ಯಾತ್ವಾ ಮಹಾದೇವಂ ನಿತ್ಯಂ ಮಾನಸಪೂಜಯಾ ॥೧೭೨॥

---

ಪರ್ವತಾಕಾರದಂತೆ ಬಿದ್ದಿರುವ ತಾಂಬೂಲವನ್ನು ಏಲಕ್ಕಿ, ಅಡಿಕೆ ಮೊದಲಾದುವುಗಳಿಂದ ಸೇರಿಸಿ ನೈವೇದ್ಯಮಾಡಿ, ಅನಂತರ ನೀರಾಜನಗಳನ್ನೂ ದರ್ಪಣ (ಕನ್ನಡಿ) ರತ್ನಚ್ಛತ್ರಿ, ಚಾಮರ ಇವುಗಳ ಸೇವೆಯನ್ನೂ ಮಾಡುತ್ತಿದ್ದನು. ॥೧೬೮॥

ಅನೇಕ ಉಪಚಾರಗಳಿಂದ ಹಗಲೆಲ್ಲಾ ಮಹೇಶ್ವರನನ್ನು ಪೂಜಿಸಿ ಪ್ರತಿದಿನವೂ ಆದರದಿಂದ ರಾತ್ರಿ ಶಿವಪ್ರಸಾದವನ್ನು ಊಟಮಾಡುತ್ತಿದ್ದನು. ॥೧೬೯॥

ಆತನ ಮಕ್ಕಳೆಲ್ಲರು ಮಹಾ ಪರಾಕ್ರಮಿಗಳಲ್ಲದೆ ಶಿವಪೂಜಾಪರಾಯಣರಾಗಿಯೂ ಇದ್ದರು. ಅವರೂ ವಿಶೇಷವಾಗಿ ಶಿವನಲ್ಲಿಯೇ ಭಕ್ತಿಯುಳ್ಳವರಾಗಿದ್ದರು. ॥೧೭೦॥

ಆತನಿಗೆ ಕಮಲಲೋಚನೆಯೆಂಬ ಒಬ್ಬಳು ಮಗಳಿದ್ದಳು. ಆಕೆಯು ತುಂಬಾ ರೂಪವತಿ. ಆಕೆಗೆ ರೂಪದಲ್ಲಿ ಸಮರಾದವರು ಯುವತಿಯರಲ್ಲಿ ಯಾರೂ ಇರಲಿಲ್ಲವೆಂದೇ ಹೇಳಬೇಕು. ॥೧೭೧॥

ಆಕೆಯು ಗರ್ಭದಲ್ಲಿರುವಾಗಲೇ ಶಿವಪೂಜೆಯಲ್ಲಿ ಆಸಕ್ತಳಾಗಿದ್ದಳು. ಅಲ್ಲಿಯೇ ಶ್ರೀ ಮಹಾದೇವನನ್ನು ಮನಸ್ಸಿನಿಂದ ಧ್ಯಾನಿಸುತ್ತಿದ್ದಳು. ॥೧೭೨॥

ಶಿವನಾಮಾನಿ ಗಾಯಂತೀ ತೋಷಯಾಮಾಸ ಶಂಕರಂ ।
ತತಃ ಪೂರ್ಣೇಷು ಮಾಸೇಷು ಯೋನಿಮಾರ್ಗಾತ್ ವಿನಿರ್ಗತಾ ॥೧೭೩॥

ತತೋ ನಿಮೀಲ್ಯ ನಯನೇ ಧ್ಯಾಯಂತೀ ಸಾಂಬಮವ್ಯಯಂ ।
ಸ್ತನ್ಯಪಾನಂ ನ ಸಾ ಚಕ್ರೇ ನಯನೋನ್ಮೀಲನಂ ಚ ಸಾ ॥೧೭೪॥

ತತೋಽಂತಃಪುರವಾಸಿನ್ಯಸ್ತ್ವರಯಾ ಬಹಿರಾಗತಾಃ ।
ಸರ್ವಾ ನಿವೇದಯಾಮಾಸುರ್ವೃತ್ತಾಂತಂ ಭೂಪಸನ್ನಿಧೌ ॥೧೭೫॥

ಭೂಪಃ ಶ್ರುತ್ವಾಽಥ ವೃತ್ತಾಂತಮತಿವ್ಯಾಕುಲಮಾನಸಃ ।
ಸಸ್ಮಾರ ಸುರಲೋಕಸ್ಥೌ ವೈದ್ಯಾವಪ್ಯನುತ್ತಮೌ ತದಾ ॥೧೭೬॥

ತತೋ ನಿವೇದ್ಯ ವೃತ್ತಾಂತಂ ಶಚೀನಾಥಾಯ ಸಾದರಂ ।
ಧನ್ವಂತರಿಶ್ಚಾಮೃತಶ್ಚ ವಿಚಾರವ್ಯಾಕುಲೈಸ್ತದಾ ॥೧೭೭॥

---

ಶಿವನಾಮಗಳನ್ನು ಹಾಡುತ್ತಾ ಶಂಕರನನ್ನು ಸಂತೋಷಪಡಿಸಿದಳು. ಬಳಿಕ ನವಮಾಸ ತುಂಬಲು ಆಕೆಯು ಗುಹ್ಯೇಂದ್ರಿಯದಿಂದ ಶಿವನಾಮಗಳನ್ನುಚ್ಚರಿಸುತ್ತಲೇ ಜನಿಸಿದಳು. ॥೧೭೩॥

ಬಳಿಕ ಆಕೆಯು ಎರಡು ಕಣ್ಣುಗಳನ್ನೂ ಮುಚ್ಚಿಕೊಂಡು ನಾಶರಹಿತನಾದ ಶಿವನನ್ನೇ ಧ್ಯಾನಿಸುತ್ತಾ ಸ್ತನ್ಯಪಾನವನ್ನೂ ಮಾಡಲಿಲ್ಲ. ಕಣ್ಣು ಬಿಟ್ಟು ನೋಡಲೂ ಇಲ್ಲ. ॥೧೭೪॥

ಬಳಿಕ ಅಲ್ಲಿದ್ದ ಅಂತಃಪುರದಲ್ಲಿನ ಸ್ತ್ರೀಯರೆಲ್ಲಾ ಅದನ್ನು ನೋಡಿ ಬಂದು ರಾಜನಿಗೆ ನಡೆದ ಸಮಾಚಾರವನ್ನು ತಿಳುಹಿಸಿದರು. ॥೧೭೫॥

ರಾಜನೂ ಕೂಡ ಈ ವೃತ್ತಾಂತವನ್ನು ಕೇಳಿ ಕಳವಳಗೊಂಡು ದೇವಲೋಕದಲ್ಲಿರುವ ದೇವವೈದ್ಯರಾದ ಅಶ್ವಿನೀದೇವತೆಗಳನ್ನು ಧ್ಯಾನಿಸಿದನು. ॥೧೭೬॥

ಬಳಿಕ ಆ ಧನ್ವಂತರಿ ಮತ್ತು ಅಮೃತನಾಮಕರಾದ ಇವರಿಬ್ಬರೂ ಶಚೀನಾಥನಾದ ಇಂದ್ರನಿಗೆ ಈ ವೃತ್ತಾಂತವನ್ನು ತಿಳಿಸಿ ಬಹಳ ಕಳವಳಗೊಂಡರು. ॥೧೭೭॥

ಶಚೀನಾಥೋಽಪಿ ತೌ ದೃಷ್ಟ್ವಾ ಪ್ರಾಹ ಕಿಂ ವಾ ವಿಚಾರ್ಯತೇ ।
ಅಧುನಾ ಕಿಮಶಕ್ಯಂ ತೇ ತದ್ವದೇತಿ ವಿಶೇಷತಃ ॥೧೭೮॥

॥ ಧನ್ವಂತರಿರುವಾಚ ॥

ರಾಜಾ ಚಿತ್ರರಥೋ ನಾಮ ಭೂತಲೇ ಮಗಧಾಧಿಪಃ ।
ಸ ಮಹಾಭಾಗ್ಯಸಂಪನ್ನಃ ಶಿವಪೂಜಾಪರಾಯಣಃ ॥೧೭೯॥

ತಸ್ಯಾಶಂಕಾ ನ ಲೋಕೇಷು ನಾಸ್ತಿ ಸರ್ವಾತ್ಮನಾ ಖಲು ।
ತಸ್ಯೈವ ಭೂಪತೇರಾಸೀದದ್ಯ ಕನ್ಯಾ ಮನೋರಮಾ ॥೧೮೦॥

ಸಾ ಗರ್ಭೇಽಪಿ ಮಹಾದೇವಧ್ಯಾನಪೂಜನತತ್ಪರಾ ।
ಅಧುನಾ ಪ್ರಸವಸ್ತಸ್ಯಾಃ ಸ್ತನ್ಯಪಾನೋತ್ಸುಕಾ ನ ಸಾ ॥೧೮೧॥

ತೇನಾಹಂ ಸಂಸ್ಮೃತಸ್ತತ್ರ ಗಂತವ್ಯಮಿತಿ ರೋಚತೇ ।
ತತ್ರ ಕೃತ್ಯಂ ನ ಮೇ ನೂನಮೌಷಧೈರ್ನ ಫಲಂ ಯತಃ । ॥೧೮೨॥

---

ಇಂದ್ರನು ಆ ಇಬ್ಬರು ವೈದ್ಯರನ್ನು ನೋಡಿ ಏನು ವಿಚಾರಿಸುತ್ತೀರಿ? ಈಗ ಆ ಕಣ್ಣುಗಳನ್ನು ಬಿಡಿಸುವುದು ಅಸಾಧ್ಯವೇ ಏನು? ಅದನ್ನು ಜಾಗ್ರತೆ ಹೇಳಿ ಎಂದು ಕೇಳಿದನು. ಆಗ ಧನ್ವಂತರಿಯು ಹೀಗೆಂದನು. ॥೧೭೮॥

" ಭೂಮಿಯಲ್ಲಿ ಮಗಧದೇಶದಲ್ಲಿ ಚಿತ್ರರಥನೆಂಬ ಒಬ್ಬ ರಾಜನಿದ್ದಾನೆ. ಆತನು ಶ್ರೀಮಂತನು. ಅಲ್ಲದೆ ಶಿವಪೂಜಾಸಕ್ತನೂ ಆಗಿದ್ದಾನೆ. ॥೧೭೯॥

ಆತನಿಗೆ ಈ ಲೋಕದಲ್ಲಿ ಯಾವ ಪದಾರ್ಥದಲ್ಲಿಯೂ ಕೊರತೆ ಇಲ್ಲ. ಆತನಿಗೆ ಈಗ ಮನೋಹರಳಾದ ಒಬ್ಬಳು ಕನ್ನಿಕೆಯು ಹುಟ್ಟಿರುವಳು. ॥೧೮೦॥

ಆಕೆಯು ಗರ್ಭದಲ್ಲಿರುವಾಗಲೇ ಶ್ರೀ ಶಿವಪೂಜೆಯಲ್ಲಿ ಆಸಕ್ತಳಾಗಿದ್ದಳು. ಅಂತಹವಳು ಈಗ ಜನಿಸಿರುವಳು. ಸ್ತನ್ಯಪಾನದಲ್ಲಿ ಆಕೆಗೆ ಪ್ರವೃತ್ತಿಯೇ ಇಲ್ಲವಾಗಿದೆ. ॥೧೮೧॥

ಆ ರಾಜನು ನನ್ನನ್ನು ಈಗ ಸ್ಮರಿಸಿಕೊಂಡಿರುವನು. ಆದುದರಿಂದ ನಾನು ಅಲ್ಲಿಗೆ ಹೋಗಬೇಕಾಗಿದೆ. ಆದರೆ ನನ್ನ ಔಷಧವು ಅಲ್ಲಿ ಸಫಲವಾಗಲಾರದೆಂದು ನನ್ನ ಊಹೆ. ॥೧೮೨॥

ಶಿವಾಚಾರರತಾ ಸಾ ತು ನ ಗೃಹ್ಣಾತ್ಯೌಷಧಂ ಖಲು ।
ಅತಃ ಪರಂ ಮಯಾ ತತ್ರ ಗಂತವ್ಯಂ ನೇತಿ ಚಿಂತ್ಯತೇ ॥೧೮೩॥

ಇತಿ ತದ್ವಚನಂ ಶ್ರುತ್ವಾ ವಿಸ್ಮಿತಃ ಪಾಕಶಾಸನಃ ।
ಮಯಾಪ್ಯಾಗಮ್ಯತೇ ತತ್ರ ದ್ರಷ್ಟುಂ ತಾಮೇವ ಕನ್ಯಕಾಂ ॥೧೮೪॥

ಇತ್ಯುಕ್ತ್ವಾ ತೇನ ಸಂಯುಕ್ತೋ ಯಯೌ ಚಿತ್ರರಥಾಲಯಂ ।
ತತಸ್ತೇನಾರ್ಚಿತೋ ಭಕ್ತ್ಯಾ ಶಚೀಪತಿರುವಾಚ ತಂ ॥೧೮೫॥

॥ ಇಂದ್ರ ಉವಾಚ ॥

ಭಾಗ್ಯವಾನಸಿ ಭೂಪಾಲ ಪೂಜ್ಯಃ ಸುರಗಣೈರಪಿ ।
ಭೂತಿರುದ್ರಾಕ್ಷಪೂತಾಂಗಃ ಶಂಭುಲಿಂಗಾರ್ಚನಪ್ರಿಯಃ ॥೧೮೬॥

ಮಹದೈಶ್ವರ್ಯಮಾಸಾದ್ಯ ಶಿವಪೂಜಾಪರಾಯಣಃ ।
ವಿಹಾಯ ಭೋಗಸಾಮಗ್ರೀಃ ಕಃ ಸ್ಯಾದುಗ್ರಪರಾಯಣಃ ॥೧೮೭॥

---

ಆಕೆಯು ಶಿವನಲ್ಲಿ ಆಸಕ್ತಳಾಗಿ ಶೈವದೀಕ್ಷೆಯನ್ನು ಸ್ವೀಕರಿಸಿರುವುದರಿಂದ ಔಷಧವನ್ನು ಸೇವಿಸುವುದಿಲ್ಲ. ಆದುದರಿಂದ ನಾನು ಅಲ್ಲಿಗೆ ಹೋಗಬೇಕೇ ಬೇಡವೇ ? ಎಂದು ಯೋಚಿಸುತ್ತಿದ್ದೇನೆ." ॥೧೮೩॥

ಎಂದು ಹೇಳಿದ ಮಾತನ್ನು ಇಂದ್ರನು ಕೇಳಿ, ಆಶ್ಚರ್ಯಪಟ್ಟನು. ಮತ್ತು ನಾನೂ ಕೂಡ ಆ ಕನ್ನಿಕೆಯನ್ನು ನೋಡುವುದಕ್ಕಾಗಿ ಬರುತ್ತೇನೆ ಎಂದನು. ॥೧೮೪॥

ಹೀಗೆಂದು ಇಂದ್ರನು ಧನ್ವಂತರಿಯೊಡನೆ ಚಿತ್ರರಥನ ಅರಮನೆಗೆ ತೆರಳಿದನು. ಮತ್ತು ಆತನಿಂದ ಪೂಜಿತನಾದ ಇಂದ್ರನು ಚಿತ್ರರಥನೊಂದಿಗೆ ಹೀಗೆ ಮಾತನಾಡಿದನು. ॥೧೮೫॥

" ಎಲೈ ರಾಜನೇ, ನೀನೇ ಭಾಗ್ಯಶಾಲಿ. ವಿಭೂತಿ ರುದ್ರಾಕ್ಷಗಳನ್ನು ಧರಿಸಿ ಶಿವಲಿಂಗಾರ್ಚನೆಯಲ್ಲಿ ಆಸಕ್ತನಾದ ನೀನು ಸಮಸ್ತ ದೇವತೆಗಳಿಗೂ ಪೂಜ್ಯನಾಗಿರುವೆ. ॥೧೮೬॥

ಮಹೈಶ್ವರ್ಯವನ್ನು ಹೊಂದಿ ನೀನು ಶಿವಪೂಜೆಯಲ್ಲಿ ಆಸಕ್ತನಾಗಿರುವೆ.

ತ್ವದೀಯಾಲೋಕನೇನಾಪಿ ಶಿವೇ ಭಕ್ತಿಃ ಪ್ರಜಾಯತೇ ।
ಸಭಾಯಾಂ ಪುಣ್ಯರೂಪಾಯಾಂ ಶಾಂಭವಾ ಏವ ಮೇ ಮತಾಃ ॥೧೮೮॥

ಭೂತಿರುದ್ರಾಕ್ಷನಾಲಾಂಕಾಶ್ಚಂದ್ರರೇಖಾಂಕಿತಾ ಇವ ।
ದೃಶ್ಯಂತೇ ಶಾಂಕರಾಃ ಸರ್ವೇ ಸಭಾಯಾಂ ತವ ಭೂಪತೇ ॥೧೮೯॥

ರಮ್ಯಶಾಂಕರರೂಪಾಣಾಂ ಪ್ರತಿಬಿಂಬಾನಿ ಭಿತ್ತಿಷು ।
ವಿಚಿತ್ರಲಿಖಿತಾನೀವ ದೃಶ್ಯಂತೇ ಶಾಂಭವಾನಿ ಹ ॥೧೯೦॥

ಅದ್ಯ ಭಾಗ್ಯವಶೇನೇದಂ ಜಾತಂ ಲೋಚನಗೋಚರಂ ।
ಹಾರಂ ವಿಹಾರಸದನಮಿದಮೇವ ಮನೋಹರಂ ॥೧೯೧॥

ಭೂಮಂಡಲಮಿದಂ ಸರ್ವಂ ಪಾವನಂ ಖಲು ಶಾಂಭವಂ ।
ಬಹುಪುಣ್ಯಪ್ರಭಾವಾನಾಂ ಭಾವಾನಾಂ ಸಂಗಮಾತ್ ಸುಖಂ ॥೧೯೨॥

---

ಎಲ್ಲಾ ರಾಜಭೋಗಗಳನ್ನೂ ಬಿಟ್ಟು ಯಾವನು ತಾನೆ ಇಂತಹ ಕಠಿಣ ವ್ರತವನ್ನು ಅಂಗೀಕರಿಸುವನು ? ॥೧೮೭॥

ನಿನ್ನ ದರ್ಶನದಿಂದಲೇ ಶಿವನಲ್ಲಿ ಭಕ್ತಿಹುಟ್ಟುವುದು. ಪುಣ್ಯಮಯವಾದ ಸಭೆಯಲ್ಲಿ ಶಾಂಭವರೇ ಯೋಗ್ಯರೆಂದು ನನ್ನ ಅಭಿಮತ. ॥೧೮೮॥

ಎಲೈ ರಾಜನೇ ; ನಿನ್ನ ಸಭೆಯಲ್ಲಿ ವಿಭೂತಿರೇಖೆ, ಮತ್ತು ರುದ್ರಾಕ್ಷಗಳಿಂದ ಅಲಂಕೃತರಾದ ಶೈವರು ಚಂದ್ರರೇಖೆಯುಳ್ಳವರಂತೆ ಕಾಣುತ್ತಿರುವರು. ॥೧೮೯॥

ಗೋಡೆಗಳ ಮೇಲೆ ಬಿದ್ದಿರುವ ಮನೋಹರವಾದ ಶೈವರ ಪ್ರತಿಬಿಂಬಗಳು ಚಿತ್ರಗಳಲ್ಲಿ ಬರೆದಹಾಗೆ ಸುಂದರವಾಗಿ ಕಾಣುತ್ತಿವೆ. ॥೧೯೦॥

ಈಗ ನಾನು ನನ್ನ ಅದೃಷ್ಟವಿಶೇಷದ ಬಲದಿಂದ ಮನೋಹರವಾದ ವಿಹಾರ ಭವನವನ್ನು ಕಣ್ಣಾರೆ ನೋಡಿದಂತಾಯಿತು. ॥೧೯೧॥

ಶ್ರೀ ಶಾಂಭವರಿಂದ ತುಂಬಿದ ಈ ಭೂಮಂಡಲವು ಪವಿತ್ರವಾಗಿದೆ. ಅನೇಕ ಪುಣ್ಯಕರಗಳಾದ ಕರ್ಮಗಳ ಸಮಾಗಮದಿಂದ ಸುಖವು ಲಭಿಸುವುದು. ॥೧೯೨॥

ಮಂದಿರೇ ಬಿಲ್ವತರವಃ ಪರಿತೋ ಲಿಂಗಕೋಟಯಃ ।
ತನ್ಮೂಲೇಷು ವಿಚಿತ್ರೇಷು ರತ್ನಬದ್ಧೇಷು ಭೂರಿಶಃ ॥೧೯೩॥

ಆನಮ್ರಬಿಲ್ವಶಾಖಾಭಿರ್ಲಿಂಗಾನ್ಯಾಲಂಗಿತಾನ್ಯಪಿ ।
ಕಾಮಿನೀಭಿರಿವಾಪೂರ್ವಕಾಮುಕಾಂಗಾನಿ ಲೀಲಯಾ ॥೧೯೪॥

ಅಲಮೇತಾವತಾ ಜನ್ಮ ಶಿವಲಿಂಗಾವಲೋಕನೈಃ ।
ಸಫಲಂ ಸಕಲಂ ಲೋಕೇ ದುರ್ಲಭಂ ಲಿಂಗದರ್ಶನಂ ॥೧೯೫॥

ರತ್ನಭೂಮಿಷು ರಮ್ಯಾಣಿ ರತ್ನಲಿಂಗಾನಿ ಭೂಪತೇ ।
ಬಿಲ್ವಮೂಲೇ ಸುಪುಣ್ಯೇನ ಕೇನ ವಾ ರಚಿತಾನ್ಯಪಿ ॥೧೯೬॥

ದೂರಾದಪ್ಯದ್ಯ ದೃಷ್ಟಾನಿ ಶಿವಲಿಂಗಾನಿ ಭೂರಿಶಃ ।
ರಚಯತ್ಯವಿಲಂಬೇನ ಮಂಗಳಾನಾಂ ಪರಂ ಪರಂ ॥೧೯೭॥

---

ಈ ಭವನದ ಸುತ್ತಲೂ ಬಿಲ್ವವೃಕ್ಷಗಳು ಹೇರಳವಾಗಿ ಕಾಣುತ್ತಿವೆ. ಮತ್ತು ಆ ಬಿಲ್ವವೃಕ್ಷಗಳ ಬುಡದಲ್ಲಿ ಚಿತ್ರವಿಚಿತ್ರಗಳಾದ ಅನೇಕ ಶಿವಲಿಂಗಗಳು ಪ್ರತಿಷ್ಠಿತ ವಾಗಿವೆ. ॥೧೯೩॥

ಕೆಳಕ್ಕೆ ಬಗ್ಗಿ ಅಲ್ಲಿರುವ ಶಿವಲಿಂಗವನ್ನು ಆಲಿಂಗಿಸಿಕೊಂಡ ಬೊಂಬೆಗಳು ಕಾಮುಕರ ಅವಯವಗಳನ್ನು ಆಲಿಂಗಿಸಿಕೊಂಡಿರುವ ಕಾಮಿನಿಯರ ಹಾಗೆ ಶೋಭಿಸುತ್ತಿವೆ. ॥೧೯೪॥

ಇಂತಹ ಶಿವಲಿಂಗದರ್ಶನದಿಂದ ಈ ಜನ್ಮವು ಸಾರ್ಥಕವಾಗುವುದು. ಅಂದರೆ ಈ ದರ್ಶನದಿಂದ ಮೋಕ್ಷವು ಲಭಿಸುವುದು. ಲೋಕದಲ್ಲಿ ಎಲ್ಲವೂ ಸುಲಭ ವಾಗಿ ಸಿಕ್ಕೀತು. ಶಿವಲಿಂಗದ ದರ್ಶನವು ಮಾತ್ರ ದುರ್ಲಭವಲ್ಲವೆ! ॥೧೯೫॥

ಎಲೈ ರಾಜನೇ, ರಮಣೀಯವಾದ ಮತ್ತು ರತ್ನಖಚಿತವಾದ ಈ ಭೂಮಿ ಯಲ್ಲಿ ಬಿಲ್ವವೃಕ್ಷದ ಕೆಳಗೆ ಯಾವ ಪುಣ್ಯವಂತನು ಈ ಲಿಂಗಗಳನ್ನು ಸ್ಥಾಪಿಸಿ ದನೋ ತಿಳಿಯದು! ॥೧೯೬॥

ನಾನು ಬಹು ದೂರದಿಂದಲೇ ಅನೇಕ ಲಿಂಗಗಳ ದರ್ಶನವನ್ನು ಮಾಡಿ ದೆನು. ಈ ದರ್ಶನವು ಜಾಗ್ರತೆಯಾಗಿ ಕಲ್ಯಾಣಪರಂಪರೆಯನ್ನು ಒದಗಿಸುವುದರಲ್ಲಿ ಅನುಮಾನವಿಲ್ಲ. ॥೧೯೭॥

ತನ್ವೈತದ್ಭೂಪತೇ ಭಾಗ್ಯಂ ದುರ್ಲಭಂ ಭುವನತ್ರಯೇ ।
ತದಿದಂ ಶಂಭುಪೂಜಾಯಾಃ ಕೇವಲಂ ಫಲಮುತ್ತಮಂ ॥೧೯೮॥

ಕಲ್ಪಕೋಟಿಸಹಸ್ರೇಷು ಯತ್ಪುಣ್ಯಂ ಸಮುಪಾರ್ಜಿತಂ ।
ತತ್ಪುಣ್ಯಮೇತದಮಲಂ ಲಿಂಗಪ್ರತ್ಯಕ್ಷಲಕ್ಷಣಂ ॥೧೯೯॥

ಅಮಂಗಳಾನಾಂ ಸಂಹಾರೋ ಜಾತ ಏವಾದ್ಯ ಸತ್ವರಂ ।
ಯತೋ ವಿಲೋಕಿತಂ ಲಿಂಗಂ ಶಾಂಗಮಂಗಳದಾಯಕಂ ॥೨೦೦॥

ಏವಂ ವದತಿ ಭೂಪಾಲಂ ವಾಸವೇ ವಾಸುಕಿಃ ಸ್ವಯಂ ।
ವೃದ್ಧರೂಪಂ ಸಮಾಸಾದ್ಯ ಭೂಪಾಲಂ ದ್ರಷ್ಟುಮಾದರಾತ್ ॥೨೦೧॥

ಸ ಸಮಾಗತ್ಯ ತಂ ಭೂಪಂ ವಿಲೋಕ್ಯ ಮುದಿತಸ್ತದಾ ।
ಧನ್ಯ ಧನ್ಯ ನೃಪಾಧೀಶ ಧನ್ಯೋಽಸಿ ಶಿವಪೂಜಕ ॥೨೦೨॥

---

ಎಲೈ ರಾಜನೇ, ನಿನ್ನ ಈ ಭಾಗ್ಯವು ಮೂರು ಲೋಕಗಳಲ್ಲಿಯೂ ದೊರಕಲಾರದು. ಈ ಭಾಗ್ಯವು ನಿನಗೆ ಶಿವಪೂಜೆಯ ಫಲವೇ ಹೊರತು ಬೇರೆಯಲ್ಲ. ॥೧೯೮॥

ಒಂದು ಕೋಟಿ ಕಲ್ಪಗಳಲ್ಲಿ ಯಾವ ಪುಣ್ಯವು ಸಂಪಾದಿಸಲ್ಪಟ್ಟಿತೋ ಆ ಪುಣ್ಯದ ಫಲವೇ ಈ ಲಿಂಗ ಪ್ರತ್ಯಕ್ಷದರ್ಶನರೂಪವಾಗಿದೆ. ॥೧೯೯॥

ನನ್ನ ಸಕಲ ಪಾಪಗಳು ಈ ಕೂಡಲೆ ನಾಶಹೊಂದುವುವು. ಏಕೆಂದರೆ ಸಮಸ್ತ ಮಂಗಳಪ್ರದವಾದ ಈ ಲಿಂಗಗಳ ದರ್ಶನವು ನನಗೆ ಲಭಿಸಿತಲ್ಲವೇ! " ॥೨೦೦॥

ಹೀಗೆ ಇಂದ್ರನು ರಾಜನಿಗೆ ಹೇಳುತ್ತಿರಲು ಆಗ ವಾಸುಕಿ ಎಂಬ ಸರ್ಪರಾಜನು ತಾನು ವೃದ್ಧನ ರೂಪದಿಂದ ರಾಜನನ್ನು ನೋಡಲು ಅಲ್ಲಿಗೆ ಬಂದನು. ॥೨೦೧॥

ಆ ವಾಸುಕಿಯು ರಾಜನ ಹತ್ತಿರ ನಿಂದು ಸಂತೋಷಪಟ್ಟು, ಎಲೈ ರಾಜಾಧೀಶ್ವರನೇ, ನೀನು ಕೃತಕೃತ್ಯನು. ನೀನು ಶಿವಪೂಜಕನಾದುದರಿಂದ ಧನ್ಯನಾದೆ. ॥೨೦೨॥

ಶಿವಪೂಜಾಪ್ರಭಾವಸ್ತೇ ಸರ್ವೇಷಾಂ ಶುಭದಾಯಕಃ ।
ಶಿವಪೂಜಾಪ್ರಭಾವೋಽಯಂ ಸೂತೇ ಶುಭಪರಂಪರಾಂ ॥೨೦೩॥

ಸಂಭಾವಿತಾನಿ ಸರ್ವಾಣಿ ಮಂಗಳಾನಿ ಮಹಿಪತೇ ।
ಲಿಂಗಾರ್ಚನೇನ ಲೋಕಾನಾಂ ದುರ್ಲಭಾನಿ ಸ್ವಭಾವತಃ ॥೨೦೪॥

ದುರ್ಲಭಂ ಮಾನುಷಂ ಜನ್ಮ ಸಂಪ್ರಾಪ್ಯ ಶಿವತತ್ಪರಃ ।
ಶಿವಪೂಜಾಂ ಕರೋತೀತಿ ಶಾಂಭವೋ ಭುವಿ ದುರ್ಲಭಃ ॥೨೦೫॥

ಶಾಂಭವಃ ಶೋಭನಾಕಾರೋ ವಿಕಾರರಹಿತಃ ಸ್ವಯಂ ।
ಶುಭದಾನೋದ್ಯತೋ ನಿತ್ಯಂ ಸ್ವಾವಲೋಕನಸಂಭವೈಃ ॥೨೦೬॥

ಇದಂ ಧನ್ಯಂ ದಿನಂ ರಾಜನ್ ಜೀವನಂ ಧನ್ಯಮೇವ ಮೇ ।
ಶರೀರಮಪಿ ಮೇ ಧನ್ಯಂ ಶಾಂಭವಸ್ಯಾವಲೋಕನಾತ್ ॥೨೦೭॥

---

ನಿನ್ನ ಶಿವಪೂಜಾಪ್ರಭಾವವು ಎಲ್ಲರಿಗೂ ಶುಭಪ್ರದವಾಗುವುದು. ನಿನ್ನ ಶಿವಪೂಜೆಯ ಮಹಿಮೆಯಂತೂ ನಿನ್ನ ವಂಶದಲ್ಲಿ ವಿಶೇಷವಾದ ಶುಭಪರಿಣಾಮವನ್ನುಂಟುಮಾಡೀತು. ||೨೦೩||

ಎಲೈ ರಾಜನೇ, ನಿನಗೆ ಎಲ್ಲಾ ವಿಧವಾದ ಮಂಗಳಗಳೂ ಉಂಟಾಗುವುವು. ಸ್ವಭಾವದಿಂದಲೇ ಈ ಲಿಂಗಾರ್ಚನೆಯು ಇತರರಿಗೆ ದುರ್ಲಭವು. ||೨೦೪||

ಲೋಕದಲ್ಲಿ ಮನುಷ್ಯ ಜನ್ಮವೇ ದುರ್ಲಭ. ಅದರಲ್ಲಿಯೂ ಮನುಷ್ಯನಾಗಿ ಶಿವಪೂಜೆಯಲ್ಲಿ ಆಸಕ್ತನಾಗಿರುವುದು ಅತಿ ದುರ್ಲಭ. ಶಿವಪೂಜೆಯನ್ನು ಮಾಡುತ್ತಾ ಇರುವ ಶಾಂಭವನು ಭೂಮಿಯಲ್ಲಿ ಸಿಗುವುದು ನಿಜವಾಗಿಯೂ ಕಷ್ಟ. ||೨೦೫||

ಶಾಂಭವನು ದರ್ಶನೀಯನು. ಮತ್ತು ಕಾಮಾದಿ ಇಂದ್ರಿಯ ವಿಕಾರಗಳನ್ನು ಸುಲಭವಾಗಿ ಹೊಂದಲಾರನು. ದಾನಕೊಡುವುದಕ್ಕೆ ಸದಾ ಆತನು ಸಿದ್ಧನಿರುವನು. ಆತನ ದರ್ಶನವು ಅದೃಷ್ಟವಿಶೇಷದಿಂದ ಲಭಿಸುವುದು. ||೨೦೬||

ಎಲೈ ರಾಜನೇ, ನಿನ್ನ ದರ್ಶನಮಾಡಿದ ಈ ದಿನವು ಸುದಿನ. ನನ್ನ ಜೀವನವೆಲ್ಲಾ ಕೃತಕೃತ್ಯವಾಯಿತು. ಈ ನನ್ನ ಶರೀರವೂ ಶಾಂಭವನಾದ ನಿನ್ನ ದರ್ಶನದಿಂದ ಕೃತಾರ್ಥವಾಯಿತು. ||೨೦೭||

ದೃಷ್ಟಃ ಶಾಂಭವರೂಪೇಣ ಶಂಭುರೇವಾಧುನಾ ಮಯಾ ।
ಧರ್ಮಾಣಾಂ ಪರಿಪಾಕೋಽಯಂ ಶಾಂಭವಾಂಘ್ರಿವಿಲೋಕನಂ॥೨೦೮॥

ಶಾಂಭವಾಗ್ರೇಸರಾಣಾಂ ಚ ಚರಣಾಂಬುಜವೀಕ್ಷಣಂ ।
ತದೇವಾಕ್ಷಯಪುಣ್ಯಾನಾಂ ಕಾರಣಂ ಮಂಗಳಸ್ಯ ಚ ॥೨೦೯॥

ಭವಚ್ಛ್ರೀಚರಣಾಂಭೋಜರೇಣವೋ ಭುವನತ್ರಯಂ ।
ಕುರ್ವಂತಿ ಪಾವನಂ ನೂನಂ ಯತಃ ಪಾವನಪಾವನಾಃ ॥೨೧೦॥

ಪಾವನಾನಿ ಬಹೂನ್ಯೇವ ಸಂತಿ ಕಿಂ ತೈರನುತ್ತಮೈಃ ।
ಯತಃ ಶಾಂಭವಪಾದಾಬ್ಜರೇಣುತುಲ್ಯಾನಿ ತಾನಿ ನ ॥೨೧೧॥

ಲೋಕೇ ತೇ ಬಹವೋ ಭವಂತಿ ಪಶವಃ ಕಿಂ ತೈರ್ವೃಥಾ ಜೀವನಂ
ತೇಷಾಂ ಕೇವಲಮೇವ ಶಾಂಭವಪದಾಂಭೋಜಾದರಾಭಾವತಃ ।
ಭಕ್ತಿಃ ಶಾಂಭವಪಾದಪಂಕಜರಜಃ ಪುಂಜೇ ತದಾಸಂಜನೇ
ಜಾತಾ ಜನ್ಮಸಹಸ್ರಪಾತಕಮಹೋತ್ಪಾತಾಪಹಾರಾಯ ಸಾ ॥೨೧೨॥

---

ಈಗ ಶಾಂಭವರೂಪದಿಂದಿರುವ ಶಂಭುವನ್ನೇ ನಾನು ನೋಡಿದಂತಾಯಿತು. ಶೈವನ ಪಾದದರ್ಶನವು ಅನೇಕ ಧರ್ಮಕರ್ಮಗಳ ಪರಿಪಾಕವೇ ಹೊರತು ಬೇರೆಯಲ್ಲ. ॥೨೦೮॥

ಶೈವಾಗ್ರೇಸರರ ಪಾದಕಮಲದ ದರ್ಶನಮಾಡುವಿಕೆಯೇ ವಿಪುಲವಾದ ಪುಣ್ಯಗಳಿಗೂ ಮಂಗಳಕ್ಕೂ ಕಾರಣವಾಗಿದೆ. ॥೨೦೯॥

ತಮ್ಮ ಶ್ರೀಪಾದಕಮಲಗಳ ಧೂಳು ಮೂರು ಲೋಕಗಳನ್ನು ಪವಿತ್ರ ಮಾಡುತ್ತದೆ. ಏಕೆಂದರೆ ಅವು ಪವಿತ್ರವಸ್ತುಗಳಲ್ಲೆಲ್ಲಾ ಪವಿತ್ರವಾದವುಗಳು. ॥೨೧೦॥

ಲೋಕಗಳಲ್ಲಿ ಅನೇಕ ಪವಿತ್ರವಸ್ತುಗಳಿದ್ದರೂ ಅವು ಶೈವನ ಪಾದಧೂಳಿಗೆ ಸಮಾನಗಳಾಗಿಲ್ಲ. ಹೀಗಿರುವಾಗ ನಮಗೆ ಅವುಗಳಿಂದೇನು ಪ್ರಯೋಜನ ! ॥೨೧೧॥

ಲೋಕದಲ್ಲಿ ಅನೇಕರು ಪಶುಗಳಿಗೆ ಸಮಾನರಾಗಿರುವರು. ಅವರ ಜೀವನವೇ ವ್ಯರ್ಥ. ಶ್ರೀ ಶಾಂಭವನ ಪಾದಕಮಲದಲ್ಲಿ ಆಸಕ್ತಿಯಿಲ್ಲದವರಿಂದೇನುಪ್ರಯೋಜನ? ಶ್ರೇಷ್ಠಜನ್ಮ ಹೊಂದಿದ ಸಜ್ಜನರಾದ ಶ್ರೀ ಶಾಂಭವರ ಪಾದ

ಧನ್ಯಾ ಶಂಕರಪಾದಪದ್ಮಭಜನಂ ಸಂಜೀವನಂ ಮೇನಿರೇ ।
ಹಾರಃ ಕೋಽಪಿ ನರೋ ಹರತ್ಯಘಕುಲಂ ಲೀಲಾಮಲಾಲೋಕನೈಃ
ಆಕಲ್ಪಂ ಯದುಪಾರ್ಜಿತಂ ಚ ಸುಕೃತಂ ತೇನೈವ ತದ್ದರ್ಶನಂ ।
ತತ್ಕಾಲಸ್ಯ ಚ ತರ್ಜನಾಯ ನಿತರಾಂ ತದ್ಭಂಜನಾಯಾಪ್ಯಲಂ ॥೨೧೩॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಪೂರ್ವಾರ್ಧೇ ಗಣಾನಾಂ
ವೈಕುಂಠಾದಿಪದದಾನಂ, ಶೈವತಪೋವರ್ಣನಂ, ತೇಷಾಂ ಸತ್ಯ
ಲೋಕಾದ್ಯಧಿಪತಿತ್ವಂ, ಕುರುರಾಡ್ವಸಿಷ್ಠಸಂವಾದೇ, ಮಗಧ
ಭೂಪಾಲ ವಾಸುಕಿ ಸಂವಾದೇ, ಶಿವಪೂಜಾಮಹಿಮಾ
ವರ್ಣನಂ ನಾಮ ಚತ್ವಾರಿಂಶೋಽಧ್ಯಾಯಃ

---

ಕಮಲದ ಧೂಳಿನ ಪುಂಜದಲ್ಲಿಟ್ಟಿರುವ ಭಕ್ತಿಯು ಮಾತ್ರ ಒಂದು ಸಾವಿರ ಜನ್ಮದಿಂದ ಉಂಟಾದ ಮಹಾಪಾಪಗಳನ್ನು ಪರಿಹರಿಸುತ್ತದೆ. ॥೨೧೨॥

ಕೃತಕೃತ್ಯರಾದ ಜನರು ಶ್ರೀ ಶಿವನ ಪಾದಕಮಲಸೇವೆಯನ್ನು ಸಂಜೀವನೌಷಧಪ್ರಾಯವೆಂದು ತಿಳಿದಿರುವರು. ಹರಭಕ್ತನಾದ ಮನುಷ್ಯನು ಯಾವನ ಲೀಲಾಮಾತ್ರವಾದ ದರ್ಶನದಿಂದ ಪಾಪಮುಕ್ತನಾಗುವನೋ ಅಂತಹ ಶಾಂಭವನ ದರ್ಶನವಾಗಬೇಕಾದರೆ, ಆತನು ಕಲ್ಪಾಂತರಗಳಿಂದ ಪುಣ್ಯಾರ್ಜನೆ ಮಾಡಿರಬೇಕು. ಮತ್ತು ಆ ಶಿವದರ್ಶನವು ಮೃತ್ಯುವನ್ನು ಹೆದರಿಸಿ ಓಡಿಸುವುದಲ್ಲದೆ, ಪಾಪನಾಶವನ್ನೂ ಮಾಡುತ್ತದೆ. ಆದುದರಿಂದ ಕಲ್ಯಾಣವನ್ನು ಅಪೇಕ್ಷಿಸುವ ಮನುಷ್ಯನು ಆಸ್ತಿಕನಾಗಿ ಈಶ್ವರನಲ್ಲಿ ಶ್ರದ್ಧಾಭಕ್ತಿಯನ್ನು ಇಟ್ಟುಕೊಂಡಿರುವುದು ಶ್ರೇಯಸ್ಕರ ಎಂದು ಗೌತಮಮಹರ್ಷಿಯು ಸಕಲ ಋಷಿವರ್ಗಕ್ಕೂ ಶಿವಮಹಿಮೆಯನ್ನು ಬೋಧಿಸಿದನು. ॥೨೧೩॥

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಭಾಗದ ಪೂರ್ವಾರ್ಧದಲ್ಲಿ ಗಣಗಳಿಗೆ
ವೈಕುಂಠಪದವಿಯನ್ನು ಕೊಟ್ಟುದು, ಶೈವರ ತಪಸ್ಸಿನ ವರ್ಣನೆ ಅವರಿಗೆ
ಸತ್ಯಲೋಕಾದಿಗಳ ಆಧಿಪತ್ಯ ದೊರಕಿದುದು, ಕುರುರಾಜ ವಸಿಷ್ಠ ಸಂವಾದ
ಹಾಗೂ ಮಗಧರಾಜ ವಾಸುಕಿಯರ ಸಂವಾದ, ಶಿವಪೂಜಾಮಹಿಮೆ
ಇವುಗಳನ್ನು ಒಳಗೊಂಡ ನಲವತ್ತನೆಯ ಅಧ್ಯಾಯವು
ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಏಕಚತ್ವಾರಿಂಶೋಽಧ್ಯಾಯಃ

|| ಗೌತಮ ಉವಾಚ ||

**ತತಃ ಪರಂ ಸ ಭೂಪಾಲೋ ದೇವವೈದ್ಯಾದಿಭಿಃ ಸಹ ।**
**ವಿವೇಶಾಂತಃಪುರಂ ರಮ್ಯಂ ಕುಮಾರೀ ಯತ್ರ ತಿಷ್ಠತಿ ॥೧॥**

**ರತ್ನಮಂದಿರಸಂಕೀರ್ಣರತ್ನಲಿಂಗವಿರಾಜಿತಂ ।**
**ರತ್ನತೋರಣಸಂಕೀರ್ಣಂ ದುಂದುಭಿಧ್ವನಿಸಂಯುತಂ ॥೨॥**

**ಫಲಪುಷ್ಪಸಮಾಕೀರ್ಣಂ ಪಾನೀಯಕಲಶಾವೃತಂ ।**
**ಪಕ್ವಾನ್ನಗಂಧಸಂವೀತಂ ಗಂಧವಾತನಿಷೇವಿತಂ ॥೩॥**

---

## ನಲವತ್ತೊಂದನೆಯ ಅಧ್ಯಾಯ

ಅನಂತರ ಆ ವಿಚಿತ್ರರಥರಾಜನು ದೇವವೈದ್ಯರೇ ಮುಂತಾದವರೊಡನೆ ತನ್ನ ಕುಮಾರಿಯಿದ್ದ ಮನೋಹರವಾದ ಅಂತಃಪುರವನ್ನು ಪ್ರವೇಶಮಾಡಿದನು. ||೧||

ಆ ಅಂತಃಪುರವು ಅನೇಕ ರತ್ನಮಂದಿರಗಳಿಂದ ವ್ಯಾಪ್ತವಾಗಿದ್ದಿತು. ನಾನಾ ರತ್ನಲಿಂಗಗಳು ಅಲ್ಲಿ ವಿರಾಜಿಸುತ್ತಿದ್ದವು. ರತ್ನಮಯವಾದ ತೋರಣಗಳು ಈ ಅಂತಃಪುರದಲ್ಲಿ ಅನೇಕವಿದ್ದವು. ದುಂದುಭಿವಾದ್ಯಗಳು ಧ್ವನಿಮಾಡುತ್ತಿದ್ದವು. ||೨||

ಅನೇಕ ದಿವ್ಯ ಫಲಗಳೂ ಪುಷ್ಪಗಳೂ ವಿಶೇಷವಾಗಿದ್ದವು. ಜಲಪೂರ್ಣವಾದ ಕಲಶಗಳು ಸಾಲಾಗಿ ಕಂಗೊಳಿಸುತ್ತಿದ್ದುವು. ಪಕ್ವವಾಗಿರುವ ಅನ್ನದ ಸುವಾ

ರುದ್ರವೀಣಾಧ್ವನೀನಾಂ ಚ ಪ್ರತಿಧ್ವನಿವಿರಾಜಿತಂ ।
ಶಿವಶಂಕರ ರುದ್ರೇತಿ ನಾಮಧ್ವನಿಸಮಾವೃತಂ ॥೪॥

ಕ್ವಚಿನ್ನಾಟ್ಯಾಂಗನಾವೀತಂ ಕ್ವಚಿಲ್ಲಿಂಗಾರ್ಚಕಾವೃತಂ ।
ಕ್ವಚಿನ್ಮಹೇಶ್ವರಕಥಾಸುಧಾಧಾರಾಸಮನ್ವಿತಂ ॥೫॥

ಈದೃಶಂ ಮಂದಿರಂ ದೃಷ್ಟ್ವಾ ಸರ್ವಸೌಭಾಗ್ಯಸಂಯುತಂ ।
ಸಂತೋಷವೃಷ್ಟಿಸಹಿತಾಸ್ತುಷ್ಟುವುಸ್ತಂ ನೃಪಂ ಸುರಾಃ ॥೬॥

ತತಃ ಪರಂ ಮಂದಸಂಜ್ಞಾಂ ವಿನಿಮೀಲಿತಲೋಚನಾಂ ।
ತಾಂ ಕುಮಾರೀಂ ವಿಸ್ಮಯೇನ ದದರ್ಶ ಮುನಿಪುಂಗವಾಃ ॥೭॥

---

ಸನೆಯು ಎಲ್ಲ ಕಡೆಯಲ್ಲಿಯೂ ಹರಡಿದ್ದಿತು. ಸುಗಂಧಯುಕ್ತವಾದ ವಾಯುವು ಮನೋಹರವಾಗಿ ಬೀಸುತ್ತಿದ್ದಿತು. ॥೩॥

ತಾನಾಗಿಯೇ ಧ್ವನಿಮಾಡುವ ರುದ್ರವೀಣೆಗಳ ಮಧುರ ಧ್ವನಿಗಳು ಆ ಅಂತಃಪುರದಲ್ಲಿ ಪ್ರತಿಧ್ವನಿಗೊಡುತ್ತಾ ಶೋಭಾಯಮಾನವಾಗಿದ್ದುವು. ಎಲ್ಲೆಲ್ಲಿಯೂ ಶಿವ, ಶಂಕರ, ರುದ್ರ ಎಂಬ ಪರಮೇಶ್ವರ ನಾಮಸಂಕೀರ್ತನ ಧ್ವನಿಯೇ ಕೇಳಿ ಬರುತ್ತಿದ್ದಿತು. ॥೪॥

ಕೆಲವು ಕಡೆ ನರ್ತಕಿಯರು ಗುಂಪಾಗಿ ನರ್ತನ ಮಾಡುತ್ತಿದ್ದರು. ಕೆಲವು ಕಡೆ ಶಿವಲಿಂಗವನ್ನು ಪೂಜಿಸುತ್ತಾ ತಮ್ಮ ಅರ್ಚನೆಯನ್ನು ನಡೆಸುತ್ತಿದ್ದರು. ಮತ್ತೆ ಕೆಲವು ಕಡೆ ಮಹೇಶ್ವರನ ಕಥೆಯೆಂಬ ಅಮೃತಧಾರೆಯನ್ನು ಜನಗಳು ಪಾನಮಾಡುತ್ತಿದ್ದರು. ॥೫॥

ಸಕಲ ಸೌಭಾಗ್ಯಗಳಿಂದಲೂ ಯುಕ್ತವಾಗಿರುವ ಇಂತಹ ಮಂದಿರವನ್ನು ನೋಡಿ ದೇವತೆಗಳು ಸಂತೋಷಭರಿತರಾಗಿ ಆ ಮಹಾರಾಜನನ್ನು ನೋಡಿ ಹರ್ಷಗೊಂಡರು. ॥೬॥

ಓ ಮುನಿವರ್ಯರೇ, ಅನಂತರ ನಿಶ್ಚೇಷ್ಟತೆಯಿಂದ ಕಣ್ಣುಗಳನ್ನು ಮುಚ್ಚಿ ಮಲಗಿದ್ದ ಆ ಕುಮಾರಿಯನ್ನು ರಾಜನು ಆಶ್ಚರ್ಯದಿಂದ ನೋಡಿದನು. ॥೭॥

**ತತಃ ಸ ರಾಜಾ ಧೈರ್ಯೇಣ ಗೃಹೀತ್ವಾ ತಾಂ ಕುಮಾರಿಕಾಂ ।**
**ಶಿವಾಭಿಷೇಕಪಾನೀಯೈರಾಪ್ಲುತಾಂ ಚ ಚಕಾರ ಸಃ ॥೮॥**

**ತತೋ ಭಸ್ಮ ಸಮಾದಾಯ ತತ್ತದಂಗಾನುಲೇಪನಂ ।**
**ಕೃತ್ವಾ ರುದ್ರಾಕ್ಷಮಾಲಾಶ್ಚ ಕಂಠಾದೌ ಸ ದದೌ ನೃಪಃ ॥೯॥**

**ತತಃ ಪರಂ ಬಿಲ್ವಪತ್ರೈಃ ಶಂಕರಾಯ ಸಮರ್ಪಿತೈಃ ।**
**ಆಚ್ಛಾದ್ಯ ಕನ್ಯಕಾಂ ರಾಜಾಪ್ಯಶ್ರುಧಾರಾಪ್ಲುತೋಽಭವತ್ ॥೧೦॥**

**ತತಃ ಪರಂ ಕುಮಾರೀ ಸಾಪ್ಯುನ್ಮೀಲ್ಯ ನಯನೇ ಶನೈಃ ।**
**ಶಿವಲಿಂಗಂ ವಿಲೋಕ್ಯೈವ ಪ್ರಣತಾ ಭಕ್ತಿಪೂರ್ವಕಂ ॥೧೧॥**

**ತತೋ ಲಿಂಗಮುಪಸ್ಪೃಶ್ಯ ಬಿಲ್ವಪತ್ರೈರ್ಮನೋಹರೈಃ ।**
**ಸಂಪೂಜ್ಯಾಲಿಂಗ್ಯ ತಲ್ಲಿಂಗಂ ಪ್ರಹೃಷ್ಟಾ ದ್ವಿಜಪುಂಗವಾಃ ॥೧೨॥**

---

ಆಗ ಆ ರಾಜನು ಧೈರ್ಯದಿಂದ ಆ ರಾಜಕುಮಾರಿಯನ್ನು ಎತ್ತಿಕೊಂಡು ಅವಳಿಗೆ ಶಿವನಿಗೆ ಅಭಿಷೇಕಮಾಡಿದ ನೀರಿನಿಂದ ಪ್ರೋಕ್ಷಣೆಮಾಡಿದನು. ॥೮॥

ಅನಂತರ ಭಸ್ಮವನ್ನು ತೆಗೆದುಕೊಂಡು ಅದನ್ನು ಅವಳ ಅವಯವಗಳಿಗೆಲ್ಲಾ ಬಳಿದು, ಕುತ್ತಿಗೆ, ಕೈ ಮುಂತಾದ ಪ್ರದೇಶಗಳಿಗೆ ರುದ್ರಾಕ್ಷಮಾಲೆಯನ್ನೂ ಆ ರಾಜನೇ ಹಾಕಿದನು. ॥೯॥

ಆಮೇಲೆ ಆ ರಾಜನು ಪರಮೇಶ್ವರನಿಗೆ ಪೂಜೆಮಾಡಿದ್ದ ಬಿಲ್ವಪತ್ರೆಗಳನ್ನು ತೆಗೆದುಕೊಂಡು ಆ ಕುಮಾರಿಯು ಮುಚ್ಚುವಂತೆ ಮೇಲೆ ಹಾಕಿ, ತಾನೂ ಆನಂದದಿಂದ ಬಾಷ್ಪ ತಾಳಿದನು. ॥೧೦॥

ಒಡನೆಯೇ ಆ ರಾಜಕುಮಾರಿಯೂ ಮೆಲ್ಲಗೆ ಕಣ್ಣು ತೆರೆದು, ಕೂಡಲೇ ತನ್ನ ದೃಷ್ಟಿಗೆ ಪಾತ್ರವಾದ ಶಿವಲಿಂಗವನ್ನು ಭಕ್ತಿಪುರಸ್ಸರವಾಗಿ ನೋಡಿ ನಮಸ್ಕರಿಸಿದಳು. ॥೧೧॥

ಓ ಬ್ರಾಹ್ಮಣೋತ್ತಮರೇ, ಕೇಳಿ. ಆಮೇಲೆ ಆ ರಾಜಕುಮಾರಿಯು, ಲಿಂಗವನ್ನು ಸ್ಪರ್ಶಮಾಡಿ, ಮನೋಹರವಾದ ಬಿಲ್ವಪತ್ರೆಗಳಿಂದ ಆ ಶಿವಲಿಂಗಕ್ಕೆ ಪೂಜೆಮಾಡಿ, ಆ ಶಿವಲಿಂಗವನ್ನು ಆಲಿಂಗನಮಾಡಿಕೊಂಡು ಆನಂದಪರವಶಳಾದಳು. ॥೧೨॥

ತಾಂ ವಿಲೋಕ್ಯ ಸುರಾಃ ಸೋಽಪಿ ನೃಪೋಽಪಿ ನೃಪಕನ್ಯಕಾಂ ।
ಸಂತೋಷಂ ಪರಮಂ ಜಗ್ಮುಃ ಪುಷ್ಪವೃಷ್ಟಿರಭೂತ್ತದಾ ॥೧೩॥

ದೇವದುಂದುಭಯೋ ನೇದುರಂತಃಪುರನಿವಾಸಿನಾಂ ।
ಹರ್ಷಃ ಸಮಭವತ್ತಸ್ಯಾಃ ಶ್ರುತ್ವಾ ವಾರ್ತಾಂ ಮನೋಹರಾಂ ॥೧೪॥

ತತಃ ಪರಂ ಸ ರಾಜಾ ತಾಂ ಕನ್ಯಕಾಂ ಕಮಲಾನನಾಂ ।
ಆಲಿಂಗ್ಯ ಪರಮಾನಂದಮವಾಪಾತ್ಯಂತವಿಸ್ಮಿತಃ ॥೧೫॥

ತತೋ ಜಗಾದ ಸಾ ಕನ್ಯಾ ಶಿವ ಇತ್ಯಕ್ಷರದ್ವಯಂ ।
ತತಃ ಪರಂ ಮಹಾದೇವ ಮಹಾದೇವೇತಿ ಸಾದರಂ ॥೧೬॥

ಶ್ರುತ್ವಾ ತದುಕ್ತಾಂ ತಾಂ ವಾಣೀಂ ನಿರ್ವಾಣಪದದಾಯಿನೀಂ ।
ಪ್ರಹರ್ಷಮತುಲಂ ಪ್ರಾಪುರ್ವಿಸ್ಮಯಾವಿಷ್ಟಮಾನಸಾಃ ॥೧೭॥

---

ಹೀಗೆ ರಾಜಕುಮಾರಿಯು ಪೂಜಾನಿರತಳಾದುದನ್ನು ನೋಡಿ ಆ ದೇವತೆಗಳೂ ಮತ್ತು ರಾಜನೂ ವಿಸ್ಮಯ ಮತ್ತು ಸಂತೋಷ ಇವುಗಳಿಂದ ಕೂಡಿದರು. ಆಗ ಪುಷ್ಪವೃಷ್ಟಿಯಾಯಿತು. ॥೧೩॥

ಅಲ್ಲದೆ ಆ ಸಮಯದಲ್ಲಿ ದೇವದುಂದುಭಿವಾದ್ಯಗಳು ಧ್ವನಿಮಾಡಲಾರಂಭಿಸಿದುವು. ರಾಜಕುಮಾರಿಯು ನಡೆಸಿದ ಆಶ್ಚರ್ಯಕರವಾದ ಸಮಾಚಾರವನ್ನು ಕೇಳಿ ಆ ಅಂತಃಪುರದಲ್ಲಿ ವಾಸಿಸುತ್ತಿದ್ದವರಿಗೆಲ್ಲಾ ಸಂತೋಷವುಂಟಾಯಿತು. ॥೧೪॥

ಅನಂತರ ಆ ರಾಜನು ತಾವರೆಹೂವಿನಂತೆ ಸುಂದರವಾದ ಮುಖವುಳ್ಳ ಆ ಕನ್ಯೆಯನ್ನು ಆಲಿಂಗಿಸಿ, ಅತ್ಯಂತ ಆಶ್ಚರ್ಯಭರಿತನಾದನು. ॥೧೫॥

ಆ ಕನ್ಯೆಯು ಮೊದಲು ಶಿವನೆಂಬ ಮನೋಹರವಾದ ಎರಡಕ್ಷರವನ್ನೂ, ಆಮೇಲೆ ಮಹಾದೇವನೆಂಬ ನಾಲ್ಕು ಅಕ್ಷರಗಳನ್ನು ಆದರದಿಂದ ಉಚ್ಚರಿಸುತ್ತಾ ಅಲ್ಲಿಂದ ಹೊರಟಳು. ॥೧೬॥

ಮೋಕ್ಷವನ್ನು ದೊರಕಿಸುವ ಆ ಶಿವನಾಮಸಂಕೀರ್ತನರೂಪವಾದ ಮಾತನ್ನು ಕನ್ಯೆಯು ನುಡಿದುದನ್ನು ಲಾಲಿಸಿ ಎಲ್ಲರೂ ಆಶ್ಚರ್ಯಹೊಂದಿದರು. ॥೧೭॥

ಏತಸ್ಮಿನ್ನಂತರೇ ತತ್ರ ಚತುರ್ಮುಖಮುಖಾಃ ಸುರಾಃ ।
ಸನಕಾದ್ಯಾಶ್ಚ ಮುನಯಸ್ತಾಂ ದ್ರಷ್ಟುಂ ಸಮುಪಾಗತಾಃ ॥೧೮॥

ತಾನ್ವಿಲೋಕ್ಯ ಸುರಾನ್ರಾಜಾ ಶಿವನಾಮರತಾನ್ಮುಹುಃ ।
ಭಸ್ಮತ್ರಿಪುಂಡ್ರರುದ್ರಾಕ್ಷೈರ್ಭೂಷಿತಾನ್ಪ್ರಣತೋ ಮುದಾ ॥೧೯॥

ತತಸ್ತೇ ಮಂದಿರಂ ದೃಷ್ಟ್ವಾ ತಸ್ಯ ಭೂಪಸ್ಯ ಶೋಭಿತಂ ।
ಶಿವಲಿಂಗಸಮಾಕ್ರಾಂತಂ ರತ್ನದೀಪಸಮಾಕುಲಂ ॥೨೦॥

ಶಿವನಿರ್ಮಾಲ್ಯಮಾಲ್ಯಾನಾಂ ಸಮೂಹೈರಂಕಿತಂ ನವೈಃ ।
ಬಿಲ್ವಪತ್ರೈಶ್ಚ ಸಂಕೀರ್ಣಂ ಸಂಕೀರ್ಣಂ ಶಾಂಭವೈರಪಿ ॥೨೧॥

ಶಿವಧ್ಯಾನಸಮಾಸಕ್ತನಾಟ್ಯಸ್ತ್ರೀಪರಿವೇಷ್ಟಿತಂ ।
ರುದ್ರವೀಣಾಗಾನಲೋಲಶೈವಕನ್ಯಾಸಮಾಶ್ರಿತಂ ॥೨೨॥

---

ಇದೇ ಸಮಯಕ್ಕೆ ಚತುರ್ಮುಖಬ್ರಹ್ಮನೇ ಮುಂತಾದ ದೇವತೆಗಳೂ ಸನಕಸನಂದರೇ ಮುಂತಾದ ಮುನಿಗಳೂ ಸಹ ಆ ಕುಮಾರಿಯನ್ನು ದರ್ಶನ ಮಾಡಲು ಅಲ್ಲಿಗೆ ಬಂದರು. ॥೧೮॥

ಬಾರಿಬಾರಿಗೂ ಶಿವನಾಮಸಂಕೀರ್ತನೆಯಲ್ಲಿಯೇ ತತ್ಪರರಾಗಿ, ಭಸ್ಮ, ತ್ರಿಪುಂಡ್ರ ಮತ್ತು ರುದ್ರಾಕ್ಷ ಇವುಗಳಿಂದ ಅಲಂಕರಿಸಿಕೊಂಡಿರುವ ಆ ದೇವತೆಗಳನ್ನು ನೋಡಿ ಆ ವಿಚಿತ್ರರಥನು ಸಂತೋಷದಿಂದ ಅವರಿಗೆ ನಮಸ್ಕಾರಮಾಡಿದನು. ॥೧೯॥

ಆ ದೇವತೆಗಳೆಲ್ಲರೂ ಎಲ್ಲ ಕಡೆಯಲ್ಲೂ ಶಿವಲಿಂಗಗಳಿಂದ ಯುಕ್ತವಾಗಿ ರತ್ನಮಯವಾದ ದೀಪಗಳಿಂದ ಪ್ರಜ್ವಲಿಸುತ್ತಿರುವ ಆ ರಾಜನ ಮನೆಯನ್ನು ನೋಡಿ ಆಶ್ಚರ್ಯ ಹೊಂದಿದರು. ॥೨೦॥

ನಿರ್ಮಾಲ್ಯರೂಪವಾದ ಮಾಲೆಗಳ ಸಮೂಹದಿಂದ ಆ ಸದನವು ಗುರುತು ಮಾಡಲ್ಪಟ್ಟಿದ್ದಿತು. ಅನೇಕ ಬಿಲ್ವಪತ್ರೆಗಳು ಅಲ್ಲಿ ರಾಶಿಯಾಗಿ ಬಿದ್ದಿದ್ದವು. ಎಲ್ಲೆಲ್ಲೂ ಶಂಭುವಿನ ಭಕ್ತರೇ ಈ ಮನೆಯಲ್ಲಿ ತೋರುತ್ತಿದ್ದರು. ॥೨೧॥

ಅನೇಕ ನಾಟ್ಯಸ್ತ್ರೀಯರು ಶಿವನ ಧ್ಯಾನದಲ್ಲಿ ಆಸಕ್ತರಾಗಿ ಗುಂಪುಗುಂಪಾಗಿ ನರ್ತನಮಾಡುತ್ತಿದ್ದರು. ಶಿವನ ಭಕ್ತರಾದ ಕನ್ಯೆಯರು ರುದ್ರವೀಣೆಯ ಗಾನವನ್ನು ಕೇಳುವುದರಲ್ಲಿ ಆಸಕ್ತರಾಗಿದ್ದರು. ॥೨೨॥

ಪ್ರಣಮಂತಿ ಮಹಾದೇವಂ ಲಿಂಗರೂಪಿಣಮವ್ಯಯಂ ।
ಕೇಚಿದ್ಬಿಲ್ವಾದಿಭಿರ್ದ್ರವ್ಯೈಃ ಪೂಜಯಂತಿ ಸದಾಶಿವಂ ॥೨೩॥

ಕೇಚಿನ್ನೃತ್ಯಂತಿ ಸೋತ್ಸಾಹಾಃ ಕೇಚಿದ್ಧ್ಯಾನರತಾ ಅಪಿ ।
ಶಿವನೈವೇದ್ಯಪಕ್ವಾನ್ನರಾಶಿಗಂಧಸಮಾವೃತಂ ॥೨೪॥

ಧೂಪಗಂಧಸಮಾಕ್ರಾಂತಂ ದೀಪಮಾಲಾವಿರಾಜಿತಂ ।
ತಾದೃಶಂ ಮಂದಿರಂ ದೃಷ್ಟ್ವಾ ಸುರಾಃ ಕೈಲಾಸಸನ್ನಿಭಂ ॥೨೫॥

ಶಿವಲಿಂಗಾನಿ ದೃಷ್ಟ್ವಾ ತೇ ಪ್ರಣತಾಃ ಪ್ರೀತಿಪೂರ್ವಕಂ ।
ಲಿಂಗಾರ್ಚನಾನಿ ತೇ ಚಕ್ರುರ್ಬಿಲ್ವಪತ್ರಾದಿಸಾಧನೈಃ ॥೨೬॥

ತತಃ ಪರಂ ಸ ರಾಜಾಪಿ ರತ್ನಸಿಂಹಾಸನೇಷು ತಾನ್ ।
ಉಪವೇಶ್ಯಾರ್ಚಯಾಮಾಸ ಬಿಲ್ವಪತ್ರಾದಿಸಾಧನೈಃ ॥೨೭॥

---

ಕೆಲವರು ಲಿಂಗರೂಪಿಯೂ ನಾಶರಹಿತನೂ ಆದ ಮಹಾದೇವನನ್ನು ನಮಸ್ಕಾರಮಾಡುತ್ತಿದ್ದರು. ಹಲವರು ಬಿಲ್ವಪತ್ರೆಗಳೇ ಮುಂತಾದ ಪೂಜಾಸಾಮಗ್ರಿಗಳಿಂದ ಸದಾಶಿವನನ್ನು ಪೂಜಿಸುತ್ತಿದ್ದರು. ॥೨೩॥

ಕೆಲವರು ಉತ್ಸಾಹದಿಂದ ನರ್ತನಮಾಡುತ್ತಿದ್ದರು. ಕೆಲವರು ಧ್ಯಾನಮಗ್ನರಾಗಿದ್ದರು. ಶಿವನಿಗೆ ನಿವೇದನಮಾಡಿದ ಪಕ್ವವಾದ ಅನ್ನದ ರಾಶಿಯ ಗಂಧವು ಅಲ್ಲೆಲ್ಲಾ ವ್ಯಾಪಿಸಿದ್ದಿತು. ॥೨೪॥

ಅನೇಕ ಧೂಪಗಳ ಸುಗಂಧದಿಂದ ವ್ಯಾಪಿಸಲ್ಪಟ್ಟು, ದೀಪ ಪಂಕ್ತಿಗಳಿಂದ ವಿರಾಜಿಸುತ್ತಿರುವ, ಕೈಲಾಸಕ್ಕೆ ಸಮಾನವಾದ ಈ ರಾಜಭವನವನ್ನು ನೋಡಿ ದೇವತೆಗಳು ಸಂತೋಷಹೊಂದಿದರು. ಮತ್ತು ಅಲ್ಲಿದ್ದ ಶಿವಲಿಂಗಗಳನ್ನು ನೋಡಿ ಪ್ರೀತಿಪೂರ್ವಕವಾಗಿ ನಮಸ್ಕರಿಸಿ, ಬಿಲ್ವಪತ್ರೆ, ಹೂ ಮುಂತಾದ ಸಾಮಗ್ರಿಗಳಿಂದ ಆ ಶಿವಲಿಂಗಗಳನ್ನು ಪೂಜಿಸಿದರು. ॥೨೬॥

ಆ ರಾಜನೂ ಸಹ ದೇವತೆಗಳನ್ನು ರತ್ನಸಿಂಹಾಸನಗಳಮೇಲೆ ಕುಳ್ಳಿರಿಸಿ ಬಿಲ್ವಪತ್ರೆ, ಹೂ, ಹಣ್ಣು ಮುಂತಾದ ಸಾಮಗ್ರಿಗಳಿಂದ ಪೂಜಿಸಿದನು.

ನಾರಾಯಣಾದಯೋ ದೇವಾಃ ಶಿವಾರ್ಚನಪರಾಯಣಾಃ ।
ಕ್ವ ಗಮ್ಯತೇ ಕ್ವ ವಾ ವಾಸಃ ಕುತೋ ಲಿಂಗಾರ್ಚನಾಯ ವಾ ॥೨೮॥

ಶಿವಾರ್ಚನರತಾಃ ಶಿಷ್ಟಾಸ್ತ್ವದ್ಯೋಯಮತೋ ಮಯಾ ।
ದೃಷ್ಟಾಃ ಪುಣ್ಯಾರ್ಜನಾಯಾದ್ಯ ಶ್ರೀಮಹಾದೇವಕಿಂಕರಾಃ ॥೨೯॥

ಇತಿ ತದ್ವಚನಂ ಶ್ರುತ್ವಾ ಸುರಾಃ ಶಿವಪರಾಯಣಾಃ ।
ಸಂತೋಷಂ ಪರಮಂ ಪ್ರಾಪುಃ ಶಿವಲಿಂಗಾರ್ಚನಪ್ರಿಯಾಃ ॥೩೦॥

ತತಸ್ತೇ ತೇ ಸುರಾಃ ಪ್ರಾಹುರ್ವಿನಯಾನತಕಂಧರಂ ।
ರಾಜಾನಂ ಕೃತಕೃತ್ಯೋಽಸಿ ಧನ್ಯೋಽಸೀತಿ ಮುಹುರ್ಮುಹುಃ ॥೩೧॥

ತತಸ್ತಾಂ ಕನ್ಯಕಾಂ ದೃಷ್ಟ್ವಾ ಭೂತಿಭೂಷಿತವಿಗ್ರಹಾಂ ।
ರುದ್ರಾಕ್ಷಮಾಲಾಭರಣಾಂ ಶಿವಧ್ಯಾನಪರಾಯಣಾಂ ॥೩೨॥

---

ಎಲೈ ನಾರಾಯಣದಿ ದೇವತೆಗಳಿರಾ! ನೀವೆಲ್ಲರೂ ಶಿವಪೂಜಾಪರಾಯಣರು. ಈಗ ನೀವು ಎಲ್ಲಿಗೆ ಹೊರಟಿರುವಿರಿ? ನಿಮ್ಮ ವಾಸಸ್ಥಾನವಾವುದು? ಲಿಂಗವನ್ನು ಪೂಜೆಮಾಡುವುದಕ್ಕೋಸ್ಕರವೇನಾದರೂ ಹೊರಟಿರುವಿರಾ ಏನು! ॥೨೮॥

ಶಿವನ ಪೂಜೆಯಲ್ಲಿಯೇ ನಿರತರಾಗಿರುವ ನೀವೇ ಶಿಷ್ಟರು. ಸಂಪದ್ಯುಕ್ತನಾದ ಮಹೇಶ್ವರನ ಕಿಂಕರರಾದ ನೀವು ನನಗೆ ಪುಣ್ಯವನ್ನುಂಟುಮಾಡಿಕೊಡುವುದ ಕ್ಕೋಸ್ಕರ ನನ್ನ ಅದೃಷ್ಟದಿಂದ ಈಗ ದರ್ಶನವಿತ್ತಿರುವಿರಿ. ಎಂದು ರಾಜನು ದೇವತೆ ಗಳನ್ನು ಕುರಿತು ನುಡಿದನು. ॥೨೯॥

ಈ ರೀತಿ ನುಡಿದ ರಾಜನ ಮಾತುಗಳನ್ನು ಕೇಳಿ ಶಿವಪೂಜಾನಿರತರೂ, ಸದಾ ಶಿವನಾಮಧ್ಯಾನತತ್ಪರರೂ ಆದ ದೇವತೆಗಳು ಬಹಳ ಸಂತೋಷವನ್ನು ಹೊಂದಿದರು. ॥೩೦॥

ಅನಂತರ ಆ ದೇವತೆಗಳೆಲ್ಲರೂ, ವಿನಯದಿಂದ ತಲೆ ಬಗ್ಗಿಸಿ ನಿಂತುಕೊಂಡಿ ರುವ ಆ ರಾಜನನ್ನು ಕುರಿತು, ಓ ರಾಜೇಂದ್ರ! ನೀನು ಕೃತಕೃತ್ಯನು. ನೀನೇ ಧನ್ಯನು ಎಂದು ಪದೇಪದೇ ಹೇಳುತ್ತಾ ಹೊಗಳಿದರು. ॥೩೧॥

ಆಮೇಲೆ ವಿಭೂತಿಯಿಂದ ಅಲಂಕೃತವಾದ ದೇಹವುಳ್ಳ, ರುದ್ರಾಕ್ಷಮಾಲಾ ರೂಪವಾದ ಆಭರಣವನ್ನು ಧರಿಸಿ ಯಾವಾಗಲೂ ಶಿವಧ್ಯಾನಪರಾಯಣಳಾಗಿರುವ ಆ ಕುಮಾರಿಯ ಕಡೆಗೆ ನೋಡಿದರು. ॥೩೨॥

ಶಿವಧ್ಯಾನಸುಧಾಪಾನಪೀನಶೋಭನಲೋಚನಾಂ ।
ಮುಹುಃ ಶಿವಕಥಾಗಾನಲೋಲಕರ್ಣಾಂ ವಿಚಕ್ಷಣಾಂ ॥೩೩॥

ಸೌಂದರ್ಯನಿಧಿರೂಪಾಂ ತಾಂ ಸರ್ವಾನಂದಪ್ರದಾಯಿನೀಂ ।
ಸ್ಮೇರಶೀತಾಂಶುಸಂಯುಕ್ತಾಂ ದೃಷ್ಟ್ವಾ ತಾಂ ಪ್ರಣತಾಃ ಸುರಾಃ ॥೩೪॥

ವಿಲೋಕ್ಯ ಪ್ರಣತಾನ್ದೇವಾನ್ವಿಸ್ಮಿತಃ ಪ್ರಾಹ ಭೂಪತಿಃ ।
ಕೇಯಂ ಭಾಗ್ಯವತೀ ಕನ್ಯಾ ವಕ್ತವ್ಯಮಿತಿ ಸಾದರಂ ॥೩೫॥

॥ ದೇವಾ ಊಚುಃ ॥

ಇಯಂ ಶ್ರೀಶೈಲನಾಥಸ್ಯ ಮಂದಿರೇ ಮಣಿಸುಂದರೇ ।
ಸ್ಥಿತಾ ಬ್ರಾಹ್ಮಣಕನ್ಯೇಯಂ ಅಸ್ಯಾಸ್ತಾತಃ ಶಿವಾರ್ಚಕಃ ॥೩೬॥

---

ಆ ಕುಮಾರಿಯು, ಸದಾ, ಶಿವಧ್ಯಾನವೆಂಬ ಅಮೃತವನ್ನು ಪಾನಮಾಡುತ್ತಾ ಅದರಿಂದಲೇ ವಿಶಾಲವೂ ಮನೋಹರವೂ ಆದ ಕಣ್ಣುಗಳಿಂದ ಕೂಡಿದ್ದಳು. ಆ ಕನ್ಯೆಯು ಬಾರಿಬಾರಿಗೂ ಶಿವನಕಥಾರೂಪವಾದ ಗಾನವನ್ನು ಕೇಳುವುದರಲ್ಲೇ ತನ್ನ ಕಿವಿಗಳನ್ನು ಉಪಯೋಗಿಸುತ್ತಿದ್ದಳು. ॥೩೩॥

ಸೌಂದರ್ಯಗಳಿಗೆ ನಿಧಿಯಂತಿರುವವಳೂ, ತನ್ನನ್ನು ದರ್ಶನಮಾಡುವರಿಗೆ ಆನಂದವನ್ನುಂಟುಮಾಡುವವಳೂ ಆಗಿ ಮಂದಹಾಸವೆಂಬ ಚಂದ್ರನಿಂದ ಪ್ರಕಾಶಿಸುತ್ತಿರುವ ಆ ಬಾಲಿಕೆಯನ್ನು ನೋಡಿ, ಆ ದೇವತೆಗಳು ನಮುಸ್ಕಾರಮಾಡಿದರು. ॥೩೪॥

ಹಾಗೆ ನಮಸ್ಕಾರ ಮಾಡಿದ್ದನ್ನು ನೋಡಿ ರಾಜನು ಆಶ್ಚರ್ಯಗೊಂಡು, ಎಲೈ ದೇವತೆಗಳಿರಾ, ಭಾಗ್ಯವತಿಯಾದ ಈ ಕುಮಾರಿಯು ಹಿಂದೆ ಯಾರಾಗಿದ್ದಳು? ದಯವಿಟ್ಟು ಆದರಪೂರ್ವಕವಾಗಿ ನನಗೆ ಎಲ್ಲವನ್ನೂ ತಿಳಿಸಬೇಕೆಂದು ಪ್ರಾರ್ಥಿಸಿದನು. ಆಗ ದೇವತೆಗಳೆಂದರು. ॥೩೫॥

ಎಲೈ ರಾಜನೇ, ಇವಳು ಬ್ರಾಹ್ಮಣ ಕನ್ಯೆಯು. ಇವಳ ತಂದೆಯು ರತ್ನಗಳಿಂದ ಸುಂದರವಾಗಿ ರಚಿಸಲ್ಪಟ್ಟಿರುವ ಶ್ರೀ ಶೈಲೇಶ್ವರನ ದೇವಾಲಯದಲ್ಲಿ ಶಿವನ ಪೂಜಕನಾಗಿದ್ದನು. ॥೩೬॥

ವಿಪ್ರಃ ಶ್ರೀಶೈಲನಾಥಸ್ಯ ಪ್ರಾತಃ ಸಾಯಂ ಚ ಪೂಜನಮ್ ।
ಚಕಾರ ವಿವಿಧೈರ್ದ್ರವ್ಯೈರ್ಮಧ್ಯಾಹ್ನೇಽಪಿ ವಿಶೇಷತಃ ॥೩೭॥

ತತ್ಪೂಜಾಸಮಯೇ ಸೇಯಂ ಭಕ್ತ್ಯಾ ಸನ್ನಿಹಿತಾ ಸತೀ ।
ಚಕಾರ ದೀಪಮಾಲಾನಾಂ ಪರಿಷ್ಕಾರಂ ಪುನಃ ಪುನಃ ॥೩೮॥

ಕಪಿಲಾಗೋಘೃತಂ ದತ್ವಾ ಶುದ್ಧಂ ಶೋಧಿತಮಾದರಾತ್ ।
ಧೂಪದೀಪೈಶ್ಚ ವಿವಿಧೈರ್ಧೂಪಯಾಮಾಸ ಮಂದಿರಂ ॥೩೯॥

ನೈವೇದ್ಯಾನ್ನಪರಿಷ್ಕಾರಂ ಚಕಾರಾತಿಮನೋಹರಂ ।
ನಾಟ್ಯಂ ಚಕಾರ ಬಾಲೇಯಂ ಶ್ರೀಶೈಲೇಶ್ವರಸನ್ನಿಧೌ ॥೪೦॥

ತತಃ ಪರಂ ದೈವಯೋಗಾನ್ನದೀತೀರೇ ಮನೋಹರೇ ।
ಪ್ರಾಣಾನ್ಮುಮೋಚ ಕನ್ಯಾ ಸಾ ಭೂತಿಭೂಷಿತವಿಗ್ರಹಾ ॥೪೧॥

---

ಆ ಬ್ರಾಹ್ಮಣನು ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿಯೂ ವಿಶೇಷವಾಗಿ ಮಧ್ಯಾಹ್ನ ಸಮಯದಲ್ಲಿಯೂ ಸಹ ಶ್ರೀ ಶೈಲೇಶ್ವರನನ್ನು ಭಕ್ತಿಯಿಂದ ಪೂಜೆಮಾಡುತ್ತಿದ್ದನು. ॥೩೭॥

ಆ ಬ್ರಾಹ್ಮಣನು ಪೂಜೆಮಾಡುವ ಸಮಯದಲ್ಲಿ ಈ ಭಕ್ತಳಾದ ಬಾಲಿಕೆಯು ತಂದೆಯ ಸಮೀಪಕ್ಕೆ ಹೋಗಿ, ದೀಪಪಂಕ್ತಿಗಳನ್ನು ಸರಿಯಾಗಿ ಉರಿಯುವಂತೆ ಪದೇ ಪದೇ ಪರಿಷ್ಕರಮಾಡುತ್ತಿದ್ದಳು. ॥೩೮॥

ಕಪಿಲವರ್ಣದ ಹಸುವಿನ ತುಪ್ಪವನ್ನು ಚೆನ್ನಾಗಿ ಶೋಧಿಸಿ ಅದನ್ನು ಆ ದೀಪಗಳಿಗೆ ಹಾಕುತ್ತಿದ್ದಳು. ಅಲ್ಲದೇ ಆದರದಿಂದ ನಾನಾವಿಧವಾದ ಧೂಪ ಮತ್ತು ದೀಪಗಳನ್ನು ಹೆಚ್ಚಿಸಿ ಆ ಶಿವಮಂದಿರವನ್ನು ಸುವಾಸನಾಯುಕ್ತವನ್ನಾಗಿ ಮಾಡುತ್ತಿದ್ದಳು. ॥೩೯॥

ಶಿವನ ನಿವೇದನಕ್ಕೋಸ್ಕರ ಅನ್ನವನ್ನು ಚೆನ್ನಾಗಿ ಪಕ್ವವಾಗುವಂತೆ ಬೇಯಿಸಿ ತಂದಿಡುತ್ತಿದ್ದಳು. ಮತ್ತು ಈ ಬಾಲಿಕೆಯು ಶ್ರೀ ಶೈಲೇಶ್ವರನ ಮುಂದುಗಡೆ ಮನೋಹರವಾಗಿ ನರ್ತನ ಮಾಡುತ್ತಿದ್ದಳು. ॥೪೦॥

ಹೀಗೆಯೇ ಕೆಲವು ದಿವಸ ಮಾಡುತ್ತಾ ಆ ಬಾಲಿಕೆಯು ಒಂದುದಿನ ಭಸ್ಮದಿಂದ ಅಲಂಕೃತವಾದ ಶರೀರವುಳ್ಳವಳಾಗಿ ಮನೋಹರವಾದ ನದೀತೀರದಲ್ಲಿ ಅದೃಷ್ಟಕ್ಕನುಸಾರವಾಗಿ ಪ್ರಾಣತ್ಯಾಗಮಾಡಿದಳು. ॥೪೧॥

ತೇನ ಪುಣ್ಯಪ್ರಭಾವೇಣ ಜಾತಾ ತವ ಕುಮಾರಿಕಾ ।
ಗರ್ಭೇಽಪಿ ಸಂಸ್ಥಿತಾ ಸೇಯಂ ಶಿವಧ್ಯಾನರತಾ ನೃಪ ॥೪೨॥

ಅಸ್ಯಾಃ ಪುಣ್ಯಸ್ಯ ನಾಂತೋಽಸ್ತಿ ಮಾನ್ಯಾ ಸುರಗಣೈರಪಿ ।
ಅತಃ ಪರಮಿಯಂ ನಿತ್ಯಂ ಶಿವಪೂಜಾಪರಾ ನೃಪ ॥೪೩॥

ಆಹಾರೇಷ್ವರುಚಿಸ್ತಾವದಸ್ಯಾಃ ಸರ್ವಾತ್ಮನಾ ನೃಪ ।
ನ ರತ್ನಾಭರಣೇ ಪ್ರೀತಿರ್ನವಾ ಬಾಲಾಭಿಲಾಪನೇ ॥೪೪॥

ಹಾರೋಪಹಾರಪುಷ್ಟಾಂಗಾ ಶಂಗಾಲಿಂಗಾರ್ಚಪ್ರಿಯಾ ।
ಶಿವನಾಮಜಪೇನೈವ ಸಂತುಷ್ಟಾ ನೃಪಕನ್ಯಕಾ ॥೪೫॥

---

ಎಲೈ ರಾಜನೇ, ಹಿಂದಿನ ಜನ್ಮದಲ್ಲಿ ತಾನು ಮಾಡಿದ ಆ ಪೂಜೆಯ ಮಹಿಮೆಯಿಂದಲೇ ಈಗ ಈ ಕುಮಾರಿಯು ನಿನ್ನ ಮಗಳಾಗಿ ಜನಿಸಿರುವಳು. ಭೂಪಾಲನೇ, ಈ ಬಾಲಿಕೆಯು ಗರ್ಭದಲ್ಲಿದ್ದಾಗಲೇ ಸದಾ ಶಿವಧ್ಯಾನತತ್ಪರಳಾಗಿದ್ದಳು. ॥೪೨॥

ಇವಳ ಪುಣ್ಯಕ್ಕೆ ಪಾರವೇ ಇಲ್ಲ. ಇವಳು ದೇವತಾಸಮೂಹಗಳಿಂದಲೂ ಪೂಜಾರ್ಹಳು. ಎಲೈ ರಾಜನೇ, ಇನ್ನುಮುಂದೆ ಈ ನಿನ್ನ ಕುಮಾರಿಯು ಪ್ರತಿನಿತ್ಯವೂ ಶಿವಪೂಜಾಪರಾಯಣಳಾಗುವಳು. ॥೪೩॥

ರಾಜೇಂದ್ರ, ಈ ಕುಮಾರಿಗೆ ಆಹಾರಸೇವನೆಯಲ್ಲಿಯೂ ವಿಶೇಷವಾದ ಆಸಕ್ತಿಯಿಲ್ಲ. ತಾನು ಅಪೇಕ್ಷಿಸಿದ ಪದಾರ್ಥಗಳನ್ನು ರುಚಿಕರವಾದ ಭಕ್ಷ್ಯಭೋಜ್ಯಗಳನ್ನು ವಿಶೇಷವಾಗಿ ಕೇಳಿಕೊಳ್ಳುವುದು ಬಾಲಕರ ಪದ್ಧತಿ. ಆದರೆ ಈ ಬಾಲಕಿಗೆ ಅವುಗಳೊಂದರಲ್ಲಿಯೂ ಆಸಕ್ತಿಯೇ ಇರುವುದಿಲ್ಲ. ರತ್ನಮಯವಾದ ಒಡವೆಗಳನ್ನು ಧರಿಸಬೇಕೆಂದಾಗಲೀ, ತನ್ನ ಜೊತೆಗಾರರಾದ ಬಾಲಕರೊಡನೆ ಸಂತೋಷದಿಂದ ಮಾತನಾಡುತ್ತಾ ಆಟವಾಡಬೇಕೆಂದಾಗಲೀ ಇವಳಿಗೆ ಕುತೂಹಲವೇ ಇರುವುದಿಲ್ಲ. ॥೪೪॥

ಶಿವನಿಗೆ ನಿವೇದನಮಾಡಿದ ಆಹಾರ ಸಾಮಗ್ರಿಗಳನ್ನೇ ಸೇವಿಸುತ್ತಾ ಅದರಿಂದಲೇ ಸಂತೋಷಪಡೆಯುವಳು. ಅದರಿಂದಲೇ ಇವಳ ಅವಯವಗಳೆಲ್ಲಾ ಪುಷ್ಟಿಹೊಂದುವುವು. ಸದಾ ಶಂಗನೆನಿಸಿದ (ಸುಖಸ್ವರೂಪನೆನಿಸಿದ) ಶಿವನ

ಸೇಯಂ ಯೌವ್ವನಸಂಪನ್ನಾ ಸರ್ವದಾ ನವಯುವ್ವನಾ ।
ನ ಜರಾ ನಾಪಿ ಮರಣಂ ರೋಗೋಽಪ್ಯಸ್ಯಾಸ್ತು ನ ಧ್ರುವಂ ॥೪೬॥

ಶಿವಗಾನರತಾ ನಿತ್ಯಂ ಶಿವಮಂತ್ರಜಪೋತ್ಸುಕಾ ।
ಶಿವಾಲಯನಿವಾಸೇನ ಸಂತುಷ್ಟಹೃದಯಾ ಸದಾ ॥೪೭॥

ಏತಸ್ಯಾಸ್ತು ವಿವಾಹೇಽನ ಸ ಪ್ರೀತಿಃ ಪುರುಷೇಽಪಿ ವಾ ।
ಬ್ರಹ್ಮಚರ್ಯೇಣ ಗೌರೀಶಪೂಜನಾಸಕ್ತಮಾನಸಾ ॥೪೮॥

ಏತತ್ಸೌಂದರ್ಯವೃದ್ಧಿಶ್ಚ ಭವಿಷ್ಯತಿ ದಿನೇ ದಿನೇ ।
ಅಂಗಪುಷ್ಟಿಸ್ತಥಾಪ್ಯೇಷಾ ವಿಕಾರವಿರತಾ ಭವೇತ್ ॥೪೯॥

ಯದ್ಯತ್ಕಿಲಾಭಿಲಷಿತಂ ತತ್ತತ್ಸಿದ್ಧಂ ಭವಿಷ್ಯತಿ ।
ತೈಃ ಸಾಧನೈರ್ಮಹಾದೇವಂ ಪೂಜಯಿಷ್ಯತಿ ಸಾದರಂ ॥೫೦॥

---

ಲಿಂಗಾರ್ಚನೆಯಲ್ಲಿಯೇ ಇವಳಿಗೆ ತುಂಬಾ ಪ್ರೀತಿ. ಈ ರಾಜಕುಮಾರಿಯು ಶಿವನಾಮಗಳ ಜಪದಿಂದಲೇ ಅನವರತವೂ ಸಂತುಷ್ಟಳಾಗುವಳು. ॥೪೫॥

ಯುವತಿಯಾದ ಇವಳು ಯಾವಾಗಲೂ ನವಯೌವ್ವನದಿಂದಲೇ ಯುಕ್ತಳಾಗಿರುವಳು. ಇವಳಿಗೆ ಮುಪ್ಪಾಗಲೀ, ಮರಣವಾಗಲೀ ಅಥವಾ ರೋಗಾದ್ಯುಪದ್ರವಗಳಾಗಲೀ ನಿಶ್ಚಯವಾಗಿಯೂ ಉಂಟಾಗುವುದಿಲ್ಲ. ॥೪೬॥

ಸದಾ ಶಿವನ ಸಂಬಂಧವಾದ ಕೀರ್ತನೆಗಳನ್ನೇ ಮಧುರವಾಗಿ ಹಾಡುವುದರಲ್ಲಿ ನಿರತಳಾಗಿ ನಿತ್ಯವೂ ಶಿವಮಂತ್ರವನ್ನೇ ಉತ್ಸಾಹದಿಂದ ಜಪಿಸುವಳು. ಸದಾ ಶಿವದೇವಾಲಯದಲ್ಲಿ ವಾಸಮಾಡುತ್ತಾ ಸಂತೋಷದಿಂದ ಕೂಡಿರುವಳು. ॥೪೭॥

ಇವಳಿಗೆ ವಿವಾಹಮಾಡಿಕೊಳ್ಳುವುದರಲ್ಲಿಯೂ ಅಪೇಕ್ಷೆ ಬರುವುದಿಲ್ಲ. ಅಲ್ಲದೆ ಪುರುಷರಲ್ಲಿಯೂ ಈಕೆಗೆ ಪ್ರೀತಿಯಿಲ್ಲ. ಯಾವಾಗಲೂ ಬ್ರಹ್ಮಚರ್ಯವ್ರತದಲ್ಲೇ ಇದ್ದು ಗೌರೀರಮಣನನ್ನು ಪೂಜಿಸುವುದರಲ್ಲೇ ಆಸಕ್ತಿ ಹೊಂದಿರುವಳು. ॥೪೮॥

ಇವಳ ಸೌಂದರ್ಯವೂ, ಅವಯವಗಳ ಪುಷ್ಟಿಯೂ ದಿನದಿನಕ್ಕೂ ಅಭಿವೃದ್ಧಿಹೊಂದುವುದು. ಹೀಗೆ ಅಭಿವೃದ್ಧಿ ಹೊಂದಿದರೂ ಇವಳಿಗೆ (ಅವಯವಗಳಲ್ಲಿ) ಯಾವ ವಿಕಾರವೂ ಉಂಟಾಗುವುದಿಲ್ಲ. ॥೪೯॥

ಇವಳು ಅಪೇಕ್ಷಿಸಿದ ವಸ್ತುಗಳೆಲ್ಲವೂ ತಪ್ಪದೇ ಸಿದ್ಧವಾಗುವುವು. ಆ ಸಾಧನಗಳಿಂದಲೇ ಇವಳು ಆದರದಿಂದ ಮಹಾದೇವನನ್ನು ಪೂಜೆಮಾಡುತ್ತಾಳೆ. ॥೫೦॥

ನಾಟ್ಯಂ ಕರಿಷ್ಯತಿ ಪ್ರೀತ್ಯಾ ಪ್ರಾತಃ ಸಾಯಂ ವಿಶೇಷತಃ ।
ಮಧ್ಯಾಹ್ನೇಽಪಿ ಪ್ರಯತ್ನೇನ ಶಿವಪೂಜನತತ್ಪರಾ ॥೫೧॥

ಶಿವಪೂಜನಮೇತಸ್ಯಾಃ ಕೇವಲಂ ಜೀವನಂ ನೃಪ ।
ತದಂತರಾಯಃ ಸಹಸಾ ನಾಸ್ಯಾಂ ಸಹ್ಯಃ ಕದಾಚನ ॥೫೨॥

ರಾತ್ರ್ಯಾಮಪಿ ವಿಶೇಷೇಣ ನಿದ್ರಾಂ ತು ನ ಕರಿಷ್ಯತಿ ।
ನಿತ್ಯಂ ಜಾಗರಣೇನೈವ ಕಾಲಯಾಪನತತ್ಪರಾ ॥೫೩॥

ಶಿವಲಿಂಗಾಲಯೇಷ್ವೇಷಾ ಸಂಮಾರ್ಜನರತಾ ಸದಾ ।
ವ್ಯರ್ಥಾಲಾಪಾನ್ಪರಿತ್ಯಜ್ಯ ಶಿವಕರ್ಮರತಾ ಸದಾ ॥೫೪॥

ಅನೇನೈವ ಶರೀರೇಣ ಕೈಲಾಸಂ ಪ್ರತಿ ಯಾಸ್ಯತಿ ।
ರುದ್ರಕನ್ಯಾಸಮಾಕ್ರಾಂತಾ ಪಾರ್ವತೀಸೇವನೋತ್ಸುಕಾ ॥೫೫॥

---

ಇವಳು ಪ್ರೀತಿಪುರಸ಼್ರವಾಗಿ ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿಯೂ ಮಧ್ಯಾಹ್ನಸಮಯದಲ್ಲಿಯೂ ಸಹ ವಿಶೇಷಶ್ರದ್ಧೆಯಿಂದ ಶಿವನ ಮುಂದೆ ನರ್ತನ ಮಾಡುವಳು. ಮತ್ತು ಯಾವಾಗಲೂ ಶಿವಪೂಜೆಯಲ್ಲಿಯೇ ನಿರತಳಾಗುವಳು.॥೫೧॥

ಓ ರಾಜನೇ! ಕೇವಲ ಶಿವಪೂಜೆಯೇ ಇವಳಿಗೆ ಜೀವನವಾಗಿರುವುದು. ಈ ಶಿವಪೂಜೆಗೆ ಒಂದೊಂದು ವೇಳೆ ಉಂಟಾಗುವ ವಿಘ್ನಗಳನ್ನು ಸಹ ಇವಳು ಸಹಿಸಲಾರಳು. ॥೫೨॥

ರಾತ್ರಿವೇಳೆಯಲ್ಲಿಯೂ ವಿಶೇಷವಾಗಿ ನಿದ್ರೆಮಾಡದೇ ನಿತ್ಯವೂ ಜಾಗರಣೆಯಿಂದಲೇ ಕಾಲಕಳೆಯುತ್ತಾಳೆ. ॥೫೩॥

ಸದಾ ಇವಳು ಶಿವಲಿಂಗಗಳಿಂದ ಕೂಡಿದ ದೇವಾಲಯಗಳನ್ನು ಗುಡಿಸುವುದರಲ್ಲಿ ತುಂಬಾ ಆಸಕ್ತಿಯುಳ್ಳವಳಾಗುತ್ತಾಳೆ. ವ್ಯರ್ಥವಾಗಿರುವ ತಲೆಹರಟೆ ಮಾತುಗಳನ್ನು ಬಿಟ್ಟು ಯಾವಾಗಲೂ ಶಿವನ ಪೂಜಾ ಮತ್ತು ಶಿವಸೇವಾಕರ್ಮಗಳಲ್ಲಿಯೇ ನಿರತಳಾಗುತ್ತಾಳೆ. ॥೫೪॥

ಅಲ್ಲದೇ ಈ ಕುಮಾರಿಯು ಇದೇ ಶರೀರದಿಂದಲೇ ಕೈಲಾಸಪರ್ವತಕ್ಕೆ ಹೋಗಿ, ಅಲ್ಲಿ, ರುದ್ರಕನ್ಯೆಯರೊಡನೆ ಬೆರತು, ಯಾವಾಗಲೂ, ಪಾರ್ವತಿಯನ್ನು ಉತ್ಸಾಹದಿಂದ ಸೇವಿಸುತ್ತಾ ಕಾಲಹರಣಮಾಡುತ್ತಾಳೆ ॥೫೫॥

ಅಸ್ಯಾಃ ಕೈಲಾಸಯಾತ್ರಾಯಾಂ ದೇವದುಂದುಭಿನಿಸ್ವನಾಃ ।
ಭವಿಷ್ಯಂತಿ ಗಣಾಃ ಸರ್ವೇ ಸಮಾಯಾಸ್ಯಂತಿ ಕೋಟಿಶಃ ॥೫೬॥

ವಿಮಾನರತ್ನಮಾರುಹ್ಯ ಕೈಲಾಸಂ ಪ್ರತಿ ಯಾಸ್ಯತಿ ।
ಅಸ್ಯಾಂ ಪ್ರೀತಿರ್ಮಹೇಶಸ್ಯ ಸರ್ವದಾ ಶಿವಪೂಜಯಾ ॥೫೭॥

ಶಿವಲಿಂಗಾರ್ಚನೇ ಪ್ರೀತಿರ್ಯಸ್ಯ ತಸ್ಯ ಚ ಸರ್ವದಾ ।
ತಸ್ಮಿನ್ನೇವ ಹಿ ವಿಶ್ವೇಶಃ ಸ್ನೇಹಂ ತಾವತ್ಕರಿಷ್ಯತಿ ॥೫೮॥

ಶಿವಾರ್ಚನರತಾಃ ಕೇಚಿದ್ವಿರಲಾಸ್ತೇ ಕಲಾವಪಿ ।
ದುರ್ಲಭಾ ಏವ ಭೂಪಾಲ ಲೀಲಾಕಲ್ಪಿತವಿಗ್ರಹಾಃ ॥೫೯॥

ತವ ಭಾಗ್ಯೇನ ತಪಸಾ ಮಹತ್ಯಾ ಶಿವಪೂಜಯಾ ।
ಇಯಮಭ್ಯಾಗತಾ ಸೇಯಂ ತವಾಪಿ ನೃಪ ಮಂದಿರೇ ॥೬೦॥

---

ಇವಳು ಕೈಲಾಸಯಾತ್ರೆ ಹೊರಡುವಾಗ ದೇವದುಂದುಭಿವಾದ್ಯಗಳಾಗುವುವು. ಅಲ್ಲದೇ ಕೋಟ್ಯಂತರ ಶಿವಗಣಗಳು ಇವಳ ಸಮೀಪಕ್ಕೆ ಬರುತ್ತಾರೆ. ॥೫೬॥

ಅನಂತರ ಈ ಕನ್ಯೆಯು ಆ ಗಣಗಳೊಡನೆ ಶ್ರೇಷ್ಠವಾದ ವಿಮಾನದಲ್ಲಿ ಕುಳಿತು ಕೈಲಾಸಕ್ಕೆ ಹೋಗುತ್ತಾಳೆ. ಸದಾ ತನ್ನನ್ನು ಪೂಜೆಮಾಡಿದುದರಿಂದ ಮಹೇಶ್ವರನಿಗೆ ಇವಳಲ್ಲಿ ಯಾವಾಗಲೂ ಹೆಚ್ಚಿನ ಪ್ರೀತಿಯುಂಟಾಗುವುದು. ॥೫೭॥

ಯಾವಾಗಲೂ ಶಿವಲಿಂಗಾರ್ಚನೆಯಲ್ಲಿ ಯಾರಿಗೆ ಆಸಕ್ತಿಯೂ ಪ್ರೀತಿಯೂ ಹೆಚ್ಚಾಗಿರುವುದೋ ಅವರಲ್ಲೇ ಜಗದೊಡೆಯನಾದ ಶಿವನು ಸ್ನೇಹವನ್ನು ಬೆಳಸುತ್ತಾನೆ. ॥೫೮॥

ಓ ಭೂಪಾಲನೇ! ಈ ಕಲಿಯುಗದಲ್ಲಿ ಪರಮೇಶ್ವರನ ಲೀಲೆಯಿಂದ ಕಲ್ಪಿತವಾದ ಶರೀರವುಳ್ಳ ಶಿವಪೂಜಾಸಿರತರು ಎಲ್ಲೋ ಕೆಲವರು. ನಿಜವಾದ ಶಾಂಭವರಂತೂ ವಿರಳರೆಂದೇ ಹೇಳಬೇಕು. ॥೫೯॥

ಎಲೈ ರಾಜನೇ! ನಿನ್ನ ಅಪಾರವಾದಭಾಗ್ಯದಿಂದಲೂ, ವಿಶೇಷವಾದ ತಪಸ್ಸಿನಿಂದಲೂ ಮತ್ತು ಶಿವಪೂಜಾಪ್ರಭಾವದಿಂದಲೂ ಸಹ ಇವಳು ನಿನ್ನ ಮನೆಯಲ್ಲಿ ಬಂದು ಜನಿಸಿರುವಳು. ॥೬೦॥

ಏತಸ್ಯಾಃ ಪುಣ್ಯಪೂಜಾಯಾಃ ಸೇವಯಾಚ ವಿಲೋಕನೈಃ ।
ಕಾಲೋ ನೇಯ ಇತಿ ಪ್ರೀತಿರಸ್ಮಾಕಮಪಿ ಜಾಯತೇ ॥೬೧॥

ಅದ್ಯೈವ ಯೌವನಾಕ್ರಾಂತಾ ಭವಿಷ್ಯತಿ ನೃಪೋತ್ತಮ ।
ಸಾಯಂಕಾಲೇ ಶಿವಾರ್ಚಾಂತೇ ನಾಟ್ಯಮೇಷಾ ಕರಿಷ್ಯತಿ ॥೬೨॥

ನಾಟ್ಯಾವಲೋಕನಂ ಕರ್ತುಂ ಏತಸ್ಮಿನ್ನೃತ್ಯಮಂಡಪೇ ।
ಗಣೈಃ ಸಹ ಮಹಾದೇವಃ ಸ್ಥಾಸ್ಯತ್ಯಂಬಾಸಮನ್ವಿತಃ ॥೬೩॥

ಅದ್ಯೋತ್ಸವೋ ಮಹಾನ್ಕಾರ್ಯಃ ಶಿವಾಗಮನಸಂಭವೇ ।
ಭಾಗ್ಯೋತ್ಸವಸ್ಯ ಸಮಯಃ ಸೋಽಯಮನ್ಯೋ ನ ದೃಶ್ಯತೇ ॥೬೪॥

ಪಶ್ಯ ಪಶ್ಯ ತದಂಗಾನಿ ವರ್ಧಮಾನಾನಿ ಭೂಪತೇ ।
ಆಶ್ಚರ್ಯಕರಮೇತಾವದ್ಭೂತಪೂರ್ವಂ ನ ಸರ್ವಥಾ ॥೬೫॥

---

ಪುಣ್ಯಕರವಾದ ಪೂಜೆಯಲ್ಲಿ ಆಸಕ್ತಳಾಗುವ ಇವಳ ಪೂಜೆಯನ್ನೂ ಭಗವತ್ಸೇವೆಯನ್ನೂ ನೋಡುತ್ತಾ ನಾವೂ ಕಾಲಕಳೆಯಬೇಕೆಂಬ ಪ್ರೀತಿಯು ಉಂಟಾಗುತ್ತದೆ. ॥೬೧॥

ಓ ರಾಜೇಂದ್ರ! ಈಗಲೇ ಇವಳು ಯೌವನಭರಿತಳಾಗುವಳು. ಅಲ್ಲದೆ ಸಾಯಂಕಾಲದಲ್ಲಿ ಶಿವನನ್ನು ಪೂಜೆಮಾಡಿದ ತರುವಾಯ ಇವಳು ಆ ಪರಶಿವನ ಎದುರಿಗೆ ನಾಟ್ಯವಾಡುವಳು. ॥೬೨॥

ಈ ನಾಟ್ಯವನ್ನು ನೋಡುವುದಕ್ಕಾಗಿಯೇ ಮಹಾದೇವನು ತನ್ನ ಗಣಗಳಿಂದ ಪರಿವೃತನಾಗಿ ಗಿರಿಜೆಯೊಡನೆ ಬಂದು ಈ ನಾಟ್ಯಮಂಟಪದಲ್ಲಿ ನಿಲ್ಲುತ್ತಾನೆ. ॥೬೩॥

ಸಾಕ್ಷಾತ್ ಪರಮೇಶ್ವರನೇ ಇಲ್ಲಿಗೆ ಬರುವ ಸಂಭವವಿರುವುದರಿಂದ ಈ ದಿನ ವಿಶೇಷವಾಗಿ ಉತ್ಸವವನ್ನು ನಡೆಸಬೇಕು. ಇದು ನಮ್ಮ ಭಾಗ್ಯರೂಪವಾದ ಉತ್ಸವಕಾಲವು. ತಿರುಗಿ ಇಂತಹ ಸಮಯವು ದೊರೆಯಲಾರದು. ॥೬೪॥

ಎಲೈ ರಾಜೇಂದ್ರ, ಈ ಕುಮಾರಿಯ ಅವಯವಗಳು ಅಭಿವೃದ್ಧಿಹೊಂದುತ್ತಿರುವುದನ್ನು ನೋಡು. ಇದು ಹಿಂದೆಲ್ಲಿಯೂ ನಡೆಯದಂತಹ ಆಶ್ಚರ್ಯ ಸಂಗತಿಯಾಗಿರುವುದು. ॥೬೫॥

**ಅಭೂತಪೂರ್ವಂ ತದ್ದೃಷ್ಟ್ವಾ ತೇ ಸರ್ವೇ ವಿಸ್ಮಯಂ ಗತಾಃ ।**
**ತತಃ ಪರಂ ಸ ರಾಜಾಪಿ ದೃಷ್ಟ್ವಾ ಕನ್ಯಾಂ ಪ್ರಹರ್ಷಭೂಃ ॥೬೬॥**

**ಸ್ವಭಾಗ್ಯವಿಭವಂ ದೃಷ್ಟ್ವಾ ಪ್ರಹೃಷ್ಟಃ ಶಿವತತ್ಪರಃ ।**
**ಭೃತ್ಯಾನಾಜ್ಞಾಪಯಾಮಾಸ ಶಿವಮಂದಿರಮಂಡನೇ ॥೬೭॥**

**ವರುಣಃ ಸ್ವಯಮಾಗತ್ಯ ಕ್ಷಾಳಯಾಮಾಸ ಮಂಡಪಂ ।**
**ರಂಗವಲ್ಯಾದಿರಚನಾಂ ಚಕಾರ ಸ ಧನಾಧಿಪಃ ॥೬೮॥**

**ರತ್ನತೋರಣಸಂವೀತಂ ಚಕಾರ ಶಿವಮಂದಿರಂ ।**
**ಪುಷ್ಪಮಾಲಾಸಮಾಕ್ರಾಂತಂ ಪುಷ್ಪೋಚ್ಚಯಸಮಾಕುಲಂ ॥೬೯॥**

**ಮರಂದಧಾರಾಸಂಕೀರ್ಣಂ ಭ್ರಮರಾಲಿವಿರಾಜಿತಂ ।**
**ರತ್ನಚ್ಛತ್ರಸಮಾಕೀರ್ಣಂ ರತ್ನಧ್ವಜವಿರಾಜಿತಂ ॥೭೦॥**

---

ಹಿಂದೆ ಎಲ್ಲಿಯೂ ನಡೆಯದೇ ಇರುವಂತಹ ಈ ಸಂಗತಿಯನ್ನು ನೋಡಿ ಅವರೆಲ್ಲರೂ ಆಶ್ಚರ್ಯಗೊಂಡರು. ಅನಂತರ ಆ ರಾಜನೂ ಕೂಡ ತನ್ನ ಕುಮಾರಿಯನ್ನು ನೋಡಿ ಆನಂದಭರಿತನಾದನು. ॥೬೬॥

ತನ್ನ ಭಾಗ್ಯದ ವೈಭವವನ್ನು ನೋಡಿ ಶಿವಪೂಜಾನಿರತನಾದ ಆ ರಾಜನು ಸಂತೋಷದಿಂದ ಶಿವದೇವಾಲಯವನ್ನು ಅಲಂಕರಿಸುವುದಕ್ಕೋಸ್ಕರ ತನ್ನ ಸೇವಕರಿಗೆ ಅಪ್ಪಣೆಮಾಡಿದನು. ॥೬೭॥

ವರುಣನು ತಾನಾಗಿಯೇ ಬಂದು ಆ ನೃತ್ಯಮಂಡಪವನ್ನು ತೊಳೆದು ಶುದ್ಧಿಪಡಿಸಿದನು. ಧನಾಧಿಪತಿಯಾದ ಕುಬೇರನು ರಂಗವಲ್ಲಿಯೇ ಮುಂತಾದ ಚಿತ್ರಕೆಲಸಗಳಿಂದ ಶಿವಾಲಯವನ್ನು ಅಲಂಕರಿಸಿದನು. ॥೬೮॥

ಅನಂತರ ಆ ರಾಜನ ಭೃತ್ಯರು ಆ ಶಿವಮಂದಿರವನ್ನು ರತ್ನಮಯವಾದ ತೋರಣ, ಹೂಮಾಲೆಗಳು, ಹೂವಿನ ರಾಶಿಗಳನ್ನಲಂಕರಿಸುವುದು ಮುಂತಾದವುಗಳಿಂದ ಶೋಭಾಯಮಾನವನ್ನಾಗಿ ಮಾಡಿದರು. ॥೬೯॥

ಆ ಪುಷ್ಪಗಳ ಮೇಲೆ ಮಕರಂದಧಾರೆಗಳು ವ್ಯಾಪ್ತವಾಗಿದ್ದುವು. ಭ್ರಮರಪಂಕ್ತಿಗಳು ಆ ಮಕರಂದಪಾನಮಾಡುವುದಕ್ಕೋಸ್ಕರ ಹೂವುಗಳಿಗೆ ಮುತ್ತಿಕೊಂಡು ಝೇಂಕರಿಸುತ್ತಿದ್ದವು. ರತ್ನಮಯವಾದ ಛತ್ರಿಗಳನ್ನೂ ಮತ್ತು ರತ್ನದ ಧ್ವಜಗಳನ್ನೂ ಆ ಶಿವದೇವಾಲಯದಲ್ಲಿ ಕಟ್ಟಿ ಅಲಂಕಾರಮಾಡಿದರು. ॥೭೦॥

ತತಃ ಪ್ರದೋಷಸಮಯೇ ಸಂಪ್ರಾಪ್ತೇ ಮುನಯಃ ಸುರಾಃ ।
ಉದ್ಧೂಲ್ಯ ಭಸ್ಮನಾಂಗಾನಿ ರುದ್ರಾಕ್ಷಾಭರಣಾನ್ವಿತಾಃ ॥೭೧॥

ಶಿವಪೂಜಾಪರಾಃ ಸರ್ವೇ ಶಿವಧ್ಯಾನಪರಾಯಣಾಃ ।
ಪಂಚಾಮೃತಾಭಿಷೇಕಾದ್ಯೈರಭಿಪೂಜ್ಯ ಸದಾಶಿವಂ ॥೭೨॥

ಪ್ರದಕ್ಷಿಣನಮಸ್ಕಾರಾನ್ಕೃತ್ವಾ ಧ್ಯಾನಪರಾಯಣಾಃ ।
ಕೃತಾಂಜಲಿಪುಟಾಃ ಸರ್ವೇ ಸ್ತೋತ್ರಂ ಚಕ್ರುಃ ಶಿವಾರ್ಚಕಾಃ ॥೭೩॥

ತತಃ ಸಾ ಕನ್ಯಕಾ ಸಾಯಂ ನವಯೌವನವಿಗ್ರಹಾ ।
ಶಿವತೀರ್ಥೋದಕೈಃ ಸ್ನಾತ್ವಾ ದುಕೂಲಂ ಪರಿಧಾಯ ಸಾ ॥೭೪॥

ಕೃತ್ವಾ ಚ ಕೇಶಸಂಸ್ಕಾರಂ ವೇಣೀಬಂಧನಪೂರ್ವಕಂ ।
ಉದ್ಧೂಲ್ಯ ಭಸ್ಮನಾಂಗಾನಿ ರುದ್ರಾಕ್ಷಾಭರಣಪ್ರಿಯಾ ॥೭೫॥

ತ್ರಿಪುಂಡ್ರಧಾರಣಂ ಕೃತ್ವಾ ಲಲಾಟಾದಿಷು ಸಾದರಂ ।
ಶಿವಾರ್ಚನರತಾ ಜಾತಾ ಸಾಯಂ ಬಿಲ್ವಾದಿಸಾಧನೈಃ ॥೭೬॥

---

ಅನಂತರ ಪ್ರದೋಷಕಾಲವಾಗಲು ಮುನಿಗಳೂ ಮತ್ತು ದೇವತೆಗಳೂ ಸಹ ಅಂಗಾಂಗಗಳಿಗೆಲ್ಲಾ ಭಸ್ಮವನ್ನು ಬಳಿದುಕೊಂಡು, ರುದ್ರಾಕ್ಷಮಾಲಾರೂಪವಾದ ಆಭರಣಗಳನ್ನು ಕಂಠವೇ ಮುಂತಾದ ಪ್ರದೇಶದಲ್ಲಿ ಧರಿಸಿದರು. ॥೭೧॥

ಶಿವಪೂಜಾ ಮತ್ತು ಶಿವಧ್ಯಾನಪರಾಯಣರಾಗಿ ಪಂಚಾಮೃತಾಭಿಷೇಕವೇ ಮುಂತಾದ ಪೂಜೆಗಳಿಂದ ಸದಾಶಿವನನ್ನು ಪೂಜೆಮಾಡಿ, ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದನಂತರ ಶಿವಪೂಜಾಪರಾಯಣರಾದ ದೇವತೆಗಳು ಮತ್ತು ಮುನಿಗಳು ಶಿವನನ್ನೇ ಧ್ಯಾನಮಾಡುತ್ತಾ ಕೈಜೋಡಿಸಿಕೊಂಡು ಪರಮೇಶ್ವರನನ್ನು ಸ್ತೋತ್ರಮಾಡಿದರು. ॥೭೨-೭೩॥

ಅನಂತರ ನವಯೌವನಾಂಗಿಯಾದ ಆ ಕನ್ಯೆಯು ಸಾಯಂಕಾಲ ಶಿವತೀರ್ಥೋದಕಗಳಿಂದ ಸ್ನಾನಮಾಡಿ, ರೇಷ್ಮೆಯ ಮಡಿಯನ್ನು ಧರಿಸಿದಳು. ಆಮೇಲೆ ಜಡೆಹೆಣೆದುಕೊಂಡು ಬೈತಲೆ ತಿದ್ದಿಕೊಂಡು ಹಾಗೆಯೇ ಕೇಶಸಂಸ್ಕಾರಗಳನ್ನು ಮಾಡಿಕೊಂಡು, ಭಸ್ಮವನ್ನು ತನ್ನ ಅಂಗಗಳಿಗೆಲ್ಲಾ ಬಳಿದು, ರುದ್ರಾಕ್ಷಮಾಲೆಯನ್ನು ಧರಿಸಿದಳು. ಆಮೇಲೆ ಹಣೆಯೇ ಮುಂತಾದ ಪ್ರದೇಶಗಳಲ್ಲಿ

ಪಂಚಾಮೃತಪ್ರವಾಹೈಃ ಸಾ ತೋಷಯಾಮಾಸ ಶಂಕರಂ ।
ಫಲೋದಕಪ್ರವಾಹೈಶ್ಚ ತಥಾ ಗಂಧೋದಕೈರಪಿ ॥೭೭॥

ನೀಹಾರನೀರಪೂರೈಶ್ಚ ಸುಗಂಧೈರಭಿಷಿಚ್ಯ ಸಾ ।
ದಿವ್ಯವಸ್ತ್ರೈರಲಂಕೃತ್ಯ ಚಂದನಂ ಚ ದದೌ ತತಃ ॥೭೮॥

ಬಿಲ್ವಪ್ರಸೂನೈರ್ವಿವಿಧೈಸ್ಸಾಚೈತ್ರರಥಸಂಭವೈಃ ।
ಪೂಜಯಾಮಾಸ ಗೌರೀಶಂ ಧೂಪಧೂಮೈರ್ಮನೋಹರೈಃ ॥೭೯॥

ದಿವ್ಯೋದನೈಶ್ಚ ಪಕ್ವಾನ್ನೈಃ ಪರಮಾನ್ನೈಃ ಫಲೈರಪಿ ।
ಕ್ಷೀರಸಾರಾದಿಭಿರ್ದಿವ್ಯೈಃ ಪೂಜಯಾಮಾಸ ಶಂಕರಂ ॥೮೦॥

---

ಭಸ್ಮತ್ರಿಪುಂಡ್ರವನ್ನು ಹಚ್ಚಿ, ಸಾಯಂಕಾಲದಲ್ಲಿ ಆದರಪೂರ್ವಕವಾಗಿ ಬಿಲ್ವಪತ್ರೆ ಮುಂತಾದ ಪೂಜಾಸಾಮಗ್ರಿಗಳಿಂದ ಶಿವಪೂಜಾತತ್ಪರಳಾದಳು. ||೭೪-೭೫-೭೬||

ಆ ರಾಜಕುಮಾರಿಯು ಮೊದಲು ಪಂಚಾಮೃತಗಳನ್ನು (ಹಾಲು, ಮೊಸರು, ತುಪ್ಪ, ಸಕ್ಕರೆ, ಜೇನು) ಪ್ರವಾಹವು ಹರಿಯುವಂತೆ ಅಭಿಷೇಕಮಾಡಿ ಶಂಕರನನ್ನು ಸಂತೋಷಪಡಿಸಿದಳು. ಅನಂತರ ಫಲೋದಕಪ್ರವಾಹಗಳಿಂದಲೂ ಮತ್ತು ಸುಗಂಧಮಿಶ್ರಿತವಾದ ನೀರಿನಿಂದಲೂ ಚೆನ್ನಾಗಿ ಮಹಾದೇವನಿಗೆ ಅಭಿಷೇಕ ಮಾಡಿದಳು. ||೭೭||

ಅನಂತರ ಮಂಜಿನ ನೀರಿನ ಪ್ರವಾಹದಿಂದಲೂ ಸುಗಂಧೋದಕಗಳಿಂದಲೂ ಸಹ ಆ ಶಂಕರನಿಗೆ ಅಭಿಷೇಕಮಾಡಿ ಅನಂತರ ದಿವ್ಯವಸ್ತ್ರಗಳನ್ನು ಅಲಂಕರಿಸಿ ಕೊಂಡು ಆಮೇಲೆ ಚಂದನವನ್ನು ಹಚ್ಚಿದಳು. ||೭೮||

ಹಾಗೆಯೇ, ಚೈತ್ರರಥವೆಂಬ ಕುಬೇರನ ಉದ್ಯಾನದಲ್ಲಿ ಬೆಳೆದ ಬಹುವಿಧ ವಾದ ಬಿಲ್ವಪತ್ರೆ ಮತ್ತು ಹೂಗಳಿಂದಲೂ ಧೂಪಗಳ ಹೊಗೆಯಿಂದಲೂ ಮನೋ ಹರವಾಗಿರುವಂತೆ ಗೌರೀರಮಣನನ್ನು ಪೂಜೆಮಾಡಿದಳು. ||೭೯||

ಪಕ್ವವಾದ ಮತ್ತು ದಿವ್ಯವಾದ ಓದನ, ಪರಮಾನ್ನ, ನಾನಾ ವಿಧವಾದ ಹಣ್ಣುಗಳು, ದಿವ್ಯವಾದ ಖೋವಾ ಮುಂತಾದ (ಕ್ಷೀರಸಾರ) ಭಕ್ಷ್ಯಗಳನ್ನು ಶಂಕರ ನಿಗೆ ನಿವೇದನಮಾಡಿ ಪೂಜಿಸಿದಳು. ||೮೦||

ಕರ್ಪೂರರಾಶಿದೀಪೈಶ್ಚ ಮಣಿನೀರಾಜನೈರಪಿ ।
ರತ್ನಛತ್ರೈರ್ಧ್ವಜೈರುಚ್ಚೈರ್ದರ್ಪಣೈಶ್ಚ ಮನೋಹರೈಃ ॥೮೧॥

ಪ್ರದಕ್ಷಿಣನಮಸ್ಕಾರಾನ್ಕೃತ್ವಾ ನಾಟ್ಯಂ ಚಕಾರ ಸಾ ।
ತನ್ನಾಟ್ಯಕರಣೇ ದೇವೈಃ ಕೃತಂ ನೇತ್ರನಿಮೀಲನಂ ॥೮೨॥

ತದಂಗಲಾಘವಂ ದೃಷ್ಟ್ವಾ ತನ್ನಾಟ್ಯಂ ಶಂಕರಾರ್ಪಣಂ ।
ಕೃತ್ವಾ ಧ್ಯಾನರತಾಃ ಸರ್ವೇ ವಿಸ್ಮಯಾವಿಷ್ಟಮಾನಸಾಃ ॥೮೩॥

ತತಃ ಪರಂ ನಿಶಾಮಧ್ಯೇ ಕೃತ್ವಾ ಸಾ ಶಿವಪೂಜನಂ ।
ಹಾರೋಪಹಾರಂ ದೇವೇಭ್ಯೋ ದದೌ ಸಾ ಪ್ರೀತಮಾನಸಾ ॥೮೪॥

ರಾಜಾ ವಿಲೋಕ್ಯ ತನ್ನಾಟ್ಯಂ ಸ್ವದಾರೈಃ ಸಹ ವಿಸ್ಮಿತಃ ।
ಸಂತೋಷಂ ಪರಮಂ ಪ್ರಾಪ ದೇವೈಃ ಸಹ ವಿಶೇಷತಃ ॥೮೫॥

---

ಕರ್ಪೂರದ ರಾಶಿಗಳಿಂದ ಯುಕ್ತವಾದ ದೀಪಗಳು, ರತ್ನಮಯವಾದ ಆರತಿ, ಇವುಗಳನ್ನು ಬೆಳಗಿ, ರತ್ನಮಯವಾದ ಛತ್ರಿಗಳು, ಧ್ವಜ, ದೊಡ್ಡ ಕನ್ನಡಿ ಮುಂತಾದ ಮನೋಹರವಾದ ಪದಾರ್ಥಗಳಿಂದ ಪರಮೇಶ್ವರನಿಗೆ ಸೇವೆ ಮಾಡಿದಳು. ॥೮೧॥

ಪ್ರದಕ್ಷಿಣೆ ಮತ್ತು ನಮಸ್ಕಾರ ಇವುಗಳನ್ನೂ ಕ್ರಮವಾಗಿ ಮಾಡಿದ ನಂತರ ಆ ಕುಮಾರಿಯು ನರ್ತನಮಾಡಿದಳು. ಇವಳು ನಾಟ್ಯವಾಡುತ್ತಿದ್ದಾಗ ದೇವತೆಗಳು ತಮ್ಮ ಕಣ್ಣುಗಳನ್ನು ಸಂತೋಷದಿಂದ ಅರ್ಧ ಮುಚ್ಚಿಕೊಂಡಿದ್ದರು. ॥೮೨॥

ನರ್ತನಮಾಡುವಾಗ ಆ ಕುಮಾರಿಯ ಅವಯವಗಳ ಲಾಘವವನ್ನು ನೋಡಿ, ಅವಳು ಮಾಡಿದ ನಾಟ್ಯವನ್ನು ತಮ್ಮ ಮನಸ್ಸಿಗೆ ಹಚ್ಚಿಸಿಕೊಳ್ಳದೇ ಶಂಕರಾರ್ಪಣವೆಂದು ಹೇಳುತ್ತಾ ಆಶ್ಚರ್ಯಯುಕ್ತರಾಗಿರುವ ದೇವತೆಗಳೆಲ್ಲರೂ ಶಿವನ ಧ್ಯಾನದಲ್ಲಿಯೇ ಮಗ್ನರಾದರು. ॥೮೩॥

ಅನಂತರ ಈ ರಾಜಕುಮಾರಿಯು ಅರ್ಧರಾತ್ರಿಯಲ್ಲಿ ಶಿವನ ಪೂಜೆಯನ್ನು ಮಾಡಿ ಪರಮೇಶ್ವರನಿಗೆ ನಿವೇದನಮಾಡಿದ್ದ ಪದಾರ್ಥಗಳನ್ನು ಪ್ರೀತಿಯಿಂದ ದೇವತೆಗಳಿಗೆಲ್ಲಾ ಕೊಟ್ಟಳು. ॥೮೪॥

ಆ ರಾಜನೂ ತನ್ನ ಪತ್ನಿಯರೊಡನೆ ತನ್ನ ಕುಮಾರಿಯ ನಾಟ್ಯವನ್ನು

ತತಃ ಸುರೇಭ್ಯಃ ಸರ್ವೇಭ್ಯೋ ಯಥಾಕ್ರಮಮುಪಾಯನಂ ।
ದತ್ತಾ ಪ್ರೀತಾ ಸುರಾಸ್ತೇಽಪಿ ತಮೂಚುರ್ನೃಪಸತ್ತಮಂ ॥೮೬॥

॥ ದೇವಾ ಊಚುಃ ॥

ಧನ್ಯೋಽಸಿ ಕೃತಕೃತ್ಯೋಽಸಿ ಶಿವಾರ್ಚನಪರಾಯಣ ।
ಅನಯಾ ಭೂಷಿತಂ ನೂನಂ ಕುಲಂ ತವ ನೃಪೋತ್ತಮ ॥೮೭॥

ಇಯಂ ಕುಮಾರಿಕಾ ಬುದ್ಧ್ಯಾಪ್ಯಾದರೇಣ ನಿಷೇವಿತಾ ।
ಶಿವಾನುಚರತಾಮೇತ್ಯ ಸುಖಂ ಪ್ರಾಪ್ಸ್ಯತ್ಯಸಂಶಯಂ ॥೮೮॥

ಯಸ್ಯ ಕಸ್ಯಾಪಿ ಹಾರಸ್ಯ ಸಾನುಮೋದಾವಲೋಕನೈಃ ।
ಪ್ರೀತೋ ದದಾತಿ ಸೌಭಾಗ್ಯಂ ಸೌಭಾಗ್ಯನಿಧಿರೀಶ್ವರಃ ॥೮೯॥

ಹಾರಾಃ ಕುಮಾರಾ ದಾರಾಶ್ಚ ಯಸ್ಯ ತಾವನ್ಮನೋಹರಾಃ ।
ಕುಮಾರಿಕಾ ಹರರತಾ ತಸ್ಯ ಭಾಗ್ಯಂ ಮಹತ್ಫಲಂ ॥೯೦॥

---

ನೋಡಿ ಆಶ್ಚರ್ಯಚಕಿತನಾಗಿ, ದೇವತೆಗಳೊಡನೆ ತಾನೂ ಸಂತೋಷಹೊಂದಿದನು. ||೮೫||

ಅನಂತರ ಆ ರಾಜಕುಮಾರಿಯು ದೇವತೆಗಳಿಗೆಲ್ಲಾ ಕ್ರಮವಾಗಿ ಪ್ರೀತಿಯಿಂದ ಉಪಾಯನದಾನವನ್ನು ಕೊಟ್ಟಳು. ಆ ದೇವತೆಗಳೆಲ್ಲರೂ ಸಂತೋಷಹೊಂದಿ ಶ್ರೇಷ್ಠನಾದ ಆ ರಾಜನನ್ನು ಕುರಿತು ಇಂತೆಂದರು. ||೮೬||

ಎಲೈ ಶಿವಾರ್ಚನಪರಾಯಣನಾದ ರಾಜನೇ, ನೀನೇ ಧನ್ಯನು, ಅಲ್ಲದೆ ಕೃತಕೃತ್ಯನು. ಈ ನಿನ್ನ ಕುಮಾರಿಯಿಂದ ನಿನ್ನ ವಂಶವೇ ನಿಜವಾಗಿಯೂ ಅಲಂಕಾರಪ್ರಾಯವಾಗಿ ಮಾಡಲ್ಪಟ್ಟಿದೆ. ||೮೭||

ಒಳ್ಳೆಯ ಬುದ್ಧಿಯಿಂದಲೂ, ಆದರದಿಂದಲೂ ಕೂಡಿದ ಈ ಕುಮಾರಿಯು ಶಿವನ ಅನುಚರಪದವಿಯನ್ನು ಪಡೆದು ನಿಜವಾಗಿಯೂ ಸುಖವನ್ನು ಹೊಂದುವಳು. ||೮೮||

ಸೌಭಾಗ್ಯನಿಧಿಯಾದ ಪರಮೇಶ್ವರನು ತನ್ನ ಭಕ್ತರು ಯಾರೇ ಆಗಿರಲಿ. ತನ್ನನ್ನು ಪ್ರೀತಿಯುಕ್ತವಾದ ದೃಷ್ಟಿಯಿಂದ ನೋಡುವುದಾದರೆ ಅವನಿಗೆ ಸಕಲ ಸೌಭಾಗ್ಯಗಳನ್ನೂ ದಯಪಾಲಿಸುವನು. ||೮೯||

ಕುಟುಂಬಪೋಷಣೇ ಪ್ರಾಪ್ತೇ ನಿತ್ಯತ್ವೇನ ವಿಶೇಷತಃ ।
ಅನಂತಗುಣಿತಂ ಪುಣ್ಯಂ ಹಾರದಾರಾದಿತೋಷಣೇ ॥೯೧॥

ಪುಣ್ಯೇನ ಹಾರದಾರಾಣಾಂ ಪೋಷಣಪ್ರಣಯಾದಿಭಿಃ ।
ಸುಪ್ರೀತೋ ಭಗವಾಂಛಂಭುರ್ಭವತ್ಯೇವ ನ ಸಂಶಯಃ ॥೯೨॥

ದಾರಾಶ್ಚ ಹಾರಾಃ ಸುಕೃತೈಃ ಕುಮಾರಾಃ
ಹಾರಾಃ ಪರಂ ಪುಣ್ಯಪರಂಪರಾಣಾಂ ।
ಫಲಂ ಹಿ ಕಲ್ಯಾಣಪರಂಪರಾಣಾಂ
ಹಾರಃ ಸ್ವಯಂ ಚೇತಿ ತಪಃ ಫಲಂ ಹಿ ॥೯೩॥

---

ಮನೋಹರರಾದ ಕುಮಾರರೂ, ಪತ್ನಿಯರೂ ಯಾವ ಯಜಮಾನನ ಮನೆಯಲ್ಲಿ ಪರಮೇಶ್ವರನ ಭಕ್ತರಾಗಿರುವರೋ ಅವನೇ ಭಾಗ್ಯವಂತನು. ಇದಲ್ಲದೆ ಇವರ ಜತೆಗೆ ಕುಮಾರಿಯೂ ಶಿವಪೂಜಾ ಮತ್ತು ಶಿವಧ್ಯಾನಗಳಲ್ಲಿ ಆಸಕ್ತಳಾಗಿರುವುದಾದರೆ ಆವನ ಭಾಗ್ಯವು ಬಹಳ ದೊಡ್ಡದೆಂದೇ ಹೇಳಬೇಕು. ॥೯೦॥

ನಿತ್ಯವೂ ಸಂಸಾರ ಸಂರಕ್ಷಣೆಮಾಡುವ ಕಾಲಬಂದಾಗ, ವಿಶೇಷವಾಗಿ ಶಿವನ ಭಕ್ತರನ್ನು ಪೂಜಿಸಿ ಸಂತೋಷಪಡಿಸುತ್ತಾ, ಅನಂತರ ತನ್ನ ಪತ್ನೀಪುತ್ರಾದಿಗಳನ್ನು ಸಂತೋಷಪಡಿಸುವುದು ಅಪಾರವಾದ ಪುಣ್ಯಪ್ರದವೆಂದು ಹೇಳಿರುವುದು. ॥೯೧॥

ತನ್ನ ಪುಣ್ಯವಿಶೇಷದಿಂದ ಶಿವಭಕ್ತರನ್ನೂ ಅವರ ಪತ್ನಿಯರನ್ನೂ ಪೋಷಣೆಮಾಡುತ್ತಾ, ಪ್ರೀತಿಯಿಂದ ನೋಡಿಕೊಳ್ಳುವುದೂ ಭಗವಂತನಾದ ಶಂಭುವಿಗೆ ಪ್ರೀತಿಪ್ರದವಾದುದು. ಇದರಲ್ಲಿ ಸಂದೇಹವಿಲ್ಲ. ॥೯೨॥

ಪುಣ್ಯವಿಶೇಷದಿಂದ ಪತ್ನಿಯರು ಶಿವನಭಕ್ತರಾಗಿ ಜನಿಸುವರು. ಮಕ್ಕಳು ಶಿವಪೂಜಾಪರಾಯಣರಾಗಬೇಕಾದರೆ ಅದಕ್ಕೆ ಪುಣ್ಯಪರಂಪರೆಗಳೇ ಕಾರಣವೆಂದು ಹೇಳಿದೆ. ಇವೆಲ್ಲವೂ ಮಂಗಳಕಾರ್ಯಸಮೂಹಗಳಿಂದುಂಟಾಗುವ ಫಲವು. ಮನೆಯ ಯಜಮಾನನು ತಾನೇ ಶಿವಭಕ್ತನಾಗಿ ಜನಿಸಬೇಕಾದರೆ ಅದು ಅವನು ಹಿಂದೆ ಮಾಡಿದ ತಪಸ್ಸಿನ ಫಲವೇ ಸರಿ. ॥೯೩॥

**ಉದಾರದಾರಹಾರಾಣಾಂ ಕೃತ್ವಾ ದಾರುಣಭಾಷಣಂ ।**
**ಮೋಹೇನ ನರಕಂ ಯಾತಿ ತತಸ್ತತ್ತತ್ರ ಸಂತ್ಯಜೇತ್ ॥೯೪॥**

**ಏಕಸ್ಯಾಃ ಕನ್ಯಕಾಯಾಸ್ತು ಶಿವಾರಾಧನಸಾಧನಂ ।**
**ಸಂಪಾದ್ಯ ದೇಯಂ ಯತ್ನೇನ ಯದಾ ಯಾವದಪೇಕ್ಷಿತಂ ॥೯೫॥**

**ಯಸ್ಯ ಕಸ್ಯಾಪಿ ಹಾರಸ್ಯ ಹರಪೂಜನಸಾಧನಂ ।**
**ದತ್ವಾ ಸುಖಮವಾಪ್ನೋತಿ ಸ್ವಕೀಯಸ್ಯ ವಿಶೇಷತಃ ॥೯೬॥**

**ಹಾರಾನುಗುಣ್ಯಕರಣೇ ಭಾಗ್ಯಂ ಯಸ್ಯ ಪ್ರವರ್ಧತೇ ।**
**ತತೋಽಪಿ ಭಾಗ್ಯವಾನ್ಲೋಕೇ ನ ಲೋಕೇಷ್ವಿತಿ ಮನ್ಯತಾಂ ॥೯೭॥**

**ಹಾರಾಯ ಹರರೂಪಾಯ ದತ್ತಂ ಗೃಹ್ಣಾತಿ ಶಂಕರಃ ।**
**ತಾಂ ಕನ್ಯಕಾಂ ಪ್ರಣಮ್ಯಾಪಿ ತದನುಜ್ಞಾಮವಾಪ್ಯ ಚ ॥೯೮॥**

---

ಉದಾರಮನಸ್ಸುಳ್ಳ ಪತ್ನಿಯರನ್ನೂ ಶಿವನ ಭಕ್ತರನ್ನೂ ಅಜ್ಞಾನದಿಂದ ಕ್ರೂರವಾಗಿ ಮಾತನಾಡಿಸುವವನು ನರಕವನ್ನು ಹೊಂದುವನು. ಆದುದರಿಂದ ಈ ನಿಷ್ಠುರವಾದ ಭಾಷಣವನ್ನು ಅವರಲ್ಲಿ ಮಾಡಬಾರದು. ॥೯೪॥

ಎಲೈ ರಾಜನೇ, ಶಿವಪೂಜೆಗೆ ಬೇಕಾದ ಸಾಮಗ್ರಿಗಳು ಯಾವ ಯಾವ ಸಮಯದಲ್ಲಿ ಈ ಕನ್ಯೆಗೆ ಬೇಕಾಗುವುವೋ ಅವೆಲ್ಲವನ್ನೂ ಪ್ರಯತ್ನಪೂರ್ವಕವಾಗಿ ಒದಗಿಸಿಕೊಡಬೇಕು. ॥೯೫॥

ಹರಭಕ್ತನಾದ ಸಾಧಾರಣ ಮನುಷ್ಯನಿಗೆ ಶಿವಪೂಜಾಸಾಮಗ್ರಿಗಳನ್ನು ಒದಗಿಸಿಕೊಡುವುದರಿಂದಲೇ ಸುಖವುಂಟಾಗುವುದು. ತನ್ನ ಕಡೆಯವನೇ ಆದ ಶಿವಭಕ್ತನಿಗೆ ಪೂಜಾಸಾಮಗ್ರಿಗಳನ್ನು ಸಂಪಾದಿಸಿಕೊಡುವುದರಿಂದಲಂತೂ ವಿಶೇಷ ವಾದ ಸುಕೃತವು ಲಭಿಸುವುದು. ॥೯೬॥

ಪರಮೇಶ್ವರನ ಪೂಜೆಗೆ ಉಚಿತವಾದ ಸಲಕರಣೆಗಳನ್ನು ಹೊಂದಿಸಿ ಕೊಡುವ ವನಿಗೆ ಹೆಚ್ಚುಸಂಪತ್ತುಂಟಾಗುವುದು. ಲೋಕದಲ್ಲಿ ಇವನಿಗಿಂತಲೂ ಹೆಚ್ಚಿನ ಭಾಗ್ಯ ವಂತನು ಇಲ್ಲವೆಂದೇ ತಿಳಿಯುವನಾಗು. ॥೯೭॥

ಈ ಕನ್ಯೆಗೆ ನಮಸ್ಕರಿಸಿ ಇವಳ ಅನುಮತಿ ಪಡೆದು ಶಿವಸ್ವರೂಪನಾದ ಹರಭಕ್ತನಿಗೆ ಸಮರ್ಪಿಸಿದುದನ್ನು ಶಂಕರನು ಸ್ವೀಕರಿಸುವನು. ॥೯೮॥

ಇತ್ಯುಕ್ತ್ವಾ ಪ್ರಸ್ಥಿತಾಃ ಸರ್ವೇ ಸುರಾ ಭೂಪಾಲಪೂಜಿತಾಃ ।
ಅತಃ ಪೂಜಯ ಭೂಪಾಲ ಶಿವಲಿಂಗಾನಿ ಭೂರಿಶಃ ॥೯೯॥

ನಿತ್ಯಂ ಹಾರೋಪಚಾರೇಣ ಕುರುಷ್ವ ದಿನಯಾಪನಂ ।
ವಿಲಂಬಃ ಶಿವಪೂಜಾಯಾಂ ನೋಚಿತಸ್ತವ ವಾರ್ಧಕೇ ॥೧೦೦॥

ಆಯುಃ ಪ್ರತಿಕ್ಷಣಂ ಕ್ಷೀಣಮಾಯುರ್ವೃದ್ಧಿಃ ಕದಾಪಿ ನ ।
ತದ್ವೃದ್ಧ್ಯರ್ಥಮುಪಾಯೋಽಪಿ ಶ್ರೀಮಹಾದೇವಪೂಜನಂ ॥೧೦೧॥

ದಿನಾಂತರೇ ಮಯಾ ಕಾರ್ಯಂ ಶಿವಪೂಜನಮಿತ್ಯಪಿ ।
ನ ಕರ್ತವ್ಯೋ ವಿಲಂಬೋಽಪಿ ಪ್ರತ್ಯಾಶಾ ತತ್ರ ಕಾ ತವ ॥೧೦೨॥

ಶರೀರಂ ಶ್ವಃ ಪರಶ್ವೋ ವಾ ಸ್ಥಾಸ್ಯತೀತಿ ನ ನಿಶ್ಚಯಃ ।
ಅತಃ ಶಿವಾರ್ಚನಂ ಕಾರ್ಯಂ ತ್ವರಯಾ ಸಾದರಂ ಮುಹುಃ ॥೧೦೩॥

---

ಆ ರಾಜನಿಂದ ಪೂಜಿಸಲ್ಪಟ್ಟ ದೇವತೆಗಳೆಲ್ಲರೂ ಈ ರೀತಿ ಆ ರಾಜಕುಮಾರಿಯ ವೃತ್ತಾಂತವನ್ನೂ ಶಿವಪೂಜಾಮಹಿಮೆಯನ್ನು ತಿಳಿಸಿ, ಅಲ್ಲಿಂದ ಹೊರಟರು. ಆದುದರಿಂದ ಎಲೈ ರಾಜನೇ, ನಿತ್ಯವೂ ಅನೇಕ ಶಿವಲಿಂಗಗಳನ್ನು ಭಕ್ತಿಯಿಂದ ಪೂಜಿಸು. ॥೯೯॥

ಪ್ರತಿದಿನವೂ ಶಿವಭಕ್ತರನ್ನು ಉಪಚರಿಸುತ್ತಾ ಕಾಲವನ್ನು ಕಳೆಯುವವನಾಗು. ಮುಪ್ಪಿನಲ್ಲಿರುವ ನೀನು ಶಿವನನ್ನು ಪೂಜಿಸುವುದರಲ್ಲಿ ಎಂದಿಗೂ ತಡಮಾಡಬೇಡ. ಇದು ಉಚಿತವಲ್ಲ. ॥೧೦೦॥

ಆಯುಸ್ಸು ಪ್ರತಿಕ್ಷಣದಲ್ಲಿಯೂ ಕ್ಷಯಿಸುತ್ತದೆಯೇ ಹೊರತು ಅಭಿವೃದ್ಧಿಯಾಗುವುದಿಲ್ಲ. ಒಂದುವೇಳೆ ನಿನಗೆ ಆಯುಸ್ಸನ್ನು ಅಭಿವೃದ್ಧಿಪಡಿಸಿಕೊಳ್ಳಬೇಕೆಂಬ ಅಪೇಕ್ಷೆಯಿದ್ದರೆ ಅದಕ್ಕೂ ಶ್ರೀಮಹಾದೇವನ ಪೂಜೆಯೇ ಮೂಲಕಾರಣವಾಗಿರುವುದು. ಆದುದರಿಂದ ಭಕ್ತಿಯಿಂದ ಶಿವನನ್ನು ಆರಾಧಿಸು. ॥೧೦೧॥

ಈಹೊತ್ತು ನಾನು ಶಿವಪೂಜೆ ಮಾಡುವುದಿಲ್ಲ. ನಾಳೆ ಮಾಡಿದರಾಯಿತು ಎಂದು ಶಿವಪೂಜೆಯಲ್ಲಿ ಎಂದಿಗೂ ವಿಲಂಬಮಾಡಬೇಡ. ಇದರಿಂದ ನಿನಗೆ ಯಾವ ಪ್ರತ್ಯಾಶೆಯೂ ದೊರೆಯಲಾರದು. ॥೧೦೨॥

ಎಲೈ ರಾಜನೇ, ಈ ನಿನ್ನ ಶರೀರವು ನಾಳೆ ಅಥವಾ ನಾಡಿದ್ದು ಇರುವುದೋ ಇಲ್ಲವೋ ಎಂಬುದೇ ನಿನಗೆ ನಿಶ್ಚಯವಿಲ್ಲ. ದೇಹವು ಅಷ್ಟು ನಶ್ವರ. ಆದುದರಿಂದ

ಯದ್ದಿನೇ ಯನ್ಮುಹೂರ್ತೇ ವಾ ಜೀವನಂ ಯಸ್ಯ ನಿಶ್ಚಿತಂ ।
ತದಾ ಯತ್ನೇನ ಕರ್ತವ್ಯಂ ಶಿವಲಿಂಗಾರ್ಚನಂ ನೃಪ ॥೧೦೪॥

ಯದಿ ಪ್ರಮಾದಃ ಪೂಜಾಯಾಂ ತದಾ ವ್ಯರ್ಥಂ ತು ಜೀವನಂ ।
ಅನ್ಯಥಾರ್ಥ್ಯಂ ಜೀವನಸ್ಯ ಕೇವಲಂ ಶಿವಪೂಜಯಾ ॥೧೦೫॥

ತದೇವ ಜೀವನಂ ಧನ್ಯಂ ಯೇನ ಶಂಕರಪೂಜನಂ ।
ಕ್ಷಣಮಾತ್ರಂ ಕ್ಷಣಾರ್ಧಂ ವಾ ಕಿಮನ್ಯದಧಿಕಂ ವದ ॥೧೦೬॥

ಧನ್ಯಾನಾಮನುವಾಸರಂ ಖಲು ಮುಹುಃ ಸ್ವಸ್ವಾಯುಷಃ ಸಂಕ್ಷಯೋ।
ಲಿಂಗಾರಾಧನಸಾಧನಾರ್ಜನಮಹಾದೇವಾರ್ಚನೇನ ಕ್ಷಣಂ ।

ಯಸ್ಯಾನುಕ್ಷಣಮೀಶಪೂಜನರತಿರ್ಧನ್ಯೇಷು ಧನ್ಯೋತ್ತಮಂ
ಮನ್ಯೇ ದುರ್ಲಭಮೇತದೀಶಭಜನಂ ಸರ್ವಾತ್ಮನಾ ದುರ್ಲಭಂ॥೧೦೭॥

---

ವಿಲಂಬಮಾಡದೇ ಕೂಡಲೇ ಆದರಪೂರ್ವಕವಾಗಿ ಶಿವನನ್ನು ಪದೇ ಪದೇ ಪೂಜಿಸು. ||೧೦೩||

ಓ ರಾಜನೇ, ಯಾವ ದಿನ ಯಾವ ಮುಹೂರ್ತದಲ್ಲಿ ನಾವು ಮರಣಹೊಂದುವೆವೋ ತಿಳಿಯದು. ಆದುದರಿಂದ ನಾವು ನಿಜವಾಗಿಯೂ ಬದುಕಿರುವವರೆವಿಗೆ ಪ್ರಯತ್ನಪೂರ್ವಕವಾಗಿ ಮನಬಂದಾಗಲೇ ಶಿವಲಿಂಗವನ್ನು ಪೂಜಿಸಬೇಕು.||೧೦೪||

ಶಿವನ ಪೂಜೆಯಲ್ಲಿ ಏನಾದರೂ ಪ್ರಮಾದವುಂಟಾದರೆ ನಮ್ಮ ಜೀವನವೇ ವ್ಯರ್ಥ. ಶಿವಪೂಜೆಯಿಲ್ಲದೆ ಕಳೆದ ದಿನಗಳೇ ವ್ಯರ್ಥ. ಆ ನಮ್ಮ ಬದುಕುವಿಕೆಯನ್ನು ಸಾರ್ಥಕಪಡಿಸಿಕೊಳ್ಳಬೇಕಾದರೆ ಕೇವಲ ಶಿವಪೂಜೆಯೊಂದೇ ಸಾಧನ. ||೧೦೫||

ಒಂದು ಕ್ಷಣಕಾಲಮಾತ್ರವಾಗಲಿ ಅಥವ ಅರ್ಧಕ್ಷಣವಾಗಲಿ ಶಂಕರನನ್ನು ಪೂಜಿಸುವವನ ಜೀವನವೇ ಧನ್ಯವಾದುದು. ಓ ರಾಜೇಂದ್ರ, ಇದಕ್ಕಿಂತಲೂ ಹೆಚ್ಚಿನದು ಏನಿದೆ? ನೀನೇ ಹೇಳು! ||೧೦೬||

ಧನ್ಯರಾದ ಮಾನವರು ತಮ್ಮ ಆಯುಸ್ಸನ್ನೆಲ್ಲಾ ವ್ಯರ್ಥವಾಗಿ ವ್ಯಯಮಾಡದೇ ಪ್ರತಿಯೊಂದು ಕ್ಷಣವನ್ನೂ, ಲಿಂಗಾರಾಧನೆಗೆ ಬೇಕಾದ ಸಲಕರಣೆಗಳನ್ನು ಮತ್ತೊಬ್ಬರಿಗೆ ಸಂಪಾದಿಸಿಕೊಡುವುದು, ತಾವೇ ಮಹೇಶ್ವರಲಿಂಗವನ್ನು ಭಕ್ತಿಯಿಂದ

**ಭಾಗ್ಯೇನೈವ ಮುಹುರ್ಮುಹುಃ ಶಿವಪದಾಂಭೋಜಾರ್ಚನೇ ಜಾಯತೇ।**
**ಬುದ್ಧಿಸ್ತತ್ತಪಸಃ ಫಲಂ ಕ್ಷಣಮಪಿ ಪ್ರೀತ್ಯಾ ಸ್ಮೃತೇ ಶಂಕರೇ ।**
**ಸಂಸಾರಾನ್ನ ಭಯಂ ಯಮಾದಪಿ ಭಯಂ ನಾಸ್ತೀತಿ ವೇದೈರ್ನಿತಂ**
**ಸೌಭಾಗ್ಯಂಪದಮೀಶಪೂಜನಮಿದಂ ಲೋಕತ್ರಯೇ ದುರ್ಲಭಂ॥೧೦೮॥**

**ಆಯುಃ ಕ್ಷೀಣಮನುಕ್ಷಣಂ ಮರಣಮಪ್ಯಭ್ಯರ್ಣಮಿತ್ಯನ್ವಹಂ**
**ಭೀತಃ ಕಾಲಭಯೇನ ಭರ್ಗಭಜನಾಸಕ್ತಂ ಮನೋ ಯಸ್ಯ ವಾ ।**
**ತಂ ತಾವತ್ಪ್ರಣಮಂತಿ ತೇ ಸುರಗಣಾಃ ಶ್ರೀಕಾಲಕಾಲಾರ್ಚಕೋ**
**ಲೋಕೇ ದುರ್ಲಭಇತ್ಯವೇಕ್ಷ್ಯ ಮುಹುರಪ್ಯಾನಂದಧಾರಾವೃತಾಃ ॥೧೦೦॥**

---

ಪೂಜಿಸುವುದು ಇವುಗಳಲ್ಲೇ ಕಳೆಯುವರು. ಅಲ್ಲದೆ ಪ್ರತಿ ನಿಮಿಷದಲ್ಲಿಯೂ ಈಶ್ವರನ ಪೂಜೆಯಲ್ಲಿ ಆಸಕ್ತಿಯುಳ್ಳವನು ಧನ್ಯರಲ್ಲೂ ಶ್ರೇಷ್ಠನೆನಿಸುವನು. ಎಲೈ ರಾಜನೇ, ಇಂತಹ ಅತ್ಯದ್ಭುತವಾದ ಈಶ್ವರನ ಸೇವೆಯು ಲಭಿಸುವುದು ಸರ್ವರೀತಿ ಯಿಂದಲೂ ದುರ್ಲಭವೆಂದೇ ತಿಳಿದಿರುವೆನು. ||೧೦೭||

ಶಿವನ ಪಾದಕಮಲವನ್ನು ಪದೇ ಪದೇ ಪೂಜಿಸುವ ಬುದ್ಧಿಯುಂಟಾಗ ಬೇಕಾದರೆ ಅದು ಭಾಗ್ಯದ ಫಲವೆಂದೇ ಹೇಳಬೇಕು. ಆ ಭಾಗ್ಯವು ತಪಸ್ಸಿನಿಂ ದುಂಟಾಗುವ ಫಲವಾಗಿರುವುದು. ಒಂದು ಕ್ಷಣಕಾಲವಾದರೂ ಶಂಕರನನ್ನು ಪ್ರೀತಿಯಿಂದ ಸ್ಮರಣೆಮಾಡಿದರೆ ಅಂತಹವನಿಗೆ ಸಂಸಾರದ ಭಯವಿಲ್ಲ, ಅಲ್ಲದೆ ಯಮನ ಭೀತಿಯೂ ಇಲ್ಲವೆಂದು ವೇದದಲ್ಲಿ ಹೇಳಿದೆ. ಇಂತಹ ಈಶ್ವರನ ಪೂಜೆಯು ಮೂರುಲೋಕದಲ್ಲಿಯೂ ದೊರೆಯುವುದು ದುರ್ಲಭವೆಂದೇ ತಿಳಿಯಬೇಕು.||೧೦೮||

ಪ್ರತಿಕ್ಷಣದಲ್ಲಿಯೂ ನನ್ನ ಆಯುಸ್ಸು ಕ್ಷೀಣವಾಗುತ್ತಿದೆ. ಮೃತ್ಯುವು ಸಮೀಪಿಸುತ್ತಿದೆ ಎನ್ನುತ್ತಾ ಪ್ರತಿದಿನವೂ ಯಮನ ಭಯಕ್ಕೆ ಹೆದರಿ, ಭರ್ಗನೆನಿಸಿದ ಪರಮೇಶ್ವರನ ಭಜನೆಯಲ್ಲಿ ಯಾರು ಮನಃಪೂರ್ವಕವಾಗಿ ಆಸಕ್ತರಾಗಿರುವರೋ, ಅಂತಹವರನ್ನು ದೇವತೆಗಳ ಸಮೂಹವು, ಕಾಲಕಾಲನೆನಿಸಿದ ಶಿವನನ್ನು ಆರಾಧಿ ಸುವ ಜನಗಳು ಬಹಳ ವಿರಳರೆಂದು ತಿಳಿದು ಆನಂದಧಾರೆಗಳಿಂದ ಕೂಡಿದವರಾಗಿ ಪದೇ ಪದೇ ನಮಸ್ಕಾರ ಮಾಡುತ್ತಾರೆ. ||೧೦೯||

**ಐಶ್ವರ್ಯಾಣಿ ವಿನಶ್ವರಾಣಿ ನಿತರಾಂ ಜೀರ್ಣಂ ಶರೀರಂ ಧನಂ**
**ಧನ್ಯಂ ವಾ ನಿಧನಾಯ ಸಾಧನಮಿದಂ ಸರ್ವಾತ್ಮನಾ ನಶ್ವರಂ ।**
**ತಸ್ಮಾತ್ಪೂಜಯ ಶಂಕರಂ ತ್ಯಜ ರತಿಂ ಸಂಸಾರವಾರ್ತಾಸ್ವಪಿ**
**ಸ್ವಾಪೇಕ್ಷಾ ಯದಿ ಮೋಕ್ಷಲಕ್ಷಣಧನೇ ತನ್ನಶ್ವರಂ ನೈವ ಹಿ ॥೧೧೦॥**

**ಕಿಂ ದಾರೈರತಿಸಾದರೈಃ ಸುರತಧೀಸಂವರ್ಧನಾತ್ಯಾದರೈಃ**
**ಕಿಂ ವಾ ತೈಸ್ತನಯೈರ್ಧನಾಪಹರಣೋದ್ಯುಕ್ತೈಃ ಪ್ರಮಾದೋದ್ಧತೈಃ ।**
**ಉನ್ಮಾದೇ ನವಯವ್ವನೇ ನ ಚ ಫಲಂ ತಂ ಕಾಲಕಾಲಂ ಪರಂ**
**ಧ್ಯಾತ್ವಾ ತಚ್ಚರಣಾಂಬುಜಾರ್ಚನರತೋ ಭೂತ್ವಾ ನಯಾಯುರ್ಮುಹುಃ ॥೧೧೧॥**

---

ಈ ಐಶ್ವರ್ಯಗಳೆಲ್ಲವೂ ನಶ್ವರವಾದವುಗಳು (ಅಶಾಶ್ವತವಾದವುಗಳು) ಶರೀರವಾದರೋ ತುಂಬಾ ಜೀರ್ಣವಾಗಿದೆ. (ಶಿಥಿಲವಾಗಿದೆ) ಹೇಗಾದರೂ ಆಗಲಿ ಈ ಧನವೆಂಬುದು ಧನ್ಯವೆನಿಸುವುದೆ? ಏನೋ ನೋಡೋಣವೆಂದರೆ ನಶ್ವರವಾದ ಈ ಧನವು ಹೇಗೆ ಯೋಚಿಸಿದರೂ ಕೇವಲ ಮೃತ್ಯುವಿಗೇ ಕಾರಣವಾಗಿರುವುದು. ಆದುದರಿಂದ ಎಲೈ ರಾಜನೇ, ಈ ನಶ್ವರವಾದ ಧನದಲ್ಲಿ ಅಪೇಕ್ಷೆ ಪಡದೇ ಮೋಕ್ಷರೂಪವಾದ ಧನವನ್ನು ಹೊಂದಬೇಕೆಂಬ ಅಪೇಕ್ಷೆಯಿರುವುದಾದರೆ, ಸಾಂಸಾರಿಕವಾದ ವ್ಯಾಪಾರಗಳಲ್ಲಿ ಆಸಕ್ತಿಹೊಂದದೇ ಲೋಕಮಂಗಳಕರನಾದ ಶಂಕರನನ್ನು ಪೂಜಿಸು. ಇದರಿಂದುಂಟಾಗುವ ಮೋಕ್ಷರೂಪವಾದ ಧನವೇ ಶಾಶ್ವತವಾದುದು. ॥೧೧೦॥

ಕೇವಲ ಸುರತಕ್ರೀಡೆಯಲ್ಲಿಯೇ ಪುರುಷನ ಬುದ್ಧಿಯನ್ನು ಅಭಿವೃದ್ಧಿಪಡಿಸುವುದರಲ್ಲಿ ಆದರದಿಂದ ಕೂಡಿದ ಪತ್ನಿಯರಿಂದ ಏನು ಪ್ರಯೋಜನ? ಮತ್ತು ಯಾವಾಗಲೂ ತಂದೆಯ ಧನವನ್ನು ಕದಿಯುವುದರಲ್ಲಿಯೇ ಉದ್ಯುಕ್ತರಾಗಿ ಹೆಮ್ಮೆಯಿಂದ ಕೊಬ್ಬಿ ಕಾಲಕಳೆಯುವ ಮಕ್ಕಳಿದ್ದರೆ ಅವರಿಂದಲಾದರೂ ಏನು ಪ್ರಯೋಜನ! ಮದವನ್ನುಂಟುಮಾಡಿ ವಿಷಯಾಸಕ್ತಿಯನ್ನು ತಲೆಗಂಟಿಸುವ ಸಂಪೂರ್ಣ ಯೌವನದಿಂದಲೂ ಯಾವ ಪ್ರಯೋಜನವೂ ತೋರಲಾರದು. ಆದ್ದರಿಂದ ಕಾಲಕಾಲನೆನಿಸಿದ ಪರಮೇಶ್ವರನನ್ನು ಧ್ಯಾನಮಾಡಿ, ಅವನ ಪಾದಕಮಲವನ್ನು ಪೂಜಿಸುವುದರಲ್ಲಿಯೇ ಆಸಕ್ತನಾಗಿ ಕಾಲವನ್ನು ಕಳೆಯೋಣವೆಂದು ವಸಿಷ್ಠರು ಕುರುರಾಜನಿಗೆ ಹೇಳಿದರು. ॥೧೧೧॥

ಏತಾವತ್ಫಲಮಾಯುಷೋಽಪಿ ವಿದಿತಂ ವಿಶ್ವೇಶ್ವರಾರಾಧನ
ಧ್ಯಾನೈಃ ಕಾಲವಿಪರ್ಯಯೋಽಪಿ ಮನಸಃ ಕ್ಷೋಭೋಽಪಿ ದೋಷೋಽಪಿ ವಾ ।
ರೋಷೇ ವಾ ಕಲುಷಾತ್ಮನಾಮಪಿ ಮುಹುಃ ಸಂಗೇ ಕುರಂಗೇಕ್ಷಣಾ
ಧ್ಯಾಸಂಗಂ ಪರಿಹಾಯ ಕಾಲನಯನಂ ಶ್ರೀಕಾಲಕಾಲಪ್ರಿಯಂ ॥೧೧೨॥

ಭಸ್ಮೋದ್ಧೂಲಿತವಿಗ್ರಹೋ ಭವ ಭವಾಂಭೋಧೇರ್ಭಯಂ ಸಂತ್ಯಜ
ಪ್ರಾಣಪ್ರಾಯಧನಪ್ರಿಯಾದಿವಿಷಯಪ್ರೀತಿಂ ಪುನಃ ಸಂತ್ಯಜ ।
ಮೃತ್ಯುಂ ಸನ್ನಿಹಿತಂ ವಿಲೋಕಯ ಮುಹುರ್ನಾಸ್ಥಾ ಶರೀರೇ ಪ್ರಿಯಾ
ಕಾಲಃ ಕೋಽಪಿ ಖಲಃ ಖಲೇಷ್ವಪಿ ದಯಾಲೇಶೋಽಪಿ ತನ್ನಾಶ್ರಿತಃ॥೧೧೩॥

ಲೋಕಃ ಕಾಲವಶಂ ಪ್ರಯಾತಿ ಸಕಲಂ ಕಾಲೇನ ನೀತಂ ಮುಹುಃ
ಪಶ್ಯನ್ನೇವ ಮುಹುರ್ಮುಹುರ್ಧನಮಿದಂ ಧಾಸ್ಯಂ ಮಮೇತ್ಯಾದರಾತ್ ।

---

ವಿಶ್ವೇಶ್ವರನ ಆರಾಧನೆ, ಧ್ಯಾನ ಇವುಗಳಿಂದ ಕಾಲಕಳೆಯುತ್ತಾ ವ್ಯರ್ಥವಾಗಿ ಕಾಲಹರಣಮಾಡುವುದು, ಮನಸ್ಸಿಗೆ ದುಃಖವುಂಟಾಗುವಂತೆ ನಡೆಯುವುದು, ಏನಾದರೂ ದೋಷಗಳನ್ನು ಪರಿಗಣಿಸುವುದು, ಅಥವಾ ಕೋಪಮಾಡಿಕೊಳ್ಳುವುದು, ಪಾಪಿಗಳ ಸಹವಾಸಮಾಡುವುದು, ಮತ್ತು ಪದೇ ಪದೇ ಜಿಂಕೆಯಂತೆ ಕಣ್ಣುಳ್ಳ ಸ್ತ್ರೀಯನೊಡನೆ ವಿಹರಿಸುವುದು, ಇವುಗಳನ್ನೆಲ್ಲಾ ಬಿಟ್ಟು ಯಾವಾಗಲೂ ಕಾಲ ಕಾಲನೆನಿಸಿದ ಪರಮೇಶ್ವರನಿಗೆ ಸಂತೋಷವುಂಟಾಗುವಂತೆ ನಡೆಯುತ್ತಾ ಕಾಲವನ್ನು ಕಳೆಯಬೇಕು. ಮಾನವನ ಆಯುಸ್ಸಿಗೆ ಇಷ್ಟೇ ಫಲಗಳು ಎಂದು ಹೇಳಿದೆ. ||೧೧೨||

ಎಲೈ ರಾಜನೇ, ನಿನ್ನ ಶರೀರಕ್ಕೆಲ್ಲಾ ಭಸ್ಮವನ್ನು ಬಳಿದುಕೋ, ಸಂಸಾರ ವೆಂಬ ಸಮುದ್ರದ ಭಯವನ್ನು ಬಿಡು. ನಿನ್ನ ಪ್ರಾಣಕ್ಕೆ ಸಮಾನವಾಗಿದೆಯೆಂದು ತಿಳಿದಿರುವ ದ್ರವ್ಯದಲ್ಲಿ ಆಸೆ, ಮತ್ತು ವಿಷಯಸುಖದಲ್ಲಿರುವ ಪ್ರೀತಿ ಮುಂತಾ ದುವುಗಳನ್ನು ದೂರಮಾಡು. ಮರಣವು ಹತ್ತಿರಕ್ಕೆ ಬರುತ್ತಿದೆಯೆಂಬುದನ್ನು ಗಮನಿಸು. ಶರೀರದಲ್ಲಿರುವ ಅಭಿಮಾನವನ್ನು ತೊರೆಯುವವನಾಗು. ಈ ಯಮನು ದುಷ್ಟರಲ್ಲಿಯೂ ತುಂಬಾ ದುಷ್ಟನೆನಿಸಿದವನು. ಇವನಲ್ಲಿ ಸ್ವಲ್ಪವೂ ದಯೆಯೇ ಇಲ್ಲ. ||೧೧೩||

ಈ ಪ್ರಪಂಚವೆಲ್ಲವೂ ಮೃತ್ಯುವಿನ ಅಧೀನವಾಗಿ ಕೊನೆಗೆ ಯಮನಿಂದಲೇ ಒಯ್ಯಲ್ಪಡುವುದೆಂಬುದನ್ನು ಪದೇ ಪದೇ ನೋಡುತ್ತಿದ್ದರೂ ಜನರು, ಇದು ನನ್ನ

**ಸಂಪ್ರಾಪ್ತೇ ಮರಣಕ್ಷಣೇಽಪಿ ನ ಜಹತ್ಯಾಯುಷ್ಯನಾಂಛಾಂ ಖಲಃ**
**ಕಾಲಂ ಪಶ್ಯತಿ ಕಾಲಕಾಲಭಜನಂ ತ್ಯಕ್ತ್ವಾಽಪಿ ಮೂಢಃ ಪರಂ ॥೧೧೪॥**

**ಶ್ವಾಸಸ್ಯಾಪಿ ವಿಕುಂಠನೇ ಸತಿ ಶಠಸ್ತಂ ನೀಲಕಂಠಾರ್ಚನ**
**ವ್ಯಾಸಕ್ತೋ ನ ಭವತ್ಯಘೌಘವಿಲಯೋಪಾಯಃ ಸ ಮೃತ್ಯುಂಜಯಃ ।**
**ಆರೂಢಂ ಹೃದಯೇ ಶಿವಾಪರಿವೃಢಂ ಕರ್ತುಂ ನ ಯತ್ನಂ ಕರೋ**
**ತ್ಯುನ್ಮಾದಂ ನ ಜಹಾತಿ ಮೃತ್ಯುವಶಗಃ ಶಂಗಾನುಷಂಗಂ ವಿನಾ ॥೧೧೫॥**

**ಭಂಗಸ್ತಸ್ಯ ಪದೇಪದೇಜನಿಜರಾರೋಗೋಽನುಷಂಗೋ ಮುಹು**
**ರ್ಮೃತ್ಯುಸ್ತಸ್ಯ ಶಿರಸ್ಯಪಾರದುರಿತವ್ಯಾಪಾರನಿರ್ಧಾರಕಃ ।**
**ಯಸ್ಯಾನಂಗಮನಂಗಭಂಗಚರಣಾಂಭೋಜಾರ್ಚನಾನಾದರೋ**
**ಹಾರಾಪಾರಕಥಾಸುಧಾಮಧುರಿಮಾರಂಭೋ ಸ ಸಂಭಾವಿತಃ ॥೧೧೬॥**

---

ದುಡ್ಡು, ಇದು ನನ್ನ ಧಾನ್ಯವೆಂದು ಆಶಾವಿಶಿಷ್ಟರಾಗುವರು. ಮೂರ್ಖರಾದ ಮಾನವರು ಸಾಯುವ ಕಾಲವು ಒದಗಿದ್ದರೂ ಇನ್ನೂ ನಾನು ಬದುಕಬೇಕಾಗಿತ್ತು ಎಂಬ ಅಪೇಕ್ಷೆಯನ್ನು ಬಿಡುವುದೇ ಇಲ್ಲ. ಅಲ್ಲದೆ ಮೂಢನಾದ ಮಾನವನು ಅಂತಪ ಮರಣ ಸಮಯದಲ್ಲಿಯೂ ಕಾಲಕಾಲನೆನಿಸಿದ ಪರಮೇಶ್ವರನನ್ನು ಭಜನೆ ಮಾಡದೆ ಯಮನ ಅಧೀನನಾಗುವನು. ॥೧೧೪॥

ಶ್ವಾಸಸಂಚಾರವು ನಿಂತುಹೋಗುವ ಸಮಯದಲ್ಲಿಯೂ ಮೂರ್ಖನಾದ ಮಾನವನು ನೀಲಕಂಠನನ್ನು ಪೂಜಿಸುವುದರಲ್ಲಿ ಆಸಕ್ತನಾಗುವುದಿಲ್ಲ. ಮೃತ್ಯುಂಜಯನೆನಿಸಿದ ಈ ಪರಮೇಶ್ವರನು ಪಾಪಸಮೂಹಗಳನ್ನು ನಾಶಮಾಡುವುದರಲ್ಲಿ ಉಪಾಯಭೂತನಾಗಿರುವನು. ಈ ಮೂರ್ಖನು ಆ ಸಮಯದಲ್ಲಿಯೂ ಕೂಡ ಗಿರಿಜಾರಮಣನಾದ ಶಿವನನ್ನು ತನ್ನ ಮನಸ್ಸಿನಲ್ಲಿ ಧ್ಯಾನಮಾಡುವ ಪ್ರಯತ್ನ ಮಾಡುವುದಿಲ್ಲ. ಮೃತ್ಯುವಿನ ಅಧೀನವಾಗಿದ್ದರೂ, ಸುಖಮಯನಾದ ಶಿವನ ಪೂಜಾಧ್ಯಾನಗಳನ್ನು ಮಾಡದೇ ಯಾವಾಗಲೂ ಅಹಂಕಾರದಿಂದ ಉನ್ಮತ್ತನಾಗಿಯೇ ಇರುತ್ತಾನೆ. ॥೧೧೫॥

ಯಾವ ಮಾನವನಿಗೆ, ಮನ್ಮಥನ ಒಂದು ಅವಯವವೂ ಇಲ್ಲದಂತೆ ಭಸ್ಮ ಮಾಡಿದ ಶಿವನ ಪಾದಕಮಲವನ್ನು ಪೂಜಿಸುವುದರಲ್ಲಿ ಆದರವಿರುವುದಿಲ್ಲವೋ, ಅಲ್ಲದೇ ಪರಮೇಶ್ವರನ ಅಪಾರವಾದ ಕಥಾಮೃತದ ಮಾಧುರ್ಯವು ದೊರಕು

**ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಪೂರ್ವಾರ್ಧೇ ಮಗಧಭೂಪಾಲಕನ್ಯಕಾಚಾರಿತ್ರವರ್ಣನೇ ಕುರುರಾಜಾನಂ ಪ್ರತಿ ವಸಿಷ್ಠೋಪದೇಶನಂ ನಾಮೈಕಚತ್ವಾರಿಂಶೋಽಧ್ಯಾಯಃ**

---

ವುದು ಯಾರಿಗೆ ಅಸಂಭವವೋ ಅಂತಹ ಮೂರ್ಖಜನಗಳಿಗೆ ಪದೇ ಪದೇ ವಿಘ್ನಗಳೂ, ಪುನರ್ಜನ್ಮಗಳೂ, ಮುಪ್ಪೂ, ರೋಗ ಮುಂತಾದ ದುಃಖಸಂಬಂಧವೂ ತಪ್ಪಲಾರದು. ಅಲ್ಲದೇ ಅವರ ತಲೆಯ ಮೇಲೆ, ಜನಗಳು ಮಾಡುವ ಅಪಾರವಾದ ಪಾಪಕೃತ್ಯಗಳನ್ನು ಕಂಡುಹಿಡಿದು ನಿರ್ಧರಿಸುವ ಮೃತ್ಯುವು (ಯಮನು) ಯಾವಾಗಲೂ ಶಸ್ತ್ರಸಜ್ಜಿತನಾಗಿ ನಿಂತೇ ಇರುವನು ಎಂದು ವಸಿಷ್ಠಮಹರ್ಷಿಗಳು ಕುರುರಾಜನಿಗೆ ಉಪದೇಶಮಾಡಿದರು. ||೧೧೬||

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಭಾಗದ ಪೂರ್ವಾರ್ಧದಲ್ಲಿ ವಿಚಿತ್ರರಥರಾಜನ ಕುಮಾರಿಯ ಚರಿತ್ರೆಯ ವರ್ಣನೆಯಲ್ಲಿ ಕುರುರಾಜನನ್ನು ಕುರಿತು ವಸಿಷ್ಠಮಹರ್ಷಿಗಳು ಮಾಡಿದ ಉಪದೇಶವರ್ಣನೆಯೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ದ್ವಿಚತ್ವಾರಿಂಶೋಽಧ್ಯಾಯಃ

|| ನಾರದ ಉವಾಚ ||

ಇತಿ ತದ್ವಚನಂ ಶ್ರುತ್ವಾ ಸ ರಾಜಾ ವೀತಮತ್ಸರಃ ।
ಸಂಸಾರೇಽಪಿ ರತಿಂ ತ್ಯಕ್ತ್ವಾ ಶಿವಪೂಜಾರತಸ್ತತಃ ॥೧॥

ರಾಜ್ಯಾಭಿಷೇಕಂ ಕೃತ್ವೈವ ಜ್ಯೇಷ್ಠಪುತ್ರಂ ಶಿವಾರ್ಚಕಂ ।
ಧನಂ ಚ ಶಿವಸಾತ್ಕೃತ್ವಾ ಶಾಂಭವೈಃ ಸಹ ಸಾದರಂ ॥೨॥

ಶಂಕರಾರ್ಚಾಪರೋ ಭೂತ್ವಾ ರಾಜ್ಯಭಾರಪರಾಙ್ಮುಖಃ ।
ಉದ್ಧೂಲನತ್ರಿಪುಂಡ್ರಾಭ್ಯಾಂ ರುದ್ರಾಕ್ಷೈಶ್ಚ ಸಮಾವೃತಃ ॥೩॥

---

## ನಲವತ್ತೆರಡನೆಯ ಅಧ್ಯಾಯ

ಹೀಗೆ ವಸಿಷ್ಠಮಹರ್ಷಿಗಳ ಮಾತನ್ನು ಕೇಳಿ ಆ ಕುರುರಾಜನು ಆಗಲೇ ಮಾತ್ಸರ್ಯಾದಿಗಳನ್ನು ಬಿಟ್ಟು, ಸದಾ ಶಿವಪೂಜಾಪರಾಯಣನಾಗಿ, ಈ ಸಂಸಾರದಲ್ಲಿನ ವಿಷಯೋಪಭೋಗಗಳನ್ನು ತೊರೆದು ವೈರಾಗ್ಯಶಾಲಿಯಾದನು. ||೧||

ಅನಂತರ ಶಿವಪೂಜಕನಾದ ತನ್ನ ಹಿರಿಯ ಮಗನಿಗೆ ರಾಜ್ಯಾಭಿಷೇಕವನ್ನು ಮಾಡಿ, ತನ್ನಲ್ಲಿದ್ದ ದ್ರವ್ಯವನ್ನೆಲ್ಲಾ, ಆ ಪರಮೇಶ್ವರನ ಸೇವೆಗಾಗಿ ಸಮರ್ಪಿಸಿದನು. ಶಂಭುಭಕ್ತರೊಡನೆ ತಾನೂ ಆದರದಿಂದ ವರ್ತಿಸುತ್ತಾ ರಾಜ್ಯಭಾರವಿಷಯದಲ್ಲಿ ಪರಾಙ್ಮುಖನಾಗಿ ಸದಾ ಲೋಕಮಂಗಳಕರನಾದ ಮಹೇಶ್ವರನನ್ನೇ ಆರಾಧಿಸುತ್ತಿದ್ದನು. ಈ ಮಹಾರಾಜನು ಹೀಗೆಯೇ ಕೆಲವು ಕಾಲ ಕಳೆದನಂತರ ಒಂದು

ಗೃಹೀತ್ವಾ ಶಾಂಭವೀಂ ದೀಕ್ಷಾಂ ವಸಿಷ್ಠಾಶ್ರಮಮಾಯಯೌ ।
ತತಃ ಪುತ್ರೈರನುಗತೋ ದಾರೈರಪಿ ಮುಹುರ್ಮುಹುಃ ॥೪॥

ನಿವಾರ್ಯ ಸಂಗತಿಂ ತೇಷಾಂ ಸ ಚಕ್ರೇ ಹಾರಸಂಗತಿಂ ।
ನ ಕೋಽಪಿ ಮಹದೈಶ್ವರ್ಯಂ ಪ್ರಾಪ್ಯ ಬುದ್ಧಿಮತಾಂ ವರಃ ॥೫॥

ಹರಪೂಜಾವಿರಹಿತೋ ದೃಷ್ಟಃ ಪೂರ್ವಃ ಶ್ರುತೋಽಪಿ ವಾ ।
ಶಂಕರಾನುಗ್ರಹೇಣೈವ ಭಾಗ್ಯಂ ಪ್ರಾಪ್ಯಂ ಮುಹುರ್ಮುಹುಃ ॥೬॥

ತತ್ಪೂಜನಪರಿತ್ಯಾಗಂ ಕಃ ಕರ್ತುಮಭಿವಾಂಛತಿ ।
ಸ್ವಸ್ವರೂಪಂ ಮುಹುಃ ಸ್ಮೃತ್ವಾ ಭಾಗ್ಯಂ ಸ್ಮೃತ್ವಾ ಮುಹುರ್ಮುಹುಃ ॥೭॥

ಫಾಲಾಕ್ಷಪೂಜನಾಸಕ್ತೋ ಭವಭಾವಸಮನ್ವಿತಃ ।
ಭವಸಂಗೇನ ಭಾಗ್ಯಾನಿ ಪ್ರಾಪ್ನುವಂತಿ ಭವೇ ಭವೇ ॥೮॥

---

ಸಾರಿ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ಕುತ್ತಿಗೆಯಲ್ಲಿ ರುದ್ರಾಕ್ಷಮಾಲೆಯನ್ನು ಧಾರಣ ಮಾಡಿ ಶಿವದೀಕ್ಷೆಯನ್ನು ಪಡೆದು, ವಸಿಷ್ಠಮುನಿಯ ಆಶ್ರಮಕ್ಕೆ ತೆರಳಿದನು. ॥೨-೩॥

ಹೀಗೆ ದೀಕ್ಷಾಬದ್ಧನಾದ ಮೇಲಂತೂ ಮಹಾರಾಜನು ಹೆಂಡತಿ ಮಕ್ಕಳು ಮುಂತಾದ ಬಂಧುಗಳ ಸಂಬಂಧವನ್ನೇ ತ್ಯಜಿಸಿ, ಈ ಸಂಸಾರವೆಂಬ ಚಿತ್ರದಲ್ಲಿ ಪದೇ ಪದೇ ಭ್ರಮಣಗಳಾಗುವದನ್ನೂ ದೂರಮಾಡಿಕೊಂಡನು. ॥೪॥

ಶಿವಪೂಜೆಯನ್ನು ಭಕ್ತಿಯಿಂದ ಮಾಡದೇ ಬುದ್ಧಿವಂತನಾದ ಯಾವ ಮಾನವನೂ ಐಶ್ವರ್ಯಶಾಲಿಯಾಗಿರುವುದನ್ನು ನಾವು ನೋಡಿಯೂ ಇಲ್ಲ, ಹಿಂದೆ ಕೇಳಿಯೂ ಇಲ್ಲ. ಪದೇ ಪದೇ ಭಾಗ್ಯಪ್ರಾಪ್ತಿಯುಂಟಾಗಬೇಕಾದರೆ ಲೋಕಮಂಗಳ ಕರನಾದ ಮಹೇಶ್ವರನ ಅನುಗ್ರಹವೇ ಮುಖ್ಯಕಾರಣ ಎಂಬುದನ್ನು ಮರೆಯ ಲಾಗದು. ॥೫-೬॥

ತನ್ನ ಹಿಂದಿನ ಸ್ಥಿತಿಯನ್ನೂ, ತನಗೆ ಉಂಟಾಗಿರುವ ಭಾಗ್ಯವನ್ನೂ ಪದೇ ಪದೇ ನೆನೆಸಿಕೊಳ್ಳುತ್ತಾ ಯಾರು ತಾನೇ ಸರ್ವಸೌಭಾಗ್ಯಸಂಪತ್ಕಾರಕನಾದ ಮಹಾದೇವನ ಪೂಜೆಯನ್ನು ಬಿಡಲು ಇಚ್ಛಿಸುವರು ? ॥೭॥

ಫಾಲದಲ್ಲಿ (ಹಣೆಯಲ್ಲಿ) ಅಗ್ನಿನೇತ್ರವುಳ್ಳ ಮಹಾದೇವನ ಪೂಜೆಯಲ್ಲಿ ಸದಾ ಆಸಕ್ತನಾಗಿ, ಯಾವಾಗಲೂ ಭವನೆನಿಸಿದ ಈ ಮಹೇಶ್ವರನ ಧ್ಯಾನದಲ್ಲೇ ತತ್ಪರ

ಪುನರ್ಭವಾರ್ಚನಂ ಕೃತ್ವಾ ಭಾಗ್ಯವಾನೇನ ಜಾಯತೇ ।
ಭವಸಂಗಪರಿತ್ಯಾಗೇ ಭಾಗ್ಯಮಪ್ಯತಿದುರ್ಲಭಂ ॥೯॥

ದುರ್ಲಭೇ ಸತಿ ಭಾಗ್ಯೇ ತು ಶಿವಪೂಜಾ ಕುತೋ ಭವೇತ್ ।
ಭವಪೂಜನಸಾಮಗ್ರೀ ಭಾಗ್ಯಮಿತ್ಯವಧಾರಯ ॥೧೦॥

ತದಭಾವೇ ಕಥಂ ವಾ ಸ್ಯಾತ್ಪೂಜನಂ ಭಾಗ್ಯಸಾಧನಂ ।
ಭಕ್ತಿಶ್ಚೇದ್ಭವಪೂಜಾಯಾಂ ಭಾಗ್ಯೇಽಸ್ತ್ಯೇವ ಶಿವಾರ್ಚನಂ ॥೧೧॥

ತತ್ಸಾಧನಂ ಮುಖ್ಯಮೇವ ಭಾಗ್ಯಮಿತ್ಯವಧಾರಿತಂ ।
ಸೌಭಾಗ್ಯಸಾಧನಂ ಭಾಗ್ಯಂ ಯದ್ಭವಾರ್ಚನಸಾಧನಂ ॥೧೨॥

---

ನಾಗಿರುವ ಮಾನವನು, ಶಿವನ ಅನುಗ್ರಹದಿಂದ ಪ್ರತಿ ಜನ್ಮದಲ್ಲಿಯೂ ನಾನಾವಿಧ ವಾದ ಭಾಗ್ಯಗಳನ್ನು ಪಡೆಯುವನು. ॥೮॥

ಪ್ರತಿ ಜನ್ಮಗಳಲ್ಲಿಯೂ ಶಿವನ ಪೂಜೆಯನ್ನು ಮಾಡುವುದರಿಂದ ಯಾವಾಗಲೂ ಭಾಗ್ಯವಂತನಾಗಿಯೇ ಜನಿಸುವನು. ಶಿವನ ಪೂಜೆಯನ್ನು ಬಿಟ್ಟು ಭಾಗ್ಯವನ್ನಾರ್ಜಿಸುವುದು ದುರ್ಲಭವೆಂದೇ ತಿಳಿಯಬೇಕು. ॥೯॥

ಐಶ್ವರ್ಯವೇ ಶಿವನ ಪೂಜೆಯ ಸಾಮಗ್ರಿಯಾಗಿರುವಾಗ ಭಾಗ್ಯವಿಲ್ಲದೇ ಹೋದರೆ ಶಿವನ ಪೂಜೆಯನ್ನು ಮಾಡುವುದು ತಾನೇ ಹೇಗೆ? ಅಂದರೆ ಪೂಜಾ ಸಾಮಗ್ರಿಯೇ ಪರಶಿವನ ಭಾಗ್ಯ. ಅದನ್ನು ದೊರಕಿಸುವವನೇ ಶಂಕರನು ಎಂಬ ಭಾವನೆಯಿಂದಿರಬೇಕು. ॥೧೦॥

ಶಿವಪೂಜೆಯನ್ನು ಭಕ್ತಿಯಿಂದ ಆಚರಿಸಿದರೆ ಭಾಗ್ಯವೂ, ಈ ಭಾಗ್ಯದಿಂದ ಶಿವಪೂಜೆಯೂ ಪರಸ್ಪರ ಕಾರ್ಯಕಾರಣಭಾವದಿಂದ ನಡೆಯುವುದು. ಹೀಗಿರುವಾಗ, ಭಾಗ್ಯವೇ ಇಲ್ಲದಿದ್ದರೆ, ಆ ಭಾಗ್ಯಸಾಧನಭೂತವಾದ ಶಿವಪೂಜೆಯು ಉಂಟಾಗುವುದು ತಾನೇ ಹೇಗೆ? ॥೧೧॥

ಶಿವಪೂಜೆಯ ಸಾಧನಗಳಲ್ಲಿ ಭಾಗ್ಯವೇ ಮುಖ್ಯವಾದ ಸಾಧನ. ಅಲ್ಲದೆ ಸಕಲ ಸೌಭಾಗ್ಯಸಾಧನವೂ ಮುಖ್ಯವಾದ ಶಿವಪೂಜಾಸಾಧನೆಯೂ, ಈ ಭಾಗ್ಯವೇ ಎಂದು ದೊಡ್ಡವರು ಹೇಳುವರು. ॥೧೨॥

ತದ್ಭೂಯೋ ಭಾಗ್ಯಹೇತುತ್ವಾದ್ಭಾಗ್ಯಂ ಭಾಗ್ಯಮಿತಿ ಸ್ಮೃತಂ ।
ತದ್ಭಾಗ್ಯಂ ಭವಪೂಜಾಯಾಮುಪಯುಕ್ತಂ ನ ಸರ್ವಥಾ ॥೧೩॥

ತದಭಾಗ್ಯಮಿತಿ ಜ್ಞೇಯಂ ಭಾಗ್ಯವಾನಪಿ ದುರ್ಭಗಃ ।
ಯಾವದಾಯುಸ್ತಾವದೇವ ಭಾಗ್ಯೇ ಸತಿ ಶಿವಾರ್ಚನಂ ॥೧೪॥

ಯದಾಯುಃ ಸಫಲಂ ನೋ ಚೇದಾಯುರೇವ ನ ತತ್ಫಲು ।
ಅಸ್ಮಿನ್ಕಾಲೇ ಶಾಂಭವಾನಾಂ ಕುರು ಸಂಭಾವನಾಂ ಮುಹುಃ ॥೧೫॥

ತತ್ಸಂಭಾವನಯಾ ಶಂಭುಃ ಪ್ರಸನ್ನಃ ಸ್ಯಾದಸಂಶಯಂ ।
ಇತ್ಯುಕ್ತಂ ನಾರದವಚಃ ಶ್ರುತ್ವಾ ಸಂತುಷ್ಟಮಾನಸಃ ॥೧೬॥

ಸಂಪೂಜ್ಯ ತಾನ್ಮುನಿವರಾನ್ ಶಿವಾರ್ಚನರತೋಽಭವತ್ ।
ಇತಿ ನಂದೀಶ್ವರೇಣೋಕ್ತಾಂ ಕಥಾಂ ಪಾಪಪ್ರಣಾಶಿನೀಂ ॥೧೭॥

---

ಶಿವಪೂಜೆಯಲ್ಲಿ ಉಪಯುಕ್ತವಾಗುವ ಆ ಭಾಗ್ಯವೇ ಸಕಲ ಭಾಗ್ಯಗಳಿಗೂ ಮೂಲಕಾರಣವಾಗಿರುವುದರಿಂದ ಅದನ್ನೇ 'ಭಾಗ್ಯ ಭಾಗ್ಯ' ಎಂದು ಹೇಳುವರು. ||೧೩||

ಬದುಕಿರುವವರೆವಿಗೂ ತನ್ನ ಭಾಗ್ಯಾನುಸಾರವಾಗಿ ಶಿವಪೂಜೆಯನ್ನು ಮಾಡಬೇಕು. ಹೀಗೆ ಐಶ್ವರ್ಯವಿದ್ದೂ ಅದನ್ನು ಸರಿಯಾಗಿ ಶಿವಪೂಜೆಗೆ ವಿನಿಯೋಗ ಮಾಡದೆ ಇರುವವನು ಅದೃಷ್ಟಹೀನನೆಂದೇ ತಿಳಿಯಬೇಕು. ಅವನಿಗಿರುವ ಭಾಗ್ಯವೂ ಭಾಗ್ಯವೆನಿಸಲಾರದು. ಆತನು ದರಿದ್ರನಿಗೆ ಸಮಾನನು. ||೧೪||

ತನ್ನ ಆಯುಸ್ಸಿನಲ್ಲಿ ಸಾರ್ಥಕವಾಗದ ಶಿವಪೂಜಾದಿ ಕಾರ್ಯಗಳನ್ನು ಮಾಡದೇ ಹೋದರೆ ಆ ಆಯುಸ್ಸು, ಕೇವಲ ವ್ಯರ್ಥವಾದ ಜೀವಮಾನವೆನಿಸುವುದು. ಆದುದರಿಂದ ತಾನು ಬದುಕಿರುವಷ್ಟು ಕಾಲ ಶಂಭುಭಕ್ತರಾಗಿರುವವರನ್ನು ಯಾವಾಗಲೂ ಗೌರವಿಸಿ ಪೂಜೆಮಾಡಬೇಕು. ||೧೫||

ಈ ತನ್ನ ಭಕ್ತರನ್ನು ಗೌರವಿಸುವುದರಿಂದ ಪರಮೇಶ್ವರನು ನಿಶ್ಚಯವಾಗಿಯೂ ಪ್ರಸನ್ನನಾಗುವನು ಎಂದು ನಾರದನು ಹೇಳಿದಾಗ ಈ ಮಾತನ್ನು ಕೇಳಿ ಆ ಕುರುರಾಜನು ಸಂತೋಷಗೊಂಡ ಮನಸ್ಸುಳ್ಳವನಾಗಿ. ||೧೬||

ಆ ಮುನಿಪುಂಗವರನ್ನೆಲ್ಲಾ ಪೂಜಿಸಿ, ಸದಾ ಶಿವಪೂಜಾಪರಾಯಣನಾದನು. ಎಂದು ನಂದಿಕೇಶ್ವರನು ಹೇಳಿದ ಈ ಪಾಪನಾಶಕವಾದ ಶಿವಪೂಜಾಮಹಿಮೆಯನ್ನು

ಶ್ರುತ್ವಾ ಬ್ರಹ್ಮಾದಯೋ ದೇವಾಃ ಪುಲಕಾಂಚಿತವಿಗ್ರಹಾಃ ।
ತಂ ಪ್ರಣಮ್ಯ ಪುನಃ ಪ್ರಾಹುರ್ವಿನಯಾನತಕಂಧರಾಃ ॥೧೮॥

ಕರ್ತವ್ಯಂ ಕಿಮಿಹಾಸ್ಮಾಕಂ ರಹಸ್ಯಮಿತಿ ತೇ ಪುನಃ ॥೧೯॥

॥ ನಂದಿಕೇಶ್ವರ ಉವಾಚ ॥

ಯೇ ಯೇ ನರಾಃ ಪರಮಶಾಂಭವಪಾದಪದ್ಮ
ಸೇವಾರತಾಃ ಕಲಿಯುಗೇಽಪಿ ವಿಶುದ್ಧಚಿತ್ತಾಃ ।
ತೇ ತಾವದಾದರವರಾದಿಭಿರನ್ವಹಂ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ

ಶ್ರೀನೀಲಕಂಠಮದನಾಂತಕಚಂದ್ರಮೌಲೇ
ಶ್ರೀಫಾಲಲೋಚನ ಯಮಾಂತಕ ವಿಶ್ವಮೂರ್ತೇ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೨೧॥

---

ತಿಳಿಸುವ ಕಥೆಗಳನ್ನು ಬ್ರಹ್ಮಾದಿದೇವತೆಗಳು ಕೇಳಿ ಸಂತೋಷದಿಂದ ರೋಮಾಂಚ ಹೊಂದಿದವರಾಗಿ, ಆ ಶಿವಭಕ್ತಾಗ್ರೇಸರನಾದ ನಂದಿಕೇಶ್ವರನಿಗೆ ನಮಸ್ಕಾರಮಾಡಿ, ಪುನಃ ವಿನಯದಿಂದ ತಲೆಯನ್ನು ಬಗ್ಗಿಸಿ ಈರೀತಿ ನುಡಿದರು. ॥೧೭-೧೮॥

"ಎಲೈ ಶಿವಭಕ್ತಾಗ್ರಣಿಯಾದ ನಂದಿಕೇಶ್ವರಸ್ವಾಮಿಯೇ, ಈಗ ನಾವು ಮಾಡಬೇಕಾದ ಕರ್ತವ್ಯವಾವುದು ? ದಯವಿಟ್ಟು ನಮಗೆ ಈ ರಹಸ್ಯವನ್ನುಪದೇಶ ಮಾಡಬೇಕು" ಎಂದು ಪ್ರಾರ್ಥಿಸಿದರು. ಆಗ ನಂದೀಶನು ಹೀಗೆ ಉಪದೇಶಿಸಿದನು. ॥೧೯॥

"ಘೋರವಾದ ಕಲಿಯುಗದಲ್ಲಿಯೂ ಸಹ ಪರಿಶುದ್ಧವಾದ ಅಂತಃಕರಣಗಳುಳ್ಳವರಾಗಿ, ಪರಮ ಪೂಜ್ಯರೆನಿಸಿದ ಶಂಭುವಿನ ಭಕ್ತಾಗ್ರೇಸರರ ಪಾದಕಮಲಗಳನ್ನು ಭಕ್ತಿಯಿಂದ ಸೇವೆಮಾಡುವ ಮಾನವರನ್ನು, ನಾವು ಯಾವಾಗಲೂ ಆದರ, ಭಕ್ತಿ ವರ ಪ್ರದಾನ ಮುಂತಾದವುಗಳಿಂದ ತೃಪ್ತಿಪಡಿಸಬೇಕು. ಇದೇಪರಮರಹಸ್ಯವು. ॥೨೦॥

ಹೇ ನೀಲಕಂಠ, ಮದನಾಂತಕ, ಚಂದ್ರಶೇಖರ, ಫಾಲಲೋಚನ, ಯಮಶಾಸಕ, ಪ್ರಭೋ, ವಿಶ್ವಮೂರ್ತೇ, ನಮ್ಮನ್ನು ರಕ್ಷಿಸು ಎಂದು ಒಂದುಸಲವಾದರೂ

ಉತ್ಪತ್ತಿಪಾಲನವಿನಾಶನಹೇತುಭೂತ
ಭೂತೇಶ ಭೂತನಿವಹಾರ್ಚಿತಪಾದಪದ್ಮ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೨೨॥

ಕಲ್ಯಾಣಪುಣ್ಯಗುಣಸಾಗರ ಮೇರುಧೀರ
ರತ್ನಸ್ಫುರದ್ವರಶರಾಸನಕೋಟಿಹಸ್ತ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೨೩॥

ಗೌರೀಕುಚೋರುಗಿರಿಶೇಖರ ಚಾರುಭಾರ
ಕಾಶ್ಮೀರಸಾರರಸರಂಜಿತಪಾದಪದ್ಮ ।

---

ಭಕ್ತಿಯಿಂದ ಶಿವನಾಮಸ್ಮರಣೆಮಾಡುವವರು ನಿಮಗೆ ಯಾವಾಗಲೂ ಪರಮಪೂಜ್ಯ ರೆಂದು ತಿಳಿಯಿರಿ. ಇದು ಪರಮರಹಸ್ಯವಿಷಯ. ॥೨೧॥

ಚರಾಚರಾತ್ಮಕವಾದ ಈ ಪ್ರಪಂಚದ ಸೃಷ್ಟಿ, ಸ್ಥಿತಿ ಮತ್ತು ಸಂಹಾರ ಕಾರ್ಯಗಳನ್ನು ನಡೆಸಲು ಮೂಲಕಾರಣನಾಗಿರುವ ಸ್ವಾಮಿಯೇ, ನೀನು ಸಕಲ ಭೂತಗಳಿಗೂ ಒಡೆಯನು. ಸರ್ವಪ್ರಾಣಿಸಮೂಹವೂ ನಿನ್ನ ಪಾದಕಮಲವನ್ನೇ ಆರಾಧಿಸುತ್ತಿರುವುದು. ಪ್ರಭೋ, ನಮ್ಮನ್ನು ಕಾಪಾಡು ಎಂದು ಒಂದುಬಾರಿಗೂ ವಿಶ್ವಾಸದಿಂದ ಧ್ಯಾನಮಾಡುವ ಮಹಾತ್ಮರನ್ನು ನಾವು ಪೂಜಿಸಬೇಕು. ॥೨೨॥

ಸರ್ವಮಂಗಳಗಳಿಗೂ, ಪುಣ್ಯಕರವಾದ ರಾಶಿಗಳಿಗೂ ಸಾಗರದಂತೆ ಆಶ್ರಯ ನಾಗಿರುವ ಸ್ವಾಮಿಯೇ, ನೀನು ಮೇರುಪರ್ವತದಂತೆ ಅಚಲವಾದ ಧೈರ್ಯ ವುಳ್ಳವನು. ರತ್ನಮಯವಾದ ಮತ್ತು ಬಲಿಷ್ಠವಾದ ಅಗ್ರಭಾಗವುಳ್ಳ ಬಿಲ್ಲು ನಿನ್ನ ಕೈಯಲ್ಲಿ ಶೋಭಿಸುತ್ತಿದೆ. ಮಹಾದೇವನೇ, ನಮ್ಮನ್ನು ಕಾಪಾಡು ಎಂದು ಆಗಾಗ ಶಿವನಾಮಸ್ಮರಣೆಮಾಡುವ ಮಾನವರು ನಿಮಗೆ ಸದಾ ಪೂಜ್ಯರೆನಿಸುವರು. ಇದೇ ಪರಮರಹಸ್ಯ. ॥೨೩॥

ಗಿರಿರಾಜಕುಮಾರಿಯಾದ ಗೌರಿಯ ಸ್ತನಗಳೆಂಬ ದೊಡ್ಡ ಬೆಟ್ಟಗಳಿಗೆ ಅಲಂಕಾರಪ್ರಾಯನಾಗಿರುವ ದೇವನೇ, ನೀನು ಸರ್ವಾಂಗಸುಂದರನು. ನಿನ್ನ ಪಾದಕಮಲವು ಕಾಶ್ಮೀರದೇಶದ ಸಾರಭೂತವಾದ ಚಂದನರಸದಿಂದ ಶೋಭಿಸು

ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೨೪॥

ಆಪಾದುಕಪ್ರಣತದೇವಕಿರೀಟಕೋಟಿ
ರತ್ನಪ್ರಭಾಪರಿವೃತಾಂಘ್ರಿಸರೋಜರಾಜ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೨೫॥

ಸಂಸಾರಸಾಗರನಿವಾರಕ ಕಾಲಕಾಲ
ಲೀಲಾವಿಶೇಷಪರಿಕಲ್ಪಿತಕಲ್ಪಜಾತ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೨೬॥

---

ತ್ತಿರುವುದು. ಮಹೇಶ್ವರ, ನಮ್ಮನ್ನು ರಕ್ಷಿಸು ಎಂದು ಧ್ಯಾನಿಸುವ ಮಾನವರು ಸದಾ ನಿಮಗೆ ಪೂಜ್ಯರು. ಎಲೈ ದೇವತೆಗಳಿರಾ, ಇದು ಪರಮರಹಸ್ಯವಾದುದು. ॥೨೪॥

ಮಹೇಶನ ಪಾದುಕೆಯವರೆವಿಗೂ ದೇವತೆಗಳು ತಲೆಬಗ್ಗಿ ನಮಸ್ಕಾರ ಮಾಡಿರುವುದರಿಂದ ಆ ದೇವತೆಗಳ ಕಿರೀಟಗಳಲ್ಲಿ ಕೆತ್ತಿರುವ ರತ್ನಸಮೂಹಗಳ ಕಾಂತಿಯು, ಮಹಾದೇವನ ಪಾದಪದ್ಮದಲ್ಲಿ ಬಿದ್ದು ಪ್ರಕಾಶಿಸುತ್ತಿರುವುದು. ಓ ಮಹೇಶ, ಹಾಗೆ ದೇವಾದಿದೇವವಂದ್ಯನಾದ ನೀನು ನಮ್ಮನ್ನು ಸಲಹು, ಎಂದ್ಯ ಒಂದುಸಲವಾದರೂ ಭಕ್ತಿಯಿಂದ ಪರಮೇಶ್ವರನನ್ನು ಬಿಡದೇ ಸ್ತೋತ್ರಮಾಡುವ ಮಾನವನು ನಿಮಗೆ ಪೂಜ್ಯನೆನಿಸುವನು. ॥೨೫॥

ಸಂಸಾರವೆಂಬ ಸಾಗರದಿಂದ ಮಾನವರನ್ನು ದಾಟಿಸಿ ಉದ್ಧಾರಮಾಡುವ ದೇವನೇ, ನೀನು ಕಾಲಸ್ವರೂಪನಾದ ಯಮನನ್ನೂ ನಿಗ್ರಹಿಸಿರುವೆ. ಸೃಷ್ಟಿ ಸ್ಥಿತಿ ಸಂಹಾರರೂಪವಾದ ಈ ಪ್ರಪಂಚದ ಕಲ್ಪನಾಜಾಲಗಳೆಲ್ಲಾ ನಿನ್ನ ಲೀಲಾವಿಶೇಷವೇ ಆಗಿರುವುದು. ಸ್ವಾಮಿ, ನಮ್ಮನ್ನು ಕಾಪಾಡು ಎಂದು ಒಂದುಸಲವಾದರೂ ಪರಮೇಶ್ವರನನ್ನು ಭಕ್ತಿಯಿಂದ ಸ್ತೋತ್ರಮಾಡುವ ಮಾನವನು ಸದಾ ನಿಮಗೆ ಪೂಜ್ಯನೆನಿಸುವನು. ಓ ದೇವತೆಗಳಿರಾ, ಇದು ಪರಮರಹಸ್ಯವಾದುದೆಂದು ತಿಳಿಯಿರಿ. ॥೨೬॥

ಮನ್ನಾಥ ಸುಂದರತರಾತಿಮನೋಹರಾದ್ರಿ
ಕನ್ಯಾಸನಾಥ ವಿಧೃತೋರುಗಣಾಧಿನಾಥ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೨೭॥

ರತ್ನಾಂಗದಾಂಗಮಣಿಕಂಕಣಕಿಂಕಿಣೀಕ
ಗೌರೀಮನೋಹರಸುನೂಪುರಭಾಸುರಾಂಘ್ರೇ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೨೮॥

ಮಂದಾರಕುಂದಮಕರಂದರಸಾಭಿಷಿಕ್ತ
ಪಾದಾರವಿಂದಪರಮಾಹರಹಾರವೀರ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೨೯॥

---

ನನ್ನೊಡೆಯ! ಸುಂದರವಿಗ್ರಹ! ಅತ್ಯಂತ ಮನೋಹರಳಾದ ಗಿರಿರಾಜಸುತಾರಮಣ! ನೀನು ದೊಡ್ಡದೊಡ್ಡ ಗಣಗಳಿಗೆಲ್ಲಾ ಅಧಿಪತಿಯಾಗಿರುವೆ! ಪ್ರಭೋ! ನಮ್ಮನ್ನು ಕಾಪಾಡು! ಎಂಬುದಾಗಿ ಒಂದು ಸಲವಾದರೂ ಮಹಾದೇವನನ್ನು ಭಕ್ತಿಯಿಂದ ಸ್ತೋತ್ರಮಾಡುವ ಮಾನವರು ನಿಮಗೆ ಸದಾ ಮಾನ್ಯರು ಎಂಬುದು ಪರಮರಹಸ್ಯವಾದ ವಿಷಯ. ॥೨೭॥

ರತ್ನಮಯವಾದ ಅಂಗದ (ವಂಕಿ) ಕಂಕಣ, ಗೆಜ್ಜೆಸರ ಮುಂತಾದವುಗಳಿಂದ ಅಲಂಕೃತವಾದ ಶರೀರವುಳ್ಳ ಸ್ವಾಮಿಯೇ! ಗೌರಿಯ ಮನೋಹರವಾದ ಕಾಲ್ಕಡಗಗಳಿಂದ ಶೋಭಿಸುತ್ತಿರುವ ಪಾದಕಮಲವುಳ್ಳವನೇ! ದೇವ! ನಮ್ಮನ್ನು ಕಾಪಾಡು; ಎಂದು ಒಂದುಸಲ ಪರಶಿವನನ್ನು ಸ್ತೋತ್ರಮಾಡುವ ಮಾನವರನ್ನು ನೀವು ಸದಾ ಪೂಜಿಸಬೇಕು. ॥೨೮॥

ಮಂದಾರ ಮತ್ತು ಕುಂದ (ನೀಪ) ಪುಷ್ಪಗಳ ಮಕರಂದ ರಸದಿಂದ ತೊಯ್ದಿರುವ ಪಾದಕಮಲವುಳ್ಳ ಸ್ವಾಮಿಯೇ! ನೀನು ಉತ್ಕೃಷ್ಟವಾದ ರತ್ನಹಾರವನ್ನು ಧರಿಸಿರುವೆ. ದೇವ! ನಮ್ಮನ್ನು ಸಲಹು; ಎಂದು ಒಂದು ಸಾರಿ ಸದಾ ಶಿವನನ್ನು ಪ್ರಾರ್ಥನೆಮಾಡುವ ಮಾನವರು ಸದಾ ನಿಮಗೆ ಸ್ತುತ್ಯರು. ॥೨೯॥

ಕರ್ಪೂರಗೌರಧರಸುಂದರತಾರತಾರ
ತಾರಾಮನೋಹರವಿಹಾರವಿಹಾರಶೂರ ।
ಪಾಹೀತಿ ಯೇ ಪ್ರತಿದಿನಂ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೩೦॥

ಮಾಮೀಶ ಮಾಮಕಧಿಯಾ ಪರಿಪಾಲಯಾಶು
ಕ್ಲೇಶಾಪಹಾರ ಚತುರಪ್ರವರ ಪ್ರವೀರ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವೈ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೩೧॥

ಸರ್ವಾಮರೇಶ್ವರವರಾತಿಸುರಾರಿಗರ್ವ
ನಿರ್ವಾಪಣಪ್ರವಣ ಕಾರುಣಿಕಪ್ರವೀಣ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೩೨॥

---

ಶುಭ್ರವಾದ ಪಚ್ಚಕರ್ಪೂರವನ್ನು ಶರೀರಕ್ಕೆ ಲೇಪಿಸಿಕೊಂಡಿರುವ ಸ್ವಾಮಿಯೇ! ನೀನು ತ್ರಿಲೋಕಸುಂದರನು. ನಕ್ಷತ್ರಗಳಂತೆ ಮನೋಹರನು. ಸಕಲ ದೇವತೆಗಳ ವಿಹಾರಕ್ಕೂ ವಿಹಾರಸ್ಥಾನನಾಗಿರುವವನು. ಶೂರಾಗ್ರೇಸರನಾದ ಮಹಾದೇವನೇ! ನಮ್ಮನ್ನು ರಕ್ಷಿಸು ಎಂದು ಪ್ರತಿದಿನವೂ ಪ್ರಾರ್ಥಿಸುವ ಮಾನವರು ನಿಮಗೆ ಪೂಜ್ಯರು. ॥೩೦॥

ಮಾನವರ ಸರ್ವ ದುಃಖಗಳನ್ನೂ ನಿವಾರಣೆಮಾಡುವುದರಲ್ಲಿ ಚತುರನೂ, ವೀರಾಗ್ರಣಿಯೂ ಆದ ದೇವನೇ! ಸರ್ವೇಶ್ವರನಾದ ನೀನು, ನನ್ನನ್ನು, ಇವನೂ ನನ್ನವನು "ನನ್ನ ಪರಮಭಕ್ತನು" ಎಂದು ಭಾವಿಸು. ಜಾಗ್ರತೆ ಕಾಪಾಡು! ಎಂದು ಒಂದು ಸಲವಾದರೂ ಪರಮೇಶ್ವರನನ್ನು ಪ್ರಾರ್ಥಿಸುವ ಮಾನವರು ನಿಮಗೆ ಪೂಜ್ಯರು. ಇವರನ್ನು ನೀವು ತಪ್ಪದೇ ಪೂಜಿಸಬೇಕು. ಇದು ಪರಮರಹಸ್ಯವಾದುದು. ॥೩೧॥

ಸಕಲ ದೇವತೆಗಳ ದೇವಶ್ರೇಷ್ಠರ ಮತ್ತು ರಾಕ್ಷಸರ ಗರ್ವವನ್ನು ನಾಶಮಾಡುವುದರಲ್ಲಿ ಪ್ರವೀಣನೆನಿಸಿದ ಸ್ವಾಮಿಯೇ! ಕರುಣಾ ಶಾಲಿಗಳಲ್ಲಿ ನೀನೇ ಅಗ್ರಗಣ್ಯನು. ಮಹಾದೇವ! ನಮ್ಮನ್ನು ರಕ್ಷಿಸು ಎಂದು ಒಂದು ಸಲವಾದರೂ

ಶ್ರೀಮನ್ಮಹೇಶ ಕರುಣಾಕರುಣಾಂಬುರಾಶೇ
ಗೌರೀಮುಖಾಂಬುಜಸಹಸ್ರಕರಾದರೇಣ ।
ಪಾಹೀತಿ ಯೇ ಪ್ರತಿದಿನಂ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೩೩॥

ಮೃತ್ಯುಂಜಯಾವ್ಯಯ ಪಿನಾಕಕರಾಮರಾರಿ
ವೀರಾಂಧಕಾಸುರನಿವಾರಣಕಾರಣಾದ್ಯ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೩೪॥

ಶ್ರೀಕಾಲಕೂಟವಿಷದೋಷವಿಭೂಷಕಾಶಾ
ಪಾಶಪ್ರಣಾಶನವಿಧಾನವಿನೋದನೋದ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೩೫॥

---

ಈಶ್ವರನನ್ನು ಸ್ತೋತ್ರಮಾಡುವ ಮಾನವರು ನಿಮಗೆ ಪೂಜ್ಯರೆನಿಸುವರು. ನಾವು ಅವರನ್ನು ಪೂಜಿಸಬೇಕು. ಇದನ್ನು ಪರಮರಹಸ್ಯವೆಂದು ತಿಳಿ. ||೩೨||

ಶ್ರೀಮನ್ಮಹೇಶ್ವರನೇ, ಕರುಣೆ ಮತ್ತು ಕ್ರೌರ್ಯ ಇವುಗಳಿಗೆ ನೀನು ಸಮುದ್ರ ಪ್ರಾಯನಾಗಿರುವೆ. ಗಿರಿರಾಜಕುಮಾರಿಯ ಮುಖಕಮಲಕ್ಕೆ ಸೂರ್ಯನಂತೆ ಆನಂದ ವನ್ನುಂಟುಮಾಡುವ ಸ್ವಾಮಿಯೇ! ಆದರದಿಂದ ನಮ್ಮನ್ನು ಸಲಹು ಎಂದು ಒಂದುಬಾರಿಯಾದರೂ ಶಿವನನ್ನು ಪ್ರಾರ್ಥನೆಮಾಡುವ ಮಾನವರು ನಿಮಗೆ ಪೂಜ್ಯರೆನಿಸುವರು. ಇದು ಪರಮರಹಸ್ಯ. ||೩೩||

ಎಲೈ ಮೃತ್ಯುಂಜಯನೇ, (ಮೃತ್ಯುವನ್ನು ಜಯಿಸಿರುವನೇ!) ನೀನು ದೇವತೆಗಳಿಗೆ ಪ್ರಬಲ ಶತ್ರುವಾಗಿದ್ದ ವೀರನಾದ ಅಂಧಕಾಸುರನನ್ನು ಧ್ವಂಸಮಾಡಿ ರುವೆ. ಸಕಲ ಜಗತ್ತಿಗೂ ನೀನೇ ಕಾರಣನು. ಸ್ವಾಮಿ! ನನ್ನನ್ನು ಕಾಪಾಡು. ಎಂಬುದಾಗಿ ಒಂದುಸಲವಾದರೂ ಪ್ರಾರ್ಥನೆಮಾಡುವ ಮಾನವರು ಸದಾ ಪೂಜ್ಯರು. ನೀವು ಅವರನ್ನು ಭಕ್ತಿಯಿಂದ ಪೂಜಿಸಬೇಕು. ||೩೪||

ಶ್ರೀ ಕಾಲಕೂಟವೆಂಬ ದೋಷಪ್ರಾಯವಾದ ವಿಷವನ್ನೇ ಕಂಠದಲ್ಲಿ ಭೂಷಣವನ್ನಾಗಿ ಧರಿಸಿರುವ ಸ್ವಾಮಿಯೇ! ಈ ಆಸೆಯೆಂಬ ಪಾಶವನ್ನು ನಾಶ

ಸೌವರ್ಣವರ್ಣಸುಹಿರಣ್ಯಹಿರಣ್ಯಬಾಹೋ
ಶಂಭೋ ಹಿರಣ್ಯದ ಹಿರಣ್ಯಪತೇ ಸ್ಮರಾರೇ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೩೬॥

ಅನ್ಯಸ್ತ್ವಾಸ್ತಿ ಶಿವಶಂಕರ ಪಾಲನೀಯೋ
ಮತ್ತೋಽಪಿ ಕಃ ಕಲುಷನಾಶಕರಾತಿಧೀರ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೩೭॥

ಘೋರಾಪರಾಧನಿಧಿಶೋಷಕ ಕಾಮಶತ್ರೋ
ಚಿತ್ರತ್ರಿನೇತ್ರಕರುಣಾರಸಪಾತಮಾತ್ರಂ ।

---

ಮಾಡುವುದರಲ್ಲಿ ನೀನೇ ಸಮರ್ಥನು. ಸದಾ ಆನಂದವಿನೋದಗಳಿಂದ ಸಂತೋಷ ಪಡುವ ದೇವನೇ! ನಮ್ಮನ್ನು ರಕ್ಷಿಸು ಎಂದು ಒಂದುಸಾರಿಯಾದರೂ ಶಂಕರನನ್ನು ಪ್ರಾರ್ಥಿಸುವ ಮಾನವರು ಸದಾ ನಮಗೆ ಪೂಜ್ಯರು. ಇದು ಪರಮರಹಸ್ಯವು.॥೩೫॥

ಸುವರ್ಣದಂತೆ ವೈಬಣ್ಣವುಳ್ಳವನೂ, ಶ್ರೇಷ್ಠವಾದ ಸುವರ್ಣಸ್ವರೂಪನೂ ಮತ್ತು ಹಿರಣ್ಯದಂತೆ ಭುಜಗಳುಳ್ಳವನೂ ಆಗಿರುವ ಶಂಭುವೆ! ನೀನು ಭಕ್ತರಿಗೆಲ್ಲಾ ಸುವರ್ಣವನ್ನು ಅನುಗ್ರಹಿಸುವೆ. ಸುವರ್ಣಗಳಿಗೆಲ್ಲಾ ನೀನೇ ಅಧಿಪತಿ; ನೀನೇ ಮನ್ಮಥನನ್ನೂ ಧ್ವಂಸಮಾಡಿರುವೆ. ಓ ಸ್ವಾಮಿಯೇ! ನಮ್ಮನ್ನು ಕಾಪಾಡು ಎಂದು ಒಂದುಸಲವಾದರೂ ಶಂಕರನನ್ನು ಪ್ರಾರ್ಥನೆಮಾಡುವ ಮಾನವರು ನಿಮಗೆ ಸದಾ ಪೂಜ್ಯರೆನಿಸುವರು. ಇದು ಪರಮರಹಸ್ಯವು. ॥೩೬॥

ಮಂಗಳಸ್ವರೂಪನಾದ ಶಂಕರನೇ! ನನ್ನಂತೆಯೇ ಅನೇಕ ಜನ ಭಕ್ತರು ನಿನ್ನನ್ನೇ ರಕ್ಷಕನನ್ನಾಗಿ ನಂಬಿರುವರು. ಓ ಪಾಪಧ್ವಂಸಕ! ಎಲ್ಲರನ್ನೂ ಪಾಲನೆ ಮಾಡುವುದರಲ್ಲಿ ನೀನೇ ಸಮರ್ಥನು. ಎಲೈ ಅತ್ಯಂತ ಧೀರನಾದ ಮಹೇಶ್ವರನೇ! ನನ್ನನ್ನು ಕಾಪಾಡು ಎಂದು ಒಂದುಸಾರಿಯಾದರೂ ಹೇಳುವ ಮಾನವರು ನಮಗೆ ಪೂಜ್ಯರು. ಇದು ಪರಮರಹಸ್ಯವು. ॥೩೭॥

ಅತ್ಯಂತ ಭಯಂಕರವಾದ ಅಪರಾಧಗಳೆಂಬ ಸಮುದ್ರವನ್ನು ಒಣಗಿಸುವ ಸ್ವಾಮಿಯೇ! ನೀನು ಮನ್ಮಥನ ಶತ್ರುವು. ವಿಚಿತ್ರಸ್ವರೂಪನಾದ ಮುಕ್ಕಣ್ಣನೇ!

ಸ್ವಾಹೇತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೩೮॥

ಭಸ್ಮಾವಗುಂಠನವಿನಷ್ಟಮಹಾಘಕೋಟಿ
ರುದ್ರಾಕ್ಷಕರ್ಣಪರವರ್ಣಮವರ್ಣ್ಯವರ್ಣ ।
ಸ್ವಾಹೇತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೩೯॥

ಶ್ರೀಬಿಲ್ವಮೂಲಶಿವಲಿಂಗಸಮರ್ಚನೇನ
ನಿರ್ಧೂತಪಾತಕಕುಲಾಚಲಮೀಶಶೀಲ ।
ಸ್ವಾಹೇತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೪೦॥

---

ನಿನ್ನ ಕರುಣಾರಸಕ್ಕೆ ಪಾತ್ರನಾಗುವ ಮಾನವನನ್ನು ಮಾತ್ರ ರಕ್ಷಿಸು, ಎಂದು ಒಂದುವೇಳೆಯಾದರೂ ಸ್ತೋತ್ರಮಾಡುವ ಮಾನವರು ನಿಮಗೆ ಪೂಜ್ಯರು. ಇದು ಪರಮರಹಸ್ಯವು. ॥೩೮॥

ಭಸ್ಮವನ್ನು ಧರಿಸಿ, ಆ ಭಸ್ಮಾವಗುಂಠನದಿಂದ ಸಕಲ ಪಾಪಗಳನ್ನೂ ಹೋಗಲಾಡಿಸಿ ಉದ್ಧಾರಮಾಡುವ ದೇವನೇ, ನೀನು ರುದ್ರಾಕ್ಷಿಯನ್ನು ಕರ್ಣದಲ್ಲಿ ಧರಿಸಿರುವೆ. ನಿನ್ನ ವರ್ಣವು ಉತ್ಕೃಷ್ಟವಾದುದು. ವರ್ಣಿಸಲು ಸಾಧ್ಯವಾಗದ ವರ್ಣವುಳ್ಳ ಸ್ವಾಮಿಯೇ, ನಮ್ಮನ್ನು ರಕ್ಷಿಸು. ಎಂದು ಒಂದುಸಲವಾದರೂ ಸ್ತೋತ್ರ ಮಾಡುವ ಮಾನವರು ಸರ್ವದಾ ನಿಮಗೆ ಪೂಜ್ಯರು. ಎಲೈ ದೇವತೆಗಳಿರಾ, ಇದು ಪರಮರಹಸ್ಯವು. ॥೩೯॥

ಶ್ರೀಬಿಲ್ವವೃಕ್ಷದ ಮೂಲಪ್ರದೇಶದಲ್ಲಿರುವ ಶಿವಲಿಂಗದ ಪೂಜೆಯಿಂದ (ಪಾಪಗಳೆಂಬ ಕುಲಪರ್ವತಗಳು) ಕುಲಪರ್ವತಗಳಂತಿರುವ ಅಪಾರವಾದ ಸಕಲ ಪಾತಕಗಳೂ ತೊಡೆದುಹೋಗುವುವು. ಓ ಪರಮೇಶ್ವರ, ನಿನ್ನ ಸೇವೆಯೇ ಸ್ವಭಾವ ವಾಗಿರುವ ಭಕ್ತನಾದ ನನ್ನನ್ನು ಕಾಪಾಡು ; ಎಂದು ಒಂದುಬಾರಿಯಾದರೂ ಮಹಾದೇವನನ್ನು ಸ್ತೋತ್ರಮಾಡುವ ಮಾನವನು ಸದಾ ನಿಮಗೆ ಪೂಜ್ಯನು. ಇದು ತುಂಬಾ ರಹಸ್ಯವಾದುದು. ॥೪೦॥

ದಾರಾವಿಹಾರಪರಿಹಾರಕ ಸಾದರಂ ಮಾಂ
ಧೀರಂ ದುರೋದರವಿಚಾರವಿವರ್ಜಿತಂ ಚ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೪೧॥

ಶಂಭೋ ತ್ವದಂಘ್ರಿಕಮಲಂ ಕಲಯಾಮಿ ಕಾಲೇ
ಕಾಲೇಽನುವೇಲಮತಿವೇಲಮಶೋಽನುವೇಲಂ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ತೇ ವಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೪೨॥

ನಿತ್ಯಂ ಮಹೇಶಚರಣಸ್ಮರಣಪ್ರವೀಣಂ
ಪ್ರಕ್ಷೀಣಪಾಪಕರಣಂ ಕರುಣಾರ್ಣವೇಶ ।
ಪಾಹೀತಿ ಯೇ ಸಕೃದಪಿ ಪ್ರವದಂತಿ ಸಂತಃ
ಪೂಜ್ಯಾ ಭವಂತಿ ತದಿದಂ ಪರಮಂ ರಹಸ್ಯಂ ॥೪೩॥

---

ದೇವ, ನಾನು ಸ್ತ್ರೀಯರೊಡನೆ ಸ್ವಚ್ಛಂದವಾಗಿ ವಿಹರಿಸುವುದು ಮತ್ತು ಸದಾ ವಿಷಯಾಭಿಲಾಷೆ, ಸಂಸಾರಾಸಕ್ತಿ ಮುಂತಾದುವುಗಳನ್ನು ತೊರೆದು ಕೇವಲ ಆಧ್ಯಾತ್ಮಿಕರಸಾನುಭವದಲ್ಲಿ ಆದರವುಳ್ಳವನಾಗಿರುವೆನು. ಮತ್ತು ಧೀರನೂ, ದ್ಯೂತ ಕ್ರೀಡೆಯೇ ಮುಂತಾದುವುಗಳಲ್ಲಿ ಸ್ವಲ್ಪವೂ ಆಸಕ್ತಿಯಿಲ್ಲದವನೂ ಆಗಿ ಸದಾ ನಿನ್ನ ಭಜನೆಯಲ್ಲಿಯೇ ತತ್ಪರನಾಗಿರುವೆನು. ಪ್ರಭೋ, ನನ್ನನ್ನು ರಕ್ಷಿಸು; ಎಂದು ಒಂದುಬಾರಿಯಾದರೂ ಸ್ತೋತ್ರಮಾಡುವ ಮಾನವರು ನಿಮಗೆ ಪೂಜ್ಯರು. ಇದು ಪರಮರಹಸ್ಯವು. ॥೪೧॥

ಶಂಭುವೇ, ಸರ್ವಕಾಲಗಳಲ್ಲಿಯೂ ಎಡಬಿಡದೆ ನಿನ್ನ ಪಾದಕಮಲವನ್ನೇ ಧ್ಯಾನಮಾಡುತ್ತಿರುವೆನು. ಸ್ವಾಮಿ! ನನ್ನನ್ನು ರಕ್ಷಿಸು; ಎಂದು ಜೀವನ ಕಾಲದಲ್ಲಿ ಒಂದು ಬಾರಿಯಾದರೂ ಶಂಕರನನ್ನು ಸ್ತೋತ್ರಮಾಡುವ ಮಾನವನನ್ನು ನೀವು ಸದಾ ಪೂಜಿಸಬೇಕು. ಇದು ಪರಮರಹಸ್ಯವು. ॥೪೨॥

ಕರುಣಾಸಾಗರನೇ, ಪ್ರತಿನಿತ್ಯವೂ ನಿನ್ನ ಪಾದಸ್ಮರಣೆಯಲ್ಲಿಯೇ ನಿರತರಾಗಿ ಪಾಪಗಳನ್ನೆಲ್ಲಾ ಕಳೆದುಕೊಂಡಿರುವ ಮಾನವರನ್ನು ಕಾಪಾಡು ಎಂದು ಸರ್ವದಾ

**ಯಃ ಕಶ್ಚಿದಂತಕರಿಪುಸ್ಮರಣಪ್ರವೀಣಃ**
**ಪ್ರಾಣಪ್ರಯಾಣಸಮಯೇಽಪಿ ಸ ಏವ ವಂದ್ಯಃ ।**
**ಪೂಜ್ಯಃ ಸ ಏವ ಸಕಲಾಘವಿನಾಶಹೇತು**
**ಸ್ತತ್ಪಾದಪದ್ಮಭಜನಂ ನಿಧಿರೇವ ಕೋಽಪಿ ॥೪೪॥**

**ಶ್ರೀಕಾಲಕಾಲಕರುಣಾಕರ ದೀನಬಂಧೋ**
**ಭಕ್ತಪ್ರಭೂತಕರುಣಾರಸಸಾರಸಿಂಧೋ ।**
**ಮಾಂ ದೀನಮಪ್ಯನುದಿನಂ ಪರಿಪಾಲಯೇತಿ**
**ಯೇ ಸಂವದಂತಿ ಸಕೃದೇವ ಹಿ ತೇ ನಮಸ್ಯಾಃ ॥೪೫॥**

**ಪ್ರಕ್ಷೀಣಪಾತಕಕುಲಂ ಭಸಿತತ್ರಿಪುಂಡ್ರ**
**ರುದ್ರಾಕ್ಷಭೂಷಣಮಭೂಷಣಮಂಧಕಾರೇ ।**

---

ಶಂಭುವನ್ನು ಮೊರೆಯಿಡುವ ಮಾನವರು ನಿಮಗೆ ಪೂಜ್ಯರೆನಿಸುವರು. ಇದು ಪರಮ ರಹಸ್ಯವು. ॥೪೩॥

ಮಹೇಶ್ವರನನ್ನು ಪ್ರಾಣಹೋಗುವ ಸಮಯದಲ್ಲಿಯಾದರೂ ಸ್ಮರಣೆ ಮಾಡುವುದರಲ್ಲಿ ನಿಪುಣನಾದ ಪಕ್ಷದಲ್ಲಿ ಆ ಮಾನವನೇ ಎಲ್ಲರಿಂದಲೂ ನಮಸ್ಕಾರಾರ್ಹನಾಗುವನು. ಅವನೇ ಸರ್ವಪೂಜ್ಯನು. ಸಕಲ ಪಾಪಗಳನ್ನೂ ನಾಶಮಾಡುವುದರಲ್ಲಿ ಆ ಮಹಾತ್ಮನೇ ಮೂಲಕಾರಣನು. ಆ ಶಿವಧ್ಯಾನಪರಾಯಣನಾದ ಮಹಾಪುರುಷನ ಪಾದಕಮಲ ಭಜನೆಯು ಒಂದು ವಿಲಕ್ಷಣವಾದ ನಿಧಿಯೆಂದೇ ತಿಳಿಯಬೇಕು. ॥೪೪॥

ಕಾಲಸ್ವರೂಪನಾದ ಯಮನಿಗೂ ಕಾಲನೆನಿಸಿದ ಮಹಾದೇವನೇ, ನೀನು ಕರುಣಾಸಮುದ್ರನು, ದೀನಬಂಧುವು, ಭಕ್ತರ ಅಪಾರವಾದ ಕರುಣೆಯೆಂಬ ರಸಕ್ಕೆ ಸಾರಭೂತವಾದ ಸಮುದ್ರದಂತಿರುವವನು. ಸ್ವಾಮಿಯೇ, ದೀನನಾದ ಈ ನನ್ನನ್ನು ಪ್ರತಿದಿನವೂ ಕಾಪಾಡು ಎಂದು ಒಂದುಸಲವಾದರೂ ಹೇಳುವ ಮಾನವರನ್ನು ನೀವು ಭಕ್ತಿಯಿಂದ ನಮಸ್ಕಾರ ಮಾಡಬೇಕು. ॥೪೫॥

ನಿನ್ನ ಭಜನೆಯಿಂದ ನನ್ನ ಸಕಲ ಪಾತಕಗಳೂ ನಾಶವಾಗಿರುವುವು. ಶುಭ್ರವಾದ ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲೆ ಇವುಗಳನ್ನು ಅಲಂಕರಿಸಿಕೊಂಡು ಇತರ ಎಲ್ಲಾ ಸುವರ್ಣಾಭರಣಗಳನ್ನೂ ತ್ಯಾಗಮಾಡಿರುವೆನು. ಎಲೈ ಅಂಧಕಾಸುರ

ಪಾಹೀತಿ ಯಃ ಪ್ರತಿದಿನಂ ಪ್ರವದಂತ್ಯಮುಂದಂ
ತಂ ವಂದನೀಯಮಸಕೃತ್ಪ್ರವದಾಮಿ ದೇವಾಃ ॥೪೬॥

ಸ್ವಾಮಿನ್ನಶಾಂಕರಕಥಾರ್ಣವಬಾಡಬಂ ಮಾಂ
ಶೈವಾಪಸಾರತರುಸಾರಕುಠಾರಭೂತಂ ।
ಲಿಂಗಾರ್ಚನವ್ರತವಿದೂಷಕಶೈಲವಜ್ರಂ
ಪಾಹೀತಿ ಯೋ ವದತಿ ತಂ ಪ್ರಣಮಂತು ದೇವಾಃ ॥೪೭॥

ಪಾಪಾಂಬುರಾಶಿಪರಿಹಾರಕರಪ್ರವೀರಂ
ಧೀರಂ ಹರಾರ್ಚನಪರಂ ಗತದುರ್ವಿಕಾರಂ ।
ಧೀರಾಃ ಪರಂ ಸತತಮಾದರತೋ ನಮಂತಿ
ಸಂತಃ ಕೃತಾಂತಪರಿತಾಪನಿವಾರಣಾಯ ॥೪೮॥

---

ನಾಶಕನೇ, ಇಂತಹ ನಿನ್ನ ಭಕ್ತನನ್ನು ರಕ್ಷಿಸು, ಎಂದು ಪ್ರತಿದಿನವೂ ಗಟ್ಟಿಯಾಗಿ ಸ್ತೋತ್ರಮಾಡುವ ಮಾನವನನ್ನು ಅನೇಕವೇಳೆ ನಮಸ್ಕರಿಸಬೇಕು. ಎಲೈ ದೇವತೆಗಳಿರಾ, ಇದು ಶಿವನಿಗೆ ತೃಪ್ತಿಕರವಾಗುವುದು. ॥೪೬॥

ಸ್ವಾಮಿ, ನಾನು ಶಂಕರನ ಸಂಬಂಧವಿಲ್ಲದ ಕಥೆಗಳೆಂಬ ಸಮುದ್ರಕ್ಕೆ ಬಡಬಾಗ್ನಿಸ್ವರೂಪನಾಗಿರುವೆನು. (ಅಂದರೆ ಬಡಬಾಗ್ನಿಯು ಸಮುದ್ರವನ್ನು ಹೇಗೆ ಒಣಗಿಸಿಬಿಡುವುದೋ ಅದರಂತೆ ನಾನು ಶಿವೇತರಕಥೆಗಳಿಗೆ ಯಾವಾಗಲೂ ಪ್ರೋತ್ಸಾಹಕೊಡೆನು ಎಂದು ಭಾವ) ಶಿವಾಪರಾಧಗಳೆಂಬ ವೃಕ್ಷಗಳನ್ನು ಕಡಿಯುವುದರಲ್ಲಿ ಗಟ್ಟಿಯಾದ ಕೊಡಲಿಯಂತಿರುವೆನು. ಅಲ್ಲದೆ ಲಿಂಗಾರ್ಚನೆಯು, ಮತ್ತು ಅರ್ಚಕರ ದೂಷಣಗಳೆಂಬ ಬೆಟ್ಟಗಳನ್ನು ತಡೆದು ನಾಶಪಡಿಸುವುದರಲ್ಲಿ ವಜ್ರಾಯುಧಕ್ಕೆ ಸಮಾನವಾಗಿರುವೆನು. ದೇವ, ಇಂತಹ ನನ್ನನ್ನು ರಕ್ಷಿಸು ಎಂದು ಉಚ್ಚರಿಸುವ ಮಾನವನನ್ನು ಎಲೈ ದೇವತೆಗಳಿರಾ, ನೀವು ನಮಸ್ಕಾರ ಮಾಡಬೇಕು. ॥೪೭॥

ಭಕ್ತರ ಪಾಪಗಳೆಂಬ ಸಮುದ್ರವನ್ನು ಪರಿಹರಿಸುವುದರಲ್ಲಿ ನಿಪುಣನಾದ ಮಹೇಶ್ವರ ಭಕ್ತನನ್ನೂ ಸದಾ ಶಿವಪೂಜಾಪರಾಯಣನಾಗಿ ಯಾವ ವಿಕಾರವನ್ನೂ ಹೊಂದದೇ ಶ್ರೇಷ್ಠರಾಗಿರುವ ಶಾಂಭವರನ್ನೂ ಧೀರರಾದ ಸತ್ಪುರುಷರು ಆದರದಿಂದ

ಯಃ ಶೂಲಪಾಣಿಚರಣಸ್ಮರಣಪ್ರವೀಣಾ
ಸ್ತೇ ತಾವದಂತಕಭಯಪ್ರಲಯಪ್ರವೃತ್ತಾಃ ।
ಪುಣ್ಯಾರ್ಣವಾಃ ಪರಮಕಾರುಣಿಕೋತ್ತಮಾಶ್ಚ
ತತ್ಪಾದಪದ್ಮಭಜನೇ ಕ್ವ ಭಯಂ ಭವಾಬ್ಧೇಃ ॥೪೯॥

ಹೇ ಕಾಶಿಕಾಪುರಪತೇ ತ್ರಿಪುರಾಂತಕಾರೇ
ವಿಶ್ವೇಶ್ವರ ತ್ರಿದಶವಂದ್ಯಪದಾರವಿಂದ ।
ಮಾಂ ರಕ್ಷರಕ್ಷ ವಿಷಮೇಕ್ಷಣ ವೀಕ್ಷಣೇನ
ಪ್ರಕ್ಷೀಣಪಾಪಮಿತಿ ವೇದವಿದೋ ವದಂತಿ ॥೫೦॥

ಸಾನಂದಮಿಂದುಶಕಲಾಭರಣ ಪ್ರಣಾಮ
ಶ್ರೇಣೀಂ ಗೃಹಾಣ ಕರುಣೋರುತರಂಗಿಣೀ ತೇ ।
ಮಯ್ಯನ್ವಹಂ ಪ್ರಸರತು ಪ್ರಣತಾರ್ತಿನಾಶಂ
ಸಂಪಾದಯತ್ವಿತಿ ವದಂತಿ ತ ಏವ ಮಾನ್ಯಾಃ ॥೫೧॥

---

ತಮಗುಂಟಾಗುವ ಯಮನ ಬಾಧೆಯನ್ನು ಪರಿಹರಿಸಿಕೊಳ್ಳುವುದಕ್ಕೋಸ್ಕರ ನಮಸ್ಕಾರ ಮಾಡುವರು. ॥೪೮॥

ಯಮನ ಭೀತಿಯೆಂಬ ಪ್ರಲಯಕ್ಕೆ ಹೆದರಿ, ಸದಾ ಶೂಲಪಾಣಿಯಾದ ಪರಶಿವನ ಪಾದಕಮಲಸ್ಮರಣೆಯಲ್ಲಿಯೇ ನಿಪುಣರಾಗಿರುವ ಪರಮೇಶ್ವರನ ಭಕ್ತ ಜನರು ಪುಣ್ಯಗಳಿಗೆ ಸಮುದ್ರದಂತೆ ಆಶ್ರಯವಾಗಿರುವರು. ಇವರೇ ದಯಾಶಾಲಿಗಳೆನಿಸಿ, ಉತ್ತಮರೆನಿಸಿರುವರು. ಇಂತಹ ಶಿವಭಕ್ತರ ಪಾದಕಮಲ ಭಜನೆಯನ್ನು ಮಾಡುವ ಮಾನವರಿಗೆ ಸಂಸಾರವೆಂಬ ಸಮುದ್ರದ ಭಯವು ಹೇಗೆ ತಾನೇ ಉಂಟಾದೀತು ? ॥೪೯॥

ಎಲೈ ಕಾಶೀಪಟ್ಟಣದ ಅಧಿಪತಿಯೇ, ಓ ತ್ರಿಪುರಾಸುರನಾಶಕನೇ, ವಿಶ್ವೇಶ್ವರನೇ, ಸಮಸ್ತ ದೇವತೆಗಳೂ ನಿನ್ನ ಪಾದಕಮಲವನ್ನು ನಮಸ್ಕರಿಸುತ್ತಿರುವರು. ಪ್ರಭೋ, ವಿಷಮನೇತ್ರ, (ಮೂರು ಕಣ್ಣುಳ್ಳವನು) ಪಾಪರಹಿತನಾದ ಈ ನನ್ನನ್ನು ಕಾಪಾಡು, ಎಂದು ವೇದಜ್ಞರಾದವರು ಸದಾ ಪ್ರಾರ್ಥಿಸುತ್ತಿರುವರು. ॥೫೦॥

ಎಲೈ ಬಾಲಚಂದ್ರನನ್ನೇ ಶಿರೋಭೂಷಣವನ್ನಾಗಿ ಧರಿಸಿರುವ ಸ್ವಾಮಿಯೇ! ಆನಂದದಿಂದ ನಾವು ಮಾಡುವ ನಮಸ್ಕಾರ ಪಂಕ್ತಿಗಳನ್ನು ಸ್ವೀಕರಿಸು. ದೇವ!

ಆನಂದಕಂದಮದನದ್ರುಮವೀತಿಹೋತ್ರ
ಪಾಹಿ ತ್ರಿಣೇತ್ರ ಸುಚರಿತ್ರ ಪವಿತ್ರಗಾತ್ರ ।
ಶ್ರೀವಿಶ್ವನಾಥ ಕರುಣಾರಸಪಾತ್ರಮಾತ್ರ
ಮಿತ್ಯುತ್ತಮೋತ್ತಮತಮಾಃ ಪ್ರವದಂತಿ ಶೈವಾಃ ॥೫೨॥

ದುಷ್ಟಾಘಕೋಟಿಘಟಿತಾನಪಿ ಕಾಲಕೂಟ
ಕೂಟೋಪಮಾನಪಿ ಮಹೇಶ್ವರ ಪಾಹಿ ದೀನಾನ್ ।
ದೀನಾರ್ತಿಭಂಜನಮಹಾವ್ರತದೀಕ್ಷಿತಾಸ್ಮಾ
ನ್ಪಾಹೀತಿ ವೇದವಚನಾನಿ ವಿದಂತಿ ಮಾನ್ಯಾಃ ॥೫೩॥

---

ನಿನ್ನ ದಯಾಮಯವಾದ ದೊಡ್ಡ ನದಿಯು, ನನ್ನ ಮೇಲೆ ಯಾವಾಗಲೂ ಹರಿಯುತ್ತಾ, ವಿನೀತರಾಗಿ ನಮಸ್ಕರಿಸುವ ಮಾನವರ ದುಃಖಗಳನ್ನೆಲ್ಲಾ ನಾಶ ಮಾಡಲಿ; ಎಂದು ಅನವರತವೂ ಪರಮೇಶ್ವರನನ್ನು ಪ್ರಾರ್ಥನೆಮಾಡುವ ಜನರು ಸದಾ ಗೌರವಾರ್ಹರೆಂದು ತಿಳಿಯಬೇಕು. ॥೫೧॥

ದೇವ! ನೀನು ಆನಂದಗಳೆಂಬ ಮೊಳಕೆಗಳಿಗೆ ಆಶ್ರಯಪ್ರಾಯನಾಗಿದ್ದ ಮನ್ಮಥನೆಂಬ ಮರಕ್ಕೆ ಅಗ್ನಿಸದೃಶನಾಗಿರುವೆ. (ಪರಶಿವನ ಫಾಲನೇತ್ರಾಗ್ನಿಗೆ ತುತ್ತಾಗಿ ಮನ್ಮಥನು ಭಸ್ಮವಾದನು.) ಎಲೈ ತ್ರಿನಯನನೇ! ಪವಿತ್ರವಾದ ಚರಿತ್ರೆಯುಳ್ಳವನೂ, ಪಾವನವಾದ ಶರೀರವುಳ್ಳವನೂ ನೀನೇ ಆಗಿರುವೆ. ಹೇ ವಿಶ್ವನಾಥ! (ಜಗದೊಡೆಯ!) ನಿನ್ನ ಕರುಣಾರಸಕ್ಕೆ ಪಾತ್ರರಾಗುವ ಜನರನ್ನು ಮಾತ್ರ ಕಾಪಾಡು; ಎಂದು ಅತ್ಯಂತ ಉತ್ತಮೋತ್ತಮರೆನಿಸಿದ ಶೈವರು ಪ್ರಾರ್ಥಿಸುತ್ತಿರುವರು. ॥೫೨॥

ಮಹೇಶ್ವರ! ಕೋಟ್ಯಂತರ ಮಹಾಪಾಪಗಳಿಂದ ಯುಕ್ತರಾಗಿ, ಕಾಲಕೂಟ ವಿಷಗಳ ಸಮೂಹಕ್ಕೆ ಸಮಾನವಾಗಿರುವ ದೀನ ಜನರನ್ನು ರಕ್ಷಿಸು; ಎಲೈ ದೀನ ಜನಗಳ ದುಃಖಗಳನ್ನು ನಾಶಮಾಡುವಿಕೆಯೆಂಬ ಮಹಾವ್ರತದಲ್ಲಿ ದೀಕ್ಷಿತನಾಗಿರುವ ಸ್ವಾಮಿಯೇ! ನಮ್ಮನ್ನು ರಕ್ಷಿಸು, ಎಂಬ ಅರ್ಥಯುಕ್ತವಾದ ವೇದವಚನಗಳನ್ನು ಮಾನ್ಯರಾದ ಜನಗಳು ಹೇಳುತ್ತಿರುವರು. ॥೫೩॥

ಲಿಂಗಾರ್ಚನವ್ರತಪರಾನ್ನ ಪರೋಽಸ್ತಿ ಲೋಕೇ
ಕೋಽಪಿ ಪ್ರಭೂತಪರಮಾದ್ಭುತಪುಣ್ಯರಾಶಿಃ ।
ಲಿಂಗಾರ್ಚನವ್ರತಪರೋ ಭವತೀತಿ ವೇದಾ
ಸ್ತಾವದ್ವದಂತಿ ಬಹವೋ ಬಹುಧಾ ಬುಧಾನಾಂ ॥೫೪॥

ಮಾನ್ಯೋಽನ್ಯೋ ನ ಶಿವಾರ್ಚಕಾದಿತಿ ಮತಿರ್ಧನ್ಯಸ್ಯ ಸಂಜಾಯತೇ
ಪುಣ್ಯಾನಾಂ ಪರಿಪಾಕತಃ ಕಥಮಪಿ ಪ್ರಾಯಃ ಸ ಧನ್ಯೋತ್ತಮಃ ।
ಲೋಕೇ ದುರ್ಲಭ ಏವ ಶಾಂಭವ ಇತಿ ಪ್ರಾಮಾಣಿಕಾನಾಂ ವಚೋ
ವೀಚೀ ಸಂಚರತಿ ಪ್ರಭಾಕರಕರಾಕಾರಾ ತಮೋನಾಶಿಕಾ ॥೫೫॥

ಕೋಽಪಿ ಪ್ರಾಣಿಷು ಕಾಲಕಾಲಭಜನಂ ಕರ್ತುಂ ಪ್ರವೃತ್ತೋ ಭವೇತ್
ತಂ ವಂದೇ ಪುನರೇವ ತತ್ಪದರಜಃಪುಂಜೈರ್ಮನೋರಂಜನಂ ।
ಕರ್ತುಂ ಯೋ ಯತತೇ ಕೃತಾತಿಸುಕೃತೈಸ್ತತ್ಪಾದುಕೇ ಮಸ್ತಕೇ
ಕೃತ್ವಾ ನೃತ್ಯತಿ ಕೋಽಪಿ ಪುಣ್ಯವಿಭವೋ ಭಾವಸ್ವಭಾವಪ್ರಿಯಃ ॥೫೬॥

---

ಲಿಂಗಾರ್ಚನೆಯೆಂಬ ವ್ರತಕ್ಕಿಂತಲೂ ಉತ್ಕೃಷ್ಟವಾದ, ಅಧಿಕವೂ ಅದ್ಭುತವೂ ಆದ ಪುಣ್ಯರಾಶಿಯು ಈ ಲೋಕದಲ್ಲಿ ಬೇರೆ ಯಾವುದೂ ಇಲ್ಲ. ಆದುದರಿಂದ ಎಲೈ ಮಾನವರೇ! ನೀವು ಯಾವಾಗಲೂ ಲಿಂಗಾರ್ಚನವ್ರತವನ್ನು ಆಚರಿಸಿರಿ; ಎಂದು ಅನೇಕರೀತಿಯಿಂದ ವೇದಗಳು ವಿಪ್ರರಿಗೆ ತಿಳಿಸುತ್ತಿರುವುವು. ॥೫೪॥

ಶಿವನ ಪೂಜೆಮಾಡುವನಿಗಿಂತಲೂ ಮಾನ್ಯನಾದವನು ಬೇರೇ ಯಾರೂ ಇಲ್ಲ. ಅವನೇ ಗೌರವಾಸ್ಪದನು, ಎಂಬ ಬುದ್ಧಿಯು ತನ್ನ ಪುಣ್ಯಪರಿಪಾಕದಿಂದ ಕೇವಲ ಧನ್ಯನಾದ ಮಾನವನಿಗೆ ಮಾತ್ರ ಉಂಟಾಗುವುದು. ಅಂತಹ ಧನ್ಯೋತ್ತಮನೂ ಶಂಭುಭಕ್ತನೂ ಸಾಮಾನ್ಯವಾಗಿ ಲೋಕದಲ್ಲಿ ಬಹಳ ವಿರಳರೆಂದು ಪ್ರಾಮಾಣಿಕ ರಾದ ಪಂಡಿತರ ಮಾತಾಗಿರುವುದು. ಆ ಅಭಿಪ್ರಾಯವೇ ಸೂರ್ಯನ ಕಿರಣಗಳಂತೆ ಪ್ರಪಂಚದ ಅಂಧಕಾರವನ್ನೆಲ್ಲಾ ಹೋಗಲಾಡಿಸುತ್ತಾ ಪ್ರಕಾಶಿಸುತ್ತಿರುವುದು. ॥೫೫॥

ಪ್ರಾಣಿಗಳಲ್ಲಿ ಯಾರು, ಕಾಲಸ್ವರೂಪನಾದ ಯಮನಿಗೂ ಯಮಸ್ವರೂಪ ನಾಗಿರುವ ಮಹಾದೇವನ ಭಜನೆಯನ್ನು ಮಾಡಲು ಪ್ರಯತ್ನಿಸುವರೋ ಆ ಮಹಾ ಪುರುಷನನ್ನು ನಾನು ಭಕ್ತಿಯಿಂದ ನಮಸ್ಕರಿಸುವೆನು. ಅಲ್ಲದೆ ಯಾವನ ಪಾದ

ಲೋಕೇ ದುರ್ಲಭ ಏವ ಶಾಂಭವ ಇತಿ ಜ್ಞಾತ್ವಾತಿಪುಣ್ಯಾರ್ಜಿತೈ
ರ್ಲಬ್ಧಶ್ಚೇದ್ಭುವಿ ಶಾಂಭವಸ್ಸ್ವವಿಭವೈರಭ್ಯರ್ಚನೀಯೋ ಮುಹುಃ ।
ಮೋಹಾತ್ತದ್ಭಜನಂ ತ್ಯಜೇದ್ಯದಿ ತದಾ ಸ್ಯಾದ್ದುರ್ಭಗೋ ದುರ್ಭಗಾತ್
ತನ್ಮಾತಾ ಜನಕೋಽಪಿ ದುರ್ಭಗ ಇತಿ ಜ್ಞೇಯೋಽಪಿ ತಸ್ಯ ಧ್ರುವಂ ॥೫೭॥

ಶಂಭುಃ ಶಾಂಭವಜಿಹ್ವಯಾ ರಸಮಯಂ ಗೃಹ್ಣಾತಿ ನೈವೇದ್ಯಮಿ
ತ್ಯನ್ನಂ ಶಾಂಭವಪುಂಗವಾಯ ವಿವಿಧಂ ದೇಯಂ ತದಾರಾಧನಾತ್ ।
ಸ್ಯಾದಾರಾಧಿತ ಏವ ತೇನ ಸ ಮಹಾದೇವೋಽಪಿ ತುಷ್ಟಃ ಸದಾ
ತಂ ಪುಷ್ಣಾತಿ ಧನಾದಿಭಿರ್ವಿತನುತೇ ತಾಂ ಮುಕ್ತಿಕಾಂತಾಮಪಿ ॥೫೮॥

---

ಧೂಳಿಯ ಸಮೂಹದಿಂದ ತನ್ನ ಮನಸ್ಸಿನಲ್ಲಿ ಅತಿಯಾದ ಸಂತೋಷ ಹೊಂದುವನೋ, ಅಂತಹ ಅತಿಪುಣ್ಯಶಾಲಿಯಾದ ಮಾನವನ ಪಾದುಕೆಗಳನ್ನು ತನ್ನ ತಲೆಯಲ್ಲಿ ಹೊತ್ತುಕೊಂಡು ಅತ್ಯಂತ ಐಶ್ವರ್ಯಶಾಲಿಯೂ ಭಕ್ತಪರಾಧೀನನೂ ಆದ ಮಹೇಶ್ವರನೂ ಸಹ ನರ್ತನಮಾಡುವನು. ॥೫೬॥

ಈ ಲೋಕದಲ್ಲಿ ಶಂಭುಭಕ್ತನಾದ ಮಾನವನು ದೊರೆಯುವುದು ಅತಿ ದುರ್ಲಭ. ಹೀಗಿದ್ದರೂ ತನ್ನ ಪೂರ್ವಾರ್ಜಿತಪುಣ್ಯದಿಂದ ಅಂತಹ ಶಂಭುಭಕ್ತನು ದೊರೆತರೆ, ಅವನನ್ನು ತನ್ನ ಐಶ್ವರ್ಯಾನುಸಾರ ವಂಚನೆಯಿಲ್ಲದೇ ಬಾರಿಬಾರಿಗೂ ಪೂಜಿಸಬೇಕು. ಹೀಗೆ ಮಾಡದೇ ಒಂದುವೇಳೆ ಶಿವಪೂಜಾಧುರಂಧರರು ಒದಗಿದರೂ ಅಜ್ಞಾನವಶದಿಂದ ಅವರನ್ನು ಸೇವಿಸದೇ ಬಿಟ್ಟರೆ ಅವರು ದುರದೃಷ್ಟಶಾಲಿಯಾಗುವರಲ್ಲದೇ, ಅವರ ತಾಯಿತಂದೆಗಳೂ ಸಹ ನಿಶ್ಚಯವಾಗಿ ಅದೃಷ್ಟಹೀನರೆನಿಸುವರು. ಇದು ನಿಶ್ಚಯ. ॥೫೭॥

ಮಹೇಶ್ವರನು ತನ್ನ ಭಕ್ತರೆಂಬ ನಾಲಿಗೆಯಿಂದ ನಾವು ನೈವೇದ್ಯಮಾಡುವ ರಸಮಯವಾದ ನಾನಾಬಗೆಯ ಅನ್ನಗಳನ್ನು ಸ್ವೀಕರಿಸುತ್ತಾನೆಂದು ತಿಳಿದು, ಮಾನವರು ಶಿವಭಕ್ತಾಗ್ರೇಸರನನ್ನೇ ಭಕ್ತಿಯಿಂದ ಪೂಜಿಸಿ ಅವನಿಗೆ ವಿಧವಿಧವಾದ ಅನ್ನಗಳನ್ನೂ ಇತರ ಶಿವಪ್ರೀತಿಕರಗಳಾದ ಪದಾರ್ಥಗಳನ್ನೂ ಸಮರ್ಪಿಸಬೇಕು. ಈ ರೀತಿ ತನ್ನ ಭಕ್ತರ ಪೂಜೆಯಿಂದ ಮಹಾದೇವನು ಸಂತುಷ್ಟನಾಗಿ ತನ್ನ ಭಕ್ತರ ಆರಾಧಕರಿಗೇ ಧನಕನಕೈಶ್ವರ್ಯಗಳನ್ನು ಕೊಡುವನಲ್ಲದೇ ಕೊನೆಗೆ ಎಲ್ಲರಿಗೂ ಮುಕ್ತಿಯನ್ನೂ ಸಹ ಕರುಣಿಸುವನು. ॥೫೮॥

ಕಿಂ ತದ್ವೇದಶಿರೋವಿಚಾರನಿರತಃ ಸ್ವಾಂತೇನ ತೀರ್ಥೋದಕ
ಸ್ನಾನೇನಾಪಿ ತಪಸ್ಯಯಾ ಶಿವಪುರೀವಾಸೇನ ಯೋಗೈರಪಿ ।
ಯಾಗೈರ್ವಾ ನಿಯಮೇನ ಶಾಂಭವಪದಾಂಭೋಜಾರ್ಚನಂ ಚೇನ್ನ ತೈ
ರಾವೃತ್ತ್ಯೈರಪಿ ಕೋಟಿಶೋಽಪಿ ನ ಫಲಂ ಸ್ವರ್ಗಾಪವರ್ಗಪ್ರದಂ ॥೫೯॥

ಶಂಭುರ್ನೋ ಪ್ರಭುರಿತ್ಯವೈತಿ ಬಹುಭಿಃ ಪುಣ್ಯಾಬ್ಧಿಭಿರ್ಭೂತಲೇ ।
ಕಾಲೋನ್ಮೂಲಕಕಾಲಕಾಲಕಲನಾವ್ಯಾಸಕ್ತಶೀಲಃ ಖಲು ।
ತಂ ಕಾಲಪ್ರಲಯೇಽಪಿ ಪೂಜಯ ಮಹಾಮೃತ್ಯುಂಜಯಸ್ತಂ ಪ್ರಿಯಂ ।
ಬ್ರಹ್ಮಾನಂದಮಯಂ ವಿಧಾಯ ವಿವಿಧೋಪಾಯೈರ್ಮುದಾ ವರ್ಧತೇ ॥೬೦॥

---

ನಿಯಮದಿಂದ ಶಿವನ ಪಾದಕಮಲಸೇವೆಯನ್ನು ಮಾಡದೇ, ಕೇವಲ ವೇದಾಂತ ವಿಚಾರದಲ್ಲಿ ಮಗ್ನನಾಗಿದ್ದರೂ, ಪರಿಶುದ್ಧವಾದ ಅಂತಃಕರಣವುಳ್ಳವನಾಗಿ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿದರೂ, ಮತ್ತು ತಪಸ್ಸನ್ನಾಚರಿಸುತ್ತಾ ಶಿವಪುರಿಯೆನಿಸಿದ ಕಾಶಿಯಲ್ಲಿಯೇ ವಾಸಮಾಡುತ್ತಿದ್ದರೂ, ಸದಾ ಯೋಗಾಭ್ಯಾಸನಿರತನಾಗಿ, ಜ್ಯೋತಿಷ್ಟೋಮಾದಿಯಾಗಗಳನ್ನೇ ನಿಯಮದಿಂದ ಮಾಡಿದರೂ ಸಹ ವ್ಯರ್ಥವೇ ಆಗುವುದು. ಕೋಟಿ ಸಲ ಜನ್ಮಪಡೆದರೂ ಸಹ ಸ್ವರ್ಗ ಮತ್ತು ಮೋಕ್ಷ ಮುಂತಾದ ಫಲಗಳು ಎಂದಿಗೂ ಶಿವಪೂಜಾಪರಾಯಣರಾಗದ ಜನರಿಗೆ ದೊರೆಯಲಾರದೆಂದು ದೃಢವಾಗಿ ತಿಳಿಯಬೇಕು. ॥೫೯॥

ಕಾಲಸ್ವರೂಪನಾದ ಯಮನನ್ನೇ ನಿಗ್ರಹಿಸಿ ಕಾಲಕಾಲನೆನಿಸಿರುವ ಮಹಾದೇವನನ್ನೇ ಸದಾ ಧ್ಯಾನಮಾಡುವುದರಲ್ಲಿ ವ್ಯಗ್ರನಾಗಿರುವ ಮಾನವನು ಅನೇಕ ಜನ್ಮಗಳಿಂದ ಸಂಪಾದಿಸಿದ ಸುಕೃತವಿಶೇಷದಿಂದ ಶಂಕರನೇ ನಿಜವಾದ ಸ್ವಾಮಿಯು ಎಂದು ಭಾವಿಸುವನು. ಆದ್ದರಿಂದ ಕಾಲಪ್ರಲಯದಲ್ಲಿಯೂ ಸಹ ಆ ಮೃತ್ಯುಂಜಯನೆನಿಸಿದ ಆ ಮಹಾದೇವನನ್ನೇ ನಾನಾ ವಿಧವಾದ ಉಪಾಯಗಳಿಂದ ಪೂಜಿಸಬೇಕು. ಎಲೈ ಮಾನವನೇ, ಆ ಶಿವನೇ ಪ್ರೀತಿಕರನು, ಬ್ರಹ್ಮಾನಂದಸ್ವರೂಪನು. ಈ ಮಹೇಶ್ವರನ ಪೂಜೆಯಿಂದಲೇ ಸಕಲ ಸಂತೋಷವೂ ಅಭಿವೃದ್ಧಿ ಹೊಂದುವುದು ಎಂಬುದಾಗಿ ತಿಳಿ. ॥೬೦॥

ಭಾಗ್ಯಂ ತಸ್ಯ ತದಿತ್ಯವೈಮಿ ಬಹುಧಾ ಯೇನಾರ್ಜಿತಃ ಶಾಂಭವಃ ।
ಸಂತುಷ್ಟೋ ನಿಲಯಃ ಶಿವಸ್ಯ ನಿತರಾಮಂಬಾಸಮೇತಸ್ಯ ಸಃ ।
ತಸ್ಮಾದಪ್ಯಧಿಕೋ ನ ಕೋಽಪಿ ಭುವನೇಷ್ವಿತ್ಯಾದರಾದನ್ವಹಂ ।
ತಂ ದೃಷ್ಟ್ವಾ ಪ್ರಣಮಂತಿ ಪುಣ್ಯನಿವಹೈಃ ಸಿದ್ಧಾ ಮುನೀಂದ್ರಾ ಅಪಿ ॥೬೧॥

ಯೋಽಯಂ ಶಾಂಭವಪುಂಗವಃ ಸ ಮನುಜಃ ಸಿದ್ಧೋ ಮುನಿಃ ಕಿನ್ನರೋ ।
ಗಂಧರ್ವೋ ನ ಸುರೋಽಪಿ ಕಲ್ಪತರುರಪ್ಯಾಢ್ಯೋ ನ ಚಿಂತಾಮಣಿಃ ।
ಪೀಯೂಷಂ ಸುರಧೇನುರಂಬುನಿಧಿರಪ್ಯದ್ರೀಶ್ವರೋ ವಾ ಪರಂ ।
ತ್ವನ್ಯಃ ಕೋಽಪಿ ಮಹಾನುಭಾವ ಇತಿ ಮೇ ಭಾವೋಽಪಿ ಭಾವೋ ಭವಃ॥೬೨॥

ಕಿಂ ಚಾನ್ಯದ್ಯಮ ಭಾವಲಿಂಗನಿಲಯಂ ಮೃತ್ಯುಂಜಯಂ ಯೋಽರ್ಚಯೇತ್
ಪ್ರಸ್ತೌತಿ ಪ್ರಣಮತ್ಯಪಾರವಿಭವಂ ದೃಷ್ಟ್ವಾ ಪ್ರದೋಷೇ ಪ್ರಗೇ ।

---

ಶಂಭುಭಕ್ತನನ್ನು ನಾನಾ ಪ್ರಕಾರದಿಂದ ಪೂಜಿಸಿ ಸಂತೋಷಪಡಿಸುವುದೇ ಮಾನವನ ಭಾಗ್ಯ. ಈರೀತಿ ಸಂತೋಷಪಡಿಸುವ ಮಾನವನೇ ಅಂಬಿಕಾಸಮೇತನಾದ ಪರಶಿವನಿಗೆ ಪ್ರೀತಿಪಾತ್ರನಾಗಿರುವನು. ಈ ಶಿವಪೂಜಾನಿರತರಾದ ಮಾನವರಿಗಿಂತಲೂ ಶ್ರೇಷ್ಠನಾದವನು ಲೋಕದಲ್ಲಿ ಮತ್ತಾರೂ ಇಲ್ಲ. ಎಂದು ಆದರದಿಂದ, ಸಿದ್ಧಪುರುಷರೂ, ಮುನಿಪುಂಗವರೂ ಸಹ ತಮ್ಮ ಪುಣ್ಯಸಮೂಹಗಳಿಂದ ಆ ಶಿವಭಕ್ತರನ್ನು ನೋಡಿ ನಮಸ್ಕಾರಮಾಡುವರು. ॥೬೧॥

ಶಂಭು ಭಕ್ತಾಗ್ರೇಸರನಾದ ಮನುಜನಿಗೆ ಸಿದ್ಧರು, ಮುನಿಗಳು, ಕಿನ್ನರರು, ಗಂಧರ್ವರು, ದೇವತೆಗಳು, ಕಲ್ಪವೃಕ್ಷ, ಧನಿಕ, ಚಿಂತಾಮಣಿ, ಅಮೃತ, ಕಾಮಧೇನು, ಸಮುದ್ರ, ಪರ್ವತರಾಜನಾದ ಹಿಮವಂತ, ಇವರಲ್ಲಿ ಯಾರ ಸಾಮ್ಯವನ್ನೂ ಕೊಡುವುದಕ್ಕಾಗುವುದಿಲ್ಲ. ಏಕೆಂದರೆ ಇವರೆಲ್ಲರಲ್ಲಿ ಇರುವ ಗುಣಗಳೂ ಆ ಶಿವಪೂಜಕನೊಬ್ಬನಲ್ಲಿಯೇ ಅಡಕವಾಗಿರುವುದರಿಂದ, ಪ್ರತ್ಯೇಕವಾಗಿ ದೃಷ್ಟಾಂತ ಕೊಡಬೇಕೇ ಹೊರತು ಒಂದೊಂದರ ಸಾಮ್ಯವನ್ನು ಕೊಡುವಂತಿಲ್ಲ. ಆದುದರಿಂದ ಈ ಶಿವಪೂಜಕನು ಬೇರೇ ಒಬ್ಬ ಮಹಾನುಭಾವನೇ ಆಗಿರುವನೆಂದು ನಾನು ಭಾವಿಸಿರುವೆನು. ಈ ನನ್ನ ಮನೋಭಾವನೆಯೂ ಸಹ ಶಿವಾನುಗ್ರಹರೂಪವಾಗಿಯೇ ಆಗಿರುವುದು. ॥೬೨॥

ಓ ಯಮನೇ! ಇನ್ನೂ ಹೇಳುವೆನು ಕೇಳು. ಮಹೇಶ್ವರನ ಲಿಂಗವನ್ನು ಭಕ್ತಿಯಿಂದ ಪೂಜಿಸಿ, ಮೃತ್ಯುಂಜಯನೆನಿಸಿದ ಆ ಸ್ವಾಮಿಯನ್ನು ಆದರ ವಿಶ್ವಾಸ

ಹೃಷ್ಟಸ್ತನ್ನಿಲಯಂ ನ ಯಾಹಿ ನ ಭಟಾಃ ಸಂಪ್ರೇಷಣೀಯಾಸ್ತ್ವಯಾ ।
ತನ್ಮಾರ್ಗೇಽಪಿ ನ ಯಾಹಿ ತತ್ಕುಲಗೃಹತ್ಯಾಗಂ ಕುರುಷ್ವಾದರಾತ್ ॥೬೩॥

ಮೋಹಾದ್ವಾ ತವ ಭಾವಲಿಂಗಭಜನಾಸಕ್ತಾಲಯಾಧ್ವನ್ಯಪಿ ।
ವ್ಯಾಸಂಗಾದಪಿ ವಾ ಗಮಿರ್ಯದಿ ತದಾ ಶ್ರೀಕಾಲಕಾಲಃ ಸ್ವಯಂ ।
ಸಂಹಾರಂ ತವ ಕರ್ತುಮಿಚ್ಛತಿ ತತಸ್ತನ್ಮಂದಿರಾಧ್ವಾಧ್ವನಾಂ ।
ಸಂಗೋ ಮಾಸ್ತು ಯಮಸ್ತು ನಿಯಮಸ್ತೇ ಜೀವನೇಚ್ಛಾ ಯದಿ ॥೬೪॥

ಶ್ರೀಶೈಲಾತ್ಸಮುಪೇತ್ಯ ಶಾಂಭವವರಸ್ತದ್ಭಾವಲಿಂಗಾರ್ಚನಂ ।
ಕೃತ್ವಾ ತಸ್ಯ ಸ್ತುತಿಂ ಕರಿಷ್ಯತಿ ನುತಿಃ ಸಾ ತಾವದಭ್ಯಸ್ಯತಾಂ ।

---

ಗಳಿಂದ, ಯಾರು ಪೂಜೆಮಾಡುವರೋ, ಅಥವಾ ಪರಿಪೂರ್ಣವಾದ ಐಶ್ವರ್ಯವುಳ್ಳ ಆ ಮಹಾದೇವನನ್ನು ಯಾವನು, ಪ್ರದೋಷಕಾಲದಲ್ಲಿಯೂ ಮತ್ತೂ ಪ್ರಾತಃಕಾಲ ದಲ್ಲಿಯೂ, ಸ್ತೋತ್ರಮಾಡುತ್ತಾ ನಮಸ್ಕರಿಸುವನೋ, ಅಂತಹ ಪರಶಿವ ಭಕ್ತನನ್ನು ನೋಡಿ, ನೀನು ಸಂತೋಷಪಟ್ಟು, ಅವನ ಮನೆಗೆ ನೀನು ಹೋಗಬೇಡ. ಅಥವ ನಿನ್ನ ಭಟರನ್ನೂ ಅವರ ಮನೆಗೆ ಕಳುಹಿಸಬೇಡ. ಎಲೈ ಯಮನೇ ! ನೀನು ಅವರು ಇರುವ ಮಾರ್ಗದಲ್ಲಿ ಸಂಚರಿಸಲೂ ಕೂಡದು ; ಆ ಶಿವಭಕ್ತರ ಮನೆಯ ಗುಂಪನ್ನೇ ನೀನು ವಿಚಾರಿಸಕೂಡದು. ಅಲ್ಲದೇ ಆ ಪರಶಿವನ ಭಕ್ತರ ಕುಲವು ನಿನ್ನ ಶಿಕ್ಷೆಗೆ ಗುರಿಯಾಗಕೂಡದು. ॥೬೩॥

ಎಲೈ ಯಮನೇ! ನೀನು ಒಂದುವೇಳೆ ಅಜ್ಞಾನವಶದಿಂದ ನಿನ್ನನ್ನು ನಿಗ್ರಹಿಸಿದ ಆ ಮಹಾದೇವನ ಲಿಂಗದ ಭಜನೆಯು ನಡೆಯುತ್ತಿರುವ ಮಾರ್ಗದಲ್ಲಿ ಸಂಚರಿಸಿದರೂ, ಅಥವಾ ಅವಶ್ಯಕಾರ್ಯವಿದ್ದು ಆ ಮಾರ್ಗದಲ್ಲಿ ಹೋಗಲು ಪ್ರಯತ್ನಿಸಿದರೂ, ಕಾಲಕಾಲನೆನಿಸಿದ ಪರಮೇಶ್ವರನು ನಿನ್ನನ್ನು ಸಂಹಾರಮಾಡಲು ಉದ್ಯುಕ್ತನಾಗುವನು. ಎಲೈ ಯಮನೇ, ಆದುದರಿಂದ, ನೀನು ಬದುಕಬೇಕೆಂಬ ಅಪೇಕ್ಷೆಯಿದ್ದರೆ, ನಿನಗೆ ಆ ಮಾರ್ಗದ ಸಹವಾಸವೇ ಬೇಡವೆಂದು ನಿಶ್ಚಯಿಸು. ಇದು ನನ್ನ ಆಜ್ಞೆಯು. ॥೬೪॥

ಯಮಧರ್ಮನೇ, ಶಂಭುವಿನ ಭಕ್ತಾಗ್ರೇಸರನು ಶ್ರೀಶೈಲಯಾತ್ರೆಮಾಡಿ ಬಂದು, ಆ ಶ್ರೀಶೈಲನಿವಾಸಿಯಾದ ಆ ಮಹೇಶ್ವರನ ಭಾವ ಪೂರ್ಣವಾದ ಲಿಂಗ ವನ್ನೇ ಪೂಜಿಸುವನು. ಪೂಜೆಯಾದ ನಂತರ ಭಕ್ತನು ಆ ಮಹಾದೇವನನ್ನು

**ತಂ ತಾವನ್ಮುಹುರಾದರೇಣ ವಿನಯಾನ್ನತ್ವಾ ಕೃತಾರ್ಥೋ ಭವ ।**
**ತ್ವಾಮಾಪನ್ನಸಮೇತಿ ತೇನ ನ ಭಯಂ ತೇ ಕಾಲಕಾಲಾದಪಿ ॥೬೫॥**

**ಕಾಲಾದ್ಯಾವಧಿಕಾಲಕಾಲಕಲನಾಸಕ್ತಾನ್ವಿಭೂತಿಪ್ರಭಾ ।**
**ರುದ್ರಾಕ್ಷಾಭರಣಾನ್ ಭವಾರ್ಚನರತಾಂಛೈವೋತ್ತಮಾನಾದರಾತ್**
**ದೃಷ್ಟ್ವಾ ಹೃಷ್ಟಮನಾಃ ಪ್ರಣಮ್ಯ ಬಹುಧಾ ದೂರಾದರಾದಾದರಾ ।**
**ತ್ತೇಷಾಂ ಸುಂದರಮಂದಿರಾಣ್ಯಪಿ ಮುಹುರ್ನತ್ವಾ ಯಥೇಚ್ಛಂ ವಸ ॥೬೬॥**

**ಹೇ ವಿಶ್ವೇಶ್ವರ ಹೇ ಮಹೇಶ್ವರ ಮಹಾದೇವೇತಿ ನಾಮಾಮೃತಂ**
**ಪೀತ್ವಾ ಪೀನತನುಸ್ತನೋತಿ ಮುಹುರಪ್ಯಾವರ್ತನಂ ತಸ್ಯ ಯಃ ।**
**ಕರ್ತುಂ ವಾಂಛಸಿ ತತ್ಪದಾಂಬುಜರಜಃ ಪುಂಜೇನ ಸಂಜೀವನೀ**
**ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೬೭॥**

---

ಸ್ತೋತ್ರಮಾಡುವನು. ಎಲೈ ಯಮನೇ! ನೀನೂ ಅಂತಹ ಭಕ್ತನನ್ನು ನಮಸ್ಕರಿಸುವುದನ್ನು ಅಭ್ಯಾಸಮಾಡು? ಆ ಭಕ್ತಾಗ್ರೇಸರನನ್ನೇ ಪದೇಪದೇ ಆದರದಿಂದಲೂ ವಿನಯದಿಂದಲೂ ನಮಸ್ಕರಿಸಿ ಕೃತಾರ್ಥನಾಗು. ಇದರಿಂದ ನಿನಗೆ ಯಾವ ಭಯವೂ ಬರುವುದಿಲ್ಲ. ಕಾಲಕಾಲನೆನಿಸಿದ ಪರಮೇಶ್ವರನ ಭೀತಿಯೂ ನಿನಗೆ ಉಂಟಾಗಲಾರದು. ॥೬೫॥

ಎಲೈ ಯಮನೇ! ನೀನು ಯಾವಾಗಲೂ ಕಾಲಕಾಲನೆನಿಸಿದ ಮಹಾದೇವನಲ್ಲೇ ಆಸಕ್ತರಾಗಿ, ಹಣೆಯಲ್ಲಿ ಹೊಳೆಯುತ್ತಿರುವ ವಿಭೂತಿ ಪ್ರಭೆಗಳನ್ನೂ, ರುದ್ರಾಕ್ಷಾಭರಣವನ್ನೂ ಧರಿಸಿ ಸದಾ ಶಿವಪೂಜಾಪರಾಯಣರಾಗಿರುವ ಶೈವೋತ್ತಮರನ್ನು, ಆದರದಿಂದ ನೋಡುವವನಾಗು? ದೂರದಿಂದಲೇ ಆ ಶಿವಭಕ್ತರನ್ನು ಕಂಡಕೂಡಲೇ ಆದರದಿಂದ, ಸಂತೋಷಪೂರ್ವಕವಾಗಿ ಗೌರವಿಸುತ್ತಾ ನಮಸ್ಕಾರ ಮಾಡಬೇಕು. ಅಲ್ಲದೇ ಆ ಶಿವ ಪೂಜಾಪರಾಯಣರಾದ ಮಾನವರ ಸುಂದರವಾದ ಮನೆಗಳಿಗೆ ಸಹ ಪದೇಪದೇ ನಮಸ್ಕರಿಸುತ್ತಾ, ನಿನ್ನ ಇಚ್ಛೆಬಂದಂತೆ ಅವುಗಳಲ್ಲಿ ವಾಸಮಾಡು. ಆದರೆ ಮಾತ್ರ ಆ ಶಿವಭಕ್ತರಿಗೆ ಯಾವ ತೊಂದರೆಯನ್ನೂ ಕೊಡಲು ಪ್ರಯತ್ನಿಸಬೇಡ. ॥೬೬॥

ಹೇ ವಿಶ್ವೇಶ್ವರನೇ, ಮಹಾದೇವನೇ, ಮಹೇಶ್ವರನೇ! ಎಂಬ ಮಹೇಶ್ವರನ ನಾಮಾಮೃತವನ್ನು ಪದೇ ಪದೇ ಉಚ್ಚರಿಸಿ ಪಾನಮಾಡುತ್ತಾ, ಅದರಿಂದಲೇ

ಹೇ ಕೈಲಾಸನಿವಾಸ ಹೇ ಪಶುಪತೇ ಪಾಹೀತಿ ನಾಮಾಮೃತಂ
ಪೀತ್ವಾ ಪೀನತನುಸ್ತನೋತಿ ಮುಹುರಪ್ಯಾವರ್ತನಂ ತಸ್ಯ ಯಃ ।
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೬೮॥

ಹೇ ಗೌರೀಕುಚಕುಂಭಿಕುಂಭವಿಲಸತ್ಕಾಶ್ಮೀರಧಾರಾರಸ
ಶ್ರೀಪುಂಜಾರ್ಚಿತಪಾದಪದ್ಮಭಗವನ್ಪಾಹೀತಿ ಯೋ ನರ್ತನಂ ।
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೬೯॥

---

ಸಂತೋಷಗೊಳ್ಳುವ ಮನಸ್ಸುಳ್ಳವರಾಗಿ, ಆ ನಾಮುಗಳನ್ನೇ ಪುನಃ ಪುನಃ ಆವೃತ್ತಿ ಮಾಡಲು ಅಪೇಕ್ಷಿಸುವ ಮಾನವರ ಪಾದಕಮಲ ಧೂಳಿಯು, ಸಂಜೀವನಕ್ಕೆ ಸಮಾನವಾದುದು. ಈ ಸಂಜೀವಿನೀ ಸದೃಶವಾದ ಶಿವಪೂಜಾಧುರಂಧರನ ಪಾದ ಧೂಳಿಯನ್ನು ತಲೆಯಲ್ಲಿ ಅಲಂಕರಿಸಿಕೊಳ್ಳುವ ಮಾನವನಿಗೆ ಇಹಲೋಕದಲ್ಲಿ ಭಯವುಂಟಾಗದಿರುವುದಲ್ಲದೇ, ಮೃತ್ಯುಭಯವೂ ದೊರೆಯಲಾರದು. ||೬೭||

ಎಲೈ ಕೈಲಾಸವಾಸಿಯಾದ ಸ್ವಾಮಿಯೇ, ಓ ಪಶುಪತಿಯೇ, ನಮ್ಮನ್ನು ಕಾಪಾಡು, ಎಂಬ ಶಿವನಾಮಾಮೃತವನ್ನು ಪಾನಮಾಡಿ, ಅದರಿಂದ ಉಬ್ಬಿದ ಶರೀರವುಳ್ಳವನಾಗಿ, ಪದೇ ಪದೇ ಆ ಶಿವನಾಮುವನ್ನೇ ಪಾರಾಯಣಮಾಡಲು ಅಪೇಕ್ಷೆಪಡುವ ಶಿವಪೂಜಾನಿರತನಾದ ಮಾನವನ ಪಾದಧೂಳಿಯ ಸಮೂಹವು ಸಂಜೀವಿನೀ ಲತೆಗೆ ಸಮಾನವಾದುದು. ಈ ಪಾದಧೂಳಿಯನ್ನು ತನ್ನ ಶಿರಸ್ಸಿನಲ್ಲಿ ಧರಿಸುವ ಮಾನವನಿಗೆ ಇಹಲೋಕದ ಭಯವಲ್ಲದೇ ಮೃತ್ಯುವಿನ ಭೀತಿಯೂ ಸಹ ಎಂದೂ ಉಂಟಾಗದು. ||೬೮||

ಆನೆಯ ಕುಂಭಸ್ಥಳಕ್ಕೆ ಸಮಾನವಾದ ಗಿರಿಜಾದೇವಿಯ ಕುಚಗಳಲ್ಲಿ ಶೋಭಿಸುತ್ತಿರುವ ಕುಂಕುಮಚಂದನರಸಗಳ ಧಾರೆಗಳಿಂದ ವ್ಯಾಪ್ತವಾಗಿರುವ ಹೃದಯಪ್ರದೇಶವುಳ್ಳ ಎಲೈ ಸ್ವಾಮಿಯೇ, ಕಮಲಸಮೂಹಗಳಿಂದ ಪೂಜಿಸಲ್ಪಡುತ್ತಿರುವ ಪಾದಕಮಲಗಳುಳ್ಳ ಎಲೈ ಭಗವಂತನೇ, ನಮ್ಮನ್ನು ರಕ್ಷಿಸು ಎಂದು ಕುಣಿಯುತ್ತಾ ಪರಮೇಶ್ವರನನ್ನು ಯಾರು ಧ್ಯಾನಮಾಡಲು ಅಪೇಕ್ಷಿಸುವರೋ ಅಂತಹ ಶಿವಭಕ್ತಾಗ್ರೇಸರರ ಪಾದಕಮಲಗಳ ಧೂಳಿನ ಸಮೂಹವು ಸಂಜೀವಿನೀ

**ಹೇ ಗೌರೀರಮಣಾರುಣಾಚಲಪತೇ ಹೇಶಂಕರಾರಾಧನ**
**ನ್ಯಾಸಕ್ತಾಮರಭೂರುಹೋತ್ತಮತಮಸ್ವಾಮಿನ್ನಿತೀಶಾರ್ಚನಂ ।**
**ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ**
**ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೭೦॥**

**ಹೇ ಶ್ರೀಶೈಲಪತೇ ಮುಹುಃ ಪಶುಪತೇ ಹೇ ಶೈಲಕನ್ಯಾಪತೇ**
**ಹೇ ಕಾಮಾಂತಕ ಹೇ ಪುರಾಂತಕ ಇತಿ ಸ್ಮೃತ್ವೈವ ಯೋ ನರ್ತನಂ ।**
**ಕರ್ತುಂ ವಾಂಛಸಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ**
**ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೭೧॥**

---

ಬಳ್ಳಿಗೆ ಸಮಾನವಾದುದು. ಈ ಪಾದಧೂಳಿಯನ್ನು ತನ್ನ ತಲೆಯಲ್ಲಿ ಧರಿಸುವ ಮಾನವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಯಾವ ತೊಂದರೆಯನ್ನೂ ಪಡೆಯದೇ, ಕೊನೆಗೆ ಮೃತ್ಯುಭಯವನ್ನೂ ಕಾಣದೇ ಸುಖವಾಗಿರುವನು. ॥೬೯॥

ಎಲೈ ಗೌರೀರಮಣನೇ, ಅರುಣಾಚಲಪತಿಯೇ, ಶಂಕರನೆನಿಸಿದ ನಿನ್ನ ಪೂಜೆಯಲ್ಲಿ ಆಸಕ್ತರಾಗಿರುವ ದೇವತೆಗಳಿಗೆ ಕಲ್ಪವೃಕ್ಷದಂತಿರುವ ಸ್ವಾಮಿಯೇ, ಓ ಉತ್ತಮೋತ್ತಮನೆನಿಸಿದ ಪ್ರಭುವೇ, ನಮ್ಮನ್ನು ಕಾಪಾಡು ಎಂದು ಶಿವನಾಮಗಳನ್ನು ಉಚ್ಚಾರಣೆಮಾಡುತ್ತಾ ಈಶ್ವರನ ಪೂಜೆಮಾಡಲು ಅಪೇಕ್ಷಿಸುವ ಪರಮೇಶಭಕ್ತರ ಪಾದಧೂಳಿಯ ಸಮೂಹವು ಸಂಜೀವಿನೀಲತೆಗೆ ಸಮಾನವಾದುದು. ಈ ಪಾದಧೂಳಿಯನ್ನು ತನ್ನ ತಲೆಯಲ್ಲಿ ಅಲಂಕರಿಸಿಕೊಂಡು ಶಿವಧ್ಯಾನಮಾಡುವ ಮಾನವನು ಈ ಲೋಕದಲ್ಲಿ ಯಾವ ರೀತಿಯಾದ ಭಯವನ್ನೂ ತೊಂದರೆಯನ್ನೂ ಹೊಂದದೇ, ಪರಲೋಕದಲ್ಲಿಯೂ ಸಹ ಮೃತ್ಯುಭಯವಿಲ್ಲದೆ ನಿರ್ಭೀತನಾಗಿ ಸುಖವನ್ನೈದುವನು. ॥೭೦॥

ಹೇ ಶ್ರೀಶೈಲಾಧೀಶನೇ, ಪಶುಪತಿಯೇ, ಗಿರಿಜಾರಮಣನೇ, ಮನ್ಮಥಧ್ವಂಸಕನೇ, ಓ ತ್ರಿಪುರಾಸುರನಾಶಕನೇ, ಎಂದು ಪದೇ ಪದೇ ಪರಶಿವನ ನಾಮಸ್ಮರಣೆಮಾಡುತ್ತಾ ಸಂತೋಷದಿಂದ ನರ್ತನಮಾಡಲು ಅಪೇಕ್ಷಿಸುವ ಮಾನವನ ಪಾದಧೂಳಿಯ ಸಮೂಹವು ಸಂಜೀವಿನೀಲತೆಗೆ ಸಮಾನವಾದುದು. ಈ ಶಿವಭಕ್ತನ ಪಾದಧೂಳಿಯನ್ನು ಭಕ್ತಿಯಿಂದ ತಲೆಯಲ್ಲಿ ಧರಿಸಿ ಶಿವನ ದಿವ್ಯನಾಮಗಳನ್ನು

ಹೇ ಕಾಶೀಪುರನಾಯಕಾಶ್ರಿತ ಶಿವಾಚಾರವ್ರತಪ್ರಾಪಕ
ವ್ಯಾಪಾರಪ್ರಿಯಪಾಲಕಾವ ಭಗವನ್ನಿತ್ಯೇವ ಯೋ ನರ್ತನಂ ।
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋವಿಭೂಷಿತಮಿತೋ ಭೀತಿ ರ್ನ ಮೃತ್ಯೋರಪಿ ॥೭೨॥

ಶ್ರೀಮನ್ಮೇರುಶರಾಸನೋರುಶಿಖರಸ್ಫಾರಪ್ರಭಾಮಂಡಲ
ವ್ಯಾಸಕ್ತಾಮಲಗಂಡಮಂಡಲತಲ ತ್ರಾಹೀತಿ ಯೋ ನರ್ತನಂ ।
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋವಿಭೂಷಿತಮಿತೋ ಭೀತಿ ರ್ನ ಮೃತ್ಯೋರಪಿ ॥೭೩॥

---

ಸದಾ ಜಪಮಾಡುವ ಭಕ್ತರಿಗೆ ಯಾವ ಭೀತಿಯೂ ಇಲ್ಲದೇ ಕೊನೆಗೆ ಮೃತ್ಯುವಿನ ಭಯವೂ ಉಂಟಾಗಲಾರದು. ॥೭೧॥

ಎಲೈ ಕಾಶೀಪಟ್ಟಣದಧಿಪತಿಯೇ! ಆಶ್ರಿತರಾದ ತನ್ನ ಭಕ್ತರಿಗೆ ಶಿವಸೇವಾ ವ್ರತವನ್ನು ಉಪದೇಶಮಾಡುವ ವ್ಯಾಪಾರದಲ್ಲಿ ಪ್ರೀತಿಯುಳ್ಳವನೇ! ಜಗತ್ಪಾಲಕನೇ! ಭಗರ್ವ! ನಮ್ಮನ್ನು ರಕ್ಷಿಸು. ಎಂಬುದಾಗಿ ಶಿವನಾಮಸ್ಮರಣೆ ಮಾಡುತ್ತಾ ನರ್ತನಮಾಡಲು ಅಪೇಕ್ಷಿಸುವ ಶಿವಭಕ್ತರ ಪಾದಧೂಳಿಯ ಸಮೂಹವು ಸಂಜೀವನೀ ಬಳ್ಳಿಗೆ ಸಮಾನವಾದುದು. ಈ ಪಾದಧೂಳಿಯನ್ನು ತಲೆಯಲ್ಲಿ ಧರಿಸಿ ನಡೆಯುವ ಶಿವಭಕ್ತರಿಗೆ ಇಹಲೋಕದ ಭೀತಿಯೂ ಇಲ್ಲ. ಕೊನೆಗೆ ಮೃತ್ಯುಭಯವೂ ಕಾಣುವುದಿಲ್ಲ. ॥೭೨॥

ಮೇರುಪರ್ವತವನ್ನೇ ದೊಡ್ಡಬಿಲ್ಲನ್ನಾಗಿ ಮಾಡಿಕೊಂಡು, ತ್ರಿಪುರಾಸುರ ಧ್ವಂಸಕಾಲದಲ್ಲಿ ಆ ಧನುಸ್ಸಿನ ಅಗ್ರಭಾಗಗಳಲ್ಲಿ ಹೊಳೆಯುತ್ತಿರುವ ಕಾಂತಿ ಮಂಡಲಗಳಿಂದ ಶೋಭಿಸುತ್ತಿರುವ ಪರಿಶುದ್ಧವಾದ ಗಂಡಮಂಡಲವುಳ್ಳ ಸ್ವಾಮಿಯೇ! ರಕ್ಷಿಸು; ಎಂದು ನರ್ತನಮಾಡಲು ಅಪೇಕ್ಷಿಸುವ ಶಿವಭಕ್ತನ ಪಾದಕಮಲ ಧೂಳಿಯ ಸಮೂಹವು ಸಂಜೀವಿನೀ ಬಳ್ಳಿಗೆ ಸಮಾನವಾದುದು. ಈ ಪಾದಧೂಳಿಯನ್ನು ತಲೆಯಲ್ಲಿ ಹೊತ್ತು ಮೆರೆಯುವ ಶಿವಭಕ್ತನಿಗೆ ಇಹಲೋಕಬಾಧೆಯೂ ಮೃತ್ಯುವಿನ ಭಯವೂ ಸಹ ಉಂಟಾಗಲಾರದು. ॥೭೩॥

ಹೇ ಮೃತ್ಯುಂಜಯ ಹೇ ಸದಾಶಿವ ಶಿವಾವಾಮಾಂಗಸಂಗಪ್ರಭೋ
ಹೇ ಶಂಭೋ ವೃಷಭಧ್ವಜಾತಿದಯಯಾ ಪಾಹೀತಿ ಯೋ ನರ್ತನಂ।
ಕರ್ತುಂ ವಾಂಛತಿ ತತ್ಪದಾಂಬುಜರಜಃ ಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿ ರ್ನ ಮೃತ್ಯೋರಪಿ ॥೨೪॥

ಹೇ ವಿಶ್ವಾಧಿಕ ಫಾಲಲೋಚನ ಚಿರಾಸಾರೋರುಸಂಸಾರಜಾ
ವಾರಕ್ಲೇಶನಿಶಾವಿನಾಶ ದಯಯಾ ಪಾಹೀತಿ ಯೋ ನರ್ತನಂ ।
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೨೫॥

---

ಎಲೈ ಮೃತ್ಯುಂಜಯನೇ, ಸದಾಶಿವನೇ (ಯಾವಾಗಲೂ ಮಂಗಳಸ್ವರೂಪನಾದ ದೇವನೇ!) ಶಿವೆಯನ್ನು ತನ್ನ ಎಡಭಾಗದಲ್ಲಿ ಧರಿಸಿರುವ ಅರ್ಧನಾರೀಶ್ವರ ಸ್ವಾಮಿಯೇ! ಶಂಭೋ! ವೃಷಭವನ್ನೇ ಧ್ವಜವಾಗಿ ಮಾಡಿಕೊಂಡಿರುವ ಸ್ವಾಮಿಯೇ! ದಯಾಳುವಾದ ನೀನು ನಮ್ಮನ್ನು ರಕ್ಷಿಸು; ಎಂದು ನರ್ತನ ಮಾಡಲು ಅಪೇಕ್ಷೆಪಡುವ ಶಿವಭಕ್ತನ ಪಾದಧೂಳಿಯ ಸಮೂಹವು ಸಂಜೀವನೀ ಲತೆಗೆ ಸಮಾನವಾದುದು. ಈ ಪಾದಧೂಳಿಯನ್ನು ತನ್ನ ತಲೆಯಲ್ಲಿ ಧರಿಸಿ ಮೆರೆಯುವ ಮಾನವರು ಈ ಲೋಕದಲ್ಲಿ ಯಾವ ತಾಪತ್ರಯವನ್ನೂ ಪಡೆಯದೇ ಕೊನೆಗೆ ಮೃತ್ಯುಭೀತಿಯನ್ನೂ ಹೊಂದಲಾರರು. ॥೨೪॥

ಪ್ರಪಂಚದಲ್ಲೆಲ್ಲಾ ಶ್ರೇಷ್ಠನೆನಿಸಿದ ಸ್ವಾಮಿಯೇ! ನೀನು ಹಣೆಯಲ್ಲಿ ಕಣ್ಣುಳ್ಳವನು. ಬಹಳ ಕಾಲದಿಂದಲೂ, ನಿಸ್ಸಾರವಾದ ಈ ಸಂಸಾರ ಸಂಬಂಧವಾದ ಕ್ಲೇಶಗಳೆಂಬ ರಾತ್ರಿಗಳನ್ನು ನಾಶಮಾಡಿ ಉದ್ಧಾರಮಾಡುವ ದೇವನೇ! ದಯವಿಟ್ಟು ನಮ್ಮನ್ನು ರಕ್ಷಿಸು ಎಂದು ಕುಣಿಯುತ್ತಾ ಧ್ಯಾನಮಾಡುವ ಶಿವಭಕ್ತನ, ಸಂಜೀವಿನೀ ಬಳ್ಳಿಗೆ ಸಮಾನವಾದ ಪಾದಧೂಳಿಯ ಸಮೂಹವನ್ನು ತಲೆಯಲ್ಲಿ ಧರಿಸುವ ಜನರಿಗೆ ಇಹಲೋಕಬಾಧೆಗಳೂ ಮತ್ತು ಮೃತ್ಯುವಿನ ಭೀತಿಯೂ ಸಹ ಉಂಟಾಗಲಾರದು. ॥೨೫॥

ಶಂಭೋ ಮೇ ಜನನೀ ತ್ವಮೇವ ಜನಕೋ ಭ್ರಾತಾ ಸಖಾ ಮಿತ್ರಮಿ
ತ್ಯಾಲಸ್ಯೇನ ವದಂತ್ಯನುದಿನಂ ಭಕ್ತ್ಯಾಪಿ ಯೋ ನರ್ತನಂ ।
ಕರ್ತುಂ ವಾಂಛತಿ ತತ್ಪದಾಂಬುಜರಜಃ ಪುಂಜೇನ ಸಂಜೀವನೀ
ಕಲ್ಪೇನಾಸ್ತು ಶಿರೋವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೨೬॥

ಭೋ ಭರ್ಗ ತ್ರಿಪುರಾಂತಕ ತ್ರಿನಯನ ಶ್ರೀನೀಲಕಂಠಪ್ರಭೋ
ಶಂಭೋ ಮಾರಹರಾಸುರಪ್ರವರ ಮಾಂ ಪಾಹೀತಿ ಯೋ ನರ್ತನಂ ।
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೨೭॥

ತ್ವತ್ಪಾದಾಂಬುರುಹಾರ್ಚನೇನ ವಿಜಯೋ ಭಾಗ್ಯಾನಿ ಮೇ ಜೀವನಂ
ಜೀವಾತುಶ್ಚ ತದೇವ ಮೇ ಶಿವ ಶಿವ ತ್ರಾಹೀತಿ ಯೋ ನರ್ತನಂ ।

---

ಶಂಭುವೇ! ನೀನೇ ನನ್ನ ತಾಯಿಯು. ನನ್ನ ತಂದೆಯೂ ನೀನೇ ಆಗಿರುವೆ. ನನ್ನ ಅಣ್ಣಂದಿರು, ಸ್ನೇಹಿತರು, ಮತ್ತು ಮಿತ್ರರು, ಎಲ್ಲರೂ ನೀನೇ ಎಂದು, ಉದಾಸೀನದೃಷ್ಟಿಯಿಂದಲಾದರೂ ಪ್ರತಿದಿನವೂ ಭಕ್ತಿಯಿಂದ ಭಜನೆ ಮಾಡುತ್ತಾ, ನರ್ತನಮಾಡಲು ಅಪೇಕ್ಷಿಪಡುವ ಶಿವಭಕ್ತನ, ಸಂಜೀವಿನೀ ಬಳ್ಳಿಗೆ ಸಮಾನವಾದ ಪಾದಧೂಳಿಯ ಸಮೂಹವನ್ನು ತಲೆಯಲ್ಲಿ ಧರಿಸುವ ಜನರಿಗೆ, ಈ ಲೋಕಬಾಧೆಯೂ ಮತ್ತು ಮೃತ್ಯುವಿನ ಭಯವೂ ಎಂದಿಗೂ ಉಂಟಾಗಲಾರದು. ||೨೬||

ಎಲೈ ಭರ್ಗನೇ! ನೀನು ತ್ರಿಪುರಾಸುರ ನಾಶಕನು. ಮುಕ್ಕಣ್ಣನು. ಪ್ರಭೋ! ನೀಲಕಂಠ! ಶಂಭುವೇ! ಮನ್ಮಥನನ್ನು ದಹನಮಾಡಿದವನೆ! ಎಲೈ ದೇವತೋತ್ತಮನೆನಿಸಿದ ಸ್ವಾಮಿಯೇ! ನಮ್ಮನ್ನು ರಕ್ಷಿಸು, ಎಂದು ನರ್ತನಮಾಡಲು ಅಪೇಕ್ಷಿಸುವ ಶಿವಭಕ್ತನ ಸಂಜೀವಿನೀ ಲತೆಗೆ ಸಮಾನವಾದ ಪಾದಧೂಳಿಯ ಸಮೂಹವು ಯಾರ ತಲೆಯಲ್ಲಿ ಅಲಂಕರಿಸಲ್ಪಟ್ಟಿರುವುದೋ ಆ ಮಾನವನಿಗೆ ಈ ಲೋಕದಲ್ಲಿ ಯಾವ ತೊಂದರೆಯೂ ಉಂಟಾಗದೇ, ಕೊನೆಗೆ ಮೃತ್ಯುಭಯವೂ ಬರುವುದಿಲ್ಲ. ||೨೭||

ಮಹಾದೇವ! ನಿನ್ನ ಪಾದಕಮಲಪೂಜೆಯಿಂದ ನನಗೆ ವಿಜಯವೂ, ಸರ್ವಸೌಭಾಗ್ಯವೂ ಉಂಟಾಗುವುದು. ನನ್ನ ಜೀವನವೂ, ಜೀವನೌಷಧವೂ ಸಹ

ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವನೀ
ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೭೮॥

ಪ್ರಾಣಿಪ್ರಾಣನಕಾರಣ ಪ್ರವಣ ಮಾಂ ಪ್ರಾಣಪ್ರಯಾಣಕ್ಷಣೇ
ಪ್ರಕ್ಷೀಣಂ ಶಿವನಾಮಧೇಯಸುಧಯಾ ಪಾಹೀತಿ ಯೋ ನರ್ತನಂ ।
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೭೯॥

ಸ್ವಾಮಿನ್ನನ್ನಪತೇ ಧನಾಧಿಪಪತೇ ದುಃಖಾಬ್ಧಿಮಗ್ನಂ ಮುಹು
ರ್ಲಗ್ನಂ ಪಾಪಗಣೇನ ಭಗ್ನಮನಸಂ ಪಾಹೀತಿ ಯೋ ನರ್ತನಂ ।
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೮೦॥

---

ನೀನೇ. ಶಿವಶಿವ! ನಮ್ಮನ್ನು ರಕ್ಷಿಸು ಎಂದು ಭಜನೆ ಮಾಡುತ್ತಾ ಯಾರು ನೃತ್ಯವಾಡಲು ಅಪೇಕ್ಷಿಸುವರೋ ಆ ಶಿವಪಾದಾಬ್ಜಸೇವಾನಿರತರಾದವರ ಪಾದ ಧೂಳಿಯ ಸಮೂಹವು ಸಂಜೀವನೀ ಲತೆಗೆ ಸಮಾನವಾದುದು. ಈ ಪಾದಧೂಳಿ ಯನ್ನು ತಲೆಯಲ್ಲಿ ಧರಿಸುವ ಮಾನವರಿಗೆ ಇಹಲೋಕದಲ್ಲಿ ಯಾವ ತಾಪತ್ರಯವೂ ಇಲ್ಲದೇ ಕೊನೆಗೆ ಮೃತ್ಯುಭಯವೂ ಉಂಟಾಗಲಾರದು. ||೭೮||

ಪ್ರಾಣಿಗಳ ಪ್ರಾಣವನ್ನು ಕಾಪಾಡುವುದರಲ್ಲಿ ನಿಪುಣನಾದ ಶಂಭುವೇ, ಪ್ರಾಣಹೋಗುವ ಸಮಯದಲ್ಲಿ ಮಾತನಾಡಲು ಶಕ್ತಿಯಿಲ್ಲದೇ ದುರ್ಬಲನಾಗುವ ನನಗೆ ಆಗ ಶಿವನಾಮಸ್ಮರಣೆಯೆಂಬ ಅಮೃತವಿತ್ತು ಕಾಪಾಡು, ಎಂದು ಭಜನೆ ಮಾಡುತ್ತಾ ನರ್ತನಮಾಡಲು ಅಪೇಕ್ಷಿಸುವ ಶಿವಭಕ್ತನ ಪಾದಧೂಳಿಯ ಸಮೂ ಹವು ಸಂಜೀವಿನೀ ಬಳ್ಳಿಗೆ ಸಮಾನವಾದುದು. ಈ ಪಾದಧೂಳಿಯನ್ನು ತಲೆಯಲ್ಲಿ ಧರಿಸುವ ಜನರಿಗೆ ಇಹಲೋಕದ ಭಯವಲ್ಲದೇ ಮೃತ್ಯುಬಾಧೆಯೂ ಉಂಟಾಗ ಲಾರದು. ||೭೯||

ಸ್ವಾಮಿಯೇ! ನೀನು ಸರ್ವ ಪ್ರಾಣಿಗಳ ಜೀವಿಕೆಗೂ ಮೂಲಕಾರಣವಾದ ಅನ್ನಕ್ಕೇ ಸ್ವಾಮಿಯಾಗಿರುವೆ. ಧನಾಧಿಪತಿಯೆನಿಸಿದ ಕುಬೇರನಿಗೂ ನೀನೇ ಒಡೆಯನು. ದೇವಾ, ನಾನು ದುಃಖವೆಂಬ ಸಮುದ್ರದಲ್ಲಿ ಮುಳುಗಿರುವೆನು. ಮತ್ತು ಪಾಪಸಮೂಹದಿಂದ ಪದೇ ಪದೇ ನನ್ನ ಶರೀರವು ವ್ಯಾಪ್ತವಾಗಿ ಮನಸ್ಸೆ

ಮಾನೇಕಂ ಶರಣಾಗತಂ ಶರಣದಾನಂದಪ್ರದಾನೋದ್ಯತ
ಸ್ವಾಧೀನಂ ಕುರು ಲಿಂಗಪೂಜನರತಂ ಪಾಹೀತಿ ಯೋ ನರ್ತನಂ ।
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೮೧॥

ರುದ್ರಾಕ್ಷಾಮಿತಭಸ್ಮಭೂಷಿತತನುರ್ವಿಶ್ವೇಶ್ವರಾರಾಧನಂ
ಕೃತ್ವಾ ಶಂಕರ ಚಂದ್ರಶೇಖರ ಮಹಾದೇವೇತಿ ಯೋ ನರ್ತನಂ ।
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೮೨॥

---

ಲ್ಲವೂ ಅಲ್ಲೋಲಕಲ್ಲೋಲವಾಗಿರುವುದು. ದೇವ! ನನ್ನನ್ನು ಕಾಪಾಡು; ಎಂದು ಭಜನೆ ಮಾಡುತ್ತಾ ನರ್ತನಮಾಡುವ ಶಿವಭಕ್ತಾಗ್ರೇಸರರ ಪಾದಧೂಳಿಗಳು ಸಂಜೀವಿನೀಲತೆಗೆ ಸಮಾನವಾದವು. ಈ ಪಾದಧೂಳಿಯನ್ನು ತಲೆಯಲ್ಲಿ ಧರಿಸುವ ಮಾನವರು ಇಹಲೋಕದಲ್ಲಿ ಯಾವ ತೊಂದರೆಗಳನ್ನೂ ಹೊಂದದೆ ಕೊನೆಗೆ ಮೃತ್ಯುಭಯವನ್ನೂ ಪಡೆಯಲಾರರು. ||೮೦||

ಶರಣಾಗತರಾದವರಿಗೆ ರಕ್ಷಣೆಯಿತ್ತು ಆನಂದವನ್ನುಂಟುಮಾಡುವುದರಲ್ಲಿ ತತ್ಪರನಾಗಿರುವ ದೇವನೇ! ಸದಾ ಲಿಂಗಪೂಜೆಯಲ್ಲಿಯೇ ನಿರತನಾಗಿ ಈಗ ನಿನ್ನ ಮರೆಹೊಕ್ಕಿರುವ ನನ್ನೊಬ್ಬನನ್ನು ರಕ್ಷಿಸಿ ನಿನ್ನ ಅಧೀನಮಾಡಿಕೋ ದೇವ! ಎಂದು ಭಜನೆಮಾಡುತ್ತಾ ನರ್ತನಮಾಡಲು ಅಪೇಕ್ಷಿಸುವ ಭಕ್ತನ ಸಂಜೀವಿನೀ ಲತೆಗೆ ಸಮಾನವಾದ ಪಾದಧೂಳಿಯ ಸಮೂಹವನ್ನು ತನ್ನ ಶಿರಸ್ಸಿನಲ್ಲಿ ಧರಿಸಿಕೊಳ್ಳುವ ಮಾನವರಿಗೆ ಈ ಲೋಕದಲ್ಲಿ ಯಾವ ತೊಂದರೆಗಳೂ ಇಲ್ಲದೇ ಮೃತ್ಯುವಿನ ಭೀತಿಯೂ ಉಂಟಾಗಲಾರದು. ||೮೧||

ಕಾಶೀಪಟ್ಟಣದಲ್ಲಿ, ಶುಭ್ರವಾದ ಭಸ್ಮತ್ರಿಪುಂಡ್ರಗಳನ್ನೂ ಮತ್ತು ರುದ್ರಾಕ್ಷಮಾಲೆಯನ್ನೂ ಧರಿಸಿ, ಪದೇ ಪದೇ ವಿಶ್ವೇಶ್ವರಲಿಂಗಪೂಜೆ ಮಾಡುವುದರಲ್ಲಿ ತತ್ಪರನಾಗಿರುವ ನನ್ನನ್ನು ಕಾಪಾಡೆಂದು ನರ್ತನಮಾಡುತ್ತಾ ಭಜನೆ ಮಾಡುವ ಭಕ್ತಾಗ್ರೇಸರನ ಪಾದಧೂಳಿಯ ಸಮೂಹವು ಸಂಜೀವಿನೀ ಬಳ್ಳಿಗೆ ಸದೃಶವಾದುದು. ಈ ಪಾದಧೂಳಿಯನ್ನು ತಮ್ಮ ತಲೆಯಲ್ಲಿ ಧರಿಸುವ ಮಾನವರಿಗೆ ಇಹಲೋಕದ ಭಯವೂ ಮತ್ತು ಮೃತ್ಯುಭೀತಿಯೂ ಸಹ ಉಂಟಾಗಲಾರದು. ||೮೨||

**ಕೃತ್ವಾ ಸೋದರಬಿಲ್ವಕೋಮಲದಲೈರ್ವೀರೇಶ್ವರಾರಾಧನಂ**
**ಜಪ್ತ್ವಾ ಶಂಕರನಾಮ ಜೀವನಪರಿತ್ಯಾಗಾಯ ಯೋ ನರ್ತನಂ ।**
**ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವನೀ**
**ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೮೪॥**

**ಶಂಭೋರ್ಲಿಂಗಸಮರ್ಚನೋತ್ತರಮಯಂ ಘೋರಾಂತರಾಯೈರ್ವಿನಾ ।**
**ದೇಹೋ ಯಾತು ಲಯಂಮಮೇತಿ ಮನಸಾ ನಿಶ್ಚಿತ್ಯ ಯೋ ನರ್ತನಂ**
**ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ ।**
**ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿರ್ನ ಮೃತ್ಯೋರಪಿ ॥೮೫॥**

---

ರುದ್ರಾಕ್ಷಮಾಲೆಯನ್ನು ಕೊರಳಲ್ಲಿ ಧರಿಸಿ, ಅಪಾರವಾದ ಭಸ್ಮತ್ರಿಪುಂಡ್ರಗಳಿಂದ ಅಲಂಕೃತವಾದ ಶರೀರವುಳ್ಳವನಾಗಿ, ಓ ಶಂಕರ! ಚಂದ್ರಶೇಖರ! ಮಹಾದೇವ! ಎಂದು ಮಹಾದೇವನ ನಾಮಸ್ಮರಣೆಯನ್ನು ಮಾಡಿಕೊಂಡು ನರ್ತನ ಮಾಡಲು ಅಪೇಕ್ಷೆಪಡುವ ಭಕ್ತಾಗ್ರೇಸರನ ಪಾದಧೂಳಿಯು ಸಂಜೀವಿನೀಬಳ್ಳಿಗೆ ಸಮಾನವಾದುದು. ಈ ಪಾದಧೂಳಿಯನ್ನು ತಲೆಯಲ್ಲಿ ಧರಿಸುವ ಮಾನವರಿಗೆ ಈ ಲೋಕದ ಭಯವೂ ಮತ್ತು ಮೃತ್ಯುಭಯವೂ ಸಹ ಉಂಟಾಗಲಾರದು. ||೮೩||

ನೀರಿನಿಂದ ತೊಯ್ದ ಮೃದುವಾದ ಬಿಲ್ವದಳಗಳಿಂದ ವೀರೇಶ್ವರನ ಪೂಜೆಯನ್ನು ಮಾಡಿ, ಪವಿತ್ರವಾದ ಶಂಕರನ ನಾಮಗಳನ್ನು ಸ್ಮರಣೆಮಾಡುತ್ತಾ, ತನ್ನ ಐಹಿಕ ಜೀವನವನ್ನು ತೊರೆದು, ಶಾಶ್ವತವಾದ ಸೌಖ್ಯವನ್ನು ಪಡೆಯುವುದಕ್ಕೋಸ್ಕರ ನರ್ತನಮಾಡಿಕೊಂಡು ಶಿವನಾಮ ಭಜನೆ ಮಾಡಲು ಅಪೇಕ್ಷೆಪಡುವ ಶಿವಭಕ್ತಾಗ್ರೇಸರನ ಪಾದಧೂಳಿಯು, ಸಂಜೀವನೀ ಬಳ್ಳಿಗೆ ಸಮಾನವಾದುದು. ಈ ಪಾದಧೂಳಿಯನ್ನು ತನ್ನ ತಲೆಯಲ್ಲಿ ಧರಿಸಿ ಮೆರೆಯುವ ಮಾನವರಿಗೆ ಈ ಲೋಕದ ಭೀತಿಯಿಲ್ಲದಿರುವುದಲ್ಲದೇ ಮೃತ್ಯುವಿನ ಭಯವೂ ಇಲ್ಲ. ||೮೪||

ದೇವ! ಶಂಭುವಿನ ಲಿಂಗಾರ್ಚನೆಯಾದನಂತರ ಈ ಶರೀರವು ಘೋರವಾದ ವಿಘ್ನಗಳಿಗೆ ಗುರಿಯಾಗದೇ ನಾಶಹೊಂದಲಿ, ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ಅದೇ ರೀತಿ ಭಕ್ತಿಯಿಂದ ನರ್ತನಮಾಡಲು ಅಪೇಕ್ಷಿಸುವ ಮಹೇಶ್ವರಭಕ್ತನ ಪಾದಾಂಬುಜ ಧೂಳಿಯ ಸಮೂಹವು ಸಂಜೀವನೀ ಬಳ್ಳಿಗೆ ಸಮಾನವಾದುದು. ಈ ಪಾದಧೂಳಿ

ಭೋ ವೃಂದಾರಕವೃಂದವಂದಿತಲಸತ್ಪಾದಾರವಿಂದಾರ್ಚಕಂ ।
ದೀನಂ ಮಾಮವ ಶಂಕರಸ್ಮರಹರ ವ್ಯಾಹಾರಕೃನ್ನರ್ತನಂ
ಕರ್ತುಂ ವಾಂಛತಿ ತತ್ಪದಾಂಬುಜರಜಃಪುಂಜೇನ ಸಂಜೀವಿನೀ
ಕಲ್ಪೇನಾಸ್ತು ಶಿರೋ ವಿಭೂಷಿತಮಿತೋ ಭೀತಿ ರ್ನ ಮೃತ್ಯೋರಪಿ ॥೮೬॥

ಅಲಮುಲಮನುವೇಲಂ ಕಾಲಕಾಲಂ ಸಲೀಲಂ
ಕಲಯ ಕಲಯ ಕಾಲೇ ವ್ಯಾಲಮಾಲಂ ಸಶೂಲಂ ।
ಪರಿಹರ ಗುರುಭಾರಂ ಘೋರಸಂಸಾರಸಾರಾ
ದನುಸರಗಿರಿಕನ್ಯಾಸ್ಮೇರಧಾರಾನುರಾಗಂ ॥೮೭॥

---

ಯನ್ನು ತಲೆಯಲ್ಲಿ ಧರಿಸಿ ಮೆರೆಯುವ ಮಾನವರು ಈ ಲೋಕದಲ್ಲಿಯೂ ನಿರ್ಭಯ ರಾಗಿ ಕೊನೆಗೆ ಮೃತ್ಯುಭಯವನ್ನೂ ಹೊಂದಲಾರರು. ॥೮೫॥

ಹೇ ಶಂಕರ, ದೇವತೆಗಳ ಸಮೂಹವೆಲ್ಲವೂ ನಿನ್ನ ಪಾದಕಮಲಕ್ಕೆ ನಮಸ್ಕಾರಮಾಡುತ್ತಿರುವುದು. ಇಂತಹ ಪಾದಕಮಲಗಳಿಂದ ಶೋಭಿಸುತ್ತಿರುವ ಮನ್ಮಥಧ್ವಂಸಕನೇ, ನಿನ್ನ ಪಾದಕಮಲವನ್ನು ಪೂಜಿಸುವ ದೀನನಾದ ಈ ನನ್ನನ್ನು ರಕ್ಷಿಸು ಎಂದು ಸ್ತೋತ್ರಮಾಡುತ್ತಾ ನರ್ತನಮಾಡಲಪೇಕ್ಷಿಸುವ ಭಕ್ತನ ಪಾದಧೂಳಿಯ ಸಮೂಹವು ಸಂಜೀವನೀಲತೆಗೆ ಸದೃಶವಾದುದು. ಈ ಪಾದಧೂಳಿಯನ್ನು ತಲೆಯಲ್ಲಿ ಧರಿಸಿ ಮೆರೆಯುವ ಮಾನವರಿಗೆ ಈ ಲೋಕದಲ್ಲಿ ಯಾವ ತೊಂದರೆಗಳೂ ಆಗದೆ ಮುಂದೆ ಮೃತ್ಯುವಿನ ಭಯವೂ ಸಹ ಉಂಟಾಗುವುದಿಲ್ಲ. ॥೮೬॥

ಎಲೈ ಜೀವವೇ! ಯಾವಾಗಲೂ ಎಡಬಿಡದೆ, ಕಾಲಕಾಲನೂ, ಸರ್ಪ ಮಾಲೆಯುಳ್ಳವನೂ, ತ್ರಿಶೂಲಧಾರಿಯೂ ಆಗಿರುವ ಮಹಾದೇವನನ್ನು ನಿಶ್ಚಿಂತೆ ಯಿಂದ ಧ್ಯಾನಮಾಡು. ಎಲೈ ಮಾನವನೇ! ಈ ಮಹೇಶ್ವರನ ಧ್ಯಾನದಿಂದ ಈ ಭಯಂಕರವಾದ ಸಂಸಾರದ ಅತಿಶಯವಾದ ಭಾರವನ್ನು ಕಳೆದುಕೊಂಡು ಅನವರತವೂ ಗಿರಿಜಾದೇವಿಯ ಮಂದಹಾಸಯುಕ್ತವಾದ ಅನುರಾಗ ಧಾರೆಗಳಿಗೆ ಪಾತ್ರನಾಗಿರುವ ಮಹೇಶ್ವರನನ್ನು ಭಜನೆಮಾಡು. ಇತರ ಹವ್ಯಾಸಗಳನ್ನೆಲ್ಲಾ ತೊರೆದುಬಿಡು. ॥೮೭॥

ತ್ರಿಪುರಹರಪದಾಬ್ಜಾನುಂದನುಂದಾರಮಾಲಾ
ಲಲಿತಪರಿಮಲಶ್ರೀಸಂಶ್ರಯಾನಾಂ ಪ್ರಭಾವಃ ।
ಕಥಮಪಿ ಮಮ ಶಕ್ಯೋ ವಕ್ತುಮಿತ್ಯೇವ ಮನ್ಯೇ
ಗಿರಿಶಚರಣಸೇವಾಪುಣ್ಯಪೂರ್ಣಾರ್ಣವಾನಾಂ ॥೮೮॥

ಅನುದಿನಮನುಮೋದ್ಯೈರಿಂದುಖಂಡಾವತಂಸಂ
ಸಕೃದಪಿ ಸಕಲಾಶಾಪಾಶನಾಶಾವಕಾಶಂ ।
ನಿಟಿಲತಟತಟಿದ್ಭೂಭೂತಭೂತಾನುವೇಶಂ
ಗಿರಿಶಮನಿಶಮೀಶಂ ಸಂಸ್ಮರಾಮಃ ಸ್ಮರಾರಿಂ ॥೮೯॥

ಶಿವ ಹರ ಭವ ಶಂಭೋ ಭರ್ಗ ಭೀಮ ಸ್ಮರಾರೇ
ತ್ರಿಪುರಹರ ಯಮಾರೇ ಘೋರರೂಪಾಂಧಕಾರೇ ।
ಪರಿಹರ ದುರಿತಂ ಮೇ ಪಾಹಿ ಪಾಹೀತಿ ಧನ್ಯೋ
ಜಪತಿ ಮುಹುರಪಾರಾನಂದಸಂದೋಹಕಂದಂ ॥೯೦॥

---

ತ್ರಿಪುರಾಸುರಧ್ವಂಸಕನಾದ ಪರಮೇಶ್ವರನ ಪಾದಕಮಲಗಳಿಗೆ ಭಕ್ತಿಯಿಂದ ನಮಸ್ಕರಿಸಿ, ಸಮರ್ಪಣೆಮಾಡಿರುವ ಅಪಾರವಾದ ಮಂದಾರಪುಷ್ಪಮಾಲಿಕೆಯ ಪರಿಮಳ ಕಾಂತಿಯನ್ನು ಆಶ್ರಯಿಸಿ, ಸದಾ ಗಿರೀಶನ ಪಾದಸೇವೆಯಲ್ಲಿಯೇ ನಿರತರಾಗಿ ಅದರಿಂದ ಸಂಪಾದಿಸಿರುವ ಪುಣ್ಯವೆಂಬ ಸಮುದ್ರಗಳುಳ್ಳ ಶಿವಭಕ್ತರ ಮಹಿಮೆಯನ್ನು ಸಾಮಾನ್ಯವಾಗಿ ನಾನು ಹೇಳಲು ಸಮರ್ಥನೇ ಹೊರತು, ಆ ಪರಿಪೂರ್ಣಗುಣರಾಶಿಯಾದ ಮಹಾದೇವನನ್ನು ವರ್ಣಿಸಲು ನನ್ನಿಂದಸದಳ. ||೮೮||

ಎಲೈ ದೇವತೆಗಳಿರಾ! ಚಂದ್ರಚೂಡನೂ, ಸಕಲ ಆಶೆಗಳೆಂಬ ಪಾಶಗಳನ್ನೂ ನಾಶಪಡಿಸುವವನೂ, ಮಿಂಚಿನಂತೆ ಹೊಳೆಯುತ್ತಿರುವ ತನ್ನ ಹಣೆಯಲ್ಲಿ ಸಕಲ ಭೂತಗಳನ್ನೂ ಧರಿಸಿ, ಪೋಷಿಸುವವನೂ ಆದ ಗಿರಿಶನೆಂಬ ಸಂಜ್ಞೆಯುಳ್ಳ ಈಶ್ವರನನ್ನು ಪ್ರತಿದಿನವೂ ಸಂತೋಷದಿಂದ ಸ್ಮರಣೆಮಾಡೋಣ. ಓ ದೇವತೆಗಳಿರಾ, ಮನ್ಮಥಧ್ವಂಸಕನಾದ ಆ ಮಹಾದೇವನನ್ನು ಅನವರತವೂ ಭಜನೆ ಮಾಡಿರಿ. ||೮೯||

ಶಿವ, ಹರ, ಭವ, ಶಂಭೋ, ಭರ್ಗ, ಭೀಮ, ಸ್ಮರಾರೇ, ಮನ್ಮಥಧ್ವಂಸಕ ತ್ರಿಪುರಾಸುರನಾಶಕ! ಯಮಶತ್ರುವೇ! ಘೋರವಾದ ಈ ಸಂಸಾರವೆಂಬ ಅಂಧ

ಕಮಲವಿಮಲಬಿಲ್ವಾರಾಧಿತಂ ಶಂಗಸಂಗಂ
ಕರತಲಕಮಲಂ ಶ್ರೀಸಂಶ್ರಿತಂ ಭಾವಲಿಂಗಂ ।
ಕಲಯ ಕಲಯ ಚೇತಃ ಚಾರುಚಾಮೀಕರಾಂಗಂ
ಸಕಲಭಯವಿಭಂಗಂ ಮಂಗಲಾಂಗಾನುಷಂಗಂ ॥೯೧॥

ಹಿತತರಮಿದಮೇಕಂ ಚಿಂತನೀಯಂ ಮನಸ್ತೇ
ಕಿಮಪಿ ಕಿತವವಾರ್ತಾವರ್ತನಂ ತದ್ವಿಹಾಯ ।
ಪ್ರತಿಪದಮಭಿಲಾಷಾದೋಷವೇಗಾಪಹಾರಂ
ಕುರು ಕುರು ನಿಗಮಾಂಗಂ ಭಾವಲಿಂಗಂ ಶುಭಾಂಗಂ ॥೯೨॥

ಇದಮಿಹ ಹಿತವಾಂಛಾತೀತಮುಚ್ಚಂ ಫಲಂ ತೇ
ವಿತರತಿ ನವಬಿಲ್ವಾರಾಧಿತಂ ಭಾವಲಿಂಗಂ ।

---

ಕಾರದಲ್ಲಿ ಮಗ್ನನಾಗಿರುವ ನನ್ನ ಪಾಪಗಳನ್ನು ಪರಿಹರಿಸಿ ಕಾಪಾಡು; ಎಂದು ಸ್ತೋತ್ರಮಾಡುತ್ತಾ ಪದೇ ಪದೇ ಅಪಾರವಾದ ಆನಂದಸಮೂಹಗಳ ಮೊಳಕೆ ಯಂತಿರುವ ಮಹೇಶ್ವರನನ್ನು ಜಪಮಾಡುವ ಭಕ್ತನೇ ಧನ್ಯನು. ॥೯೦॥

ಲಿಂಗವನ್ನು ಪೂಜಿಸಿ, ಭಕ್ತಪರಾಧೀನನೂ ಕೈಯಲ್ಲಿ ಕಾಂತಿಯುಕ್ತವಾದ ಕಮಲವನ್ನು ಹಿಡಿದಿರುವವನೂ, ಭಾವಪೂರ್ಣವಾದ ಲಿಂಗಾಕೃತಿಯುಳ್ಳವನೂ ಆದ ಚಿನ್ನದಂತೆ ದೇಹಕಾಂತಿಯುಳ್ಳ ಮಹಾದೇವನನ್ನು ಭಜಿಸು. ಎಲೈ ಮನಸ್ಸೇ! ಸುಂದರಾಂಗನಾದ ಈ ಈಶ್ವರನು ಸಕಲ ಭಯಗಳನ್ನೂ ಹೋಗಲಾ ಡಿಸುವನು. ಮಂಗಲಾಂಗಿಯಾದ ಗಿರಿಜೆಯ ರಮಣನನ್ನು ಭಕ್ತಿಯಿಂದ ಧ್ಯಾನಿಸು. ॥೯೧॥

ಓ ಮನಸ್ಸೇ! ಧೂರ್ತರೂ, ವಂಚಕರೂ, ಆದ ಮಾನವರ ಮಾರ್ಗವನ್ನ ನುಸರಿಸದೇ, ಸದಾ ಹಿತಕರನೂ, ಅದ್ವಿತೀಯನೂ ಆದ ಮಹೇಶ್ವರನ ಭಜನೆ ಯನ್ನೇ ಮಾಡು! ಈ ಮಹೇಶ್ವರನು, ಕೂಡಲೇ ಸಕಲ ಆಸೆಗಳಿಂದುಂಟಾಗುವ ದೋಷಗಳನ್ನೂ ಅಪಹರಿಸುವನು. ವೇದಸ್ವರೂಪನೂ, ಮಂಗಳಾಂಗನೂ, ಭಾವ ಪೂರ್ಣವಾದ ಲಿಂಗದ ಆಕಾರವುಳ್ಳವನೂ ಆಗಿರುವ ಮಹಾದೇವನನ್ನೇ ಅನವರತವೂ ಭಜನೆಮಾಡು. ॥೯೨॥

ಎಲೈ ಮನವೇ, ಹೊಸದಾಗಿ ತಂದ ಕೋಮಲವಾದ ಬಿಲ್ವದಳಗಳಿಂದ ಭವಸಂಜ್ಞಕನಾದ ಮಹೇಶನ ಲಿಂಗವನ್ನು ಅರ್ಚನೆಮಾಡಿದರೆ ನೀನು ಅಪೇಕ್ಷಿಸು

ವಿಮಲಕಮಲಲೇಶಾರಾಧಿತಂ ವಾ ಪ್ರದೋಷೇ
ಕಿಮಪಿ ಕಿಮಪಿ ಕಾರ್ಯಂ ಚಿಂತನೀಯಂ ಮನೋ ಮೇ ॥೯೩॥

ಮಮ ಹಿತಮಿದಮೇಕಂ ವಾಂಛಿತಾರ್ಥಪ್ರದಾನ
ಪ್ರವಣಕರಣಿಮೇತದ್ಭಾವಲಿಂಗಂ ಸಶಂಗಂ ।
ಸಕಲಹಿತಕರಾಂಗಂ ಪಾಪಸಂಘಾತಭಂಗಂ
ಕರಕಲಿತಕುರಂಗಾಸಂಗತುಂಗಂ ಸುಖಾಂಗಂ ॥೯೪॥

ಇದಮಿಹ ಕಮಲಾನಾಂ ಮಾಲಯಾ ಪೂಜಿತಂ ಚೇತ್ಕ
ಲಯತಿ ಕಮಲಾನಾಂ ವಾಸಸಂವಾದಮೇದಂ ।
ಇದಮಿಹ ವಸತಿರ್ಮೇ ತತ್ತ್ವದೇತತ್ತ್ವಮೇದಂ
ತವ ತವ ತದಿತಿಶ್ರೀಸಂಶ್ರಿತಂ ಭಾವಲಿಂಗಂ ॥೯೫॥

---

ವುದಕ್ಕಿಂತಲೂ ಅಧಿಕವೂ ಹಿತಕರವೂ ಪರಿಶುದ್ಧವೂ ಆದ ಫಲವನ್ನೇ ಮಹಾದೇವನು ಕೊಡುವನು. ಅಥವಾ ಪ್ರದೋಷಕಾಲದಲ್ಲಿ ಪರಿಶುದ್ಧವಾದ ಸ್ವಲ್ಪ ಕಮಲದ ಹೂವುಗಳಿಂದ ಪೂಜಿಸಿದರೂ ನೀನು ಅಪೇಕ್ಷಿಸಿದ ಫಲಗಳೆಲ್ಲಾ ಅನಾಯಾಸವಾಗಿ ಲಭಿಸುವುವು. ಎಲೈ ಮನಸ್ಸೇ, ಇದಕ್ಕಿಂತಲೂ ನೀನು ಈ ಲೋಕದಲ್ಲಿ ಅಪೇಕ್ಷಿಸುವುದು ತಾನೇ ಏನಿದೆ! ॥೯೩॥

ಸಕಲ ಇಷ್ಟಾರ್ಥಗಳನ್ನೂ ಕೊಡುವುದರಲ್ಲಿ ಸಮರ್ಥವಾದ ಮತ್ತು ಸುಖಕರವಾದ ಈ ಮಹೇಶ್ವರನ ಲಿಂಗವೊಂದೇ ನನಗೆ ಹಿತಕರವಾದುದು. ಈ ಶಿವಲಿಂಗವು ಸರ್ವರಿಗೂ ಹಿತವನ್ನುಂಟುಮಾಡುವ ಅವಯವವುಳ್ಳದ್ದು. ಸರ್ವಪಾಪಸಮೂಹಗಳನ್ನೂ ಹೊಡೆದೋಡಿಸುವುದು. ಕೈಯ್ಯಲ್ಲಿ ಜಿಂಕೆಯನ್ನು ಹಿಡಿದಿರುವ ಗಿರಿಜೆಯ ಸಹವಾಸದಿಂದ ಉನ್ನತಾಕಾರವುಳ್ಳದು. ಮತ್ತು ಸುಖಸ್ವರೂಪವಾದ ಅವಯವವುಳ್ಳದು. ॥೯೪॥

ಈ ಶಿವಲಿಂಗವನ್ನು ತಾವರೆಯ ಹೂಮಾಲೆಯಿಂದ ಪೂಜೆಮಾಡಿದರೆ ಸದಾ ಕಮಲಗಳು ನೆಲಸಿರುವ ಸ್ಥಳದಲ್ಲಿ ವಾಸಮಾಡುವ ಯೋಗ್ಯತೆಯುಂಟಾಗುವುದು. ಮತ್ತು ಸದಾ ಲಕ್ಷ್ಮಿಗೆ ಆಶ್ರಿತನಾಗುವನು. ಈ ಶಿವಲಿಂಗವೇ ನನಗೆ ವಾಸಸ್ಥಾನ. ಇದೇ ನಿನ್ನ ಸ್ವರೂಪ. ತತ್ಪ್ರಾಪ್ತಿಯೇ ಶಿವಸಾಯುಜ್ಯ. ದೇವ, ಕಾಂತಿ

ಮನು ಹಿತಮಿದಮೇತತ್ಪ್ರಾಯಶಃ ಪೂರಯಿಷ್ಯ
ತ್ಯಹಿತಮುಮಿತದೈನ್ಯಂ ವಾರಯಿಷ್ಯತ್ಯಮೋಘಂ ।
ಸಕೃದಪಿ ಹೃದಯಾಬ್ಜಾರೂಢಮೇವಾಸ್ತಿ ಗೂಢಂ
ದೃಢಮಿತಿ ದೃಢಭಕ್ತಿರ್ಭಾವಲಿಂಗೇ ಶುಭಾಂಗೇ ॥೯೬॥

ಸಂಸಾರಾಬ್ಧಿವಿಶೋಷಣಾಯ ವಿವಿಧಾಘೌಘಾಂಧಕಾರಾಚಲ
ಪ್ರಧ್ವಂಸಾಯ ವಿಪತ್ಕುಲಾನಲಕುಲಾಸಾರಾಂಬುರೂಪಾಯ ತೇ ।
ಭೋ ಶಂಗಾಮಲಭಾವಲಿಂಗನಿಲಯಾಮೇಯಪ್ರಭಾವ ಪ್ರಭೋ
ಶಂಭೋ ಭರ್ಗ ಭವಾಬ್ಧಿಭಾವಕ ಕೃತಃ ಕೋಽಪಿ ಪ್ರಣಾಮೋಽಧುನಾ ॥೯೭॥

ಆಶಾಪಾಶವಿನಾಶನಾಯ ವಿವಿಧಾಪಾರಾಪದಾಧಿವ್ಯಥಾ
ಧಾರಾಧ್ವಾಂತನಿವಾರಣಾಯ ನಿಗಮಶ್ರೇಣೀಪ್ರಮೋದಾಹೃತಂ ।

---

ಯುಕ್ತವಾದ ಈ ನಿನ್ನ ಲಿಂಗವನ್ನು ಸದಾ ಭಜನೆಮಾಡುವೆನು. ಎಂದು ಸ್ತೋತ್ರ ಮಾಡಬೇಕು. ॥೯೫॥

ಮಂಗಳಸ್ವರೂಪವುಳ್ಳ ಶಿವಲಿಂಗವನ್ನು, ತನ್ನ ಹೃದಯಕಮಲದಲ್ಲಡಗಿಸಿರುವ ಗೂಢವೂ, ಅಪಾರವೂ, ದೃಢವೂ ಆದ ಭಕ್ತಿಯಿಂದ ಪೂಜಿಸಿದರೆ ಆ ಮಹೇಶ್ವರನ ಲಿಂಗವು ನಮ್ಮ ಹಿತವನ್ನೆಲ್ಲಾ ವಿಶೇಷವಾಗಿ ಉಂಟುಮಾಡುವುದಲ್ಲದೆ ನಮಗೆ ಒದಗುವ ದೀನಭಾವವನ್ನೆಲ್ಲಾ ಹೋಗಲಾಡಿಸುವುದು. ॥೯೬॥

ಪ್ರಭೋ, ನೀನು ಸಂಸಾರವೆಂಬ ಘೋರಸಮುದ್ರವನ್ನೇ ಒಣಗಿಸುವವನು. ನಾನಾವಿಧವಾದ ಪಾಪರಾಶಿಗಳೆಂಬ ಅಂಧಕಾರಮಯವಾದ ಪರ್ವತಗಳೂ ನಿನ್ನಿಂದ ಧ್ವಂಸವಾಗುವುವು. ಮಾನವರಿಗೊದಗುವ ವಿಪತ್ಪರಂಪರೆಗಳೆಂಬ ಬೆಂಕಿಯ ಸಮೂಹಕ್ಕೆ ನೀನು ನೀರಿನಂತಿರುವೆ. ಎಲೈ ಪವಿತ್ರನಾದ ಶಂಕರನೇ, ಭಾವಪೂರ್ಣವಾದ ಲಿಂಗಾಕೃತಿಯುಳ್ಳವನೂ, ವರ್ಣಿಸಲಸದಳವಾದ ಮಹಿಮೆಯುಳ್ಳವನೂ, ಆದ ಶಂಭುವೇ, ನೀನೇ ಭರ್ಗನು. ಪುನರ್ಜನ್ಮವಿಲ್ಲದಂತೆ ಮೋಕ್ಷವನ್ನು ಕರುಣಿಸುವವನೂ ನೀನೇ. ಸ್ವಾಮಿಯೇ, ಇಗೋ ನಾನು ಮಾಡುವ ಈ ಅಲ್ಪವಾದ ನಮಸ್ಕಾರವನ್ನು ಸ್ವೀಕರಿಸು. ॥೯೭॥

ಆಶೆಯೆಂಬ ಪಾಶವನ್ನು ನಾಶಪಡಿಸಿ ನಾನಾವಿಧವಾದ ವಿಪತ್ತುಗಳ ಮತ್ತು ಅಪಾರವಾದ ಮನೋವ್ಯಥೆಗಳ ಪರಂಪರಾಧಾರೆಗಳೆಂಬ ಅಂಧಕಾರವನ್ನು ನಿವಾರಣೆ

ವಂದೇ ಸುಂದರಭಾವಲಿಂಗನಿಲಯಂ ಮೃತ್ಯುಂಜಯಂ ಚಾವ್ಯಯಂ
ನಿತ್ಯಾನಂದಮಯಂ ನಿರಾಮಯಮಹಂ ಮೋಹಂ ವಿಹಾಯಾಧುನಾ ॥೯೮॥

ಅಶ್ರಾಂತಶ್ರುತಿಕೋಟಿಕೂಟವಿದಿತಶ್ರೀಭಾವಲಿಂಗಾರ್ಚನ
ವ್ಯಾಪಾರಪ್ರಭವಂ ಪ್ರಭುತ್ವಮಭಯಂ ಚಾದೃಷ್ಟಮವ್ಯಾಕುಲಂ ।
ತದ್ಭಿನ್ನಂ ಸಕಲಂ ಭಯಾಕುಲಮಿತಿ ಜ್ಞೇಯಂ ತತಸ್ಸರ್ವಥಾ ।
ಕರ್ತವ್ಯಂ ಖಲು ಭಾವಲಿಂಗಭಜನಂ ಸೌಭಾಗ್ಯಸಂವರ್ಧನಂ ॥೯೯॥

ಅನ್ಯತ್ಕಿಂಚಿದಿಹೋಚ್ಯತೇ ಮುಹುರಿದಂ ಸಂಗೋಪನೀಯಂ ಸುರೈಃ
ಸರ್ವೈರಪ್ಯನಿಶಂ ಶಿವಾರ್ಚನಶಿವಧ್ಯಾನೇ ನಿಧಾನೇ ಪರೇ ।
ತೇನೈವಾಖಿಲಸಿದ್ಧಯಃ ಪ್ರತಿದಿನಂ ಸಂಪಾದನೀಯಾಶ್ಚಿರಂ
ಹಾರಂ ಸುಂದರಮಂದಿರಂ ಹರಪದಾಧಾರಂ ಶ್ರಿತಾಃ ಸಾದರಂ ॥೧೦೦॥

---

ಮಾಡುವಂತಹ ವೇದಪಂಕ್ತಿಗಳಿಗೆ ಪ್ರಮೋದಪ್ರಾಯನಾಗಿರುವ, ಸುಂದರಾಕೃತಿಯ ಭಾವಲಿಂಗವನ್ನು ನಮಸ್ಕರಿಸುವೆನು. ಈ ಲಿಂಗವು ಮೃತ್ಯುಂಜಯಸ್ವರೂಪವು. ನಾಶರಹಿತವಾದುದು. ನಿತ್ಯಾನಂದಪರಿಪೂರ್ಣವೂ, ರೋಗರುಜಿನಾದಿಗಳಿಗೆ ಅವಕಾಶವಿಲ್ಲದಿರುವುದೂ ಆದ ಆ ಸಚ್ಚಿದಾನಂದಸ್ವರೂಪವಾದ ಮಹೇಶಲಿಂಗಕ್ಕೆ ನಾನು ಅಜ್ಞಾನವನ್ನು ತೊರೆದು ಈಗ ಭಕ್ತಿಯಿಂದ ನಮಸ್ಕಾರಮಾಡುತ್ತಿರುವೆನು. ॥೯೮॥

ಅನೇಕ ಶ್ರುತಿಗಳಲ್ಲಿ ಎಡಬಿಡದೇ ಸ್ತುತ್ಯವಾಗಿರುವ, ಸಂಪದ್ಭಾವವುಳ್ಳ ಲಿಂಗಾರ್ಚನೆಯಿಂದುಂಟಾಗುವ ಪ್ರಭುತ್ವವು ನಿರ್ವಿಘ್ನವೂ, ಭಯರಹಿತವೂ ಆದುದು. ಇದು ಮತ್ತಾವುದರಿಂದಲೂ ಉಂಟಾಗಲಾರದು. ಈ ಲಿಂಗಾರ್ಚನೆಯನ್ನು ಬಿಟ್ಟು ಇತರ ಪೂಜೆಗಳಿಂದ ಉಂಟಾಗುವ ಸಕಲ ಫಲಗಳೂ ಭಯಜನಕವಾಗಿರುವುವು. ಆದುದರಿಂದ ಎಲೈ ದೇವತೆಗಳಿರಾ, ಸಕಲ ಸೌಭಾಗ್ಯಗಳನ್ನೂ ಅಭಿವೃದ್ಧಿಗೊಳಿಸುವ ಭಾವಲಿಂಗವನ್ನು ಭಜಿಸಿರಿ. ॥೯೯॥

ಓ ದೇವತೆಗಳಿರಾ, ಇದಕ್ಕಿಂತ ಹೆಚ್ಚಿನ್ನೇನು ನಿಮಗೆ ಹೇಳಬೇಕು? ಇದನ್ನು ಜೋಪಾನವಾಗಿ ನೀವು ರಕ್ಷಣೆಮಾಡಬೇಕು. ಈ ಶಿವಲಿಂಗಾರ್ಚನೆ, ಶಿವಧ್ಯಾನ ಇವುಗಳೇ ಶ್ರೇಷ್ಠವಾದುವು. ಇವೇ ಸರ್ವಸೌಭಾಗ್ಯಗಳಿಗೂ ಮೂಲಕಾರಣವಾಗಿರುವುವು. ಈ ಶಿವಾರ್ಚನೆ ಮತ್ತು ಶಿವಧ್ಯಾನಗಳಿಂದ ಪ್ರತಿದಿನವೂ

**ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಪೂರ್ವಾರ್ಧೇ ನಂದಿಕೇಶ್ವರ ಬ್ರಹ್ಮಾದಿಸುರಸಂವಾದೇ ಭಾವಲಿಂಗಮಹಿಮಾನುವರ್ಣನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ**

---

ಸಕಲಸಿದ್ಧಿಗಳೂ, ನಿತ್ಯಾನಂದವೂ ಲಭಿಸುವುವು. 'ಪರಮೇಶ್ವರನ ಪಾದಗಳೇ ನಮಗೆ ಸುಂದರವಾದ ಮಂದಿರವೆಂದು ತಿಳಿದು ಆದರದಿಂದ ಶಿವನ ಪಾದಕಮಲವನ್ನು ಭಜನೆಮಾಡುವವರಿಗೆ ತೋರಿದ ಇಷ್ಟಾರ್ಥಗಳೆಲ್ಲಾ ದೊರೆತು ಸಕಲಸೌಖ್ಯಗಳೂ ಉಂಟಾಗುವುವು. ಎಂದು ನಂದೀಶ್ವರನು ಬ್ರಹ್ಮಾದಿದೇವತೆಗಳಿಗೆ ಭಾವಲಿಂಗದ ಮಹಿಮೆಯನ್ನು ವಿವರಿಸಿದನು. ||೧೦೦||

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಅಂಶದಲ್ಲಿ ಹರಸಂಜ್ಞಕವಾದ ಪೂರ್ವಾರ್ಧದಲ್ಲಿ ನಂದಿಕೇಶ್ವರ ಮತ್ತು ಬ್ರಹ್ಮಾದಿದೇವತೆಗಳು ಇವರ ಸಂವಾದದ ಭಾವಲಿಂಗದ ಮಹಿಮೆಯ ವರ್ಣನೆಯೆಂಬ ನಲವತ್ತೆರಡನೆಯ ಅಧ್ಯಾಯ ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ತ್ರಿಚತ್ವಾರಿಂಶೋಽಧ್ಯಾಯಃ

|| ಗೌತಮ ಉವಾಚ ||

ಶ್ರೀನಂದಿಕೇಶ್ವರಮನೋಹರವಾಗ್ವಿಲಾಸಂ
ಹಾರಪ್ರಭಾವಸಮಲಂಕೃತಮಿಷ್ಟಹೇತುಂ ।
ಶ್ರುತ್ವಾ ಪ್ರಹೃಷ್ಟಹೃದಯಾಃ ಪುನರಷ್ಟಮೂರ್ತಿ
ಪೂಜಾಪ್ರಭಾವವಿಭವಶ್ರವಣೋತ್ಸುಕಾಸ್ತೇ ॥೧॥

ಶ್ರೀನಂದಿಕೇಶ ಶಿವಪೂಜನಪುಣ್ಯಪೂರ್ಣ
ಕರ್ಣಾಮೃತಂ ಶಿವಕಥಾಕಥನಂ ತ್ವಯಾದ್ಯ ।
ಸಂಪಾದಿತಂ ತದಿದಮುಸ್ಮದಪಾರದುಃಖ
ಸಂಸಾರರೂಪತರುಮೂಲಕುಠಾರರೂಪಂ ॥೨॥

---

## ನಲವತ್ತುಮೂರನೆಯ ಅಧ್ಯಾಯ

ಶ್ರೀಸ್ಕಂದಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೀಗೆಂದನು. ನಂದಿಕೇಶ್ವರನ ಮನೋಹರವಾದ ವಾಕ್ಸರಣಿಯಿಂದ ಶಿವಲಿಂಗಸಂಬಂಧವಾದ ವಿಷಯಗಳನ್ನೆಲ್ಲಾ ತಿಳಿದ ಬ್ರಹ್ಮಾದಿಸುರರು ಮತ್ತೆ ಶಿವಪೂಜಾಮಹಿಮೆಯನ್ನು ಕೇಳಲಿಷ್ಟವುಳ್ಳವರಾಗಿ, ಸಂತೋಷದಿಂದ ಹೀಗೆ ಪ್ರಾರ್ಥಿಸಿಕೊಂಡರು. ॥೧॥

"ಎಲೈ ಶಿವಪೂಜೆಯಿಂದ ಸುಕೃತಿಯೆನಿಸಿರುವ ಮಹಾಮಹಿಮನೇ, ನೀನು ಇಲ್ಲಿನ ವರೆಗೂ ಶಿವಕಥೆಯೆಂಬ ಕರ್ಣಾಮೃತವನ್ನು ನಮಗೆ ಪೂರ್ತಿಯಾಗಿ ಪಾನ

ಅಸ್ಮಾಭಿರದ್ಯ ಶಿವಪೂಜಕವರ್ಣನೇನ
ಚಿತ್ತಂ ಪ್ರಮತ್ತಮಪಿ ಶಾಂತತರಂ ಕೃತಂ ಹಿ ।
ಏತಸ್ಯ ತಾವದಧುನಾ ಪುನರಿಂದುಮೌಲಿ
ಭೂರಿಪ್ರಭಾವಸುಧಯಾ ಪರಯಾನ್ವಯಸ್ಸ್ಯಾತ್ ॥೩॥

ತ್ವತ್ಪಾದಪದ್ಮರಜಸಾ ಶಿರಸೋನ್ವಯಸ್ಸ್ಯಾ
ದಸ್ಮಾಕಮಕ್ಷಯದಯಾಸುರವಾಹಿನೀಭಿಃ ।
ಕ್ಲೇಶಾಟವೀದಹನರಾಶಿರಪಿ ಪ್ರಶಾಂತಃ
ಶ್ರೀವಿಶ್ವನಾಥಕಥಯಾ ಕಥಯಾಶು ಶಿಕ್ಷಾಂ ॥೪॥

ಇತ್ಯುದೀರಿತಮಾಕರ್ಣ್ಯ ನಂದಿಕೇಶಃ ಪ್ರಹೃಷ್ಟಧೀಃ ।
ಪುನಃ ಶಿವಕಥಾಮೇವ ವಕ್ತುಂ ಸಮುಪಚಕ್ರಮೇ ॥೫॥

---

ಮಾಡಿಸಿರುವೆ. ಶಿವಕಥಾಮೃತವು, ನಮ್ಮ ಭವಬಂಧನಗಳೆಂಬ ವೃಕ್ಷದ ಬುಡವನ್ನು ತರಿದುಹಾಕುವ ಕೊಡಲಿಯಂತೆ ಸಂಸಾರದುಃಖಗಳನ್ನೆಲ್ಲಾ ಧ್ವಂಸಮಾಡಿರುವುದು. ಇದಲ್ಲವೇ ನಿನ್ನಿಂದ ನಾವು ಪಡೆದಿರುವ ಭಾಗ್ಯವಿಶೇಷ! ॥೨॥

ನಂದೀಶ್ವರನೇ, ನಿನ್ನ ವದನದಿಂದ ಬಂದ ಶಿವಕಥಾಶ್ರವಣದಿಂದ ಚಂಚಲವಾಗಿ ಕಲಕಿಹೋಗಿದ್ದ ನಮ್ಮ ಮನಸ್ಸೂ ಶಾಂತಮಯವಾಯಿತು. ಅಲ್ಲದೆ ನಿನ್ನಿಂದ ಪ್ರೋಕ್ತವಾದ ಅಮೃತೋಪಮವಾದ ಶಿವಕಥಾಧಾರೆಯಿಂದ ನಮ್ಮ ಮನಸ್ಸು ಇನ್ನೂ ಹೆಚ್ಚಿನ ಉತ್ಸಾಹಗೊಳ್ಳುತ್ತಿದೆ. ॥೩॥

ನಂದಿಕೇಶ್ವರನೇ, ನಿನ್ನ ಪಾದಪದ್ಮದ ರಜಸ್ಸು ನಮ್ಮ ಶಿರಸ್ಸನ್ನೆಲ್ಲಾ ಪವಿತ್ರಗೊಳಿಸಿದೆ. ನಿನ್ನಿಂದ ತಿಳಿಸಲ್ಪಟ್ಟ ವಿಶ್ವೇಶ್ವರ ಕಥೆಯೆಂಬ ದೇವಗಂಗಾ ನದಿಯು ನಮ್ಮ ಕ್ಲೇಶಗಳೆಂಬ ಕಾಡುಕಿಚ್ಚುಗಳನ್ನೆಲ್ಲಾ ಆರಿಸಿ ತಣ್ಣಗೆ ಮಾಡಿದೆ. ಮಹಾಮಹಿಮನೇ, ದಯೆಯಿಂದ ಮತ್ತೆ ಪರಶಿವನ ಕಥಾಲಹರಿಯನ್ನು ನಮಗೆ ತಿಳಿಸುವವನಾಗು" ಎಂದು ವಿಧವಿಧವಾಗಿ ಕೇಳಿಕೊಂಡರು. ॥೪॥

ಹೀಗೆ ಕೇಳಿಕೊಂಡ ಬ್ರಹ್ಮಾದಿಗಳ ಪ್ರಾರ್ಥನೆಯಂತೆ ನಂದೀಶ್ವರನು ಸಂತೋಷದಿಂದ ಮತ್ತೆ ಈಶ್ವರಸಂಬಂಧವಾದ ಕಥೆಗಳನ್ನೆಲ್ಲಾ ವಿವರಿಸಲಾರಂಭಿಸಿದನು. ಎಂದು ಗೌತಮರು ಸಕಲ ಋಷಿಗಳಿಗೂ ಹೇಳಿದರು. ॥೫॥

ಪ್ರಭೂತಪುಣ್ಯಪುರುಷಃ ಕೋಽಪಿ ಲೋಕೇ ಶಿವಾರ್ಚಕಃ ।
ತತಸ್ತಚ್ಚರಣಾಂಭೋಜಸ್ಮರಣೇನಾಪಿ ಮಂಗಳಂ ॥೬॥

ಶಿವಪೂಜನಪುಣ್ಯೇನ ಯತ್ಫಲಂ ಸಮವಾಪ್ಯತೇ ।
ತತ್ಫಲಂ ನಾನ್ಯಧರ್ಮಾಣಾಂ ರಾಶಿಭಿರ್ವಾ ಸಮಾಪ್ಯತೇ ॥೭॥

ಜನಕೋ ನಾಮ ಯಃ ಕಶ್ಚಿತ್ ರಾಜಾ ಧರ್ಮಪರಾಯಣಃ ।
ಸ ಸರ್ವಭಾಗ್ಯಸಂಪನ್ನಃ ಶೌರ್ಯಮರ್ಯಾದಯಾಶ್ರಿತಃ ॥೮॥

ತಸ್ಮಿಂಚ್ಛಾಸತಿ ಭೂಲೋಕೇ ರಿಪವೋ ವಿಲಯಂ ಗತಾಃ ।
ಸರ್ವೇ ಧರ್ಮಪರಾ ಏವ ಶಿವಪೂಜಾಪರಾಯಣಾಃ ॥೯॥

ಮಂದಿರಾಣಾಂ ಚ ನಿರ್ಮಾಣಂ ಲಿಂಗಾನಾಂ ಸ್ಥಾಪನಾಯ ತೇ ।
ಕುರ್ವಂತ್ಯತಿಪ್ರಯತ್ನೇನ ರತ್ನೈರೇವ ಮನೋಹರೈಃ ॥೧೦॥

ಇದಂ ತು ಶ್ರೀಮಹೇಶಸ್ಯ ಸ್ಥಾನಂ ಲಿಂಗಮನುತ್ತಮಂ ।
ಸ್ಥಾಪನೀಯಮಿದಂ ಲಿಂಗಮೇತಸ್ಮಿನ್ನೃತ್ಯಮಂಟಪೇ ॥೧೧॥

ಇದಂ ಬಿಲ್ವವನಸ್ಯೈವ ಸ್ಥಲಂ ಪಲ್ವಲಮುತ್ತಮಂ ।
ಅತ್ರ ಕುಲ್ಯಾಶ್ಚ ಕರ್ತವ್ಯಾಃ ಪಯಃಪೂರಸಮನ್ವಿತಾಃ ॥೧೨॥

---

ಎಲೈ ಶಿವಕಥಾಕುತೂಹಲಿಗಳೇ, ಪ್ರಪಂಚದಲ್ಲಿ ಶಂಕರನ ಪೂಜೆಯೇ ಶ್ರೇಷ್ಠವಾದದ್ದು. ಶಂಕರಪೂಜಕರ ಪಾದದರ್ಶನ, ಪಾದಸ್ಮರಣ ಇವುಗಳೇ ಮಂಗಳಪ್ರದವಾದ ಕಾರ್ಯಗಳು. ಶಿವಪೂಜಾನಿಮಿತ್ತವಾಗಿ ದೊರಕುವ ಸುಕೃತರಾಶಿಯನ್ನು ಮತ್ತಾವ ಧರ್ಮಕಾರ್ಯಗಳಿಂದಲೂ ಸಂಪಾದಿಸಲಳವಲ್ಲ. ||೬-೭||

ಹಿಂದೆ ಜನಕನೆಂಬ ಧರ್ಮಿಷ್ಠನಾದ ರಾಜನು ಶೌರ್ಯೌದಾರ್ಯಾದಿಗುಣಗಳಿಂದ ಕೂಡಿದವನಾಗಿ, ಭೂಲೋಕವನ್ನು ಆಳುತ್ತಿದ್ದನು. ಅವನ ಆಳ್ವಿಕೆಯಲ್ಲಿ ಎಲ್ಲ ಪ್ರಜೆಗಳೂ ಧರ್ಮಾತ್ಮರೆನಿಸಿ ಶಿವಪೂಜಾಪರಾಯಣರಾಗಿದ್ದರು. ಆತನಿಗೆ ಯಾರೂ ಶತ್ರುಗಳೇ ಇರಲಿಲ್ಲ. ||೮-೯||

ಆತನು ರತ್ನಮಯವಾದ ಗೃಹಗಳನ್ನು ಕಟ್ಟಿಸುವುದು ಕೇವಲ ಶಿವಲಿಂಗ ಸ್ಥಾಪನೆಗಾಗಿಯೇ ಆಗುತ್ತಿತ್ತು. ಅನೇಕ ನೃತ್ಯಮಂಟಪಗಳನ್ನು ರಚಿಸಿ ಅಲ್ಲಿ ಶಿವ

ತಟಾಕಾಶ್ಚಾತ್ರ ಕರ್ತವ್ಯಾಃ ಪಾರಾವಾರಮನೋಹರಾಃ ।
ಸ್ನಾನಪಾನಾದಿಯೋಗ್ಯಾಸ್ತೇ ಹಾರಾಣಾಮೇವ ಸರ್ವದಾ ॥೧೩॥

ತಟಾಕೇಷ್ವಪಿ ಲಿಂಗಾನಿ ಸ್ಥಾಪನೀಯಾನಿ ಕೋಟಿಶಃ ।
ಆರಾಮಾಶ್ಚಾತ್ರ ಕರ್ತವ್ಯಾಃ ಪುಷ್ಪರಾಶಿವಿಜೃಂಭಿತಾಃ ॥೧೪॥

ಶಿವಮಂದಿರನಿರ್ಮಾಣಂ ವನಮಧ್ಯೇಽಪಿ ಸುಂದರೇ ।
ಕರ್ತವ್ಯಂ ಮಂತ್ರಪುಷ್ಪಾಣಾಂ ಆಸಾರೈಃ ಪೂಜನಂ ಭವೇತ್ ॥೧೫॥

ವಸಂತಪೂಜಯಾ ಶಂಭುರ್ವನಮಧ್ಯೇ ವಿಶೇಷತಃ ।
ಪ್ರೀತಃ ಸೌಭಾಗ್ಯಸಂಪನ್ನಂ ಕರಿಷ್ಯತಿ ನ ಸಂಶಯಃ ॥೧೬॥

ಸರಸಾಮತ್ರ ರಮ್ಯಾಣಾಂ ನಿರ್ಮಾಣಾತ್ಕರುಣಾರ್ಣವಃ ।
ಅಪರ್ಣಾರಮಣಸ್ತೂರ್ಣಂ ನಿರ್ವಾಣಮಪಿ ದಾಸ್ಯತಿ ॥೧೭॥

---

ಮೂರ್ತಿಗಳನ್ನು ಇಡಿಸುತ್ತಿದ್ದನು. ಚಿಕ್ಕಚಿಕ್ಕ ಕೊಳಗಳನ್ನೊಳಗೊಂಡ ಬಿಲ್ವ ವನಗಳೂ, ಶುದ್ಧೋದಕದಿಂದ ಪೂರಿತವಾದ ದೊಡ್ಡದೊಡ್ಡ ಬಾವಿಗಳೂ ಶಿವಪೂಜೆಗಾಗಿಯೇ ಆತನಿಂದ ನಿರ್ಮಿತವಾಗುತ್ತಿದ್ದುವು. ||೧೦-೧೧-೧೨||

ಸಮುದ್ರೋಪಮವಾದ ಕೆರೆಗಳನ್ನು ಸ್ನಾನಪಾನಾದಿಗಳಿಗಾಗಿ ಕಲ್ಪಿಸುತ್ತಿದ್ದನು. ಅಲ್ಲಿ ಕೋಟಿಸಂಖ್ಯೆಯಿಂದ ಶಿವಲಿಂಗಗಳನ್ನು ಪ್ರತಿಷ್ಠಿಸುತ್ತಿದ್ದನು. ಪುಷ್ಪರಾಶಿಯಿಂದ ಕಂಗೊಳಿಸುವ ಉದ್ಯಾನಾದಿಗಳನ್ನು ನಿರ್ಮಿಸಿ, ಅಲ್ಲಿ ಶಿವಮಂದಿರಗಳನ್ನು ಕಟ್ಟಿಸುತ್ತಿದ್ದನು. ಹೀಗೆ ಶಿವಲಿಂಗಗಳಿಗೆ ಎಲ್ಲೆಲ್ಲಿಯೂ, ಮಂತ್ರಪುಷ್ಪಗಳೂ ಅಭಿಷೇಕವೂ ನಡೆಯಲೆಂದು, ಪುಷ್ಪವಾಟಿಕೆಗಳನ್ನೂ, ನಿರ್ಮಲಸರಸ್ಸುಗಳನ್ನೂ ನಿರ್ಮಿಸಿದ್ದನು. ||೧೩-೧೪-೧೫||

ವನಮಧ್ಯದಲ್ಲಿ ಶಂಕರನನ್ನು ಸ್ಥಾಪಿಸಿ ವಿಶೇಷವಾಗಿ ಪೂಜಿಸಿದುದೇ ಆದರೆ ಆದರಿಂದ ಸಂತುಷ್ಟನಾದ ಪರಶಿವನು ಭಕ್ತರಿಗೆ ಅನಂತಸೌಭಾಗ್ಯಗಳನ್ನು ಒದಗಿಸುವನು. ಮತ್ತು ಶಿವಪೂಜೆಗಾಗಿ ಮನೋಹರವಾದ ಸರೋವರವನ್ನು ನಿರ್ಮಾಣ ಮಾಡುವವರಿಗೆ ಕರುಣಾಮಯನಾದ ಪಾರ್ವತೀಪತಿಯು ಮೋಕ್ಷವನ್ನು ಅನುಗ್ರಹಿಸುವನು. ||೧೬-೧೭||

ಕಾಲೋ ನೇಯೋ ವನೇ ರಮ್ಯೇ ಹರ್ಮ್ಯಛಾಯಾಸಮಾಶ್ರಿತೇ।
ಶಂಕರಾರಾಧನೇಸ್ತೈವ ಕೃತ್ಯೈರನ್ಯೈರ್ನ ನಃ ಫಲಂ ॥೧೮॥

ಶಿವಭಕ್ತ್ಯಾ ಶಿವಾರ್ಚಾಯಾಂ ಕೃತಾಯಾಂ ಗಿರಿಜಾಪತಿಃ।
ಅದೇಯಮಪಿ ಯದ್ವಸ್ತು ತದ್ದಾಸ್ಯತಿ ನ ಸಂಶಯಃ ॥೧೯॥

ಗೃಹಕೃತ್ಯೈರ್ನ ನಃ ಕೃತ್ಯಮತ್ರೈವ ಗಿರಿಶಾಲಯೇ।
ಉಷಿತ್ವಾ ಶಿವಪೂಜಾಯಾಂ ಯತ್ನಃ ಕಾರ್ಯಃ ಪ್ರತಿಕ್ಷಣಂ ॥೨೦॥

ಲಕ್ಷಶೋ ಬಿಲ್ವಪತ್ರಾಣಾಂ ಪೂಜಯಾ ಗಿರಿಜಾಪತಿಃ।
ಸಂತುಷ್ಟೋ ಮೋಕ್ಷಲಕ್ಷ್ಮೀಂ ಚ ದಾಸ್ಯತ್ಯೇವ ನ ಸಂಶಯಃ ॥೨೧॥

ಯದ್ಯದಿಷ್ಟಂ ಭವೇನ್ನಿತ್ಯಂ ತತ್ತದ್ದಾಸ್ಯತಿ ಶಂಕರಃ।
ಭಕ್ತೇಭ್ಯೋಽಪ್ಯತ್ರ ಬಿಲ್ವೇನ ಜಲೇನಾಪಿ ಸಮರ್ಚಿತಃ ॥೨೨॥

ನ ಪಶ್ಯತಿ ಮಹಾದೇವಃ ಸಾಧನಾನಿ ವಿಶೇಷತಃ।
ಭಕ್ತಿಮಾತ್ರಂ ಸ್ವಭಕ್ತಸ್ಯ ಸ್ವಾರ್ಚನಾಯ ಪ್ರಪಶ್ಯತಿ ॥೨೩॥

---

ಭಕ್ತರಾದವರು ವನದಲ್ಲಿ ಶಂಕರಾರಾಧನೆಗಾಗಿ, ಸುಂದರವಾದ ಶಿವಾಲಯದಲ್ಲಿ ವಾಸಿಸುತ್ತಾ ಕಾಲಕಳೆದರೆ ಅವರಿಗೆ ಮತ್ತಾವ ಕರ್ಮಗಳಿಂದಲೂ ಲಭಿಸದಂತಹ ವಿಶೇಷ ಸುಕೃತವು ಅದರಿಂದ ದೊರಕುವುದು. ಭಕ್ತಿಯಿಂದ ಶಿವಾರ್ಚನೆ ಮಾಡಿದವರಿಗೆ ಶಂಕರನು ಯಾರಿಗೂ ದೊರಕದಂತಹ ವಸ್ತು ಜಾಲವನ್ನು ಅನುಗ್ರಹಿಸಿಕೊಡುವನು. ॥೧೮-೧೯॥

ಶಿವಾಲಯದಲ್ಲಿ ಯಾವ ಗೃಹಕೃತ್ಯಗಳನ್ನೂ ಎಸಗದೆ, ಸರ್ವದಾ ಶಿವಪೂಜಾ ಕಾರ್ಯಗಳಲ್ಲಿಯೇ ತೊಡಗಬೇಕು. ಹಾಗೆ ಮಾಡುತ್ತಾ ಲಕ್ಷ ಬಿಲ್ವಪತ್ರಾರ್ಚನೆಯಿಂದ ತೃಪ್ತಿಪಡಿಸಿದರೆ ಶಂಕರನು ತುಷ್ಟನಾಗಿ ಮೋಕ್ಷಸಂಪತ್ತನ್ನು ಸುಲಭವಾಗಿ ಒದಗಿಸುವನು. ॥೨೦-೨೧॥

ಅಲ್ಲದೆ ದೇವದೇವನಾದ ಶಂಕರನು ತನ್ನ ಭಕ್ತರಿಗೆ ಬೇಕಾದ ಇಷ್ಟವಸ್ತುಗಳನ್ನೆಲ್ಲಾ ಒದಗಿಸುವನು. ಮತ್ತು ಮಹಾದೇವನು ತನ್ನ ಪೂಜೆಗೆ ಬಳಸುವ ಸಾಧನದ್ರವ್ಯಗಳಿಂದ ಅಷ್ಟಾಗಿ ತೃಪ್ತನಾಗದೆ ಭಕ್ತನ ಕೇವಲ ಭಕ್ತಿಗಾಗಿ ತವಕಪಡುವನು. ॥೨೨-೨೩॥

ದೃಢಾ ಭಕ್ತಿಸುಧಾಧಾರಾ ಶಿವಲಿಂಗೇ ಶಿವಾತ್ಮಕೇ ।
ಯದಿ ತರ್ಹಿ ಜಿತಂ ತೇನ ಸಕಲಂ ಖಲು ಭೂತಲಂ ॥೧೪॥

ಶಿವಭಕ್ತಿರ್ದೃಢಾ ಯಸ್ಯ ತಂ ದೃಷ್ಟ್ವಾ ದೂರತಸ್ಸುರಾಃ ।
ನಮಂತಿ ಮುನಯಸ್ಸಿದ್ಧಾಃ ಶುದ್ಧಾಂತಃಕರಣಾಸ್ಸದಾ ॥೧೫॥

ದೃಢಾ ಭಕ್ತಿರ್ಮಹಾದೇವೇ ಯದಿ ದೈವಾತ್ಪ್ರಜಾಯತೇ ।
ತದಾ ಮಾಹೇಶ್ವರಂ ಯಾತಿ ತದ್ದೃಷ್ಟಿನಿಲಯಾಲಯೇ ॥೧೬॥

ಭೂತಿಭೂಷಿತಸರ್ವಾಂಗಂ ದೃಷ್ಟ್ವೈವ ಯಮಕಿಂಕರಾಃ ।
ಪ್ರಯಾಂತ್ಯಾಶು ಗ್ರಹಾಶ್ಚಾನ್ಯೇ ಗ್ರಹಪೀಡಾಶ್ಚ ದಾರುಣಾಃ ॥೧೭॥

ಯಸ್ಯ ಫಾಲೇ ವಿಭೂತಿಸ್ಸ್ಯಾದತ್ಯಲ್ಪೋಽಪಿ ಶ್ರುತಿಶ್ರುತಾ ।
ತಂ ನ ಸ್ಪೃಶಂತಿ ವೇತಾಲಾಃ ಕಾಲೇನ ಪ್ರೇಷಿತಾ ಅಪಿ ॥೧೮॥

ಯಸ್ಯಾಂಗೇ ಪತಿತಂ ಶುದ್ಧಂ ಶಿವಮಂತ್ರಾಭಿಮಂತ್ರಿತಂ ।
ತಂ ದೃಷ್ಟ್ವೈವ ವಿನಶ್ಯಂತಿ ಪಿಶಾಚಾ ಅಪಿ ದಾರುಣಾಃ ॥೧೯॥

---

ಯಾರು ತಮ್ಮ ಭಕ್ತಿಯೆಂಬ ಅಮೃತಧಾರೆಯನ್ನು ಶಿವಲಿಂಗದಮೇಲೆ ಅಭಿಷೇಕಮಾಡುವರೋ, ಅವರು ಸಕಲ ಲೋಕವನ್ನೂ ಜಯಿಸಿದವರಾಗುವರು. ಶಿವನಲ್ಲಿ ದೃಢಭಕ್ತಿಯಿಟ್ಟಿರುವವನನ್ನು ಕಂಡು ದೇವತೆಗಳು ಹೆದರುವರು. ಶುದ್ಧ ಚೇತನರಾದ ಮುನಿಗಳು ನಮಸ್ಕರಿಸುವರು. ॥೧೪-೧೫॥

ಮಹಾದೇವನಲ್ಲಿ ದೃಢವಾದ ಭಕ್ತಿಯು ದೈವಾನುಗ್ರಹದಿಂದ ಉಂಟಾದಪಕ್ಷದಲ್ಲಿ ಆದರೆ ಆಗ ಕೃಪಾದೃಷ್ಟಿಬಲದಿಂದ ಆತನು ಶಿವಸ್ವರೂಪನೇ ಆಗುವನು. ವಿಭೂತಿಯಿಂದ ಶುಭ್ರವಾದ ದೇಹವನ್ನು ನೋಡಿ ಯಮಕಿಂಕರರೂ ಸಹ ಹೆದರಿ ಓಡಿ ಹೋಗುವರು. ॥೧೬-೧೭॥

ಯಾವನ ಹಣೆಯಲ್ಲಿ ಶ್ರುತಿವಿಹಿತವಾದ ಭಸ್ಮವು ಸ್ವಲ್ಪಮಟ್ಟಿಗಾದರೂ ಕಂಡುಬರುವುದೋ, ಅಂತಹವನನ್ನು ಯಾವ ಗ್ರಹಗಳೂ ಪೀಡಿಸಲಾರವು. ಯಮನಿಂದ ಕಳುಹಿಸಲ್ಪಟ್ಟ ಬೇತಾಳಾದಿ ದುಷ್ಟಪಿಶಾಚಿಗಳೂ ಸಹ ಆತನನ್ನು ನೋಡಿ ಹೆದರಿ ಓಡುವುವು. ಶಿವಮಂತ್ರಾಭಿಮಂತ್ರಿತವಾದ ಭಸ್ಮಧಾರಣೆಯಿಂದ ಸಕಲ ಪಿಶಾಚಗಳೂ ಓಡಿಹೋಗುವುವು. ॥೧೮-೧೯॥

ಯದಾ ಪಿಶಾಚಸಂಚಾರೋ ಯಸ್ಯ ವೇಶ್ಮನಿ ದೈವತಃ ।
ತದಾ ತನ್ನಾಶಕಂ ಭಸ್ಮ ಶಿವಮಂತ್ರಾಭಿಮಂತ್ರಿತಂ ॥೩೦॥

ವಿಭೂತಿಕಣರೂಪಾಣಾಂ ಕುಠಾರಾಣಾಂ ವಿಲೋಕನಾತ್ ।
ಪಿಶಾಚತರವಸ್ಸರ್ವೇ ಸಕಂಪಾಃ ಪ್ರಪತಂತಿ ಚ ॥೩೧॥

ಮಹಾರೋಗಾಭಿಭೂತಾನಾಂ ಭಸ್ಮೋದ್ಧೂಲನಮೌಷಧಂ ।
ಕುಷ್ಠಾದಯೋಽಪಿ ನಶ್ಯಂತಿ ಭಸ್ಮಧಾರಣಮಾತ್ರತಃ ॥೩೨॥

ಶಿವಮಂತ್ರಜಪೋ ಯತ್ರ ತತ್ರ ನಾಯಾಂತಿ ತೇ ಗ್ರಹಾಃ ।
ಬ್ರಹ್ಮರಾಕ್ಷಸವೇತಾಲಾಃ ಪಿಶಾಚಾಶ್ಚ ವಿಶೇಷತಃ ॥೩೩॥

ಉದ್ಧೂಲ್ಯ ಭಸ್ಮನಾಂಗಾನಿ ರುದ್ರಾಧ್ಯಾಯಂ ಪಠಂತಿ ಯೇ ।
ತದ್ದೇಶಂ ಪ್ರತಿ ನಾಯಾಂತಿ ಶಾಕಿನೀಡಾಕಿನೀಬಲಾಃ ॥೩೪॥

ಮೃಡಸ್ಮರಣಮಾತ್ರೇಣ ಡಾಕಿನೀ ತು ವಿನಶ್ಯತಿ ।
ಶಾಕಿನೀನಾಶಮಾಯಾತಿ ನಾಶಂ ಯಾಸ್ಯತಿ ಮಾತೃಕಾ ॥೩೫॥

---

ದುರದೃಷ್ಟವಶದಿಂದ ಯಾರ ಮನೆಯಲ್ಲಿ ಪೈಶಾಚಿಕ ಸಂಚಾರವೇರ್ಪಡು ವುದೋ, ಆಗ ಶಿವಮಂತ್ರಾಭಿಮಂತ್ರಿತವಾದ ಭಸ್ಮವನ್ನು ಅಭಿಮಂತ್ರಿಸಿದರೆ ಅದರಿಂದ ಪಿಶಾಚ ಪೀಡಾಪರಿಹಾರವಾಗುವುದು. ಪಿಶಾಚಿಗಳೆಂಬ ಮರಗಳ ಬುಡವನ್ನು ಉರು ಳಿಸುವ ಕೊಡಲಿಯೆಂದರೆ ಈ ವಿಭೂತಿಯ ಕಣಗಳೇ. ॥೩೦-೩೧॥

ದೊಡ್ಡದೊಡ್ಡ ವ್ಯಾಧಿಯಿಂದ ನರಳುವವರಿಗೂ, ಕುಷ್ಠಾದಿ ಮಹಾರೋಗ ಪೀಡಿತರಿಗೂ, ಭಸ್ಮಧಾರಣವೇ ಒಂದು ದೊಡ್ಡ ಔಷಧಿ. ಎಲ್ಲಿ ಶಿವಮಂತ್ರಜಪವಿರು ವುದೋ, ಅಲ್ಲಿ ಯಾವ ಗ್ರಹಗಳೂ, ಬ್ರಹ್ಮರಾಕ್ಷಸಾದಿ ಸಕಲ ಪಿಶಾಚಗಳೂ ಸಹ ನಿಲ್ಲಲಾರವು. ॥೩೨-೩೩॥

ರುದ್ರಾಧ್ಯಾಯಪಠನಪೂರ್ವಕವಾಗಿ ಎಲ್ಲಿ ಭಸ್ಮಲೇಪವಾಗುವುದೋ ಅಲ್ಲಿ ಶಾಕಿನೀ, ಡಾಕಿನೀ ಮುಂತಾದ ಯಾವ ದುಷ್ಟಗ್ರಹಗಳೂ ನಿಲ್ಲಲಾರವು. ರುದ್ರ ನಾಮಸ್ಮರಣೆಯಿಂದಲೇ ಆ ದುಷ್ಟದೇವತೆಗಳೆಲ್ಲಾ ಹೆದರಿ ಓಡಿಹೋಗುವುವು. ॥೩೪-೩೫॥

ಗೃಹೀತ್ವಾ ಭಸ್ಮ ಯೋ ಮಂತ್ರಂ ಶೈವಂ ಜಪತಿ ಸಾದರಂ ।
ತಸ್ಯ ಸ್ಮರಣಮಾತ್ರೇಣ ಗ್ರಹಪೀಡಾ ವಿನಶ್ಯತಿ ॥೩೬॥

ಅಸ್ಮಿನ್ವನೇ ಪಿಶಾಚಾನಾಂ ಸಂಚಾರೋ ನ ಭವಿಷ್ಯತಿ ।
ವಿಭೂತಿಪೂತದೇಹಾನಾಮಸ್ಮಾಕಂ ವಸತಿರ್ಯದಿ ॥೩೭॥

ಯತ್ರ ಲಿಂಗಾನಿ ರಮ್ಯಾಣಿ ನಾರ್ಮದಾನಿ ವಿಶೇಷತಃ ।
ತತ್ರ ತಾವತ್ಪಿಶಾಚಾನಾಂ ವಾರ್ತಾಽಪಿ ನ ಭವಿಷ್ಯತಿ ॥೩೮॥

ವಯಂ ಧನ್ಯತಮಾ ಏವ ಶಿವಲಿಂಗಾರ್ಚನಪ್ರಿಯಾಃ ।
ಪ್ರೀತಿಶ್ಶಿವಾರ್ಚನೇ ಲೋಕೇ ದುರ್ಲಭಾ ಖಲು ವಸ್ತುತಃ ॥೩೯॥

ನ ದಾರೇಷು ಕುಮಾರೇಷು ನ ಧನೇಷು ನಿಧಿಷ್ವಪಿ ।
ಅಸ್ಮಾಕಂ ಪ್ರೀತಿರಧುನಾ ಕಿಂ ತು ಸಾ ಶಿವಪೂಜನೇ ॥೪೦॥

ಅಯಂ ಪುಣ್ಯತಮಃ ಕಾಲೋ ಧನ್ಯೋ ಧನ್ಯಾ ವಯಂ ಪರಂ ।
ಯತಃ ಪ್ರೀತಿರಭೂದದ್ಯ ಮಹಾದೇವಸಮರ್ಚನೇ ॥೪೧॥

---

ಯಾವನು ಭಸ್ಮವನ್ನು ಶೈವಮಂತ್ರಪುರಶ್ಚರಣೆಯಿಂದ ಜಪಿಸುವನೋ ಅವನ ಸ್ಮರಣೆಯಿಂದಲೇ ಸಮಸ್ತ ಗ್ರಹಪೀಡೆಯೂ ನಿವೃತ್ತಿಯಾಗುವುದು. ವಿಭೂತಿಯಿಂದ ಪವಿತ್ರರಾದ ನಾವು ಇಲ್ಲಿ ವಾಸಿಸುತ್ತಿರುವುದರಿಂದಲೇ ಈ ಉದ್ಯಾನದಲ್ಲಿ ಪಿಶಾಚಿಗಳ ಬಾಧೆಯಿರುವುದಿಲ್ಲ. ||೩೬-೩೭||

ಎಲ್ಲಿ ನರ್ಮದಾನದಿಯ ಶಿವಲಿಂಗವು ಮನೋಹರವಾಗಿ ಪ್ರಕಾಶಿಸುವುದೋ, ಅಲ್ಲಿ ಪಿಶಾಚಿಗಳ ಹೆಸರು ಕೂಡ ಇರುವುದಿಲ್ಲ. ಅಂತಹ ಶಿವಲಿಂಗಾರ್ಚನೆಯಲ್ಲಿ ಮನಸ್ಸಿಟ್ಟಿರುವ ನಾವೇ ಧನ್ಯರು. ಲೋಕದಲ್ಲಿ ಶಿವಲಿಂಗಾರ್ಚನೆಯಲ್ಲಿ ಬುದ್ಧಿ ಬರುವುದೇ ಕಷ್ಟ. ಈಗ ನಮಗಾದರೋ, ಹೆಂಡತಿ, ಮಕ್ಕಳು, ಐಶ್ವರ್ಯ, ನಿಧಿ ಇವುಗಳಲ್ಲಿ ಮಮತೆ ಕಾಣುವುದಿಲ್ಲ. ಕೇವಲ ಶಿವಲಿಂಗಾರ್ಚನೆಯಲ್ಲಿಯೇ ಮನಸ್ಸು ಓಡುತ್ತಿರುವುದು. ||೩೮-೩೯-೪೦||

ಈರೀತಿ ನಮಗೆ ಮನಸ್ಸನ್ನುಂಟುಮಾಡಿರುವ ಕಾಲವೇ ಶ್ರೇಷ್ಠವಾದ ಕಾಲ. ನಾವೇ ಅತ್ಯಂತ ಧನ್ಯರು. ಏಕೆಂದರೆ ನಮಗೆ ಈಗ ಈಶ್ವರಾರ್ಚನೆಯಲ್ಲಿ ಸಂಪೂರ್ಣ ಮಮತೆ ಹುಟ್ಟಿರುವುದು. ಹಿಂದೆ ಎಂದೂ ಇಲ್ಲದ ಆಸಕ್ತಿಯು ಈಗ ನಮಗೆ

ಈದೃಶೀ ಬುದ್ಧಿರಸ್ಮಾಕಂ ನ ಪೂರ್ವಮಭವತ್ಖಲು ।
ಅಧುನಾ ತಾವದುತ್ಪನ್ನಾ ಸಾ ನಃ ಸರ್ವಾರ್ಥಸಾಧನಂ ॥೪೨॥

ಯೇನ ಕೇನಾಪ್ಯುಪಾಯೇನ ಮಹಾಮೃತ್ಯುಂಜಯಾರ್ಚನೇ ।
ಕೃತೇ ತಾವದಿಹೇದಾನೀಂ ಮೃತ್ಯೋರಪಿ ನ ನೋ ಭಯಂ ॥೪೩॥

ಜಲಾನಿ ವಿಮಲಾನ್ಯತ್ರ ನವಬಿಲ್ವದಳಾನ್ಯಪಿ ।
ತೈರರ್ಚಿತೋ ಮಹಾದೇವಃ ಸಂತುಷ್ಟೋದ್ಯ ಭವಿಷ್ಯತಿ ॥೪೪॥

ಭಕ್ತಿಸೃಷ್ಟಿಃ ಕೃತಾನೇನ ಮಹಾಕಾರುಣಿಕೇನ ಹಿ ।
ಶಂಕರೇಣ ತಯಾಸ್ಮಾಕಂ ಸಿದ್ಧಿರೇವ ಪದೇಪದೇ ॥೪೫॥

ಸರ್ವಾರಾಧ್ಯತಮಃ ಶರ್ವಃ ಸರ್ವದೇತಿ ಪ್ರಮಾ ಪರಂ ।
ಭಕ್ತಿರೇಷಾ ಪ್ರವೃದ್ಧಾಸ್ತಿ ಶಂಕರಾನುಗ್ರಹಾತ್ಖಲು ॥೪೬॥

ಶಂಕರಾನುಗ್ರಹಸ್ಯಾಸ್ತಿ ಲೋಕೇ ಕಿಮಪಿ ದುರ್ಲಭಂ ।
ಅತಸ್ಸಾ ದುರ್ಲಭಾ ಭಕ್ತಿರಸ್ಮಾಕಮಭಿವರ್ಧತೇ ॥೪೭॥

---

ಬಂದಿರುವುದನ್ನು ನೋಡಿದರೆ ನಮ್ಮ ಸಕಲ ಇಷ್ಟಾರ್ಥಗಳೂ ಈಗ ನೆರವೇರುವುವು ಎಂಬುದು ನಿಜ. ॥೪೧-೪೨॥

ಈಗ ಬಹುಪ್ರಯಾಸದಿಂದಲಾದರೂ ಮೃತ್ಯುಂಜಯಾರ್ಚನೆಯನ್ನು ನೆರವೇರಿಸಿದುದೇ ಆದರೆ ನಮಗೆ ಮೃತ್ಯುವಿನಿಂದಲೂ ಭಯವು ತಪ್ಪಿದಂತಾಗುವುದು. ಇಲ್ಲಿ ನಿರ್ಮಲವಾದ ಜಲ, ಚಿಗುರಿದ ಬಿಲ್ವಪತ್ರೆ ಇವು ಹೇರಳವಾಗಿರುವುದರಿಂದ ಇಲ್ಲಿ ಶಿವಾರಾಧನೆಮಾಡಿದರೆ ಪರಶಿವನು ತೃಪ್ತನಾಗುವನು. ॥೪೩-೪೪॥

ಈ ದಯಾಳುವಾದ ಶಂಕರನು ಮೊದಲು ನಮ್ಮಲ್ಲಿ ಭಕ್ತಿಯನ್ನು ಸೃಷ್ಟಿ ಮಾಡಿರುವನು. ಅದರಿಂದಲೇ ನಮ್ಮಲ್ಲಿ ಸಕಲ ಇಷ್ಟಾರ್ಥಗಳೂ ನೆರವೇರುವುವು. ಸರ್ವರಿಗೂ ಪೂಜ್ಯನಾದ ಶಂಕರನು ಸಕಲ ಭೋಗವನ್ನೂ ಕೊಡುವನೆಂಬುದು ನಿಜ, ಇಂತಹ ಇಷ್ಟಾರ್ಥಪ್ರದವಾದ ಭಕ್ತಿಯು ಶಂಕರಾನುಗ್ರಹದಿಂದಲ್ಲದೆ ಮತ್ತಾವುದರಿಂದ ತಾನೇ ಬಂದೀತು? ॥೪೫-೪೬॥

ಶಂಕರಾನುಗ್ರಹವನ್ನು ಪಡೆದವನಿಗೆ ಭೂಲೋಕದಲ್ಲಿ ದೊರಕದಿರುವ ವಸ್ತುವು ಯಾವುದು? ಆದ್ದರಿಂದಲೇ ನಮಗೆ ಅಂತಹ ದುರ್ಲಭವಾದ ಶಿವಭಕ್ತಿಯು

ಶಿವಭಕ್ತಿಸುಧಾಧಾರಾ ಮುಕ್ತಿಧಾರಾಪರಂಪರಾ ।
ಸಾ ತಾವದ್ಭೂರಿಪುಣ್ಯಾನಾಂ ಹಾರಾಣಾಮೇವ ಜಾಯತೇ ॥೪೮॥

ಹಾರೋಪಹಾರಪುಷ್ಟಾಂಗಾಃ ಶಾಂಗಾಃ ಶಾಂಗಾನುಷಂಗಿಣಃ ।
ಶಾಂಗಲಿಂಗಾರ್ಚನರತಾಃ ಶಂಗಭಕ್ತಿಪರಾಯಣಾಃ ॥೪೯॥

ಶಿವಭಕ್ತಿಸುಧಾಪಾನಪೀನಾನಾಂ ಚರಣಾಂಬುಜಂ ।
ಸ್ಮೃತ್ವಾಪಿ ಮುಕ್ತಃ ಪಾಪೇಭ್ಯೋ ಭವಿಷ್ಯತ್ಯೇವ ಮಾನವಃ ॥೫೦॥

ಸಹಸಾ ನ ಭವತ್ಯೇವ ಶಿವಭಕ್ತಿಃ ಸುಧಾಮಯೀ ।
ಸುಧಾ ಮರ್ತ್ಯೈಃ ಕಥಂ ಪ್ರಾಪ್ಯಾ ವಿನಾ ಯತ್ನೇನ ಕೇನ ಸಾ ॥೫೧॥

ನ ಯತ್ನೈರ್ನಾಪಿ ತಪಸಾ ಶಿವಭಕ್ತಿಃ ಪರಂ ತು ಸಾ ।
ಶಿವಾನುಗ್ರಹಮಾತ್ರೇಣ ಭವಿಷ್ಯತಿ ನ ಸಂಶಯಃ ॥೫೨॥

ರಚಿತಾ ಶಂಕರೇಣೈವ ಶಿವಭಕ್ತಿಸುಧಾಪ್ರಪಾ ।
ಸಾ ಮಹಾದೇವಭಕ್ತಾನಾಂ ಸುಲಭಾ ಖಲು ಕೇವಲಂ ॥೫೩॥

---

ವೃದ್ಧಿಹೊಂದುತ್ತಿರುವುದು. ಶಿವಭಕ್ತಿಯೆಂಬ ಅಮೃತಧಾರೆಯು ಮುಕ್ತಿಧಾರೆಗೆ ಸಮನಾದದ್ದು. ಅಂತಹ ಅಮೃತಧಾರೆಯು ಅತಿಶಯವಾದ ಸುಕೃತಿಗಳಿಗೆ ಮಾತ್ರ ಲಭ್ಯವೇ ಹೊರತು ಉಳಿದವರಿಗಿಲ್ಲ. ॥೪೭-೪೮॥

ಹಾರ, ಉಪಹಾರ ಇವುಗಳಿಂದ ಅಲಂಕೃತಗಳಾದ ಶಿವಲಿಂಗಗಳು ಭಕ್ತರಿಗೆ ಸರ್ವದಾ ಸುಖಪ್ರದಗಳು. ಅಂತಹ ಶಿವಲಿಂಗಗಳನ್ನು ಅರ್ಚಿಸಿ ಅದರಲ್ಲಿಯೇ ನೆಟ್ಟ ಭಕ್ತಿಯುಳ್ಳಂತಹವರ ಪಾದಕಮಲಗಳನ್ನು ಸ್ಮರಿಸುವುದರಿಂದಲೂ ಮನುಷ್ಯರು ಸಕಲ ಪಾಪಮುಕ್ತರಾಗುವರು. ಇದರಲ್ಲಿ ಸಂಶಯವಿಲ್ಲ. ॥೪೯-೫೦॥

ಶಿವಭಕ್ತಿಯು ಕೇವಲ ಅಮೃತಮಯವಾದದ್ದು. ಮನುಷ್ಯರಿಗೆ ಅಮೃತವು ಎಂದಾದರೂ ಸುಲಭವಾದೀತೇ ? ಶಿವಾನುಗ್ರಹಬಲದಿಂದಲೇ ಸಂಪಾದಿಸುವ ವಸ್ತುವೆಂದರೆ ಶಿವಭಕ್ತಿರೂಪವಾದ ಅಮೃತವೊಂದೇ. ಇದರಲ್ಲಿ ಸಂಶಯವಿಲ್ಲ. ॥೫೧-೫೨॥

ಶಿವಭಕ್ತಿಯೆಂಬ ಅಮೃತದ ಅರವಟ್ಟಿಗೆಯು ಸಾಕ್ಷಾಚ್ಛಂಕರನಿಂದಲೇ ನಿರ್ಮಿತವಾದುದು. ಅದು ಕೇವಲ ಮಹಾದೇವ ಪೂಜಕರಿಗೆ ಮಾತ್ರ ದೊರೆತೀತು.

ಶಿವಭಕ್ತಿಸುಧಾಪಾನಂ ನ ಕೃತಂ ಯೇನ ತಜ್ಜನಿಃ ।
ವ್ಯರ್ಥಾ ತಜ್ಜನನೀ ತಾವದತಿವಂಧ್ಯೇತಿ ಧೀರ್ಮಮ ॥೫೪॥

ಕಿಂ ತೇನ ಜಾತಮಾತ್ರೇಣ ಪುತ್ರೇಣ ವಿಫಲಂ ಪರಂ ।
ಅಸಂಪ್ರಾಪ್ಯ ಮಹಾದೇವಭಕ್ತಿಭಾರೇಣ ಕೇವಲಂ ॥೫೫॥

ಯಸ್ಯ ಭಕ್ತಿರ್ಮಹಾದೇವೇ ನ ಭವಿಷ್ಯತಿ ಸರ್ವಥಾ ।
ಧರಾಭಾರಕರಾಕಾರಂ ತಂ ಧರಾ ಸಹತೇ ಕಥಂ ॥೫೬॥

ಗಿರಯೋಽಪಿ ನ ಭಾರಾಯ ಧರಾಯಾಃ ಕಿಂತು ತಸ್ಯ ಸಾ ।
ನ ಭಕ್ತಿಃ ಸ ತು ಭಾರಾಯ ಸಾ ತನ್ಮರಣಮಿಚ್ಛತಿ ॥೫೭॥

ಶಿವಭಕ್ತಿವಿಹೀನಾನಾಂ ಧರಾ ಭಾರಾಯ ಜೀವನಂ ।
ತತಸ್ಸಾ ನ ಕಥಂ ತೇಷಾಂ ಧರಾಮರಣಮಿಚ್ಛತಿ ॥೫೮॥

ಧರಣೀ ಮರಣಂ ತಸ್ಯ ತ್ವರಯಾ ಯಾಚತೇ ಮುಹುಃ ।
ನ ಯಸ್ಯ ಶಂಕರೇ ಭಕ್ತಿರ್ದೃಢಮೂಲಾ ಪ್ರಜಾಯತೇ ॥೫೯॥

---

ಯಾವ ಮನುಷ್ಯನು ಈ ಭಕ್ತಿಯೆಂಬ ಅಮೃತವನ್ನು ಪಾನಮಾಡನೋ ಅವನ ಜನ್ಮವೇ ವ್ಯರ್ಥ. ಅವನ ತಾಯಿಯು ಅವನನ್ನು ಮಗನನ್ನಾಗಿ ಪಡೆದಿದ್ದರೂ ಆಕೆಯು ವಂಧ್ಯೆಗೆ ಸಮಾನಳೆಂದೇ ನನ್ನ ಅಭಿಪ್ರಾಯ. ॥೫೩-೫೪॥

ಯಾವ ಮಗನು ಶಿವನಲ್ಲಿ ಭಕ್ತಿಶೂನ್ಯನಾಗಿ ಜನಿಸುವನೋ, ಅಂತಹ ಪುತ್ರಪ್ರಾಪ್ತಿಯು ಮಾತಾಪಿತೃಗಳಿಗೆ ವ್ಯರ್ಥವೆನಿಸುವುದು. ಶಿವಭಕ್ತಿಶೂನ್ಯನಾದವನು ಕೇವಲ ಭೂಭಾರವೇ ಹೊರತು ಯಾರಿಗೂ ಪ್ರಯೋಜನವೆನಿಸುವುದಿಲ್ಲ. ಅಂತಹವನನ್ನು ಭೂಮಿಯು ಹೊರುವುದಕ್ಕೂ ಯೋಚಿಸುವುದು. ॥೫೫-೫೬॥

ಭೂಮಿಗೆ ಪರ್ವತಗಳೂ ಭಾರವಸ್ತುಗಳಲ್ಲ. ಶಿವಭಕ್ತಿಶೂನ್ಯನಾದವನು ಮಾತ್ರ ಭಾರವಾಗುವನು. ಅಂತಹವರ ಬದುಕುವಿಕೆಯನ್ನೇ ಭೂಮಿಯು ಭಾರವೆಂದು ಭಾವಿಸುವಳು. ಅಲ್ಲದೆ ಅಂತಹವರು ನಾಶವಾಗಲೆಂದೂ ಭೂಮಿಯು ಹಾರೈಸುತ್ತಿರುವಳು. ॥೫೭-೫೮॥

ಭೂದೇವಿಯಾದರೋ ಹೀಗೆ ಹೇಳುವಳು. ಹರನಲ್ಲಿ ಭಕ್ತಿಯಿಲ್ಲದವರು ಬೇಗ ನಾಶವಾಗಲಿ. ಶಿವಭಕ್ತಿಯೆಂಬ ಅಮೃತಧಾರೆಯಿಂದ ಅಭಿಷಿಕ್ತರಾಗದ ಪಾಪಿ

ರೇ ರೇ ಶಂಕರಭಕ್ತಿಭಾರಸುಧಯಾ ಕಿಂ ನಾಭಿಷಿಕ್ತೋಽಧುನಾ
ಧಿಗ್ ಧಿಗ್ ಧಿಕ್ತವ ಜೀವನಂ ಮರಣಮಪ್ಯದ್ಯಾಸ್ತು ತೇ ಸತ್ವರಂ।
ಭಾರೋ ಮೇ ಗಿರಿಭಿರ್ನ ಕಿಂ ತು ಭವತಾ ತದ್ಭಕ್ತಿಹೀನೇನ ಮೇ
ಭಾರೋ ಭೂರಿತರಾ ಭವತ್ಯನುದಿನಂ ಹಾರೇತರೈರ್ದುರ್ಧರೈಃ ॥೬೦॥

ಭಕ್ತಿರ್ಭಾಗ್ಯವತೋ ಭವೇ ಭವತಿ ಸಾ ಭಾವೇ ಭವೇ ದುರ್ಲಭಾ
ಭಾವಸ್ಯಾಮಿತಪುಣ್ಯಪೂರ್ಣಕರುಣಾಪೂರ್ಣಾರ್ಣವಸ್ಯಾನ್ವಯಾತ್ ।
ಕಲ್ಯಾಣಾನ್ಯಪಿ ಹಾರಭಕ್ತಿಸುಸುಧಾಸಿಕ್ತೇನ ಮೇ ಜೀವನಂ
ಭೂಭಾರಾಯ ಪರಂ ಭವಂತಿ ಬಹವೋ ಹಾರೇತರಾಃ ಪಾಮರಾಃ ॥೬೧॥

ರೇ ಹಾರೇತರ ರೇ ಕುಶೀಲಕುಮತೇ ರೇ ಶಂಕರಾರಾಧನ
ಧ್ಯಾನಾಧಾನವಿರುದ್ಧದುರ್ಧರದುರಾಚಾರಪ್ರವೀರಾಧುನಾ ।
ಮೂರ್ಧಾ ತೇ ಭಿದುರೈರಧಃ ಪತತು ಮೇ ಭಾರಾಯ ತೇ ಜೀವನಂ
ಧಿಗ್ಧಿಗ್ಧಿಕ್ತವ ಜೀವನಂ ಚಿರಮಿದಂ ಭೂಯೋಽಪಿ ಭಾರಾಯತೇ ॥೬೨॥

---

ಗಳು ನನಗೆ ನಿತ್ಯವೂ ಹೆಚ್ಚಿನ ಭಾರವನ್ನು ಕೊಡುತ್ತಿರುವರು. ಪರ್ವತಗಳನ್ನು ಹೊರುವುದರಿಂದಲೂ ನನಗೆ ಅಷ್ಟು ಆಯಾಸವಾಗುವುದಿಲ್ಲ. ಇಂತಹ ಶಿವಭಕ್ತಿ ವಿಮುಖರಿಂದ ನನಗೆ ಜುಗುಪ್ಸೆಯಾಗುತ್ತಿದೆ. ಅವರೆಲ್ಲರೂ ಬೇಗ ನಾಶವಾಗಲಿ ಎಂದು ಆಗಾಗ ಹೇಳಿಕೊಳ್ಳುವಳು. ॥೫೯-೬೦॥

ಯಾರು ಪರಮೇಶ್ವರನ ಪೂರ್ಣಾನುಗ್ರಹಕ್ಕೆ ಪಾತ್ರರಾದವರ ವಂಶದಲ್ಲಿ ಜನಿಸಿರುವರೋ, ಅವರಿಗೆ ಮಾತ್ರ ಈಶ್ವರ ವಿಷಯಕವಾದ ಭಕ್ತಿಯು ಸಂಪೂರ್ಣವಾಗಿ ಒದಗುವುದು. ಆ ಭಕ್ತಿಸುಧೆಯಿಂದ ಸಿಕ್ತರಾದವರಿಗೇ ಸಕಲ ಕಲ್ಯಾಣಗಳೂ ಲಭಿಸುವುವು. ಹರಭಕ್ತರಲ್ಲದ ಇತರರು ಕೇವಲ ಭೂಭಾರಾರ್ಥವಾಗಿರುವರೇ ಹೊರತು ಅನ್ಯಥಾ ಇಲ್ಲ. ॥೬೧॥

ಎಲೈ ಹರಭಕ್ತಿವಿದೂರನೇ, ಎಲೈ ಕದಾಚಾರಿಯೇ, ದುರ್ಬುದ್ಧಿಯುಳ್ಳವನೇ, ನೀನು ಶಂಕರಾರಾಧನವೆಂಬ ಸದಾಚಾರಕ್ಕೆ ವಿರುದ್ಧವಾದ ದುರಾಚಾರವನ್ನು ಹೊಂದಿರುವವರಲ್ಲಿ ವೀರನಾಗಿರುವೆಯಲ್ಲವೇ? ನಿನ್ನ ಶಿರಸ್ಸು ಈಗ ಚೂರಾಗಿ ಭೂಮಿಗೆ ಬಿದ್ದುಹೋಗಬಾರದೇ! ನೀನು ಭೂಮಿಗೆ ಕೇವಲ ಹೊರೆಯಂತಿರುವೆ.

ಹಾರ್ಯೈರೇವ ಮಮಾಪಿ ಜೀವನಮಿದಂ ತತ್ಪಾದರೇಣುಪ್ರಭಾ
ತಾವದ್ಭಾತಿ ವಿಭೂಷಣಾಯ ಭಸಿತಂ ತತ್ಪಾದುಕಾಸಂಗತಂ ।
ತದ್ದೇಹಪ್ರಭವಪ್ರಭಂಜನಮಹಾಸಂಜೀವನೀಸಂಗಮಾತ್
ತಾವಜ್ಜೀವನಮಿತ್ಯವೈಮಿ ಮುಹುರಪ್ಯತ್ಯದ್ಭುತಃ ಶಾಂಕರಃ ॥೬೩॥

ಕೋ ವಾ ಶಾಂಕರಪುಂಗವೇನ ಸದೃಶೋ ಭೂಮಂಡಲೇ ದೃಶ್ಯತೇ
ತತ್ತುಲ್ಯೋ ನ ಸುರೋ ನ ವಾ ಮುನಿವರೋ ಗಂಧರ್ವವರ್ಯೋಽಪಿ ವಾ ।
ಶೇಷೋ ವಾ ಗುರುರೇವ ವಾ ವಿಧಿರಯಂ ನಾರಾಯಣೋ ವಾ ಯತೋ
ನಿತ್ಯಂ ಶಂಕರಪಾದುಕಾರ್ಚನರತಂ ವೇದಾಂತಗೀತಂ ವಿದುಃ ॥೬೪॥

ಯೇನಾಪಾರಜನಿಷ್ವಪಾರವಿಭವೈರ್ಭಾವಾನುರಾಗಾದರಾ
ನ್ನೀರೈರಪ್ಯಮಲೈಃ ಪ್ರಫುಲ್ಲಕಮಲೈರ್ಬಿಲ್ವೀದಲೈಃ ಕೋಮಲೈಃ ।
ಮೂಲೈರ್ಬಿಲ್ವಫಲೈಃ ಫಲೈಶ್ಚ ವಿವಿಧೈರ್ಲಿಂಗಂ ಸಮಭ್ಯರ್ಚಿತಂ
ಶಾಂಗಂ ಮಂಗಲದಂ ಸ ಏವ ಹಿ ಹರಪ್ರೇಮಾಸ್ಪದಃ ಶಾಂಕರಃ ॥೬೫॥

---

ನಿನ್ನ ಜೀವನವು ಅತಿನಿಂದಿತವಾಗಿರುವುದು. ನಿನ್ನ ಜನ್ಮವೇ ವ್ಯರ್ಥವಾಯಿತಲ್ಲಾ. ॥೬೨॥

ಈಶ್ವರ ಭಕ್ತರ ಸಹವಾಸದಿಂದಲೇ ನನ್ನ ಜೀವನವು ಸಾರ್ಥಕವೆನಿಸುವುದು. ಅವರ ಪಾದಧೂಳಿಯೇ ನಮಗೆ ಅಲಂಕಾರಪ್ರಾಯವಾದ ಭಸ್ಮವು. ಅವರ ದೇಹ ಜನಿತವಾದ ಉಸುರೇ ನಮಗೆ ಸಂಜೀವನ. ಅವರ ಜೀವನವೇ ನನ್ನ ಜೀವನ. ಶಂಕರಭಕ್ತನು ಅತಿಶಯವಾದ ಮಹಿಮೆಯುಳ್ಳವನಲ್ಲವೇ! ಅವನಿಗಿಂತ ಅಧಿಕನಾದ ವನು ಲೋಕದಲ್ಲಿ ಮತ್ತಾರೂ ಇಲ್ಲವೆಂದೇ ನಾನು ನಂಬಿರುವೆನು. ॥೬೩॥

ಶಂಕರಭಕ್ತರಿಗೆ ಸಮರಾದವರು ಭೂಲೋಕದಲ್ಲಿ ಯಾರೂ ಇಲ್ಲ. ದೇವತೆ ಗಳಲ್ಲಾಗಲಿ ಋಷಿಜನರಲ್ಲಾಗಲಿ ಗಂಧರ್ವರಲ್ಲಾಗಲಿ ಹರಸೇವಕರಿಗೆ ಸದೃಶರಾದ ವರು ಇಲ್ಲವೆಂದೇ ನನ್ನ ಭಾವನೆ. ಹೆಚ್ಚೇನು! ಆದಿಶೇಷ, ಬೃಹಸ್ಪತಿ, ಬ್ರಹ್ಮ, ವಿಷ್ಣು ಮುಂತಾದವರು ಯಾರೂ ಶಂಕರನಿಗೆ ಸಮನೆನಿಸಲಾರರು. ಇಂತಹ ಶಂಭು ಭಕ್ತರನ್ನು ವೇದಾಂತಸ್ತುತರನ್ನಾಗಿಯೇ ತಿಳಿದಿರುವರು. ॥೬೪॥

ಯಾವನು ಈಶ್ವರಲಿಂಗವನ್ನು ನಾನಾವಿಧವಾದ ವೈಭವಗಳಿಂದಲೂ, ಭಕ್ತಿ ಭಾವಾತಿರೇಕದಿಂದಲೂ ಅರಳಿದ ಕಮಲ, ಶುದ್ಧಜಲ, ಬಿಲ್ವಪತ್ರಾದಿ ಪೂಜಾದ್ರವ್ಯ

ಸಶಿವಂ ಹೃದಿ ಸಾಧು ಶೀಲಯಂತಃ
ಶಿವಪಂಚಾಕ್ಷರಮಕ್ಷರಂ ಜಪಂತಃ ।
ಗಿರಿಶಾಯ ಹಿತಾರ್ಥಮರ್ಪಯಂತಃ
ಶಿವಮೇವ ಪ್ರಯತಾಃ ಪ್ರಯಾಂತಿ ಸಂತಃ ॥೬೬॥

ಗಿರಿಶಾಹಿತಮರ್ಥಮರ್ದಯಂತಃ ।
ಶಿವಪೂಜಾರ್ಥಮಿಹಾರ್ಥಮರ್ಥಯಂತಃ ।
ಶಿವಮಾರ್ಗರತಾನ್ ಪ್ರಚಾರಯಂತಃ
ಶಿವಮೇವ ಪ್ರಯತಾಃ ಪ್ರಯಾಂತಿ ನಿತ್ಯಂ ॥೬೭॥

ಶಿವಪೂಜನಪುಣ್ಯಮಾಚರಂತಃ
ಶಿವಪೂಜಾನಿಯಮಾನ್ ಪ್ರತೀಕ್ಷಯಂತಃ ।
ಶಿವಭಕ್ತಿವಿರೋಧಮಾಕ್ಷಿಪಂತಃ
ಶಿವಮೇವ ಪ್ರಯತಾಃ ಪ್ರಯಾಂತಿ ನಿತ್ಯಂ ॥೬೮॥

---

ಗಳಿಂದಲೂ ಅರ್ಚಿಸುವನೋ, ಅವನೇ ಶಂಕರನಿಗೆ ಅತಿಯಾದ ಪ್ರೇಮಾಸ್ಪದನು. ಆತನೇ ಸಕಲಮಂಗಳಗಳಿಗೂ ಭಾಗಿಯು. ||೬೫||

ಸರ್ವದಾ ಹೃದಯದಲ್ಲಿ ಪಾರ್ವತೀಸಹಿತನಾದ ಶಂಕರನನ್ನು ಧ್ಯಾನಿಸುತ್ತಾ, ಶಿವಪಂಚಾಕ್ಷರೀಮಂತ್ರವನ್ನು ಜಪಿಸುತ್ತಾ, ಸಕಲ ಕಾರ್ಯಗಳನ್ನೂ ಗಿರಿಶನಿಗೆ ಅರ್ಪಿಸುತ್ತಾ ಶಂಕರನನ್ನು ಆರಾಧಿಸುವವರು ಸಾಕ್ಷಾಚ್ಛಿವಸಾಯುಜ್ಯವನ್ನೇ ಪಡೆಯುವರು. ||೬೬||

ಪರಶಿವನಿಗೆ ಅಹಿತವಾದ ಕಾರ್ಯಗಳನ್ನು ನಾಶಮಾಡುತ್ತಲೂ, ಶಿವಪೂಜೆಗಾಗಿಯೇ ಸಕಲಸಂಭಾರಗಳನ್ನೂ ಒದಗಿಸುತ್ತಲೂ, ಶಿವಮಾರ್ಗಗಾಮಿಗಳನ್ನು ಅಭಿವೃದ್ಧಿಗೊಳಿಸುತ್ತಲೂ ಇರುವವರು ಶಿವಸ್ವರೂಪರೇ ಆಗುವರು. ||೬೭||

ಶಿವಪೂಜಾರೂಪವಾದ ಪುಣ್ಯಾರ್ಜನೆಮಾಡುತ್ತಾ ಶಿವಪೂಜಾನಿಯಮಗಳನ್ನೇ ಸದಾ ಗ್ರಹಿಸುತ್ತಾ, ಶಿವಭಕ್ತಿಗೆ ವಿರೋಧಿಗಳಾಗಿರುವವರನ್ನು ನಿಂದಿಸುತ್ತಾ ಜೀವಿಸುವವರು ಶಿವಸಾರೂಪ್ಯವನ್ನು ಪಡೆಯುವರು. ||೬೮||

ಶಿವಶಾಸ್ತ್ರರತಾನ್ ಪರೀಕ್ಷಯಂತಃ
ಶಿವಪೂಜಾನಿರತಾನ್ ಪ್ರಮೋದಯಂತಃ ।
ಶಿವಮೇವ ಸುರೋತ್ತಮಂ ವದಂತಃ
ಶಿವಮೇವ ಪ್ರಯತಾಃ ಪ್ರಯಾಂತಿ ನಿತ್ಯಂ ॥೬೯॥

ಶಿವಭಕ್ತಿನಿಧಾನಮಾರ್ಜಯಂತಃ
ಶಿವಭಕ್ತ್ಯಂಬುನಿಧೀನ್ ಪ್ರವರ್ಧಯಂತಃ ।
ಶಿವಭಕ್ತಿರಸಂ ಪ್ರಬೋಧಯಂತಃ
ಶಿವಮೇವ ಪ್ರಯತಾಃ ಪ್ರಯಾಂತಿ ನಿತ್ಯಂ ॥೭೦॥

ಶ್ರುತಿಬೋಧಿತಭೂತಿಮುದ್ವಹಂತಃ
ಶ್ರುತರುದ್ರಾಕ್ಷವಿಭೂಷಣಂ ವಹಂತಃ ।
ಶಿವಲಿಂಗಮಸಂಗಮರ್ಚಯಂತಃ
ಶಿವಮೇವ ಪ್ರಯತಾಃ ಪ್ರಯಾಂತಿ ನಿತ್ಯಂ ॥೭೧॥

ಸ್ಮರಶಾಸಕಮೇವ ಸಂಸ್ಮರಂತೋ
ಭಗವಂತಂ ಭವಮೇವ ಭಾವಯಂತಃ ।

---

ಸರ್ವದಾ ಶಿವಶಾಸ್ತ್ರಾಭ್ಯಾಸಿಗಳನ್ನು ಪರೀಕ್ಷಿಸುತ್ತಲೂ, ಶಿವಪೂಜಕರನ್ನು ಆನಂದಗೊಳಿಸುತ್ತಲೂ, ಶಿವನನ್ನೇ ದೇವಶ್ರೇಷ್ಠನೆಂದು ಹೇಳುತ್ತಲೂ ಇರುವವರು ಶಿವಾಭೇದವನ್ನೇ ಪಡೆಯುವರು. ॥೬೯॥

ಈಶ್ವರಭಕ್ತಿಗೆ ಮೂಲಕಾರಣವಾದ ನಿಧಿಯನ್ನೇ ಸಂಪಾದಿಸುತ್ತಾ, ಶಿವಭಕ್ತಿಯಲ್ಲಿ ಸಮುದ್ರಪ್ರಾಯರಾಗಿರುವವರನ್ನು ಪ್ರೋತ್ಸಾಹಿಸುತ್ತಾ, ಶಿವಭಕ್ತಿರಸವನ್ನು ಪ್ರಚಾರಮಾಡುತ್ತಿರುವವರೂ ಶಿವೈಕ್ಯವನ್ನು ಪಡೆಯುವರು. ॥೭೦॥

ವೇದೋಕ್ತವಾದ ಶಿವಮಹಿಮೆಯನ್ನು ತಿಳಿದವರೂ, ರುದ್ರಾಕ್ಷಿಧಾರಣೆಯ ಮಹಿಮೆಯನ್ನರಿತವರೂ, ಸರ್ವದಾ ಮತ್ತೊಂದರ ಸಹವಾಸವನ್ನು ಬಯಸದೆ ಸರ್ವದಾ ಶಿವಲಿಂಗಸೇವಾಧುರೀಣರೂ ಆದವರು ಶಿವಸ್ವರೂಪವನ್ನು ತಾಳುವರು ॥೭೧॥

ಸರ್ವದಾ ಮದನಾರಿಯಾಗಿ ಭಗವತ್ಸ್ವರೂಪನೆನಿಸಿದ ಪರಶಿವನನ್ನೇ ಧ್ಯಾನಿ

ಭವಭೂತಭಯಾನಿ ಸಂಹರಂತಃ
ಶಿವಮೇವ ಪ್ರಯತಾಃ ಪ್ರಯಾಂತಿ ನಿತ್ಯಂ ॥೭೨॥

ಶಿವನಾಮಸುಧಾನಿಧಿಂ ಪಿಬಂತಃ
ಶಿವಮೂರ್ತಿಂ ಹೃದಿ ಸಂತತಂ ಭಜಂತಃ ।
ಶಿವಸುಂದರಮಂದಿರೇ ವಸಂತಃ
ಶಿವಮೇವ ಪ್ರಯತಾಃ ಪ್ರಯಾಂತಿ ನಿತ್ಯಂ ॥೭೩॥

ತ್ರಿಪುರಾರಿಪುರೇಷು ಸಂಚರಂತಃ
ತ್ರಿಪುರಾರಾತಿಕಥಾಂ ವಿಚಾರಯಂತಃ ।
ತ್ರಿದಶೇಶವಿಧೇಯಮಾಚರಂತಃ
ಶಿವಮೇವ ಪ್ರಯತಾಃ ಪ್ರಯಾಂತಿ ನಿತ್ಯಂ ॥೭೪॥

ನವರತ್ನನುತಿಂ ಮುಹುಃ ಪಠಂತೋ
ನವಚಂದ್ರಾಭರಣಂ ವಿಲೋಕಯಂತಃ ।
ನವಖಂಡಮಹೀಂ ಪ್ರಶಾಸಯಂತಃ
ಶಿವಮೇವ ಪ್ರಯತಾಃ ಪ್ರಯಾಂತಿ ನಿತ್ಯಂ ॥೭೫॥

---

ಸುತ್ತಾ ಶಂಕರನ ಪ್ರಮಥಗಣಗಳಿಂದ ಭಯವನ್ನು ಬಿಟ್ಟು ಅವರನ್ನೇ ಪೂಜಿಸು ವಂತಹವರು ಶಂಕರ ಸಾನ್ನಿಧ್ಯವನ್ನು ಪಡೆಯುವರು. ॥೭೨॥

ನಿತ್ಯವೂ ಯಾರು ಶಿವನಾಮವೆಂಬ ಅಮೃತವನ್ನು ಸವಿಯುತ್ತಾ, ಶಿವ ಮೂರ್ತಿಯನ್ನೇ ಹೃದಯದಲ್ಲಿ ಧ್ಯಾನಿಸುತ್ತಾ, ಶಿವಾಲಯದಲ್ಲಿಯೇ ಕಾಲಕಳೆಯು ವರೋ ಅವರು ಶಿವಸನ್ನಿಧಿಗೆ ಬಿಜಯಮಾಡುವರು. ॥೭೩॥

ಶಿವಕ್ಷೇತ್ರಗಳಲ್ಲಿ ಸಂಚರಿಸಿ, ಶಿವಕಥೆಗಳನ್ನೇ ವಿಮರ್ಶಿಸುತ್ತಾ, ಶಿವಪೂಜಾ ನಿರತರಾಗಿರುವವರೂ ಶಿವಸಾರೂಪ್ಯವನ್ನು ಪಡೆಯುವರು. ॥೭೪॥

ಈ ನವರತ್ನಗಳಂತಿರುವ ಒಂಬತ್ತು ಶ್ಲೋಕಗಳಿಂದ ಶಂಕರನನ್ನು ಧ್ಯಾನಿಸಿ, ಚಂದ್ರಶೇಖರನಾದ ಶಂಕರನ ಅನುಗ್ರಹವನ್ನು ಸಂಪಾದಿಸಿದವರು ನವಖಂಡಾತ್ಮಕ ವಾದ ಈ ಭೂಭಾಗವನ್ನು ಆಳುತ್ತಾ ಕೊನೆಯಲ್ಲಿ ಶಿವಸಾಯುಜ್ಯವನ್ನು ಹೊಂದುವ ರೆಂಬುದರಲ್ಲಿ ಸಂದೇಹವಿಲ್ಲ. ॥೭೫॥

ಇತ್ಥಂ ವದಂತಸ್ತೇ ಸರ್ವೇ ಮಿಥಿಲಾದೇಶಸಂಶ್ರಯಾಃ ।
ಶಿವಾರ್ಚನಪರಾ ಏವ ರುದ್ರಾಧ್ಯಾಯಜಪಾದರಾಃ ॥೨೬॥

ಯಾಜ್ಞವಲ್ಕ್ಯಃ ಕುಲಗುರುಸ್ತೇಷಾಂ ಶಾಂಭವಸತ್ತಮಃ ।
ಸ ಕದಾಚಿದನಾಹೂತೋಽಪ್ಯಾಗತೋ ಜನಕಾಲಯಂ ॥೨೭॥

ತಂ ಮುನಿಂ ಜನಕೋ ದೃಷ್ಟ್ವಾ ಭಸ್ಮೋದ್ಧೂಲಿತವಿಗ್ರಹಂ ।
ತ್ರಿಪುಂಡ್ರರೇಖಾವಿಲಸತ್ಫಾಲಭಾಗಂ ತುತೋಷ ಸಃ ॥೨೮॥

ರುದ್ರಾಕ್ಷಮಾಲಾಭರಣಂ ಶಿವಮಂತ್ರಜಪೋತ್ಸುಕಂ ।
ಶಿವಧ್ಯಾನಸುಧಾಪಾನಪೀನಲೋಲುಪಮಾನಸಂ ॥೨೯॥

ಶಿವಧ್ಯಾನಪರಾನಂದಸಂದೋಹಹೃದಯಾಂಬುಜಂ ।
ಆನಂದಾಶ್ರುಸುಧಾಧಾರಾಧಾರಾಧರವರಂ ಪರಂ ॥೩೦॥

ರುದ್ರಾಧ್ಯಾಯಾರ್ಥಕಥನಪ್ರವೀಣಂ ಪ್ರವಣೇಕ್ಷಣಂ ।
ವಿಲೋಕ್ಯ ಮುದಿತೋ ನತ್ವಾ ಬಭಾಷೇ ವಿನಯಾನ್ವಿತಃ ॥೩೧॥

---

ಹೀಗೆ ಜನಕರಾಜನ ಪ್ರಜೆಗಳು ಸದಾ ಶಿವಪೂಜಾಧುರಂಧರರಾಗಿ ಮಿಥಿಲಾ ನಗರದಲ್ಲಿ ವಾಸಿಸುತ್ತಿದ್ದರು. ಅವರಿಗೆ ಕುಲಗುರುವೂ ಶಂಕರಸೇವಕಾಗ್ರಣಿಯೂ ಆದ ಯಾಜ್ಞ್ಯವಲ್ಕ್ಯಮಹರ್ಷಿಯು ಒಂದು ದಿನ ಯಾವ ಆಹ್ವಾನವೂ ಇಲ್ಲದೆ ಜನಕರಾಜನ ಮನೆಗೆ ದಯಮಾಡಿಸಿದನು. ||೨೬-೨೭||

ಆ ಮುನಿಯು ಭಸ್ಮಲಿಪ್ತಾಂಗನಾಗಿ ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನಿಟ್ಟು, ಕಂಠದಲ್ಲಿ ರುದ್ರಾಕ್ಷಿಯ ಆಭರಣವನ್ನು ಧರಿಸಿ, ಶಿವಮಂತ್ರವನ್ನೇ ಜಪಿಸುತ್ತಾ, ಶಿವಧ್ಯಾನವೆಂಬ ಅಮೃತಪಾನದಿಂದ ವಿಕಸಿತವಾದ ಹೃದಯಕಮಲವುಳ್ಳವನಾಗಿ, ಶಿವಧ್ಯಾನ ರಾಶಿಯಲ್ಲಿ ಮುಳುಗಿದ ಮನಸ್ಸುಳ್ಳವನಾಗಿ, ಶಿವವಿಷಯಕವಾದ ಸಮಾಧಿಯಿಂದ ಆನಂದಬಾಷ್ಪಸಹಿತನಾಗಿ ಬಂದದ್ದನ್ನು ನೋಡಿ, ಜನಕರಾಜನು ಬಹಳ ಸಂತೋಷಪಟ್ಟನು. ||೨೮-೨೯-೩೦||

ಅಲ್ಲದೆ ರುದ್ರಾಧ್ಯಾಯದ ಅರ್ಥವನ್ನು ಸುಲಭವಾಗಿ ಬೋಧಿಸುವುದರಲ್ಲಿ ಅತ್ಯಂತ ಸಮರ್ಥನಾದ ಯಾಜ್ಞ್ಯವಲ್ಕ್ಯಮಹರ್ಷಿಯನ್ನು ನೋಡಿ ಜನಕರಾಜನು

ಕೃತಕೃತ್ಯೋಽಸ್ಮಿ ಧನ್ಯೋಽಸ್ಮಿ ಭವದಾಗಮನಾದಿಹ ।
ಕುತಸ್ಸಮಾಗತಃ ಸ್ವಾಮಿನ್ ಶಾಂತಂ ವರ್ಷಾನಘಂ ಖಲು ॥೮೨॥

ಮಹಾಭ್ಯುದಯಕಾಲೋಽಯಂ ಪಾಪಾನಾಂ ಪ್ರಲಯೋಽಪ್ಯಭೂತ್ ।
ಶಾಂಭವಾಗಮನಂ ಭಾಗ್ಯೈರ್ಭವತ್ಯೇವ ಭವೇ ಭವೇ ॥೮೩॥

ಕಿಮಸಂಭಾವಿತಂ ಪುಂಸಾಂ ಶಾಂಭವಾಗಮನೇ ಸತಿ ।
ಶಾಂಭವೈಸ್ಸಹ ಸೌಭಾಗ್ಯಂ ಸಮಾಯಾತೀತಿ ನಿಶ್ಚಿತಂ ॥೮೪॥

ಅತಃ ಪರಂ ಮಂಗಳಾನಾಂ ನಿಲಯೋಽಪ್ಯಾಲಯೋ ಮಮ ।
ಮಂಗಳಾಪತಿಭಕ್ತಸ್ಯ ಯಸ್ಮಾದಾಗಮನಂ ಗೃಹೇ ॥೮೫॥

ಧಾರಾಧರೇಣಾಪಿ ವಿನಾತಿವೃಷ್ಟಿ
ರ್ವೃಷ್ಟ್ಯಾ ವಿನಾ ಸಸ್ಯಸಮೂಹವೃದ್ಧಿಃ ।
ಯಥಾ ತಥಾ ಶಾಂಭವಪಾದಪದ್ಮ
ರಜಃ ಪ್ರಸಾರೋಽಪಿ ಮುದೇ ಗೃಹೇ ಮೇ ॥೮೬॥

---

ಹೀಗೆಂದನು. "ಮಹರ್ಷಿಯೇ, ನಿನ್ನ ದಿವ್ಯದರ್ಶನದಿಂದ ನಾನು ಧನ್ಯನಾದೆನು. ಕೃತಕೃತ್ಯನಾದೆನು. ಎಲೈ ಸ್ವಾಮಿಯೇ, ಇಲ್ಲಿಗೆ ದಯಮಾಡಿಸಲು ಕಾರಣವೇನು? ||೮೧-೮೨||

ಮಹರ್ಷಿಯೇ, ಈಗ ನನ್ನ ಸಕಲಪಾಪರಾಶಿಯೂ ನಾಶವಾಯಿತು. ಇದು ನನಗೆ ಅಭ್ಯುದಯಕಾಲ. ಶಂಕರನ ಭಕ್ತರು ಮನೆಗೆ ಬರುವುದೇ ಒಂದು ದೊಡ್ಡ ಭಾಗ್ಯ. ಇವರ ಆಗಮನದಿಂದ ಪ್ರತಿಜನ್ಮದಲ್ಲಿಯೂ ಐಶ್ವರ್ಯವು ತಪ್ಪಲಾರದು. ಶಂಭು ಭಕ್ತರನ್ನು ದರ್ಶನಮಾಡಿದಮೇಲೆ ಪುರುಷರಿಗೆ ಬೇಕಾದ ವರವಿನ್ನಾವುದು? ಸಕಲ ಐಶ್ವರ್ಯವೂ ಅದರಿಂದಲೇ ಸಿದ್ಧಿಸುವಾಗ ಮತ್ತೆ ಬೇಕಾದುದೇನು? ||೮೩-೮೪||

ಸರ್ವಮಂಗಳಾಪತಿಯಾದ ಈಶ್ವರನ ಭಕ್ತರು ನನ್ನ ಮನೆಗೆ ಬಂದೊಡನೆಯೇ ನನಗೆ ಸಕಲ ಸನ್ಮಂಗಳಗಳೂ ಅನಾಯಾಸವಾಗಿ ಬಂದಂತಾದುವು. ಮೇಘವಿಲ್ಲದಿದ್ದರೂ ಅತಿವೃಷ್ಟಿ ಬಂದಂತೆ, ವೃಷ್ಟಿಯಿಲ್ಲದಿದ್ದರೂ ಬೆಳೆಯ ರಾಶಿ ಬಂದಂತೆ ಶಂಕರಸೇವಕರ ಪಾದಪದ್ಮರಜಸ್ಸಂಬಂಧದಿಂದ, ಕಾರಣಗಳಿಲ್ಲದಿದ್ದರೂ, ಕಾರ್ಯರೂಪವಾದ ಐಶ್ವರ್ಯವು ನನ್ನ ಮನೆಯಲ್ಲಿ ಉಕ್ಕಿ ಹರಿಯುವುದು. ||೮೫-೮೬||

ಸಸ್ಯೈರ್ವಿನಾ ಧಾನ್ಯವಿಶೇಷರಾಶಿ
ಗರ್ಭೈರ್ವಿನಾ ಪುತ್ರಸಮೂಹಜನ್ಮ ।
ಯಥಾ ತಥಾ ಶಾಂಭವಪಾದಪದ್ಮ
ರಜಃ ಪ್ರಸಾರೋಪಿ ಮುದೇ ಗೃಹೇ ಮೇ ॥೮೭॥

ಗುರೂಪಸತ್ಯಾಪಿ ವಿನಾ ಸಮಸ್ತ
ವಿದ್ಯಾವಿಲಾಸೋಪ್ಯನುವೇಲಮೇವ ।
ಯಥಾ ತಥಾ ಶಾಂಭವಪಾದಪದ್ಮ
ರಜಃ ಪ್ರಸಾರೋಪಿ ಮುದೇ ಗೃಹೇ ಮೇ ॥೮೮॥

ಯಮಾದಿಯೋಗವ್ಯಸನೈರ್ವಿನಾಪಿ
ಸದ್ಯೋ ಮಹಾಸಿದ್ಧಿಸಮೃದ್ಧಯೋ ವಾ ।
ಯಥಾ ತಥಾ ಶಾಂಭವಪಾದಪದ್ಮ
ರಜಃ ಪ್ರಸಾರೋಪಿ ಮುದೇ ಗೃಹೇ ಮೇ ॥೮೯॥

ಮಾರ್ಗಶ್ರಮೈರಪ್ಯಮಿತೈರ್ವಿನಾಪಿ
ವಿಶ್ವೇಶಲಿಂಗಾಂಗವಿಲೋಕನಂ ಚ ।

---

ಬೆಳೆಯಿಲ್ಲದೆ ಧಾನ್ಯರಾಶಿ ಬಂದಂತೆ, ಗರ್ಭಧಾರಣೆಯಿಲ್ಲದೆ ಪುತ್ರಸಂಪತ್ತು ಹೆಚ್ಚಿದಂತೆ, ಶಂಭುಭಕ್ತರ ಪಾದಪದ್ಮರಜಸ್ಸು ನನ್ನ ಮನೆಯಲ್ಲಿ ಬಿದ್ದೊಡನೆ ನನಗೆ ಹೆಚ್ಚಿನ ಸಂತೋಷವಾಗುವುದು. ॥೮೭॥

ಸಕಲ ವಿದ್ಯಾರಾಶಿಯೂ ಗುರೂಪದೇಶವಿಲ್ಲದೆ ಲಭ್ಯವಾದರೆ ಆಗ ಎಷ್ಟು ಸಂತೋಷವುಂಟಾಗುವುದೋ, ಅಷ್ಟೇ ಸಂತೋಷವು ಈಗ ಶಂಭುಭಕ್ತರಪಾದಸ್ಪರ್ಶದಿಂದ ನನಗುಂಟಾಗುವುದು. ॥೮೮॥

ಯೋಗಶಾಸ್ತ್ರದಲ್ಲಿ ಉಕ್ತವಾದ ಯಮಾದ್ಯಷ್ಟಾಂಗ ಸಿದ್ಧಿಯಿಲ್ಲದೆ ಯೋಗಶಾಸ್ತ್ರಪ್ರೋಕ್ತವಾದ ಫಲವನ್ನೆಲ್ಲಾ ಅನುಭವಿಸುವಾಗ ಎಷ್ಟು ಆನಂದವಾಗುವುದೋ ಅಷ್ಟೇ ಸಂತೋಷವು ಶಾಂಭವನಾದ ನಿನ್ನ ಆಗಮನದಿಂದ ನನಗುಂಟಾಗಿರುವುದು. ॥೮೯॥

ಕಾಶೀಪಟ್ಟಣದವರೆಗೂ ಹೋಗುವ ಮಾರ್ಗಾಯಾಸವಿಲ್ಲದೆ ಹಠಾತ್ತಾಗಿ

ಯಥಾ ತಥಾ ಶಾಂಭವಪಾದಪದ್ಮ
ರಜಃ ಪ್ರಸಾರೋಽಪಿ ಮುದೇ ಗೃಹೇ ಮೇ ॥೯೦॥

ಧರ್ಮೈರಪಾರೈರ್ವಿವಿಧೈರ್ವಿನಾಪಿ
ಮೋಕ್ಷಾಂಗನಾಪಾಂಗವಿಲೋಕನಂ ಚ ।
ಯಥಾ ತಥಾ ಶಾಂಭವಪಾದಪದ್ಮ
ರಜಃಪ್ರಸಾರೋಽಪಿ ಮುದೇ ಗೃಹೇ ಮೇ ॥೯೧॥

ಪಾಕಾದಿಕಾನೈಕಮಹಾಪ್ರಯತ್ನೈ
ರ್ವಿನಾನ್ನಪಾನಾದಿ ವಿಶೇಷಸಿದ್ಧಿಃ ।
ಯಥಾ ತಥಾ ಶಾಂಭವಪಾದಪದ್ಮ
ರಜಃಪ್ರಸಾರೋಽಪಿ ಮುದೇ ಗೃಹೇ ಮೇ ॥೯೨॥

ಮಹಾಂಧಕಾರಪ್ರಲಯೋಽನುಭಾನು
ರ್ಭಾನ್ವಗ್ನಿಚಂದ್ರಪ್ರಭಯಾ ವಿನಾಪಿ ।
ಯಥಾ ತಥಾ ಶಾಂಭವಪಾದಪದ್ಮ
ರಜಃ ಪ್ರಸಾರೋಽಪಿ ಮುದೇ ಗೃಹೇ ಮೇ ॥೯೩॥

---

ಕಾಶೀನಗರವನ್ನು ಹೊಂದಿ ವಿಶ್ವೇಶ್ವರಲಿಂಗದ ದರ್ಶನವಾದರೆ ಎಷ್ಟು ಆನಂದವಾಗುವುದೋ, ಅಷ್ಟೇ ಆನಂದವು ಶಾಂಭವರ ಆಗಮನದಿಂದ ಲಭಿಸುತ್ತಿರುವುದು. ॥೯೦॥

ಯಾವ ದಾನಧರ್ಮಾದಿಗಳನ್ನೂ ಆಚರಿಸಿದೆ ಮೋಕ್ಷಪ್ರಾಪ್ತಿಯುಂಟಾದರೆ ಎಂತಹ ಆನಂದವು ಲಭಿಸುವುದೋ, ಅಷ್ಟೇ ಸುಖವು ಈಗ ನನಗುಂಟಾಗಿದೆ..॥೯೧॥

ಅನೇಕ ಪಾಕಾದಿಕ್ರಿಯೆಗಳಿಲ್ಲದೆ ಅನಾಯಾಸವಾಗಿ ಒದಗಿದ ಅನ್ನಪಾನಾದಿಗಳಿಂದ ಸುಖಪಡುವಂತೆ ನಾನು ನಿಮ್ಮಾಗಮನದಿಂದ ಸಂತೋಷಪಡುತ್ತಿರುವೆನು. ॥೯೨॥

ಸೂರ್ಯ, ಚಂದ್ರ, ಅಗ್ನಿ ಇವರ ತೇಜಸ್ಸಿಲ್ಲದಿದ್ದರೂ ಮಹಾಂಧಕಾರವು ನಾಶವಾಗುವುದಾದರೆ ಎಷ್ಟರಮಟ್ಟಿನ ತೃಪ್ತಿಯುಂಟಾಗುವುದೋ ಅಷ್ಟೇ ತೃಪ್ತಿಯು ಈಗ ನನಗಾಗಿರುವುದು. ॥೯೩॥

ಪ್ರದೋಹನಾದಿವ್ಯಸನೈರ್ವಿನಾಪಿ
ಗೋಕ್ಷೀರವೃಷ್ಟಿರ್ಮಣಿಕಾದಿಕೇಷು
ಯಥಾ ತಥಾ ಶಾಂಭವಪಾದಪದ್ಮ
ರಜಃಪ್ರಸಾರೋಪಿ ಮುದೇ ಗೃಹೇ ಮೇ ॥೯೪॥

ಪುಷ್ಟಿಪ್ರಕೃಷ್ಟಾದಧಿದುಗ್ಧಸಾರಂ
ಘೃತಾನ್ನಪಕ್ವಾನ್ನಗಣೈರ್ವಿನಾಪಿ ।
ಯಥಾ ತಥಾ ಶಾಂಭವಪಾದಪದ್ಮ
ರಜಃಪ್ರಸಾರೋಪಿ ಮುದೇ ಗೃಹೇ ಮೇ ॥೯೫॥

ದಲೈರಬಾಲೈರ್ನವಕುಟ್ಮಲೈರ್ವಾ
ಪುಷ್ಪೈರ್ವಿನಾನಲ್ಪಫಲಪ್ರಸೂತಿಃ ।
ಯಥಾ ತಥಾ ಶಾಂಭವಪಾದಪದ್ಮ
ರಜಃಪ್ರಸಾರೋಪಿ ಮುದೇ ಗೃಹೇ ಮೇ ॥೯೬॥

---

ಹಾಲು ಕರೆಯುವುದೇ ಮೊದಲಾದ ಗೋದೋಹನಾದಿ ಕಾರ್ಯಗಳಿಲ್ಲದೆ ಹಸುವಿನ ಹಾಲಿನ ಸಮೃದ್ಧಿಯು ರತ್ನಮಯವಾದ ಪಾತ್ರೆಗಳಲ್ಲಿ ಲಭಿಸಿದರೆ ಆಗುವ ಆನಂದವು ನಿನ್ನಾಗಮನದಿಂದ ನನಗೆ ತೋರಿಬರುತ್ತಿರುವುದು. ॥೯೪॥

ಹಾಲು, ಮೊಸರು, ತುಪ್ಪ, ಅನ್ನ ಮೊದಲಾದ ವಸ್ತುಜಾಲಗಳಿಲ್ಲದಿದ್ದರೂ ದೇಹದ ಪುಷ್ಟಿಯು ಅಭಿವೃದ್ಧಿ ಹೊಂದುವುದಾದರೆ ಎಷ್ಟು ಸಂತೋಷವಾಗುವುದೋ ಅಷ್ಟೇ ಸಂತೋಷವು ಶಂಭುಭಕ್ತರ ಪಾದಪದ್ಮದ ಧೂಳು ನಮ್ಮ ಮನೆಯಲ್ಲಿ ಬೀಳುವುದರಿಂದ ನನಗೆ ಉಂಟಾಗುತ್ತಿರುವುದು. ॥೯೫॥

ಎಳೆಯದಾದ ಹೂವು, ಮೊಗ್ಗು, ಚಿಗುರು ಇವುಗಳಿಲ್ಲದಿದ್ದರೂ ಅತಿಶಯವಾದ ಫಲಪ್ರಾಪ್ತಿಯಾಗುವುದಾದರೆ ಎಷ್ಟು ಆನಂದವಾಗುವುದೋ ಅಷ್ಟೇ ಈಗ ನನಗೆ ಲಭಿಸಿದೆ. ॥೯೬॥

ವಿನಾಂಜನೇನಾಪಿ ವಿನಾ ವಿಶೇಷ
ಮೂಲ್ಯೈರಮೂಲ್ಯೈರ್ನಿಧಿಕೋಟಿಲಾಭಃ ।
ಯಥಾ ತಥಾ ಶಾಂಭವಪಾದಪದ್ಮ
ರಜಃ ಪ್ರಸಾರೋಽಪಿ ಮುದೇ ಗೃಹೇ ಮೇ ॥೯೭॥

ಅಮಂದಾನಂದಕಂದಾನಾಂ ಹರಪಾದಾರವಿಂದಯೋಃ ।
ಅನ್ವಯೋ ಯೋಗ್ಯ ಏವೇತಿ ತೇನಾನಂದಃ ಪ್ರಜಾಯತೇ ॥೯೮॥

ಅತಃ ಪರಂ ಸುಂದರತಾಽಪಿ ಯುಕ್ತಾ
ಮನ್ಮಂದಿರಸ್ಯಾಸ್ಯ ವಿಶೇಷತೋಽದ್ಯ ।
ಯತೋ ಮಹಾದೇವಪದಾರವಿಂದ
ಧ್ಯಾನಪ್ರವೀಣಾಮೃತವೀಕ್ಷಣಂ ಮೇ ॥೯೯॥

ಇದಂ ಪರಂ ಪಾವನಮೇವ ಜನ್ಮ
ಸುಜೀವಿತಂ ಜೀವಿತಮಸ್ಯ ಜಾತಂ ।
ಯತೋ ಮಹಾದೇವಪದಾರವಿಂದ
ಧ್ಯಾನಪ್ರವೀಣಾಮೃತವೀಕ್ಷಣಂ ಮೇ ॥೧೦೦॥

---

ಅಂಜನವಿಲ್ಲದಿದ್ದರೂ, ನಿಧಿಯಿರುವ ಸ್ಥಳವು ಗೋಚರವಾಗಿ, ಆ ನಿಧಿಯೆಲ್ಲವೂ ಪ್ರಾಪ್ತವಾದರೆ ಅದರಿಂದ ಹೆಚ್ಚಿನ ಆನಂದವುಂಟಾಗುವಂತೆ ನನಗೆ ಈಗ ನಿಸ್ಸಿಂದ ಆನಂದರಾಶಿಯು ಒದಗಿರುವುದು. ॥೯೭॥

ಅತಿಶಯವಾದ ಆನಂದಕ್ಕೆ ಮೂಲಕಾರಣವಾದ ಶಿವಭಕ್ತರ ಪಾದಾರವಿಂದಗಳ ಸಂಪರ್ಕವು ಈಗ ನನಗೆ ಲಭಿಸಿತಲ್ಲಾ ಎಂದು, ಅತಿಯಾದ ಆನಂದವಾಗಿದೆ. ॥೯೮॥

ಸೌಂದರ್ಯದಿಂದ ದೂರವಾಗಿದ್ದ ನನ್ನ ಮನೆಯು ಈಗ ಮಹಾದೇವ ಭಕ್ತರ ಪಾದಾರವಿಂದದ ಸ್ಪರ್ಶದಿಂದಲೂ, ಅಮೃತಮಯವಾದ ಕಟಾಕ್ಷವೀಕ್ಷಣದಿಂದಲೂ, ಅತಿಶಯವಾದ ಸೌಂದರ್ಯಕ್ಕೆ ನಿಧಿಯಂತಾಗಿರುವುದು. ॥೯೯॥

ಶಾಂಭವನ ಕೃಪಾಕಟಾಕ್ಷಕ್ಕೆ ಪಾತ್ರವಾದ್ದರಿಂದ ಈಗ ನನ್ನ ಜನ್ಮವೇ ಪವಿತ್ರವಾಯಿತು. ಈಶ್ವರಕಿಂಕರನ ದರ್ಶನದಿಂದ ಜೀವನವೇ ಸಾರ್ಥಕವೆನಿಸಿತು. ॥೧೦೦॥

ಅಪಾರಕಲ್ಯಾಣಪರಂಪರಾಣಾಂ
ಮನ್ಮಂದಿರೇಷು ಪ್ರಸರೋಽಪಿ ಭಾವಿ ।
ಯತೋ ಮಹಾದೇವಪದಾರವಿಂದ
ಧ್ಯಾನಪ್ರವೀಣಾಮೃತವೀಕ್ಷಣಂ ಮೇ ॥೧೦೧॥

ನಿಮೇಃ ಕುಲಂ ಸತ್ಕುಲಮೇವ ಜಾತಂ
ತ್ವತ್ಪಾದಪದ್ಮಪ್ರಸರೇಣ ಗೇಹೇ ।
ಯತೋ ಮಹಾದೇವಪದಾರವಿಂದ
ಧ್ಯಾನಪ್ರವೀಣಾಮೃತವೀಕ್ಷಣಂ ಮೇ ॥೧೦೨॥

ಅಹಂ ಸುರಾಣಾಮಪಿ ಪೂಜ್ಯ ಏವ
ಸುರಸ್ತುತೀನಾಮಪಿ ಭಾಜನಂ ಹಿ ।
ಯತೋ ಮಹಾದೇವಪದಾರವಿಂದ
ಧ್ಯಾನಪ್ರವೀಣಾಮೃತವೀಕ್ಷಣಂ ಮೇ ॥೧೦೩॥

ದೂರೇ ಗತಾ ಪಾತಕಕೋಟಿವಾರ್ತಾ
ಕೃತಾಂತವಾರ್ತಾಪಿ ವಿಶೇಷತೋಽಪಿ ।

---

ಅನೇಕ ಕಲ್ಯಾಣಪರಂಪರೆಯನ್ನು ಒದಗಿಸತಕ್ಕಂತಹ ತಮ್ಮ ಪಾದಸ್ಪರ್ಶವು ನಮ್ಮ ಮನೆಗೆ ಒದಗಿರುವುದರಿಂದ ನನಗೆ ಸಕಲ ಮಂಗಳವೂ ಒದಗಿತೆಂದೇ ನನ್ನ ಅಭಿಪ್ರಾಯ. ತಮ್ಮಂತಹ ಶಂಭುಭಕ್ತರ ಕಟಾಕ್ಷಪಾತವೇ ಇದಕ್ಕೆ ಕಾರಣ. ||೧೦೧||

ಮಹಾದೇವಭಕ್ತನಾದ ನಿನ್ನ ಕಟಾಕ್ಷಪಾತದಿಂದಲೂ, ನಿನ್ನ ಪಾದಪದ್ಮ ಪ್ರಸರದಿಂದಲೂ ನಾನು ಮಾತ್ರವಲ್ಲದೆ ನಮ್ಮ ಕುಲವಾದ ನಿಮಿವಂಶವೇ ಇಂದು ಸದ್ವಂಶವೆನಿಸಿಕೊಂಡಿರುವುದಾಗಿದೆ. ||೧೦೨||

ನಾನು ಈಗ ದೇವತೆಗಳಿಗಿಂತಲೂ ಶ್ರೇಷ್ಠನೆನಿಸಿರುವೆನು. ದೇವತೆಗಳೂ ನನ್ನನ್ನು ಹೊಗಳುವಂತೆ ನಿನ್ನ ದರ್ಶನದಿಂದ ಹೆಚ್ಚಿನ ಯೋಗ್ಯತೆಯನ್ನು ಪಡೆದಿರುವೆನು. ||೧೦೩||

ನಿಮ್ಮ ದರ್ಶನಲಾಭದಿಂದ ನನ್ನ ಕೋಟಿಸಂಖ್ಯೆಯ ಪಾಪರಾಶಿಯೆಲ್ಲವೂ ನಾಶವಾಗಿರುವುದು. ಯಮನ ಭಯವೂ ಈಗ ನನಗಿರುವುದಿಲ್ಲ. ||೧೦೪||

ಯತೋ ಮಹಾದೇವಪದಾರವಿಂದ
ಧ್ಯಾನಪ್ರವೀಣಾಮೃತವೀಕ್ಷಣಂ ಮೇ ॥೧೦೪॥

ಭಾಗ್ಯೋದಯಃ ಕೋಽಯಮಭೂತಪೂರ್ವಃ
ಶಿವಪ್ರಸಾದೋಽಯಮನಾಮಯೋ ಹಿ ।
ಯತೋ ಮಹಾದೇವಪದಾರವಿಂದ
ಧ್ಯಾನಪ್ರವೀಣಾಮೃತವೀಕ್ಷಣಂ ಮೇ ॥೧೦೫॥

ತೃಪ್ತಾಸ್ತೇ ಪಿತರಸ್ತ್ವದಾಗಮನತಸ್ತ್ವತ್ಪಾದಸಂಕ್ಷಾಳನಾ
ತ್ಪೀತಂ ತೈರಮೃತಂ ತ್ವದಂಘ್ರಿಕಮಲಪ್ರಕ್ಷಾಳನಾಭ್ಯರ್ಚನೈಃ ।
ಜನ್ಮೇದಂ ಮಮ ಪಾವನಂ ಪಶುಪತಿಪ್ರೇಮಾಸ್ಪದಾಂ ಸಂಪದಾಂ
ಸರ್ವಾಸಾಂ ಪದಮಸ್ಮಿ ನಿಸ್ಮಿತಮಿದಂ ಕಿಂ ಚಿತ್ರಮತ್ರಾಪಿ ಕಿಂ ॥೧೦೬॥

ಅಸ್ಮಾಕಂ ಗುರುರುತ್ತಮೋತ್ತಮಮಹಾದೇವಾಂಘ್ರಿಪಂಕೇರುಹ
ಧ್ಯಾನಾಭ್ಯರ್ಚನಪೂತಮಾನಸ ಇತಿ ಸ್ವಾಖರ್ವಗರ್ವಾಶ್ರಯಃ ।
ಸೋಽಯಂ ಪುಣ್ಯತಮಾಗ್ರಗಣ್ಯ ಇತಿ ಮೇ ಬುದ್ಧಿಃ ಪ್ರಬುದ್ಧಾಧುನಾ
ಸಾಧ್ವೀ ದೇವಧುನೀವ ವೃದ್ಧಿಮಗಮದ್ವೃದ್ಧಿಂ ಗಮಿಷ್ಯತ್ಯಪಿ ॥೧೦೭॥

---

ಈ ದಿವಸ ಒದಗಿದ ನಿನ್ನ ದರ್ಶನರೂಪವಾದ ಮಹಾಭಾಗ್ಯವು ಹಿಂದೆ ಎಂದೂ ನನಗೆ ದೊರೆತಿರಲಿಲ್ಲ. ಇದಕ್ಕೆ ಸಾಕ್ಷಾತ್ಪರಶಿವನ ನಿರ್ದುಷ್ಟವಾದ ಅನುಗ್ರಹವೇ ಕಾರಣವೆನ್ನಬಹುದು. ॥೧೦೫॥

ಎಲೈ ಮಹರ್ಷಿಯೇ, ನಿನ್ನ ಆಗಮನದಿಂದ ನನ್ನ ಸಕಲ ಪಿತೃಗಳೂ ಧನ್ಯರಾದರು. ನಿನ್ನ ಪಾದೋದಕವೆಂಬ ಅಮೃತವನ್ನು ಪಾನಮಾಡಿ ಅವರು ತೃಪ್ತರೆನಿಸಿದರು. ನಿನ್ನ ಪಾದಾರಾಧನೆಯಿಂದ ನನ್ನ ಈ ಜನ್ಮವು ಸಾರ್ಥಕವೆನಿಸಿ ತಲ್ಲದೆ ಪ್ರಪಂಚದಲ್ಲಿರುವ ಸಕಲ ಸಂಪತ್ತುಗಳಿಗೂ ಮೂಲಭೂತವೆನಿಸಿದ್ದಾಯಿತು. ಇದಲ್ಲವೇ ನಿನ್ನ ಮಹಿಮಾವೈಚಿತ್ರ್ಯ! ॥೧೦೬॥

ನಮ್ಮ ಗುರುವಾದ ನೀನು ಇಂತಹ ಮಹಾಮಹಿಮನಾದ ಪರಶಿವಭಕ್ತನು, ಮತ್ತು ಪರಶಿವಾರಾಧನೆಯಿಂದ ಚಿತ್ತಶುದ್ಧಿ ಪಡೆದಿರುವವನು ಎಂದು ಹೇಳುವುದಕ್ಕೆ ನಮಗೆ ಒಂದು ಹೆಮ್ಮೆಯಿರುವುದು. ಅಲ್ಲದೆ ಇಂತಹ ಸದ್ಗುರುವಿನ ಶಿಷ್ಯನಾದ

**ಅಸ್ಮಾಕಂ ಶಿವಲಿಂಗಪೂಜಕಪದಾಂಭೋಜಾರ್ಚನೇನ ಶ್ರಿಯೋ**
**ನಿಶ್ಶ್ರೇಯೋಽಪಿ ಪದೇ ಪದೇ ಪ್ರತಿಭವೇ ಭಾವಾನುರಾಗೋದಯಃ ।**
**ಉತ್ಕೃಷ್ಟಾಭ್ಯುದಯಃ ಕುಲಾಚಲನಿಭಾಪಾಯವ್ಯಯಾನಾಮಯಃ**
**ಶಾಂಗಾಂಗಾನ್ವಯಸಂಭ್ರಮೋಽಪಿ ಬಹುಧಾ ಸಂಭಾವಿತಃ ಶ್ರೇಯಸೇ ॥೧೦೮॥**

**ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಜನಕಾಲಯಂ ಪ್ರತಿ ಯಾಜ್ಞವಲ್ಕ್ಯ ಸಮಾಗಮನಂ ನಾಮ ತ್ರಿಚತ್ವಾರಿಂಶೋಽಧ್ಯಾಯಃ**

---

ನಾನೇ ಪುಣ್ಯಶಾಲಿಯು ಎಂಬ ಬುದ್ಧಿಯೂ ನನಗುಂಟಾಗಿರುವುದು. ಈ ಪವಿತ್ರತಮವಾದ ಬುದ್ಧಿಯು ದೇವಗಂಗೆಯಂತೆ ನಿತ್ಯವೂ ನನ್ನಲ್ಲಿ ಇನ್ನೂ ವೃದ್ಧಿಹೊಂದುತ್ತಿರುವುದು. ॥೧೦೭॥

ನಾವೂ ಸಹ ಪರಮೇಶ್ವರನ ಪಾದಸೇವೆಯಲ್ಲಿಯೇ ಕಾಲಕಳೆಯುವವರಾದರೆ ನಮಗೆ ಸಕಲ ಸಂಪತ್ತೂ, ಮೋಕ್ಷವೂ ತರಂಗತರಂಗವಾಗಿ ಭಾವಾವೇಶವೂ, ಅತಿಶಯವಾದ ಏಳಿಗೆಯೂ, ಕುಲಾಚಲದಂತೆ ಮೇಲೆ ಬರುವ ಅಪಾಯಗಳ ನಾಶವೂ ಏಕಕಾಲದಲ್ಲಿ ಸಂಭವಿಸುವುದಲ್ಲವೆ ? ಒಟ್ಟಿನಲ್ಲಿ ಶಂಕರಪಾದಾದ್ಯಂಗಗಳ ಆರಾಧನೆಯೇ ಸಕಲವಿಧವಾದ ಶ್ರೇಯಸ್ಸಿಗೂ ಕಾರಣವಲ್ಲವೆ? ಎಂದು ಜನಕ ರಾಜನು ಬಹುವಾಗಿ ಗುರುವಾದ ಯಾಜ್ಞವಲ್ಕ್ಯನನ್ನು ಸ್ತುತಿಸಿದನು. ॥೧೦೮॥

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಭಾಗದ ಪೂರ್ವಾರ್ಧದಲ್ಲಿ ಜನಕಾಲಯಕ್ಕೆ ಯಾಜ್ಞವಲ್ಕ್ಯನು ಬಂದ ವಿಷಯವನ್ನು ವಿವರಿಸುವ ನಲವತ್ತುಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಚತುಶ್ಚತ್ವಾರಿಂಶೋಽಧ್ಯಾಯಃ



॥ ನಂದಿಕೇಶ್ವರ ಉವಾಚ ॥

**ವ್ಯಾಘ್ರಾಜಿನೋಪವಿಷ್ಟಾಯ ಯಾಜ್ಞವಲ್ಕ್ಯಾಯ ಧೀಮತೇ ।**
**ಶಾಂಭವಾಯ ಪ್ರಸನ್ನಾಯ ಜನಕಃ ಪ್ರಣತೋ ಮುಹುಃ ॥೧॥**

**ತತಃ ಪ್ರಾಹ ಮುನಿಶ್ರೇಷ್ಠಂ ಜನಕೋ ವಿನಯಾನತಃ ।**
**ಮುಕ್ತ್ಯುಪಾಯವಿಶೇಷಂ ಮೇ ವದ ಶಾಂಭವಸತ್ತಮ ॥೨॥**

**ತೀರ್ಥಾಟನೇನ ಕಾಲೋಽಪಿ ನೀತಸ್ಸಜ್ಜನಸೇವಯಾ ।**
**ಗೋದಾನೈರಪಿ ಭೂದಾನೈಸ್ತಿಲಾದಾನೈಸ್ಸಹಸ್ರಧಾ ॥೩॥**

---

### ನಲವತ್ತುನಾಲ್ಕನೆಯ ಅಧ್ಯಾಯ

ಅನಂತರ ಜನಕರಾಜನಿಂದ ಸತ್ಕೃತನಾದ ಯಾಜ್ಞವಲ್ಕ್ಯಮಹರ್ಷಿಯು ಹುಲಿಯ ಚರ್ಮದಮೇಲೆ ಸಂತೋಷದಿಂದ ಕುಳಿತನು. ಪ್ರಸನ್ನವದನನಾಗಿದ್ದ ಆ ಮಹರ್ಷಿಯನ್ನು ನೋಡಿ ಜನಕರಾಜನು ವಿನಯಾವನತನಾಗಿ ವಂದಿಸಿ, ಮುಕ್ತಿಪ್ರಾಪ್ತಿಗೆ ಸುಲಭವಾಗಿರುವ ಉಪಾಯಗಳನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡನು. ॥೧-೨॥

ಮಹರ್ಷಿಯೇ, ನಾನು ಇಲ್ಲಿನವರೆಗೂ ಅನೇಕ ತೀರ್ಥಕ್ಷೇತ್ರಗಳಲ್ಲಿ ಸಂಚರಿಸಿದೆನು. ಸತ್ಪುರುಷರ ಸೇವೆ ಮಾಡಿದೆನು. ಕೋಟಿಸಂಖ್ಯೆಯಲ್ಲಿ ಹೂವು, ಹಣ್ಣು

ಫಲಪುಷ್ಪಕುಲಾಕೀರ್ಣವನದಾನೈಶ್ಚ ಕೋಟಿಶಃ ।
ಕನ್ಯಾಪ್ರದಾನೈರ್ವಿವಿಧೈರನ್ನದಾನವ್ರತೈರಪಿ ॥೪॥

ವಿಚಿತ್ರಗೃಹದಾನೈಶ್ಚ ಗಜದಾನಾದಿಭಿಸ್ತಥಾ ।
ನೀತಃ ಕಾಲಸ್ತಥಾಪ್ಯಸ್ಯ ಸಂಸಾರಾದ್ವಿರತಿರ್ನ ಮೇ ॥೫॥

ಕಿಮಸ್ತಿ ಮೂಲಮೇತಸ್ಯ ಶರೀರಮುಭವತ್ಕಥಂ ।
ಅಹಮಿತ್ಯಭಿಮಾನೋಽಪಿ ಕಥಮಸ್ಯ ಪ್ರಜಾಯತೇ ॥೬॥

ಗೌರೋಽಹಮಿತಿ ಬುದ್ಧಿಶ್ಚ ಸುಂದರೋಽಹಮಿತಿ ಸ್ವತಃ ।
ಧನಂ ಮಮೇದಂ ಭಾರ್ಯಾಽಪಿ ಕುಮಾರೋಽಪಿ ಮಮೇತ್ಯಪಿ ॥೭॥

ಅಂತತಸ್ತು ಕುಮಾರೋಽಹಮಿತಿಧೀರಪಿ ಜಾಯತೇ ।
ಇದಂ ಸರ್ವಂ ವಿಶಿಷ್ಯಾದ್ಯಾ ವದ ತತ್ತ್ವವಿದುತ್ತಮ ॥೮॥

॥ ಯಾಜ್ಞವಲ್ಕ್ಯ ಉವಾಚ ॥

ಸಂಸಾರಮೂಲಭೂತಾನಿ ಪಾಪಾನಿ ವಿವಿಧಾನ್ಯಪಿ ।
ತಾನಿ ಸರ್ವಾಣಿ ಪಾಪಾನಿ ಸಂಸಾರಂ ಜನಯಂತ್ಯಹೋ ॥೯॥

---

ಮುಂತಾದುವುಗಳನ್ನು ದಾನಮಾಡಿದೆನು. ಕನ್ಯಾದಾನ, ಗೃಹದಾನ, ಅನ್ನದಾನ, ಗೋದಾನ, ಗಜದಾನಾದಿ ಅನೇಕ ಮಹಾದಾನಗಳನ್ನೆಲ್ಲಾ ನೆರವೇರಿಸಿದೆನು. ಅನೇಕ ವ್ರತೋಪವಾಸಾದಿಗಳಿಂದ ಕಾಲಕಳೆದೆನು. ಅಷ್ಟಾದರೂ ನನಗೆ ಈ ಸಂಸಾರಬಂಧನ ದಿಂದ ಮುಕ್ತಿಯು ದೊರಕಲಿಲ್ಲ. ||೩-೪-೫||

ಇದಕ್ಕೆ ಕಾರಣವೇನು? ಈ ದೇಹೋತ್ಪತ್ತಿಗೆ ಮೂಲಕಾರಣವಾವುದು ? ಇಂತಹ ಅಸ್ಥಿರವಾದ ಶರೀರದಲ್ಲಿ ನಾನು ಬೆಳ್ಳಗಿದ್ದೇನೆ. ನಾನು ಸುಂದರನು. ಇದು ನನ್ನ ಹಣ, ನನ್ನ ಹೆಂಡತಿ, ತನ್ನ ಮಗ ಎಂಬ ಮಮತಾಬುದ್ಧಿಯುಂಟಾಗುವು ದಷ್ಟೆ. ಅದಕ್ಕೆ ಕಾರಣವೇನು? ಇವೆಲ್ಲವನ್ನೂ ತತ್ತ್ವವೇತ್ತನಾದ ನೀನು ವಿಶ್ವಾಸ ದಿಂದ ತಿಳಿಸಬೇಕೆಂದು ವಿಧವಿಧವಾಗಿ ರಾಜನು ಪ್ರಾರ್ಥಿಸಿಕೊಂಡನು. ||೬-೭-೮||

ಹಾಗೆ ಪ್ರಾರ್ಥಿಸಿಕೊಂಡ ರಾಜನನ್ನು ನೋಡಿ ಯಾಜ್ಞ್ಯವಲ್ಕ್ಯಮಹರ್ಷಿಯು ಹೀಗೆ ಉಪದೇಶಿಸಲಾರಂಭಿಸಿದನು. "ರಾಜನೇ ಈ ವಿಧದ ಸಂಸಾರಪ್ರಾಪ್ತಿಗೆ

ಪಾಪಸಾಗರ ಏವಾಯಂ ಸಂಸಾರಶ್ಚ ಪುನಃ ಪುನಃ ।
ಪಾಪೈಃ ಪ್ರವೃದ್ಧತೇ ನೀರೈರಂಬುರಾಶಿರಿವಾನ್ವಹಂ ॥೧೦॥

ಪದೇ ಪದೇಽಪಿ ಪಾಪಾನಿ ಸುಗಮಾನಿ ಕೃತಾನ್ಯಪಿ ।
ಕರ್ತವ್ಯಾನಿ ಕ್ರಿಯಂತೇ ಚ ನ ಪಾಪವಿರತಂ ಮನಃ ॥೧೧॥

ಅನಾಯಾಸೇನ ಪಾಪಾನಿ ಬಹೂನಿ ವಿವಿಧಾನ್ಯಪಿ ।
ಆಯಾಂತಿ ತಾನಿ ಪಾಪಾನಿ ವಾರಿತಾನಿ ನ ಕೇನಚಿತ್ ॥೧೨॥

ತತ್ಪಾಪನಾಶನೋಪಾಯಚಿಂತನೇ ಯತ್ನ ಏವ ನ ।
ಪಾಪಾನುಸರಣೋಪಾಯಯತ್ನೈರ್ನೀತಂ ವಯೋ ಯತಃ ॥೧೩॥

ಯಥಾ ಪಾಪಮತಿಃ ಪುಂಸಾಂ ಅನಾಯಾಸೇನ ಲಭ್ಯತೇ ।
ತಥಾ ಪುಣ್ಯಾನುಕರಣೇ ಮತಿರ್ನೈವ ಪ್ರವರ್ತತೇ ॥೧೪॥

---

ಅವರವರ ಪಾಪವೇ ಮೂಲಕಾರಣ. ಪಾಪಾರ್ಜನೆಯಿಂದಲೇ ಸಂಸಾರವು ದೊರಕುವುದು. ನೀರಿನಿಂದ ಸಮುದ್ರವು ವೃದ್ಧಿಹೊಂದುವಂತೆ ಸಂಸಾರಸಾಗರವು ಪಾಪಜಲದಿಂದ ನಿತ್ಯವೂ ಹೆಚ್ಚುತ್ತಿರುವುದು. ||೯-೧೦||

ಪಾಪಕಾರ್ಯಗಳನ್ನು ಮಾಡುವುದು ಅತಿ ಸುಲಭ. ಅದರಿಂದಲೇ ಮನಸ್ಸು ಅದರಲ್ಲಿ ಪ್ರವರ್ತಿಸಿ, ಪಾಪಫಲದ ಅರಿವಿದ್ದರೂ ಮಾಡಿದ ಪಾಪಕಾರ್ಯಗಳನ್ನೇ ಮತ್ತೆ ಮತ್ತೆ ಮಾಡುತ್ತಿರುವುದು. ಇಂತಹ ಪಾಪಕಾರ್ಯಗಳಿಂದ ಮನಸ್ಸನ್ನು ತಡೆಯಲು ಯಾವುದೂ ಶಕ್ತವಾಗುವುದಿಲ್ಲ. ಆ ಕಾರ್ಯಗಳ ಸ್ವಭಾವವೇ ಹಾಗೆ. ||೧೧-೧೨||

ಮನುಷ್ಯರು ತಾವು ಮಾಡುವ ಪಾಪಕಾರ್ಯಗಳನ್ನು ನಿಲ್ಲಿಸುವ ಉಪಾಯವನ್ನೇ ಯೋಚಿಸುವುದಿಲ್ಲ. ಏಕೆಂದರೆ ಅವರ ಆಯುಸ್ಸೆಲ್ಲಾ ಕೇವಲ ಪಾಪಾಚರಣೆಯಿಂದಲೇ ಕಳೆದುಹೋಗಿರುತ್ತದೆ. ಅಲ್ಲದೆ ಮನುಷ್ಯರಿಗೆ ಪಾಪಕಾರ್ಯಗಳಲ್ಲಿ ಬುದ್ಧಿಯು ಪ್ರವೇಶಿಸುವಂತೆ ಪುಣ್ಯಕಾರ್ಯಗಳಲ್ಲಿ ಎಂದೂ ಮುಂದುವರಿಯುವುದಿಲ್ಲ. ||೧೩-೧೪||

ಪರದ್ರವ್ಯೇ ಪರದ್ರೋಹೇ ಪರದಾರೇಷು ಸರ್ವದಾ ।
ಯಥಾ ಮತಿಸ್ತಥಾ ಧರ್ಮೇ ನ ಭವತ್ಯೇವ ಸರ್ವಥಾ ॥೧೫॥

ಸಾಪಿ ತಾವನ್ಮತಿಃ ಪಾಪೈಃ ಪುನಃ ಪಾಪಾನುವರ್ತಿನೀ ।
ಸಾ ಮತಿಃ ಪಾಪಮೂಲತ್ವಾತ್ಪಾಪಮೇವಾನುಧಾವತಿ ॥೧೬॥

ಯಥಾ ಯಥಾ ಪಾತಕಾನಿ ಪ್ರವರ್ಧಂತೇ ತಥಾ ತಥಾ ।
ಸಂಸಾರವೃದ್ಧಿರಿತ್ಯಸ್ಯ ನಾಶೋಪಾಯೋ ನ ದೃಶ್ಯತೇ ॥೧೭॥

ಕಿಂ ಚ ಚಿತ್ರಮಿದಂ ನೈವ ಪಾಪೇ ಸಂಸಾರಿಣಾಂ ಮತಿಃ ।
ವಿಷಬೀಜೇನ ನಾಮ್ರಸ್ಯ ವೃದ್ಧಿರ್ಜನ್ಮಾಂಕುರಸ್ಯ ವಾ ॥೧೮॥

ಬೀಜಾನುರೂಪ ಏವ ಸ್ಯಾದಂಕುರೋಪಿ ತಥಾ ಸತಿ ।
ಸಂಸಾರಃ ಪಾಪರೂಪಃ ಸ್ಯಾತ್ಪಾಪೈರೇವ ಪ್ರವರ್ಧತೇ ॥೧೯॥

ಸಂಸಾರಪಾಪಗಿರಯಃ ಪ್ರಣಶ್ಯಂತಿ ಕದಾಪಿ ನ ।
ತದುಪಾಯಾನುಸಾರೇಣ ಸೋಪ್ಯುಪಾಯೋ ಮಯೋಚ್ಯತೇ ॥೨೦॥

---

ಪರದ್ರವ್ಯಾಪಹಾರದಲ್ಲಿ, ಪರರಿಗೆ ಕೇಡು ಬಯಸುವುದರಲ್ಲಿ, ಪರಸ್ತ್ರೀಗಮನದಲ್ಲಿ ಮನಸ್ಸು ಬರುವಂತೆ ಧರ್ಮಕಾರ್ಯಗಳಲ್ಲಿ ಬರುವುದಿಲ್ಲ. ಹೀಗೆ ಪಾಪಮೂಲಕವಾಗಿಯೇ ಹುಟ್ಟಿದ ಮನಸ್ಸು ಪ್ರತಿಜನ್ಮದಲ್ಲಿಯೂ ಪಾಪಕಾರ್ಯಕ್ಕೇ ತೊಡಗುವುದರಲ್ಲಿ ಆಶ್ಚರ್ಯವೇನು? ॥೧೫-೧೬॥

ಪಾಪಸಂಚಯವಾಗುತ್ತ ಸಂಸಾರವು ಹೆಚ್ಚುವುದು. ಸಂಸಾರವು ಹೆಚ್ಚಿದಷ್ಟೂ ಪಾಪವು ದೃಢಮೂಲವಾಗುವುದು. ಅನಂತರ ಆ ಪಾಪನಾಶಕ್ಕೆ ಯಾವ ಉಪಾಯವೂ ದೊರಕಲಾರದು. ಸಂಸಾರಿಗಳಿಗೆ ಪಾಪಕಾರ್ಯದಲ್ಲಿ ಮನಸ್ಸು ಪ್ರವರ್ತಿಸುವುದು ನ್ಯಾಯವೇ. ಏಕೆಂದರೆ ವಿಷಬೀಜದಿಂದ ಹುಟ್ಟುವ ಮಾವಿನ ಮೊಳಕೆಯು ವಿಷವೇ ಅಲ್ಲವೆ? ಅದರಂತೆ ಪಾಪಿಯಾಗಿ ಅವತರಿಸಿದ ಮನಸ್ಸಿಗೆ ಪಾಪಕಾರ್ಯದಲ್ಲಿ ಆಸಕ್ತಿ ಹುಟ್ಟುವುದು ನ್ಯಾಯವಾದದ್ದೇ. ॥೧೭-೧೮॥

ಮೊಳಕೆಯು ಬೀಜದ ಗುಣವನ್ನೇ ಹೊಂದಿರುವಂತೆ, ಪಾಪರೂಪವಾದ ಸಂಸಾರವು ಪಾಪಭೂಯಿಷ್ಠವಾಗಿಯೇ ತೋರುವುದು. ಸಂಸಾರವೆಂಬ ಪಾಪಮಯ

ಅನಾಯಾಸೇನ ಸಂಸಾರಃ ಪ್ರವೃದ್ಧೋಽಪಿ ವಿನಶ್ಯತಿ ।
ಶಿವಾರ್ಚನೇನ ತೂಲಾದ್ರಿರ್ಯಥಾ ವಹ್ನಿಕಣಾನ್ವಯಾತ್ ॥೨೦॥

ಶಿವಾರ್ಚನಂ ಚ ಸುಲಭಂ ತತ್ರ ಬುದ್ಧಿಶ್ಚ ದುರ್ಲಭಾ ।
ಪುಣ್ಯಕೋಟಿಭಿರೇವ ಸ್ಯಾತ್ ಬುದ್ಧಿಃ ಶಂಕರಪೂಜನೇ ॥೨೨॥

ವಿಹಿತಾನಂತಪುಣ್ಯಾನಾಂ ಕರಣೇ ಪ್ರತಿಜನ್ಮನಿ ।
ಶಿವಾರ್ಪಿತಾನಿ ತಾನ್ಯೇವ ಜನಯಂತಿ ತಥಾ ಮತಿಂ ॥೨೩॥

ಲೋಕೇ ಶಿವಾರ್ಪಣಂ ಕರ್ತುಂ ಪುಣ್ಯಂ ಪುಣ್ಯಾಂಬುಧಿಃ ಪರಂ ।
ಪ್ರವರ್ತತೇ ತದನ್ಯಸ್ತು ತತ್ಕರ್ತುಂ ನ ಪ್ರವರ್ತತೇ ॥೨೪॥

ಕೋಽಪಿ ಲೋಕೇ ಮಹಾಪುಣ್ಯೈಃ ಶಿವಾನುಗ್ರಹಭಾಜನಂ ।
ತದನುಗ್ರಹಮಾತ್ರೇಣ ಬುದ್ಧಿಃ ಶಂಕರಪೂಜನೇ ॥೨೫॥

---

ವಾದ ಪರ್ವತಕ್ಕೆ ಎಂದೂ ನಾಶವಿಲ್ಲ. ಆದರೂ ಆದರ ನಾಶಕ್ಕೆ ಸೂಕ್ಷ್ಮರೂಪವಾಗಿ ಕೆಲವು ಉಪಾಯುಗಳನ್ನು ವಿವರಿಸುವೆನು. ||೧೯-೨೦||

ಈ ಪಾಪಮಯವಾದ ಸಂಸಾರವು ಎಷ್ಟೇ ದೊಡ್ಡದಾಗಿ ಬೆಳೆದಿದ್ದರೂ ಶಿವಾರ್ಚನೆಯಿಂದ ಅದರ ದುಃಖವು ಮಾಯವಾಗುವುದು. ಹತ್ತಿಯ ರಾಶಿಯನ್ನು ಅಗ್ನಿಕಣವು ಧ್ವಂಸಮಾಡುವಂತೆ ಸಂಸಾರದುಃಖವನ್ನು ಈ ಶಿವಾರ್ಚನೆಯು ನಿವಾರಿಸುವುದು. ಶಿವಾರ್ಚನೆಯೆಂಬುದು ಅತ್ಯಂತ ಸುಲಭವಾದ ಕಾರ್ಯ. ಆದರೂ ಅದರಲ್ಲಿ ಬುದ್ಧಿಹುಟ್ಟುವುದು ಮಾತ್ರ ಅತಿ ದುರ್ಲಭ. ಈಶ್ವರಾರಾಧನೆಯಲ್ಲಿ ಮನಸ್ಸು ಹುಟ್ಟುವುದು ಅನೇಕಕೋಟಿ ಸುಕೃತಗಳಿಂದಲೇ ಹೊರತು ಅನ್ಯಥಾ ಅಲ್ಲ. ||೨೧-೨೨||

ಅನೇಕ ಜನ್ಮಗಳಲ್ಲಿ ಮಾಡಿದ ಸುಕೃತಗಳು ಶಿವಾರ್ಪಿತಗಳಾಗಿದ್ದರೆ, ಆಗ ಮನುಷ್ಯನಿಗೆ ಈಶ್ವರಪೂಜೆಯಲ್ಲಿ ಮನಸ್ಸುಂಟಾಗುವುದು. ಪುಣ್ಯರಾಶಿಯನ್ನು ಸ್ವಾಮಿಗೆ ನಿವೇದಿಸಿದವನು ಮತ್ತೆ ಈಶ್ವರಾರಾಧನೆಯಿಂದ ಪುಣ್ಯಗಳಿಸುವನು. ಹಾಗಿಲ್ಲದವನು ಈಶ್ವರಪೂಜೆಯಲ್ಲಿ ಅನಾದರವುಳ್ಳವನಾಗುವನು. ||೨೩-೨೪||

ಅನೇಕ ಪುಣ್ಯಶರೀರಿಯಾದ ಯಾವನೋ ಒಬ್ಬ ಮಹಾತ್ಮನು ಶಿವಾನುಗ್ರಹ ಪಾತ್ರನಾಗುವನು. ಅವನ ಅನುಗ್ರಹದಿಂದಲೇ ಅನೇಕರಿಗೆ ಶಿವಪೂಜೆಯಲ್ಲಿ ಆಸೆ

ಉಗ್ರಲಿಂಗಾರ್ಚನೇ ಭಕ್ತಿರುಗ್ರೈಃ ಪುಣ್ಯೈಃ ಪ್ರಜಾಯತೇ ।
ಉಗ್ರಸ್ಯಾಪಿ ನ ಚೋಗ್ರತ್ವಂ ಸರ್ವೇಷ್ವಪಿ ವಿಶೇಷತಃ ॥೨೬॥

ಯೇನೈವ ವಿಹಿತಂ ಕರ್ಮ ಕೃತಂ ಘೋರತರಂ ಮಹತ್ ।
ತಂ ಪ್ರತ್ಯುಗ್ರೋಽಪ್ಯನುಗ್ರೋಽಪಿ ಸ್ವಭಾವಾದೇವ ಶಂಕರಃ ॥೨೭॥

ತಂ ಪ್ರತ್ಯುಗ್ರೋ ಮಹಾರುದ್ರಸ್ತಂ ಪಾತಯತಿ ಸರ್ವಥಾ ।
ಯಃ ಶಂಕರಾರ್ಚನಂ ತ್ಯಕ್ತ್ವಾ ಶಿವಾನ್ಯಾರ್ಚನತತ್ಪರಃ ॥೨೮॥

ಸಂಸಾರನರಕೇ ಘೋರೇ ಗರ್ಭವಾಸೇ ವಿಶೇಷತಃ ।
ಪಾತಯತ್ಯೇವ ತಂ ಮರ್ತ್ಯಮಮೃತ್ಯುಂಜಯಪೂಜಕಂ ॥೨೯॥

ಗರ್ಭಸ್ವರೂಪಕಥನೇ ಲಜ್ಜಾ ತಾವತ್ಪ್ರಜಾಯತೇ ।
ತಥಾಪಿ ಮೋಹನಾಶಾಯ ತತ್ತಾವತ್ಪ್ರತಿಪಾದ್ಯತೇ ॥೩೦॥

---

ಹುಟ್ಟುವುದು. ಉಗ್ರರೂಪಿಯಾದ ಪರಶಿವನ ಅರ್ಚನೆಯಿಂದ ಅತ್ಯುಗ್ರತಮವಾದ ಪುಣ್ಯರಾಶಿಯು ಲಭಿಸುವುದು. ಉಗ್ರನಾದ ಶಂಕರನನ್ನು ಆರಾಧಿಸುವುದರಿಂದ ಮನುಷ್ಯರ ಉಗ್ರತ್ವವು ನಾಶವಾಗಿ ಸಾಧುಸ್ವಭಾವವು ಅವನಲ್ಲಿ ಜನಿಸುವುದು. ಇದಲ್ಲವೇ ಆಶ್ಚರ್ಯ! ||೨೫-೨೬||

ದೃಢಭಕ್ತಿಯಿಂದ ಶಿವಾರ್ಚನೆ ಮಾಡಿದವನು ಎಷ್ಟೇ ಭಯಂಕರವಾದ ಅಪರಾಧಗಳನ್ನು ಮಾಡಿದ್ದರೂ, ಉಗ್ರರೂಪಿಯಾದ ಶಂಕರನು ಸ್ವಭಾವವಾಗಿ ಶಾಂತರೀತಿಯಲ್ಲಿ ಅವನನ್ನು ಸಲಹುವನು. ಯಾವನು ಈಶ್ವರನನ್ನು ಬಿಟ್ಟು ಅನ್ಯದೇವತಾರಾಧನೆಗೆ ಕೈನೀಡುವನೋ, ಅಂತಹವನನ್ನು ಶಂಕರನು ಉಗ್ರರೂಪ ದಿಂದ ನಾಶಮಾಡಿಬಿಡುವನು. ||೨೭-೨೮||

ಮೃತ್ಯುಂಜಯಪೂಜಕನಲ್ಲದ ಮಹಾಪಾಪಿಯು ಮೊದಲು ಗರ್ಭವೆಂಬ ಮಹಾನರಕದಲ್ಲಿ ಬೀಳುತ್ತಾನೆ. ಆ ಗರ್ಭವಾದರೋ ಅತಿ ಹೇಯವಾದದ್ದು. ಅದನ್ನು ವಿವರಿಸಿ ಹೇಳಲು ನಾಚಿಕೆಯಾಗುತ್ತದೆ. ಆದರೂ ಜನರ ಅಜ್ಞಾನ ನಿವೃತ್ತಿಗಾಗಿ ಅದನ್ನೇ ವಿವರಿಸಿ ಹೇಳುವೆನು. ಎಂದು ಯಾಜ್ಞವಲ್ಕ್ಯಮಹರ್ಷಿಯು ಜನಕರಾಜನಿಗೆ ಗರ್ಭವಾಸದ ದುಃಖವನ್ನು ವಿವರಿಸಲಾರಂಭಿಸಿದನು. ||೨೯-೩೦||

ಕಾಮಾಂಧಕಾರಗ್ರಸ್ತಸ್ಯ ವಿವೇಕರಹಿತಸ್ಯ ತತ್ ।
ಯೌವನೋನ್ಮಾದಮತ್ತಸ್ಯ ತರುಣೀಷು ರತಿರ್ಭವೇತ್ ॥೩೧॥

ತರುಣೀ ವಾರುಣೀತುಲ್ಯಾ ಸೇವಿತಾ ಭ್ರಾಂತಿಮೇವ ಸಾ ।
ಜನಯತ್ಯನಪಾಯಾ ಸಾ ಕಷ್ಟರೂಪಾ ವಿಶೇಷತಃ ॥೩೨॥

ವಾರುಣೀಪಾನಮತ್ತಸ್ಯ ಕಿಂಚಿದೌಷಧಮಸ್ತಿ ತತ್ ।
ಸೇವಿತಂ ವಾರುಣೀದೋಷಂ ನಿವಾರಯತಿ ತತ್ಕ್ಷಣೇ ॥೩೩॥

ಪಾಪಸಾಧನಮೇವೇದಂ ತರುಣೀಮರಣಾವಧಿ ।
ಮರಣೇತಿ ಸ್ಮೃತಾ ಸಾಪಿ ಮರಣಾಯ ಪ್ರಕಲ್ಪತೇ ॥೩೪॥

ಪಾಪಸಾಧನಮೇವೇದಂ ತರುಣೀಮರಣಾವಧಿ ।
ಮರಣೇಪಿ ಸ್ಮೃತಾ ಸಾಪಿ ಮರಣಾಯ ಪ್ರಕಲ್ಪತೇ ॥೩೫॥

ಮೃತಾಪಿ ತರುಣೀ ತಾವತ್ ತರುಣೇನ ಸ್ಮೃತಾ ಸತಿ ।
ತರುಣಜ್ವರರೂಪೇಣ ಮರಣಾಯೋದ್ಯತಾ ಭವೇತ್ ॥೩೬॥

---

ಕಾಮಪೀಡಿತನಾಗಿ ಅಜ್ಞಾನದಿಂದ ವಿವೇಕಶೂನ್ಯನಾದ ಯುವಕನು ಸ್ತ್ರೀಸುಖದಲ್ಲಿ ಆಸಕ್ತನಾಗುವನು. ಸ್ತ್ರೀಯು ಮದ್ಯಕ್ಕೆ ಸಮಾನಳು. ಅವಳ ಸೇವನೆಯಿಂದ ಮನುಷ್ಯರ ಮನಸ್ಸು ಭ್ರಾಂತಿಗೊಳ್ಳುವುದು. ಅಪಾಯರಹಿತಳಾಗಿದ್ದರೂ, ಸಕಲ ಕಷ್ಟಗಳನ್ನೂ ಒದಗಿಸುವವಳೆಂದರೆ ಸ್ತ್ರೀಯೇ. ||೩೧||

ಮದ್ಯಪಾಯಿಗೆ ಅದರ ದೋಷವನ್ನು ನಿವಾರಿಸುವ ಔಷಧಿಯೊಂದಿರುವುದು. ಅದರ ಸೇವನೆಯಿಂದ ಮದ್ಯದ ಅಮಲನ್ನು ಕಳೆದುಕೊಳ್ಳಬಹುದು. ಸ್ತ್ರೀಸುಖಾಭಿಲಾಷೆಗಾದರೋ, ಪ್ರತಿಕ್ರಿಯೆಯೇ ದೊರಕುವುದಿಲ್ಲ. ಮರಣಪರ್ಯಂತವಾಗಿ ಮತ್ತು ಮರಣಕಾಲದಲ್ಲಿಯೂ, ಪುರುಷನನ್ನು ಹಿಂಸಿಸಿ ಕೊನೆಗೆ ಮರಣಕ್ಕೂ ತಾನೇ ಕಾರಣಳಾಗುವಳು. ||೩೨-೩೪||

ಮರಣಪರ್ಯಂತವಾಗಿಯೂ ಪಾಪಕಾರ್ಯಕ್ಕೆ ನೆರವಾಗಿ ತರುಣಿಯು ನಿಲ್ಲುವಳು. ಸ್ತ್ರೀಯು ತಾನು ಮೃತಳಾದರೂ ತರುಣರಿಂದ ಸ್ಮೃತಳಾದರೆ ಆಗ ಮತ್ತೆ ಅವರಿಗೆ ಕಾಮ ಜ್ವರರೂಪದಲ್ಲಿ ಕಾಣಿಸಿಕೊಂಡು ಅವರ ಮರಣಕ್ಕೆ ಕಾರಣಳಾಗುವಳು. ||೩೫-೩೬||

ವಾರುಣೀ ಚೇತ್ಪರಿತ್ಯಕ್ತಾ ಸ್ಮೃತಾ ನೋನ್ಮಾದಸಾಧನಂ ।
ತ್ಯಕ್ತಾಪಿ ತರುಣೀ ತಾವದುನ್ಮಾದಾಯ ಪ್ರವರ್ತತೇ ॥೩೭॥

ಮರಣಂ ಸಾಧಯತ್ಯೇವ ದೂರೋಽಪಿ ತರುಣೀ ಸ್ಥಿತಾ ।
ಅತಸ್ತತ್ಸಂಗಯತ್ನೋಽಪಿ ಪರಿತ್ಯಾಜ್ಯೋ ಮನೀಷಿಭಿಃ ॥೩೮॥

ಸ ಏವ ಬುದ್ಧಿಮಾನ್ ಲೋಕೇ ಸ ಏವಾತಿವಿಚಕ್ಷಣಃ ।
ನ ಯಸ್ಯ ತರುಣೀಸಂಗೇ ರತಿಃ ಸರ್ವಾತ್ಮನಾ ಭವೇತ್ ॥೩೯॥

ತರುಣೀಮುಖರೂಪೇಣ ವಿಷೇಣ ಮರಣಂ ಕ್ಷಣಾತ್ ।
ಅದೃಷ್ಟೇನಾಪಿ ದುಷ್ಟೇನ ನೂನಂ ವಿಷವಿಲಕ್ಷಣಂ ॥೪೦॥

ಪೀತೇನೈವ ವಿಷೇಣಸ್ಯಾನ್ಮರಣಂ ದೂರತಸ್ತು ನ ।
ದೂರೇಽಪಿ ತರುಣೀ ಸದ್ಯೋ ಮರಣಸ್ಯೈವ ಸಾಧನಂ ॥೪೧॥

ತಾರುಣ್ಯವಾರುಣೀಪಾನಾತ್ತರುಣೀ ತನುಸಂಗಮಾತ್ ।
ಉನ್ಮಾದೇ ಸತಿ ಕಿಂ ಚಿತ್ರಂ ತಪ್ಯತಸ್ತಸ್ಯ ಕಾರಣಂ ॥೪೨॥

---

ಮದ್ಯಪಾನಮಾಡದೆ ಅದನ್ನು ಸ್ಮರಿಸಿಕೊಳ್ಳುವುದರಿಂದ ಬುದ್ಧಿಬದಲಾವಣೆಯಾಗುವುದಿಲ್ಲ. ಸ್ತ್ರೀಸ್ಮರಣೆಯಿಂದಲೇ ಬುದ್ಧಿಭ್ರಮಣ ಮತ್ತು ಮರಣ ಇವು ಸಂಭವಿಸಬಹುದು. ಆದ್ದರಿಂದ ಸಾಧ್ಯವಾದಷ್ಟುಮಟ್ಟಿಗೆ ಬುದ್ಧಿಶಾಲಿಯಾದವನು ಸ್ತ್ರೀಸಂಪರ್ಕವನ್ನು ದೂರಮಾಡಬೇಕು. ಮದ್ಯಪಾನಕ್ಕಿಂತಲೂ, ಸ್ತ್ರೀ ವ್ಯಸನವು ಪ್ರಬಲವಾದುದು. ॥೩೭-೩೮॥

ಬುದ್ಧಿಶಾಲಿಯಾದವನು ಸ್ತ್ರೀಸಂಗವನ್ನು ದೂರಮಾಡಬೇಕು. ಸ್ತ್ರೀ ಸಂಸರ್ಗವನ್ನು ತ್ಯಜಿಸಿರುವವನೇ ಬುದ್ಧಿಶಾಲಿಯು. ಸ್ತ್ರೀಮುಖರೂಪದಿಂದ ಬಂದ ವಿಷವು ಪುರುಷನ ಅಳಿವಿಗೆ ಕಾರಣವಾಗುವುದು. ಆ ವಿಷದರ್ಶನವಿಲ್ಲದಿದ್ದರೂ ಮನುಷ್ಯನು ಸಾವನ್ನಪ್ಪುವನು. ॥೩೯-೪೦॥

ಪ್ರಸಿದ್ಧವಾದ ವಿಷಪಾನದಿಂನಲೇ ಮರಣಸಂಭವಿಸುವುದು. ದರ್ಶನದಿಂದಲ್ಲ. ಸ್ತ್ರೀರೂಪವಾದ ವಿಷವಾದರೋ ದರ್ಶನದಿಂದಲೇ ಮರಣಕಾರಣವಾಗುವುದು. ಹಾಗಿರುವಾಗ ತರುಣೀತನುಸಂಬಂಧದಿಂದ ಮನುಷ್ಯನ ಮನಸ್ಸು ಕಲಕಿದರೆ ಅದರಲ್ಲಿ ಅಷ್ಟು ಆಶ್ಚರ್ಯವೇನಿರುವುದು? ॥೪೧-೪೨॥

ಕಾರಣಾನಿ ಬಹೂನ್ಯೇವ ಮರಣೇ ಸಂತಿ ತಾನಿ ತು ।
ತರುಣಸ್ಯ ವಿಶೇಷೇಣ ತರುಣೀಪರಮಾಣವಃ ॥೪೩॥

ತರುಣೀವಿರಹೇಣೈವ ತರುಣಾಮರಣೇಕ್ಷಣೇ ।
ಕ್ಷೀಣಾ ಧರಣ್ಯಾಂ ಜೀವಂತಿ ತರುಣೀಪರಮಾಣುಭಿಃ ॥೪೪॥

ಅವಸ್ಥಾಭೇದಮಾಸಾದ್ಯ ಯುವತೀಸಂಗಮೇ ಸತಿ ।
ಕಾಮೋದ್ರೇಕಾತ್ಕಾಮಮೇವ ಕಾಮುಕಾರ್ಯನರೋ ನರಃ ॥೪೫॥

ತದಾ ಪುಣ್ಯಪ್ರಭಾವೇನ ಶಂಕರಸ್ಮರಣೇ ಸತಿ ।
ತದ್ಭೋಗಜನಿತಂ ಸೌಖ್ಯಂ ಶಂಕರಾಯ ನಿವೇದಯೇತ್ ॥೪೬॥

ತನ್ನಿವೇದನಪುಣ್ಯೇನ ತತ್ರ ಯೋ ಜಾಯತೇ ನರಃ ।
ಸ ಶಾಂಕರೋ ಭವತ್ಯೇವ ತತ್ತತ್ಪುಣ್ಯಾನುಬಂಧತಃ ॥೪೭॥

ತದಾ ಯದಿ ಸುದುರ್ವೃತ್ತಃ ಚಿಂತಾಂತರರತೋ ಯದಿ ।
ಅಶಾಂಕರೋ ಭವತ್ಯೇವ ಜಾಯಮಾನೋ ನರಸ್ತದಾ ॥೪೮॥

---

ತರುಣೀನಿಮಿತ್ತವಾಗಿ ತರುಣನಿಗೆ ನಾನಾಕಾರಣಗಳಿಂದ ವ್ಯಥೆಯುಂಟಾಗುವುದು. ಸ್ತ್ರೀವಿರಹದಿಂದ, ಸ್ತ್ರೀಮರಣದಿಂದ, ಸ್ತ್ರೀಸಂಬಂಧವಾದ ಪರಮಾಣುಸೇವನೆಯಿಂದ, ಅಂದರೆ ಸ್ರಕ್ಚಂದನಾದಿಗಳ ಧಾರಣೆಯಿಂದ, ಸ್ತ್ರೀಸಂಬಂಧವಾದ ಯೋಚನೆಯುಂಟಾಗಿ ಕೊನೆಗೆ ಅದು ಅವನ ಮರಣಪರ್ಯಂತ ಅವನಿಗೆ ಹಿಂಸೆಕೊಡುವುದು. ||೪೩-೪೪||

ಅಂತೂ ಯೌವನಾವಸ್ಥೆಯಲ್ಲಿ ಸ್ತ್ರೀಸಂಬಂಧಕ್ಕಾಗಿ ಅಪೇಕ್ಷೆಪಟ್ಟು, ಕಷ್ಟದಿಂದ ಹೇಗೋ ಭೋಗಪಡುವನು. ಆ ಭೋಗಕಾಲದಲ್ಲಿ ಅವನ ಪುಣ್ಯಪ್ರಭಾವದಿಂದ ಶಂಕರಸ್ಮರಣೆಯುಂಟಾದರೆ, ಆ ಸುಖವನ್ನೆಲ್ಲಾ ಶಂಕರನಿಗೆ ಅರ್ಪಣೆಮಾಡುವನು. ||೪೫-೪೬||

ಆ ಸುಖಸಮರ್ಪಣೆಯಿಂದ ಜನಿಸಿದವನು ಕೇವಲ ಶಂಕರಭಕ್ತನಾಗಿ ಹುಟ್ಟುವನು. ಭೋಗಕಾಲದಲ್ಲಿ ದುರ್ವೃತ್ತನಾಗಿ ಯಾವುದೋ ಮನಸ್ಸಿನಲ್ಲಿದ್ದರೆ ಆಗ ಜನಿಸುವವನು ಕೇವಲ ನಾಸ್ತಿಕನಾಗಿ ಶಂಕರಾರಾಧನೆಯಲ್ಲಿ ವಿಮುಖನಾಗುವನು. ||೪೭-೪೮||

ಜೀವಸ್ತು ನಿತ್ಯಏವಾಯಮಾಕಾಶಸದೃಶಸ್ತತಃ ।
ತಸ್ಯೋತ್ಪತ್ತಿರ್ನ ಚಿತ್ತಸ್ಯ ಜನ್ಮದೇಹಸ್ಯ ಕೇವಲಂ ॥೪೯॥

ನ ನಾಶೋ ನಾಪಿ ಜನ್ಮಾಸ್ಯ ಜೀವಸ್ಯ ಜನಿಧೀರಪಿ ।
ದೇಹಮಾದಾಯ ನಿಷ್ಪನ್ನಾ ತದ್ಭೇದೋಪ್ಯುಚ್ಯತೇ ಶೃಣು ॥೫೦॥

ಲಿಂಗದೇಹೋಸ್ಯ ಕೋಪ್ಯಸ್ತಿ ಸ್ಥೂಲದೇಹೋಸ್ಯ ಕಶ್ಚನ ।
ದೇಹಾನ್ವಯಃ ಸರ್ವದಾಪಿ ಮುಕ್ತೆಸ್ಸ ತು ವಿನಶ್ಯತಿ ॥೫೧॥

ಲಿಂಗದೇಹಾನ್ವಯಸ್ತಸ್ಯ ಸ್ಥೂಲದೇಹಕ್ಷಯೇ ಸತಿ ।
ದ್ವಿವಿಧಸ್ಥೂಲದೇಹೋಪಿ ಪಾರ್ಥಿವಾಪಾರ್ಥಿವಾತ್ಮಕಃ ॥೫೨॥

ಪಂಚಭೂತಾತ್ಮಕಂ ದೇಹಂ ಕೇಚಿದಾಹುರ್ವಯಂ ತು ನ ।
ಪಾರ್ಥಿವಾನಿ ಶರೀರಾಣಿ ನರಾದೀನಾಂ ವಿಶೇಷತಃ ॥೫೩॥

---

ಜೀವನಿಗೆ ಎಂದೂ ನಾಶವಿಲ್ಲ. ಅವನು ಆಕಾಶದಂತೆ ಸ್ಥಿರನು. ಸರ್ವವ್ಯಾಪಿಯು. ಆದ್ದರಿಂದ ಉತ್ಪತ್ತಿಯು ಹೊಸದಾಗಿ ಆತನಿಗಿಲ್ಲ. ಉತ್ಪತ್ತಿಯಾಗುವುದು ದೇಹಮಾತ್ರ. ಈ ಜೀವನಿಗೆ ನಾಶವಾಗಲಿ, ಪುನಃ ಉತ್ಪತ್ತಿಯಾಗಲಿ ಇರುವುದಿಲ್ಲ. ದೇಹವನ್ನು ಮಾತ್ರ ಬೇರೆ ಬೇರೆಯಾಗಿ ಪಡೆಯುತ್ತಾನೆ. ||೪೯-೫೦||

ಆತ್ಮನಿಗೆ ಪ್ರಕೃತಿಪರಿಣಾಮಗಳಿಂದ ಅನೇಕ ವಸ್ತುಗಳು ಸೇರಿ ಶರೀರವೆಂಬ ಆಶ್ರಯವು ಸೃಷ್ಟಿಕಾಲದಲ್ಲಿಯೇ ಉಂಟಾಗುವುದು. ಅದು ಪ್ರಳಯಪರ್ಯಂತವಿರುವುದು. ಅದೇ ಲಿಂಗಶರೀರ. ಅದಕ್ಕೆ ಎಂದೂ ನಾಶವಿಲ್ಲ. ಬ್ರಹ್ಮೈಕತ್ವವನ್ನು ಪಡೆಯುವಾಗ ಮಾತ್ರ ಈ ಲಿಂಗದೇಹವೂ ನಷ್ಟವಾಗುವುದು. ಅದಲ್ಲದೆ ನರ್ತಕನು ವೇಷಗಳನ್ನು ಧರಿಸುವಹಾಗೆ ಷಟ್‌ಕೋಶವೆಂಬ ವಿಚಿತ್ರ ಸ್ಥೂಲಶರೀರವನ್ನು ಜೀವನು ಪಡೆಯುವನು. ಈ ದೇಹವು ಆಗಾಗ ನಷ್ಟವಾಗುವುದು. ಇದೇ ಸ್ಥೂಲದೇಹವು. ಇದು ಪಾರ್ಥಿವ, ಅಪಾರ್ಥಿವ ಎಂದು ಎರಡುವಿಧವಾಗಿ ತೋರಿಬರುವುದು. ||೫೧-೫೨||

ಮನುಷ್ಯರ ದೇಹವು ಪಂಚಭೂತಮಯವಾದದ್ದರಿಂದ ಪಾಂಚಭೌತಿಕ ದೇಹವೆಂದು ಕೆಲವರು ಹೇಳುವರು. ನಾನಾದರೋ ಈ ದೇಹವನ್ನು ಕೇವಲ ಪಾರ್ಥಿವದೇಹವೆನ್ನುವೆನು. ಏತಕ್ಕೆಂದರೆ ಈ ದೇಹದಲ್ಲಿ ಪೃಥಿವೀಭಾಗಬಿಟ್ಟು

ಭೂತಾಂತರಾಣಾಂ ಸಂಯೋಗಃ ಪಾರ್ಥಿವೇ ಜಾಯತೇ ತತಃ ।
ತತ್ಸಂಯೋಗೇನ ತದ್ದೇಹೇ ಪಾಂಚಭೌತಿಕತಾಭ್ರಮಃ ॥೫೪॥

ಭೂತಾಂತರಗುಣಧ್ವಂಸೇ ಗುಣೀಭೂತಲಯೇ ಸತಿ ।
ಸಂಧಾನುವೃತ್ತ್ಯಾ ತದ್ಗಂಧಗುಣಕಂ ಪಾರ್ಥಿವಂ ಮತಂ ॥೫೫॥

ಗಂಧೇನ ಪಾರ್ಥಿವತ್ವಸ್ಯಾಪ್ಯನುಮಾನಂ ತನುಷ್ವತಃ ।
ಅಸ್ಮದಾದಿಶರೀರಾಣಿ ಪಾರ್ಥಿವಾನೀತಿ ಮನ್ಯತಾಂ ॥೫೬॥

ಅಸ್ಯ ದೇಹಸ್ಯ ಜನನೇ ರೇತಃ ಪ್ರಥಮಸಾಧನಂ ।
ಲೋಹಿತಂ ಚ ತಯೋರ್ಯೋಗೋ ಗರ್ಭಭಾಗೇ ಪ್ರಜಾಯತೇ ॥೫೭॥

ರೇತಸೋ ಲೋಹಿತಾಧಿಕ್ಯಂ ನಾರೀರೂಪಂ ಪ್ರಜಾಯತೇ ।
ನಾರೀಯೋನಿಪ್ರದೇಶಸ್ಥಂ ಲೋಹಿತಂ ತಸ್ಯ ಸಾಧನಂ ॥೫೮॥

ತದನ್ಯೋನ್ಯಾನ್ವಯೇನೈವ ಕಲಲಂ ಜಾಯತೇ ತತಃ
ತಸ್ಯಾಪಿ ಕಲಲಾವಸ್ಥಾ ಪಕ್ಷಮಾತ್ರಾತ್ಪ್ರಜಾಯತೇ ॥೫೯॥

ತತಃ ಪರಂ ಬುದ್ಬುದತ್ವಂ ಮಾಸಮಾತ್ರೇಣ ಜಾಯತೇ ।
ಪ್ರಸಾರತ್ವಂ ದ್ವಿತೀಯೇ ತು ಮಾಸಿ ತಸ್ಯ ಪ್ರಜಾಯತೇ ॥೬೦॥

---

ಉಳಿದ ನೀರು, ತೇಜಸ್ಸು, ವಾಯು, ಆಕಾಶಾದಿಗಳು ಗುಣಸಹಿತವಾಗಿ ನಾಶವಾಗುತ್ತವೆ. ಪೃಥಿವಿಯ ಮುಖ್ಯ ಗುಣವಾದ ಗಂಧವು ಮಾತ್ರ ಎಂದೂ ಬಿಡದು. ಆದ್ದರಿಂದಲೇ ಇದನ್ನು ನಾನು ಪಾರ್ಥಿವದೇಹವೆನ್ನುವೆನು. ||೫೩-೫೪-೫೫||

ಈ ಗಂಧಗುಣದಿಂದಲೇ ಈ ಶರೀರವನ್ನು ಪಾರ್ಥಿವಶರೀರವೆಂದು ಊಹಿಸಬಹುದು. ಈ ದೇಹದ ಉತ್ಪತ್ತಿಗೆ ಪುರುಷನ ರೇತಸ್ಸು ಮೂಲಕಾರಣ. ಆ ರೇತಸ್ಸು ಸ್ತ್ರೀಯ ಶೋಣಿತದೊಂದಿಗೆ ಸೇರಿದಾಗ ಗರ್ಭೋತ್ಪತ್ತಿಯಾಗುವುದು. ||೫೬-೫೭||

ಸ್ತ್ರೀಯೋನಿಸ್ಥ ಶೋಣಿತಾಧಿಕ್ಯಸಂಸರ್ಗದಿಂದ ಸ್ತ್ರೀಜನನವಾಗುವುದು. ಸ್ತ್ರೀಜನನಕ್ಕೆ ಶೋಣಿತವೇ ಮುಖ್ಯಸಾಧನ. ಹೀಗೆ ಪರಸ್ಪರ ಶುಕ್ಲಶೋಣಿತದಿಂದ ಒಂದು ಪಕ್ಷಪರ್ಯಂತ ಒಂದು ಗುಳ್ಳೆಯ ಆಕಾರವು ಗರ್ಭಕೋಶದಲ್ಲಿ ಬೆಳೆದು ಬರೆವುದು. ಅಲ್ಲಿಂದ ಅದೇ ಗುಳ್ಳೆಯು ಗಟ್ಟಿಯಾಗಿ ಒಂದು ತಿಂಗಳಲ್ಲಿ ಘನವೆನಿಸಿ

ತೃತೀಯೇ ರಸಪುಷ್ಟ್ಯಾ ತು ಮಾಂಸಗೋಲಃ ಪ್ರಜಾಯತೇ ।
ತತ್ರೈವ ಶಂಕರೇಚ್ಛಾಯಾಂ ಅಂಗಾಭಿವ್ಯಕ್ತಿರಿತ್ಯಪಿ ॥೬೧॥

ಚತುರ್ಥೇತ್ವಾಂತ್ರಸಂಬಂಧಃ ಪಂಚಮೇ ಪಿತ್ತಸಂಗಮಃ ।
ಷಷ್ಠೇ ಮಜ್ಜಾಸ್ಥಿಸಂಬಂಧಸ್ತದಾ ಪ್ರಾಣಸಮನ್ವಯಃ ॥೬೨॥

ಸ್ವಸ್ಯಾದೃಷ್ಟವಿಶೇಷೇಣ ಜೀವಸ್ತತ್ರಾನ್ವಿತೋ ಭವೇತ್ ।
ಲಿಂಗದೇಹೇನ ತೇನೈವ ತದ್ವಿನಾಶೋ ನ ಜಾಯತೇ ॥೬೩॥

ಪ್ರಭೂತಪುಣ್ಯಪೂರಸ್ಯ ಕಸ್ಯಚಿಚ್ಛಾಂಭವಸ್ಯ ತು ।
ಭೋಗೇಚ್ಛಾಯಾಂ ಗರ್ಭಭಾಗೇ ಪ್ರವೇಶಃ ಸ್ಯಾತ್ಸುಖಾವಹಃ ॥೬೪॥

ಪಾಪಪುಂಜಸ್ವರೂಪಸ್ಯ ಶಿವಭಕ್ತಿವಿಯೋಗತಃ ।
ಪಾಪಭೋಗಾಯ ಗರ್ಭೇಷು ವಾಸೋ ಭವತಿ ಸರ್ವಥಾ ॥೬೫॥

---

ಕೊಳ್ಳುವುದು. ಅನಂತರ ಎರಡನೆಯ ತಿಂಗಳಲ್ಲಿ ಪ್ರಸಾರತ್ವವನ್ನು ಅಂದರೆ ಮೊಳಕೆಯ ಧರ್ಮವನ್ನು ಪಡೆಯುವುದು. ॥೫೮-೫೯-೬೦॥

ಮೂರನೆಯ ತಿಂಗಳಲ್ಲಿ ಮಾತೃಜಗ್ಧವಾದ ರಸದಿಂದ ಪುಷ್ಟಿಯನ್ನು ಪಡೆದು ಮಾಂಸದ ಉಂಡೆಯಾಗುವುದು. ಆಗಲೇ ಈಶ್ವರೇಚ್ಛೆಯಿಂದ ಪುಂ, ಸ್ತ್ರೀ ಲಿಂಗಾಭಿವ್ಯಕ್ತಿಯು ತೋರುವುದು. ನಾಲ್ಕನೆಯ ತಿಂಗಳಲ್ಲಿ ಕರುಳಿನ ಉತ್ಪತ್ತಿಯೂ, ಐದನೆಯ ತಿಂಗಳಲ್ಲಿ ಪಿತ್ತಸಂಸರ್ಗವೂ, ಆರನೆಯ ತಿಂಗಳಿನಲ್ಲಿ ಮಜ್ಜಾ, ಮೂಳೆ ಇವುಗಳೂ, ಏಳನೆಯ ತಿಂಗಳಿನಲ್ಲಿ ಪ್ರಾಣಸಂಬಂಧವೂ ತೋರಿಬರುವುದು.॥೬೧-೬೨॥

ಆಗಲೇ ಲಿಂಗದೇಹವಿಶಿಷ್ಟನಾಗಿರುವ ಜೀವನು ತನ್ನ ಪುಣ್ಯಪಾಪಕರ್ಮಾನುಗುಣವಾಗಿ ಬೇರೆ ಬೇರೆ ಯೋನಿಗಳಲ್ಲಿ ಅವತರಿಸುವನು. ನಿಜವಾಗಿ ಸುಖಪಡುವ ಜೀವನು ಅತಿಶಯ ಸುಕೃತಶಾಲಿಯಾಗಿರುವ ಯಾವನೋ ಒಬ್ಬ ಈಶ್ವರ ಭಕ್ತನ ಭೋಗೇಚ್ಛೆಯಲ್ಲಿ ಅಡಗಿ ಅವನಿಂದ ತಾನು ದೇಹವನ್ನು ಪಡೆಯುವನು.॥೬೩-೬೪॥

ಶಿವಭಕ್ತಿಯಿಲ್ಲದೆ ಪಾಪರಾಶಿಸ್ವರೂಪರಾಗಿರುವವರ ಗರ್ಭದಲ್ಲಿ ಜನನವಾಗುವುದರಿಂದ, ಜೀವನು ತನ್ನ ಪಾಪದ ಫಲವನ್ನೆಲ್ಲಾ ಅನುಭವಿಸಿ ಕಳೆದುಕೊಳ್ಳು

ಪುಣ್ಯಾವರಣಯೋಗೇನ ದುರ್ಗಂಧಾನುಭವೋಽಪಿ ನ ।
ದಾರುಪುತ್ತಳಿಕಾಮಧ್ಯಪ್ರವಿಷ್ಟಸ್ಯೇವ ವಸ್ತುತಃ ॥೬೬॥

ಪಾಪಾತ್ಮನಾಂ ತು ಗರ್ಭೇಽಪಿ ಘೋರಾ ನರಕಯಾತನಾ ।
ತಯಾ ಯಾತನಯಾ ತಸ್ಯ ಜೀವನಂ ಮರಣೋಪಮಂ ॥೬೭॥

ಯಾವದ್ಗರ್ಭೇ ನಿವಾಸಸ್ಸ್ಯಾತ್ ತಾವತ್ಕರ್ಮಾನುಚಿಂತನಂ ।
ಧರ್ಮಾದಿಚಿಂತನಂ ತೇನ ಸ್ಯಾದಧರ್ಮಾದಿ ಚಿಂತನಂ ॥೬೮॥

ಪುಣ್ಯವಾಸನಯಾ ತತ್ರ ಪುಣ್ಯಂ ಕರ್ತವ್ಯಮಿತ್ಯಪಿ ।
ಬುದ್ಧಿರ್ಭವತಿ ಪುಣ್ಯಾನಾಂ ತಸ್ಯಾಪುಣ್ಯಮತಿಸ್ತು ನ ॥೬೯॥

ಪಾಪಾತ್ಮನಾಂ ಪಾಪಮೇವ ಕರ್ತವ್ಯಮಿತಿ ಧೀಃ ಪರಂ ।
ಜಾಯಂತೇ ತೇನ ಪಾಪೇನ ರತಿಃ ಸ್ಯಾತ್ಪಾಪಕರ್ಮಣಿ ॥೭೦॥

ಸಪ್ತಮೇ ಪುಷ್ಟಿರಂಗಾನಾಂ ಅಷ್ಟಮೇಽಪಿ ಪ್ರಜಾಯತೇ ।
ನವಮೇ ತ್ವಂಗಭಾಗಾನಾಂ ಸುಖವೇದನಯೋರ್ಮತಿಃ ॥೭೧॥

---

ವನು. ಪುಣ್ಯಶಾಲಿಯಾದವನ ಜನ್ಮವು ಅವನ ಪುಣ್ಯಪರಿಪಾಕದಿಂದ ದುರ್ಗಂಧ ವಿಶಿಷ್ಟವಾದ ಕೋಶದಲ್ಲಿ ಅಡಗಿದ್ದರೂ ದುರ್ಗಂಧಾನುಭವವಿಲ್ಲದೆ, ಮರದ ಬೊಂಬೆಯ ಹೃದಯದಲ್ಲಿದ್ದಂತೆ ಸುಗಮವಾಗಿರುವುದು. ॥೬೫-೬೬॥

ಪಾಪಾತ್ಮರಾದವರ ಹೃದಯದಲ್ಲಿ ಸೇರುವುದಂತೂ ಯಮಯಾತನೆಯೆಂದೇ ಅರಿಯಬೇಕು. ಆ ವೇದನೆಯು ಅವನ ಮರಣವೇದನೆಗೆ ಸರಿಸಮಾನವಾಗಿರುವುದು. ಆದರೆ ಗರ್ಭಗತನಾಗಿರುವವರೆಗೂ ಜೀವಕ್ಕೆ ಧರ್ಮಾಧರ್ಮವಿವೇಚನೆಯೂ, ಪೂರ್ವಜನ್ಮಸ್ಮರಣೆಯೂ ಇರುವುದು. ॥೬೭-೬೮॥

ಪುಣ್ಯವಾಸನೆ ಇದ್ದವನಿಗೆ ಗರ್ಭದಲ್ಲಿ ಪುಣ್ಯಕಾರ್ಯಾಲೋಚನೆಯು ಹುಟ್ಟುವುದು. ಪಾಪಿಷ್ಠರಿಗಾದರೋ ಪಾಪಕಾರ್ಯಾಸಕ್ತಿಯೇ ತಲೆದೋರುತ್ತಿರುವುದು. ಇದು ಅವರವರ ಪುಣ್ಯಪಾಪಕರ್ಮಗಳ ಸಂಸ್ಕಾರ. ॥೬೯-೭೦॥

ಏಳು ಮತ್ತು ಎಂಟನೆಯ ತಿಂಗಳುಗಳಲ್ಲಿ ದೇಹಪುಷ್ಟಿಯೊದಗುತ್ತದೆ. ಒಂಬತ್ತನೆಯ ತಿಂಗಳಲ್ಲಿ ಸುಖದುಃಖಗಳಲ್ಲಿ ಬುದ್ಧಿ ಹುಟ್ಟುತ್ತದೆ. ಹತ್ತನೆಯ

ದಶಮೋ ಗರ್ಭವಾತೇನ ಪ್ರಭೂತೇನ ಸಮನ್ವಯೇ ।
ಭವತ್ಯೇವಾವಿಲಂಬೇನ ಯೋನಿಮಾರ್ಗಾದ್ವಿನಿರ್ಗಮಃ ॥೭೨॥

ಬಾಹ್ಯವಾತಾನ್ವಯಾತ್ಪಶ್ಚಾನ್ಮಂದಬುದ್ಧಿಃ ಪ್ರಜಾಯತೇ ।
ಕಶ್ಚಿತ್ಕಶ್ಚನ ಪುಣ್ಯಾತ್ಮಾ ಪ್ರಬುದ್ಧಜ್ಞಾನವಾನಪಿ ॥೭೩॥

ಈದೃಶಾನಿ ಶರೀರಾಣಿ ಪಾಪಿಷ್ಠಾನಾಂ ಪುನಃ ಪುನಃ ।
ದೃಷ್ಟಾನ್ಯಪಿ ಶರೀರಾಣಿ ಕಷ್ಟಭೋಗಾಯ ಕೇವಲಂ ॥೭೪॥

ಶಾಂಭವಾನಾಂ ಶರೀರಾಣಿ ಪುಣ್ಯರೂಪಾಣಿ ಕೇವಲಂ ।
ತತಸ್ತಾನಿ ಶರೀರಾಣಿ ಪುಣ್ಯಾನೀತ್ಯವಧಾರಯ ॥೭೫॥

ಪುಣ್ಯಕಾರಣಭೂತಾನಾಂ ಶರೀರಾಣಾಂ ವಿಶೇಷತಃ ।
ಪುಣ್ಯಪೂರಾನ್ವಯಸ್ತೇನ ಪುನಃ ಪುಣ್ಯಂ ಪ್ರಜಾಯತೇ ॥೭೬॥

ಪುಣ್ಯಂ ಕರ್ತುಂ ಪ್ರವೃತ್ತಸ್ಯ ಸ್ವೇಚ್ಛಯಾ ದೇಹಸಂಗಮಃ ।
ನ ದೇಹೇನ ವಿನಾ ಪುಣ್ಯಂ ದೇಹಂ ಪುಣ್ಯಸ್ಯ ಸಾಧನಂ ॥೭೭॥

---

ತಿಂಗಳಲ್ಲಿ ಅತಿಶಯವಾದ ಗರ್ಭವಾಯುವಿನಿಂದ ಕೂಡಿ, ಸ್ತ್ರೀಯರ ಯೋನಿ ಮಾರ್ಗದಿಂದ ಭೂಪತನವಾಗುತ್ತದೆ. ॥೭೧-೭೨॥

ಭೂಪತನವಾದೊಡನೆಯೇ ಹೊರಗಿನ ವಾತಾವರಣಕ್ಕೆ ಸಿಕ್ಕಿ, ಗರ್ಭಗತವಾದ ಒಳ್ಳೆಯ ಬುದ್ಧಿಯೆಲ್ಲಾ ಮಲಿನವಾಗಿ ಮಾನವಸಹಜವಾದ ಮಂದ ಬುದ್ಧಿಯು ಆವರಿಸುವುದು. ಹೀಗೆ ಶರೀರದ ಉತ್ಪತ್ತಿಯು ಕಷ್ಟಮೂಲಕವಾಗಿಯೇ ನಡೆದುಬರುವುದು. ॥೭೩-೭೪॥

ಆದರೆ ಈಶ್ವರಭಕ್ತರ ಶರೀರವು ಮಾತ್ರ ಪುಣ್ಯರೂಪವಾದದ್ದೆಂದು ತಿಳಿಯಬೇಕು. ಏಕೆಂದರೆ ಅದು ಪುಣ್ಯಕಾರಕವಾದ ಶಂಕರಸೇವೆಗೆ ನಿಲ್ಲುವುದರಿಂದಲೂ ಅದು ಪುಣ್ಯವಂಶೀಯರಲ್ಲಿ ಅವತರಿಸುವುದರಿಂದಲೂ ಅದನ್ನು ಪುಣ್ಯಪೂರಕವಾದದ್ದೆಂದು ಅರಿಯಬೇಕು. ॥೭೫-೭೬॥

ಪುಣ್ಯಕಾರ್ಯದಲ್ಲಿ ತೊಡಗುವವನಿಗೂ ಒಂದು ದೇಹಸಂಬಂಧವಿರಬೇಕು. ದೇಹವಿಲ್ಲದೆ ಪುಣ್ಯವು ದೊರಕಲಾರದು. ಆದ್ದರಿಂದಲೇ ಪುಣ್ಯಸಾಧನವಾದದ್ದು

ಲಿಂಗಾರ್ಚನಂ ಶರೀರೇಣ ವಿನಾ ನೈವ ಪ್ರಜಾಯತೇ ।
ಅತಃ ಶರೀರಮಪ್ಯೇಕಂ ಶಿವಪೂಜನಸಾಧನಂ ॥೭೮॥

ಭೂರಿಪುಣ್ಯಪ್ರಭಾವೇನ ಶಾಂಭವೋ ಭುವಿ ಜಾಯತೇ ।
ತಂ ದೃಷ್ಟ್ವಾ ಭೂರಿಯಂ ತುಷ್ಟಾ ಭವತ್ಯೇವ ನ ಸಂಶಯಃ ॥೭೯॥

ಅನೇನ ದೇಹಯೋಗೇನ ಶಾಂಭವೋ ಮಯಿ ಸಂಗತಃ ।
ಧನ್ಯೋಽಸ್ಮಿ ಮಮ ಪುಣ್ಯಸ್ಯ ನಾಂತೋಽಸ್ತೀತಿ ಮಹೀವಚಃ ॥೮೦॥

ಶರೀರಂ ಶಾಂಭವಂ ಧನ್ಯಂ ಶರೀರಸ್ಯಾಸ್ಯ ರಕ್ಷಣಂ ।
ಕರ್ತವ್ಯಮಿತಿ ಭೂರ್ನಿತ್ಯಂ ಕರೋತ್ಯೇವಾನುಭಾಷಣಂ ॥೮೧॥

ಏವಂ ಪ್ರಜಾತದೇಹಸ್ಯ ಶಾಂಭವಸ್ಯ ಮಹಾತ್ಮನಃ ।
ಜನ್ಮಪ್ರಭೃತಿಬುದ್ಧಿಸ್ಸ್ಯಾಚ್ಛ್ರೀಮಹಾದೇವಪೂಜನೇ ॥೮೨॥

ಮಹಾದೇವಾರ್ಚನೇ ತಸ್ಯ ಜಾತಾ ಬುದ್ಧಿಃ ಪ್ರವರ್ಧತೇ ।
ಬಾಲ್ಯೇಽಪಿ ಜ್ಞಾನಸಂಪನ್ನೋ ಮಾನಸೇ ಪೂಜನೇ ರತಃ ॥೮೩॥

---

ದೇಹವೆನಿಸಿಕೊಂಡಿದೆ. ಲಿಂಗಾರ್ಚನೆ ಮಾಡಬೇಕಾದರೂ ಶರೀರ ಸಹಾಯವಿರಬೇಕು. ಆದ್ದರಿಂದ ಶರೀರವನ್ನೂ ಶಿವಾರ್ಚನ ಸಾಧಕವೆಂದೇ ಹೇಳಬಹುದಾಗಿದೆ. ||೭೭-೭೮||

ಅತಿಶಯ ಸುಕೃತವಿಶೇಷದಿಂದಲೇ ಭೂಮಿಯಲ್ಲಿ ಈಶ್ವರಭಕ್ತನಾಗಿ ಅವತರಿಸುವುದು. ಅಂತಹವನನ್ನು ನೋಡಿಯೇ ಭೂಮಿಯೂ ಸಂತುಷ್ಟವಾಗಿ ನಿಂತಿರುವುದು. ಇಂತಹ ಪುಣ್ಯದೇಹಿಯಾದ ನಿನ್ನ ಸಹವಾಸದಿಂದ ನಾನು ಧನ್ಯನೆನಿಸಿರುವೆನು. ನನ್ನ ಸುಕೃತಕ್ಕೆ ಕೊನೆಯೇ ಇಲ್ಲದಂತಾಗಿದೆ. ||೭೯-೮೦||

ಶಂಭುಭಕ್ತನ ದೇಹವೇ ಪುಣ್ಯತಮವಾದದ್ದು. ಹೇಗಾದರೂ ಮಾಡಿ ಅದನ್ನು ರಕ್ಷಿಸುತ್ತಿರಬೇಕೆಂದು ಭೂದೇವಿಯು ಸದಾ ಹೇಳುತ್ತಿರುವಳು. ಈರೀತಿ ಶಂಭುಭಕ್ತನೆನಿಸಿ ಹುಟ್ಟಿದವನಿಗೆ ಜನ್ಮಪ್ರಭೃತಿ ಶಂಕರಾರ್ಚನೆಯಲ್ಲಿಯೇ ಬುದ್ಧಿಯುಂಟಾಗುತ್ತಿರುವುದು. ||೮೧-೮೨||

ಬಾಲ್ಯದಲ್ಲಿಯೂ ಆತನು ಶಿವಮಾನಸಪೂಜೆಯನ್ನು ನಡೆಸುತ್ತಲೇ ಇರುವನು. ಮಹಾದೇವಾರ್ಚನೆಯಲ್ಲಿಯೂ ಶಿವತತ್ತ್ವಜ್ಞಾನದಲ್ಲಿಯೂ ಶಿವಪೂಜಾ

ತತ್ತ್ವಜ್ಞಾನಂ ಸಮಾಸಾದ್ಯ ಶಿವರೂಪಂ ವಿಚಿಂತ್ಯ ಚ ।
ಗರ್ಭಪ್ರವೇಶಮಾರಭ್ಯ ಶಿವಪೂಜಾರತೋ ಭವೇತ್ ॥೮೪॥

ವಿಷಯೇಷ್ವನುರಾಗೋಽಪಿ ತಸ್ಯ ತಾವನ್ನ ಜಾಯತೇ ।
ಶಿವಾರ್ಚನೇ ಪರಂ ಬುದ್ಧಿರ್ಧನ್ಯೋಽಹಮಿತಿ ಜಾಯತೇ ॥೮೫॥

ಕಸ್ಯಚಿದ್ಭೂರಿಪುಣ್ಯಸ್ಯ ವಾಗ್ವ್ಯಾಪಾರಾನುವರ್ತನಂ ।
ಉಚ್ಚೈರ್ಮಹೇಶನಾಮಾನಿ ಬಾಲ್ಯೇಽಪಿ ವದತಿ ಧ್ರುವಂ ॥೮೬॥

ಶಿವಪೂಜನಸಾಮಗ್ರೀಂ ಸಂಪಾದ್ಯ ವಿವಿಧಾಂ ಮುಹುಃ ।
ಕರೋತಿ ಪೂಜನಂ ಶಂಭೋರ್ಲಿಂಗೇ ಮಂಗಳದಾಯಕೇ ॥೮೭॥

ಜನ್ಮಪ್ರಭೃತಿ ಯಸ್ಯ ಸ್ಯಾನ್ಮಹಾದೇವಾರ್ಚನೇ ಮತಿಃ ।
ತಸ್ಯ ಪುಣ್ಯಸ್ಯ ನಾಂತೋಽಸ್ತಿ ಸಗುಣಃ ಕೇವಲಂ ನೃಪ ॥೮೮॥

ಗಣಾ ಅಪ್ಯಭಿವಾಂಛಂತಿ ಮಾನುಷಂ ದೇಹಮಾಶ್ರಿತಾಃ ।
ಯತೋ ಮಾನುಷದೇಹೇನ ಪುಣ್ಯವೃದ್ಧಿಃ ಪ್ರಜಾಯತೇ ॥೮೯॥

---

ಕಾರ್ಯಗಳಲ್ಲಿಯೂ ಆತನಿಗೆ ಗರ್ಭದಲ್ಲಿಯೇ ಪ್ರವೃತ್ತಿಯುಂಟಾಗುವುದು. ಇದು ಅವನ ಪುಣ್ಯಕರ್ಮದ ಫಲ. ॥೮೩-೮೪॥

ಅವನಿಗೆ ಬಾಲ್ಯದಲ್ಲಿಯೇ ವಿಷಯಾಭಿಲಾಷೆಯು ಕಡಿಮೆಯಾಗಿ ತೋರಿಬರುವುದು. ಶಿವಾರ್ಚನೆಯಲ್ಲಿ ಆಸಕ್ತಿ ಹುಟ್ಟುವುದೇ ತನಗೆ ಧನ್ಯತೆಯೆಂದರಿಯುವನು. ಇನ್ನೂ ಪುಣ್ಯಜೀವಿಯಾದವನಿಗೆ ಬಾಲ್ಯದಲ್ಲಿಯೇ ಪರಪ್ರೇರಣೆಯಿಲ್ಲದೆ, ಶಿವನಾಮೋಚ್ಚಾರಣಸಾಮರ್ಥ್ಯವು ಲಭಿಸುವುದು. ॥೮೫-೮೬॥

ಬಾಲ್ಯದಲ್ಲಿಯೇ ಆತನು ಶಿವಪೂಜಾಸಾಮಗ್ರಿಗಳನ್ನು ಸಂಪಾದಿಸಿಕೊಂಡು ಆಗಾಗ ಈಶ್ವರಪೂಜೆಗಾಗಿ ತೊಡಗುವನು. ಯಾರಿಗೆ ಜನ್ಮಾರಭ್ಯ ಈಶ್ವರಾರ್ಚನೆಯಲ್ಲಿ ಮನಸ್ಸು ಹುಟ್ಟುವುದೋ, ಅವರಂತಹ ಪುಣ್ಯಶಾಲಿಗಳು ಲೋಕದಲ್ಲಿ ಯಾರೂ ಇಲ್ಲವೆಂದೇ ಹೇಳಬಹುದು. ಮತ್ತು ಆತನನ್ನು ಈಶ್ವರಗಣಗಳಲ್ಲಿ ಒಬ್ಬನನ್ನಾಗಿಯೂ ಭಾವಿಸಬಹುದು. ॥೮೭-೮೮॥

ಅಲ್ಲದೆ ಪ್ರಮಥಗಣಗಳೂ ಸಹ ಭೂಲೋಕದಲ್ಲಿ ಈಶ್ವರಭಕ್ತರಾಗಿ ಜನಿಸಲು ಅಪೇಕ್ಷಿಸುವರು. ಏಕೆಂದರೆ ಮಾನುಷದೇಹದಿಂದ ಪುಣ್ಯವನ್ನು ಹೆಚ್ಚಿಸಿಕೊಳ್ಳ

ಯಸ್ತು ಮಾನುಷದೇಹೇನ ದುರ್ಲಭೇನ ವಿಶೇಷತಃ ।
ಶಿವಾರ್ಚನಪರಃ ಪುಣ್ಯೈಸ್ತತ್ಪುಣ್ಯಮಮಿತಂ ಭವೇತ್ ॥೯೦॥

ಪುಣ್ಯಾನಿ ಸಂತ್ಯನೇಕಾನಿ ತಾನಿ ಪುಣ್ಯಾನಿ ಕೇವಲಂ ।
ಶಿವಪೂಜನಪುಣ್ಯೋಽಪಕರಣಾನಿ ವಿಶೇಷತಃ ॥೯೧॥

ಯಾನಿ ಪುಣ್ಯಾನ್ಯನಂತಾನಿ ತಾನಿ ಸರ್ವಾಣಿ ವಸ್ತುತಃ ।
ಶಿವಪೂಜೋಪಯುಕ್ತಾನಿ ಪುಣ್ಯತ್ವಂ ಪ್ರಾಪ್ನುವಂತಿ ಹಿ ॥೯೨॥

ಪುಣ್ಯಾನಾಮಪಿ ಪುಣ್ಯತ್ವಂ ಕೇವಲಂ ಶಿವಪೂಜಯಾ ।
ಅತಶ್ಶಿವಾರ್ಚನಸ್ಯಾಸ್ಯ ಮಹಿಮಾಪಿ ಮಹಾನ್ ಖಲು ॥೯೩॥

ಶಿವಾರ್ಚನಮಹಿಮ್ನೋಽಪಿ ಮಹಿಮ್ನಃ ಕೀರ್ತನಂ ಪರಂ ।
ಮುಕ್ತಿಸಾಧನಮಿತ್ಯಾಹುಸ್ತತಸ್ತತ್ಕೇನ ವರ್ಣ್ಯತೇ ॥೯೪॥

---

ಬಹುದು. ಯಾರು ದುರ್ಲಭವಾದ ಮನುಷ್ಯದೇಹವನ್ನು ಸಂಪಾದಿಸಿ ಶಿವಪೂಜಾ ನಿರತರಾಗುವರೋ ಅವರ ಪುಣ್ಯವು ಅತ್ಯಂತ ವೃದ್ಧಿಯಾದುದೆಂಬುದನ್ನು ಸಂದೇಹ ವಿಲ್ಲದೆ ತಿಳಿಯಬೇಕು. ॥೮೯-೯೦॥

ಲೋಕದಲ್ಲಿ ಇನ್ನೂ ಎಷ್ಟೋ ವಿಧವಾದ ಸುಕೃತಗಳಿರುವುವು. ಆ ಸುಕೃತ ಗಳೆಲ್ಲಾ ಶಿವಪೂಜಾಕಾರ್ಯಸಾಧಕಗಳೇ ಹೊರತು ವಿಶೇಷ ಸುಕೃತಪದವಾಚ್ಯಗಳಲ್ಲ. ಲೋಕದಲ್ಲಿ ಹೆಚ್ಚಿನ ಸುಕೃತಗಳೆಂದು ಹೇಳಲ್ಪಟ್ಟಿರುವುವುಗಳೆಲ್ಲಾ ಶಿವಪೂಜೋಪ ಯುಕ್ತಗಳೇ ಆಗಿರುವುವು. ॥೯೧-೯೨॥

ಪುಣ್ಯಗಳಿಗೆ ಪುಣ್ಯವೆಂಬ ಧರ್ಮವನ್ನು ಕೊಡುವುದೆಂದರೆ ಶಿವಪೂಜೆ ಯೊಂದೇ. ಆದ್ದರಿಂದಲೇ ಶಿವಾರ್ಚಕನು ಮಹಾಮಹಿಮನೆನ್ನಿಸಿಕೊಳ್ಳುವನು. ಶಿವಾರ್ಚನೆಯಿಂದ ಬರುವ ಮಹಿಮೆಯೇ ನಿಜವಾದ ಮಹಿಮೆ. ಅದೇ ಮುಕ್ತಿ ಸಾಧನವೆಂದು ಹೇಳುವಾಗ ಅದರ ವಿಷಯವಾಗಿ ವರ್ಣಿಸುವುದೇನಿರುವುದು ? ॥೯೩-೯೪॥

ಫಲಂ ಶಿವಾರ್ಚನಸ್ಯೇದಂ ಇಯದೇವೇತಿ ಯೋ ವದೇತ್ ।
ಸ ಏವ ವೇದಬಾಹ್ಯೇಷು ಗಣನೀಯೋ ವಿಶೇಷತಃ ॥೯೫॥

ಶಿವಪೂಜಾಫಲೇಯತ್ತಾ ವೇದಾಂತೇಷ್ವಪಿ ನ ಶ್ರುತಾ ।
ಅಮಿತಂ ತತ್ಫಲಂ ಯಸ್ಮಾತ್ತಸ್ಮಿನ್ನಮಿತಧೀರ್ಮತಾ ॥೯೬॥

ಶೂಲಪಾಣಿಃ ಸ್ವಭಾವೇನ ಸ ಸರ್ವಜ್ಞಶಿರೋಮಣಿಃ ।
ತದರ್ಚನಫಲೇಯತ್ತಾ ನಾಸ್ತೀತಿ ಮನುತೇ ನೃಪ ॥೯೭॥

ಕೃತೇ ಶಿವಾರ್ಚನಾಭ್ಯಾಸೇ ಬಹುಕಲ್ಪೇಷು ಸಾದರಂ ।
ತದಾ ಶಿವಾರ್ಚನಫಲೇ ಪರಮೋ ರಮತೇ ಮನಃ ॥೯೮॥

ಮನೋಹರಾಣಾಂ ಚ ಮನೋಹರಂ ಹಿ
ಮಹಾನ್ಮಹಾದೇವ ಸಮರ್ಚನಂ ಸ್ಯಾತ್ ।
ತದೇವ ತಾವನ್ಮಧುರೇಷು ಸರ್ವೇ
ಷ್ವತೀವ ತಾವನ್ಮಧುರಂ ಮನೋಜ್ಞಂ ॥೯೯॥

---

ಶಿವಾರ್ಚನೆಗೆ ಇಷ್ಟೇ ಫಲವೆಂದು ನಿರ್ಧರಿಸುವವನು ವೇದಬಾಹಿರನೆನಿಸುವನು. ಏಕೆಂದರೆ ಶಿವಪೂಜಾಫಲದ ಪರಮಾವಧಿಯನ್ನು ಉಪನಿಷತ್ತುಗಳು ಕೂಡ ನಿರ್ಧರಿಸಲಾರವು. ಆದ್ದರಿಂದಲೇ ಮಹಾ ಬುದ್ಧಿಶಾಲಿಗಳ ಅಭಿಪ್ರಾಯದಲ್ಲಿ ಶಿವಪೂಜೆಯು ಅನಂತ್ಯಫಲವುಳ್ಳದ್ದೆನಿಸಿದೆ. ॥೯೫-೯೬॥

ಎಲೈ ರಾಜನೇ, ಸ್ವಭಾವದಿಂದಲೇ ಸರ್ವಜ್ಞನೆನಿಸಿದ ಪರಮೇಶ್ವರನ ಪೂಜಾಫಲಕ್ಕೆ ಕೊನೆಮೊದಲುಂಟೇ ? ಶಿವಾರ್ಚನಾಭ್ಯಾಸವು ಮಾನವರಿಗೆ ಕಲ್ಪಪರ್ಯಂತವಾಗಿ ಬಂದಮೇಲೆ ಆಗ ಅವರ ಮನಸ್ಸು ನಿತ್ಯವೂ ಶಿವಾರ್ಚನೆಯಲ್ಲಿಯೂ, ತತ್ಫಲಾನುಭವದಲ್ಲಿಯೂ ತೊಡಗುವುದು. ॥೯೭-೯೮॥

ಲೋಕದಲ್ಲಿ ಮನಮೋಹಕಗಳಾದ ಕಾರ್ಯಗಳು ಯಾವುವುಂಟೋ ಅವುಗಳಲ್ಲೆಲ್ಲಾ ಅತ್ಯಂತ ಮನೋಹರವೆನಿಸಿದುದು ಈ ಶಿವಪೂಜಾ. ಹಾಗೆಯೇ ಮಧುರತಮವಾದ ಕಾರ್ಯಗಳಲ್ಲಿ ಮಹಾಮಧುರವಾದದ್ದೆಂದರೆ ಈಶ್ವರಪೂಜೆಯೇ. ॥೯೯॥

**ವಂದೇ ಪುಣ್ಯಸ್ವರೂಪಂ ಭವಭಜನಪರಾಭೂತಸಂತಾಪಪಾಪಂ**
**ಪ್ರಧ್ವಸ್ತಾನಂತಕೋಪಂ ಪ್ರತಿಹತವಿವಿಧಧ್ವಾಂತಸಂಕಾಶಚಾಪಂ ।**
**ರತ್ನಾಧಾರಾತಿಧೀರಂ ಸ್ಫುರದುರುಶಿಖರಾಕಾರಚಾಮೀಕರವ್ಯಾ**
**ಪಾರಾಪಾರಪ್ರಪೂರವ್ಯತಿಕರರುಚಿರಾಚಾರಮೇರೂಚ್ಚಚಾಪಂ ॥೧೦೦॥**

**ಇತಿ ಶ್ರೀಶಿವರಹಸ್ಯೇ ತೃತೀಯಾಂಶೇ ಹರಾಖ್ಯೇ ಪೂರ್ವಾರ್ಧೇ**
**ಯಾಜ್ಞವಲ್ಕ್ಯ ಜನಕಸಂವಾದೇ ಗರ್ಭಸ್ವರೂಪಕಥನ**
**ಶಿವಪೂಜಾಮಹಿಮಾನುವರ್ಣನಂ ನಾಮ**
**ಚತುಶ್ಚತ್ವಾರಿಂಶೋಽಧ್ಯಾಯಃ.**

---

ಹೀಗೆ ಪುಣ್ಯಸ್ವರೂಪನೂ, ಸಂಸಾರಾಸಕ್ತಿಯಿಂದ ಉಂಟಾಗುವ ಸಕಲ ದುಃಖಗಳನ್ನು ಪಾಪಗಳನ್ನೂ ನಿವಾರಿಸುವ ಶಕ್ತಿಯುಳ್ಳವನೂ, ಕೋಪತಾಪಗಳಿಂದ ದೂರನಾಗಿ ಶಾಂತನೂ ಆಗಿರುವ ಮಹೇಶ್ವರನನ್ನು ಮನಸಾವಂದಿಸುವೆನು. ಅಲ್ಲದೆ ಶಂಕರನ ಚಾಪವೆಂಬುದು ಕತ್ತಲೆಯ ರಾಶಿಯನ್ನೆಲ್ಲಾ ಧ್ವಂಸಮಾಡುವ ಸೂರ್ಯನಂತೆ ಹೊಳೆಯುತ್ತಿರುವುದು. ಪರಶಿವನ ಸ್ವಭಾವವಾದರೋ ಅಗಾಧವಾದ ಸಮುದ್ರದಂತೆ ಗಂಭೀರವುಳ್ಳದ್ದಾಗಿರುವುದು. ಸುವರ್ಣಗಿರಿಯಾದ ಮೇರುಪರ್ವತದ ಉನ್ನತಶಿಖರವನ್ನೇ ಉಚ್ಚಧನುಸ್ಸನ್ನಾಗಿ ಮಾಡಿಕೊಂಡು ಜಗತ್ತನ್ನೇ ತೊಳಗಿಸಿದ ಮಹಾಮಹಿಮನೂ, ಮಂಗಳಮೂರ್ತಿಯೂ ಆದ ಪರಮೇಶ್ವರನನ್ನು ನಾನು ಸರ್ವದಾ ಧ್ಯಾನಮಾಡುವೆನು" ಎಂದು ಯಾಜ್ಞವಲ್ಕ್ಯಮಹರ್ಷಿಯು ಜನಕನಿಗೆ ಶಿವಪೂಜಾಮಹಿಮೆಯನ್ನು ವಿವರಿಸಿದನು. ॥೧೦೦॥

ಇಲ್ಲಿಗೆ ಶ್ರೀಶಿವರಹಸ್ಯದ ಹರನಾಮಕವಾದ ತೃತೀಯಾಂಶದಲ್ಲಿ ಪೂರ್ವಾರ್ಧಕ್ಕೆ
ಸಂಬಂಧಿಸಿದಂತೆ ಇರುವ ಯಾಜ್ಞವಲ್ಕ್ಯ ಮತ್ತು ಜನಕಮಹಾರಾಜನ
ಸಂವಾದರೂಪವಾಗಿ, ಗರ್ಭಸ್ವರೂಪ ಮತ್ತು ಗರ್ಭೋ
ತ್ಪತ್ತಿಯ ನಿರೂಪಣವನ್ನು ವಿವರಿಸಿ ತನ್ಮೂಲಕ
ಶಿವಪೂಜಾಮಹಿಮಾದಿಗಳನ್ನು ವಿವರಿಸುವ
ನಲವತ್ತುನಾಲ್ಕನೆಯ ಅಧ್ಯಾಯವು
ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಪಂಚಚತ್ವಾರಿಂಶೋಽಧ್ಯಾಯಃ

|| ಜನಕ ಉವಾಚ ||

ಯಾಜ್ಞವಲ್ಕ್ಯಮುನಿವಾಕ್ಸುಧಾನಿಧೇ
ರಾಧಿಶಾಂತಿರಧುನಾ ವಿಧೂದಯಃ ।
ಸ್ವರ್ಧುನೀವಿವಿಧವೀಚಿಕೋಚ್ಚಯಃ
ಸೋಽಯಮಭ್ಯುದಯ ಏವ ಕೋಽಪಿ ಮೇ ||೧||

ಆಪದಾಮಪಿ ನಿವಾರಣಾಯ ಸಾ
ಯಾಜ್ಞವಲ್ಕ್ಯಮುನಿವಾಗಭೂದಿಹ ।
ಸಾ ಮಹೇಶ್ವರಕಥಾನುವಾದಿನೀ
ಘೋರಪಾಪಪರಿಹಾರಕಾರಿಣೀ ||೨||

---

## ನಲವತ್ತೈದನೆಯ ಅಧ್ಯಾಯ

ಹಾಗೆ ಹೇಳಿದ ಯಾಜ್ಞವಲ್ಕ್ಯಮಹಾಮುನಿಯ ಮಾತುಗಳನ್ನು ಕೇಳಿ ಜನಕಮಹಾರಾಜನು ಸಂತೋಷಪಟ್ಟು, ತನ್ನ ಮನೋವ್ಯಥೆಯೆಲ್ಲಾ ನಾಶವಾಗಿ, ಗಂಗಾನದಿಯ ಅಲೆಗಳುಕ್ಕಿದಂತೆ ತನ್ನ ಪುಣ್ಯರಾಶಿಯು ವೃದ್ಧಿಯಾಯಿತೆಂದೂ, ಮುನಿಯ ವಾಕ್ಸಮುದ್ರದಿಂದ ಶಾಂತಿಯೆಂಬ ಚಂದ್ರೋದಯವು ಲಭಿಸಿತೆಂದೂ ತಿಳಿದನು. ||೧||

ಯಾಜ್ಞವಲ್ಕ್ಯಮುನಿಪ್ರೋಕ್ತವಾದ ಆ ಮಹೇಶ್ವರಕಥಾನುವಾದವು ತನ್ನ ಎಲ್ಲಾ ಆಪತ್ತುಗಳನ್ನೂ ನಿವಾರಿಸುವುದಲ್ಲದೆ ಘೋರರೂಪವಾದ ಪಾಪವನ್ನು ಸಹ ನಾಶಮಾಡತಕ್ಕದ್ದೆಂದೂ ತಿಳಿದು ಸಂತೋಷಪಟ್ಟನು. ||೨||

ಅಸ್ಮದಾರ್ಜಿತಮಹಾಘಸಂಕ್ಷಯೋ
ಽದ್ಯ ಜಾತ ಇತಿ ಮೇ ಮನಾಗಪಿ ।
ಪಾಪಭೀತಿರಪಿ ನೋಪಜಾಯತೇ
ಜನ್ಮಕೋಟಿಘಟನೇಽಪಿ ಸರ್ವಥಾ ॥೩॥

ಅದ್ಯ ಧನ್ಯತಮಮೇವ ಜನ್ಮ ಮೇ
ಶಾಂಭವೇನ ಸಹ ಭಾಷಣಂ ಯತಃ ।
ಜಾತಮಾಶು ಸುಕೃತಾಂಬುರಾಶಯೋ
ವೃದ್ಧಿಮೇವಮುಪಯಾಂತಿ ಕೋಟಿಶಃ ॥೪॥

ಕೋಽಯಮಭ್ಯುದಯಕಾಲಸಂಗಮಃ
ಶಾಂಗಲಿಂಗವಿವಿಧಾರ್ಚನೋದ್ಯಮಃ ।
ಜಾತ ಏವ ಮಮ ತತ್ಸಮಾಗಮಾ
ದ್ಧನ್ಯಧನ್ಯಮಿದಮಸ್ಯ ಜೀವನಂ ॥೫॥

ಅನ್ನಮನ್ನಮಿತಿ ಜೀವನಂ ಪರಂ
ನೀಯತೇ ನ ಶಿವಪೂಜನೋದ್ಯಮೈಃ ।

---

ನಾನು ಜನ್ಮಾಂತರಗಳಿಂದಲೂ ಸಂಪಾದಿಸಿದ ಪಾಪರಾಶಿಯೆಲ್ಲವೂ ಇಂದು ನಿರ್ಮೂಲವಾಯಿತು. ಇನ್ನು ಮುಂದಿನ ಕೋಟ್ಯಂತರ ಜನ್ಮಗಳಲ್ಲಿಯೂ ನನಗೆ ಪಾಪಭಯವಿರುವುದಿಲ್ಲ. ॥೩॥

ನನ್ನ ಜನ್ಮವು ಅತ್ಯಂತ ಧನ್ಯವೆನಿಸಿತು. ಶಂಕರಭಕ್ತನಾದ ಮಹಾಮುನಿ ಯೊಡನೆ ನಡೆದ ಸಂಭಾಷಣೆಯ ಪರಿಣಾಮವಾಗಿ ನನ್ನ ಸುಕೃತಸಮುದ್ರವು ಕೋಟಿಪಾಲು ವೃದ್ಧಿ ಹೊಂದಿದ್ದಾಯಿತು. ॥೪॥

ಈಶ್ವರಭಕ್ತನ ಸಮಾಗಮದಿಂದ ನನ್ನ ಏಳಿಗೆಯ ಕಾಲವು ಬಂದಿತೆಂದು ಭಾವಿಸಿರುವೆನು. ಅಲ್ಲದೆ ಈ ಋಷಿಯ ಉಪದೇಶಬಲದಿಂದ ನನಗೆ ಶಂಕರಪೂಜಾ ಬುದ್ಧಿ ಯುಂಟಾಯಿತು. ಇದರಿಂದಲೇ ನನ್ನ ಜೀವನವು ಧನ್ಯವೆನಿಸಿತು. ॥೫॥

ಇಲ್ಲಿನವರೆಗೂ ನನ್ನ ಜೀವನವು ಅನ್ನ, ಅನ್ನ ಎಂದು ಕೇವಲ ಆಹಾರ ಸಂಪಾದನೆಯಲ್ಲಿಯೇ ಪ್ರಯತ್ನಿಸುತ್ತಿದ್ದಿತು. ಈಗಲಾದರೋ ಶಂಕರಪೂಜೆ

ಅದ್ಯ ತಾವದಧುನಾ ತದುದ್ಯಮೋ
ಜಾತ ಏವ ಶಪಥೋಽಪಿ ಶಂಕರೇ ॥೬॥

ಶಂಕರಾನುಸರಣೇನ ಕೇವಲಂ
ಶಾಂಗಲಿಂಗವಿಭವಾರ್ಚನೇ ಮತಿಃ ।
ತೇನ ತಚ್ಚರಣಸೇವಯಾ ಪರಂ
ನೇಯ ಏವ ದಿವಸೋ ವಿವೇಕಿನಾ ॥೭॥

ಶಂಕರಾರ್ಚನಫಲಂ ಬಹು ಶ್ರುತಂ
ಶಾಂಕರಾಮಿತಕಥಾಸುಧಾನಿಧೇಃ ।
ಸಂನಿಧಾನಮಪಿ ಮೇ ನಿಧಾನತಾಂ
ಪ್ರಾಪ್ಯ ತಾವದಭಯಾಯ ಜಾಯತೇ ॥೮॥

ಅದ್ಭುತಂ ಕಿಮಿದಮೇತದೀದೃಶಂ
ಪಾಪರಾಶಿವಿನಿವಾರಿಕಾಶನಿಃ ।
ಆಗತಃ ಕಥಮಭೂದಘಕ್ಷಯಾ
ದಕ್ಷಯಾಮೃತನಿಧಾನಸಂಗಮಃ ॥೯॥

---

ಗಾಗಿಯೇ ನನ್ನ ಜೀವವನ್ನು ಶಪಥಪೂರ್ವಕವಾಗಿ ನಿಲ್ಲಿಸಬೇಕೆಂಬ ಮನಸ್ಸು ಬಂದಿರುವುದು. ॥೬॥

ವಿವೇಕಿಯಾದವನು ನಿತ್ಯವೂ ಶಂಕರನನ್ನೇ ಧ್ಯಾನಿಸುತ್ತಾ, ಸರ್ವದಾ ಶಂಕರಲಿಂಗಾರ್ಚನೆಯಲ್ಲಿಯೇ ನೆಟ್ಟಮನಸ್ಸುಳ್ಳವನಾಗಿ, ಯಾವಾಗಲೂ ಪರಶಿವ ಪಾದಸೇವೆಯಲ್ಲಿಯೇ ಆಸಕ್ತನಾಗಿರಬೇಕು. ॥೭॥

ಈಶ್ವರಪೂಜಾಫಲವು ಈಗ ನನಗೆ ಋಷಿಯ ಅನುಗ್ರಹದಿಂದ ತಿಳಿದಂತಾಯಿತು. ಇಂತಹ ಪರಶಿವಕಥಾನಿಧಿಯಾದ ಮಹರ್ಷಿಯ ಸಾನ್ನಿಧ್ಯವೇ ನನಗೆ ಒಂದು ನಿಧಿ. ಇದರ ಸಂಸರ್ಗದಿಂದ ನನಗೆ ಯಾವ ವಿಧವಾದ ಭಯವೂ ತಟ್ಟಲಾರದು. ॥೮॥

ಈ ಋಷಿಯ ಸಮಾಗಮವು ನನಗೆ ಅತ್ಯಾಶ್ಚರ್ಯಕರವಾಗಿರುವುದು. ಇದು ನನ್ನ ಪಾಪರಾಶಿಯನ್ನೆಲ್ಲಾ ಧ್ವಂಸಮಾಡುವ ಸಿಡಿಲಿನಂತಿರುವುದಲ್ಲವೆ!

ಶಂಕರಸ್ಮರಹರಾಂತಕಾಂತಕ
ತ್ರಾಹಿ ಮಾಮವ ಪರಂ ಮಹೇಶ್ವರ ।
ತಾವಕಂ ಕಥಮಮುಂ ವಿಹಾಯ ತೇ
ಮಂದರಾಚಲನಿವಾಸನೇ ಮತಿಃ ॥೧೦॥

ಚಿತ್ತಮಸ್ಯ ಪರಿಶೋಧಯಾಧುನಾ
ಲಿಂಗಪೂಜನರತಿಪ್ರದಾನತಃ ।
ಅನ್ಯದದ್ಯ ನ ಚ ವಾಂಛಿತಂ ಚ ಮೇ
ತಾವದೇವ ಮಮ ಮುಕ್ತಿಸಾಧನಂ ॥೧೧॥

ಲಿಂಗಪೂಜನಮನುಕ್ಷಣಂ ಮಯಾ
ಕಾರ್ಯಮಿತ್ಯಪಿ ಮಿತಿರ್ಭವೇದ್ಯದಿ ।
ಸಾ ಮತಿಸ್ಸಕಲದುಃಖನಾಶನಂ
ಕರ್ತುಮೇವ ನಿಪುಣಾ ನ ಸಂಶಯಃ ॥೧೨॥

---

ಅಲ್ಲದೆ ಪಾಪನಾಶಕವಾದ ಸುಧಾಸಮುದ್ರವು ದೊರೆತಂತೆ ನನಗೆ ಸಂತೋಷಪ್ರದವಾಗಿರುವುದು. ॥೯॥

ಮಹೇಶ್ವರನೇ, ಕಾಮಾರಿಯೇ, ಅಂತಕಾಂತಕನೇ, ನಿನ್ನ ಭಕ್ತನಾದ ನನ್ನನ್ನು ಕಾಪಾಡು. ನಿನ್ನ ಸೇವಕನಾದ ನನ್ನನ್ನು ಬಿಟ್ಟು ನೀನು ಮಂದರಪರ್ವತದಲ್ಲಿ ಒಬ್ಬನೇ ವಾಸಮಾಡುವುದು ನ್ಯಾಯವೇ ? ॥೧೦॥

ಪರಶಿವನೇ, ಈ ನನ್ನ ಮನಸ್ಸಿಗೆ ಶಿವಲಿಂಗಾರ್ಚನೆಯ ಆಸೆಯನ್ನು ಕೊಟ್ಟು ಅದನ್ನು ಪರಿಶುದ್ಧವನ್ನಾಗಿ ಮಾಡು. ಲೋಕದಲ್ಲಿ ಮುಕ್ತಿಸಾಧನವಾದ ನಿನ್ನ ಲಿಂಗಾರ್ಚನೆಯೊಂದನ್ನು ಬಿಟ್ಟು ಮತ್ತಾವುದನ್ನೂ ನಾನು ಅಪೇಕ್ಷಿಸುವವನಲ್ಲ. ॥೧೧॥

ಸದಾಕಾಲದಲ್ಲಿಯೂ ನನಗೆ ಈಶ್ವರಲಿಂಗಾರಾಧನೆಯಲ್ಲಿ ಮನಸ್ಸುಂಟಾದದ್ದೇ ಆದರೆ ಆ ಮನಸ್ಸು ನನ್ನ ಸಕಲ ದುಃಖನಿವಾರಣೆಗಾಗಿಯೇ ಯತ್ನಿಸುತ್ತಿದೆ ಎಂದು ನಾನು ಭಾವಿಸುವೆನು. ಅದರಲ್ಲಿ ಸಂಶಯವಿಲ್ಲ. ॥೧೨॥

ಯಾವದಸ್ತಿ ಧನಮದ್ಯ ಸಂಚಿತಂ
ತಾವದೀಶಪದಪೂಜನೋತ್ಸವೈಃ ।
ದೇಯಮೇತದುಪಯುಕ್ತಮತ್ರಚೇ
ದರ್ಜನಂ ಚ ಸಫಲಂ ಧನಸ್ಯ ಮೇ ॥೧೭॥

ಕರ್ಮಣಾಪಿ ಮನಸಾಪಿ ಸರ್ವಥಾ
ವಾಗ್ಭಿರಪ್ಯನುದಿನಂ ಮಹೇಶ್ವರಃ ।
ಪೂಜಿತೋ ಯದಿ ತದಾದ್ಯ ಸಂಕ್ಷಯೋ
ಜಾತ ಏವ ವಿಷಯೋಽಪಿ ನಾತ್ರ ಮೇ ॥೧೪॥

ಕಿಂ ಕಲತ್ರಚಿರಗಾತ್ರಸಂಗಮೈಃ
ಕಿಂ ಕುಮಾರರುಚಿರಾನುಭಾಷಣೈಃ ।
ಕಿಂ ಗಜಾದಿಪಶುಪೋಷಣೋತ್ಸವೈಃ
ಶಂಕರಾರ್ಚನಪರೋ ಭವಾಮ್ಯಹಂ ॥೧೫॥

---

ನನ್ನಲ್ಲಿರುವ ಐಶ್ವರ್ಯವು ಕ್ಷೀಣವಾಗುವವರೆಗೂ ನಾನು ಈಶ್ವರನ ಪಾದ ಪೂಜೆ ಉತ್ಸವ ಮುಂತಾದ ಪುಣ್ಯಕಾರ್ಯಗಳಿಗೆ ಅದನ್ನು ವ್ಯಯಮಾಡಿದರೆ ಆಗ ನಾನು ಸಂಪಾದಿಸಿದ ಧನಕ್ಕೆ ಸಾರ್ಥಕ್ಯವೊದಗುವುದು. ಇಲ್ಲದಿದ್ದರೆ ನನ್ನ ಹಣವೆಲ್ಲಾ ವ್ಯರ್ಥವೆನಿಸುವುದು. ॥೧೩॥

ಮನಸ್ಸು, ಮಾತು, ಕ್ರಿಯಾ ಇವೆಲ್ಲವುಗಳಿಂದಲೂ ನಾನು ನಿತ್ಯವೂ ಈಶ್ವರಾರಾಧನೆ ಮಾಡಿದೆನಾದರೆ, ಆಗ ನನ್ನ ವಿಷಯಸುಖಾಭಿಲಾಷೆಯೆಲ್ಲವೂ ಮುಕ್ತಾಯವಾದಂತೆಯೇ ಎಂದು ಭಾವಿಸುವೆನು. ॥೧೪॥

ಪತ್ನೀಸುಖಾಲಿಂಗನಾದಿಗಳೂ, ಮಕ್ಕಳ ಮನೋಹರವಾದ ಮಾತಿನ ಮಾಧುರ್ಯವೂ, ಆನೆಯೇ ಮೊದಲಾದ ದೊಡ್ಡ ದೊಡ್ಡ ಪ್ರಾಣಿಗಳ ರಕ್ಷಣಾನಂದವೂ ನನ್ನ ಭಾಗಕ್ಕೆ ವ್ಯರ್ಥವೆನಿಸಿದೆ. ಈಗ ನನಗೆ ಶಂಕರಾರ್ಚನೆಯಲ್ಲಿಯೇ ಮನಸ್ಸು ನಿಂತಿದೆ. ॥೧೫॥

ಕಿಂ ಗೃಹಸ್ಯ ಪರಿರಕ್ಷಣೇನ ವಾ
ಪ್ರಾಜ್ಯರಾಜ್ಯಪರಿಪಾಲನೇನ ವಾ ।
ಶೌರ್ಯಕರ್ಮಕರಣೇನ ವಾ ಮುಹುಃ
ಶಂಕರಾರ್ಚನಪರೋ ಭವಾಮ್ಯಹಂ ॥೧೬॥

ದಾರುಣಾಪಿ ಯಮಯಾತನಾ ಶ್ರುತಾ
ಸಾಪಿ ದುಃಖಭಯದಾಯಿನೀ ಖಲು ।
ಸಾ ನ ಶಾಮ್ಯತಿ ಶಿವಾರ್ಚನಂ ವಿನಾ
ತೇನ ಶಂಕರಪರೋ ಭವಾಮ್ಯಹಂ ॥೧೭॥

ಶಂಕರೋ ಮಮ ಗತಿಃ ಸ ಶಂಕರಃ
ಶಂ ಕರಿಷ್ಯತಿ ಸಮರ್ಚಿತೋ ಮುಹುಃ ।
ಶಂಕರೇ ಸತಿ ಕಿಮನ್ಯಪೇಕ್ಷಿತಂ
ಮೋಕ್ಷದೋಽಪಿ ಸ ಶಿವಃ ಸ್ಮೃತೋಽಪಿ ಮೇ ॥೧೮॥

---

ಗೃಹರಕ್ಷಣೆ, ರಾಜ್ಯಪರಿಪಾಲನೆ, ಶೌರ್ಯ ಕಾರ್ಯಸಾಧನೆ ಇವೆಲ್ಲವೂ ನನಗೆ ಉಪಯೋಗಕರವಲ್ಲವೆಂದು ಭಾವನೆಯುಂಟಾಗಿದೆ. ಇನ್ನು ಮುಂದೆ ಶಂಕರಾರ್ಚನೆಯಿಂದಲೇ ಕಾಲಕಳೆಯುವೆನು. ॥೧೬॥

ಯಮಯಾತನೆಯೆಂಬುದು ಬಹು ಭಯಂಕರವಾದದ್ದೆಂದು ಕೇಳಿರುವೆನು. ಅದು ದುಃಖ ಮತ್ತು ಭಯಪ್ರದವಾದದ್ದೇ ಹೌದು. ಅಂತಹ ಭಯ, ದುಃಖನಿವಾರಣೆಗೆ ಶಂಕರಾರ್ಚನೆಯನ್ನು ಬಿಟ್ಟರೆ ಮತ್ತಾವಸಾಧನವಿರುವುದು? ಆದ್ದರಿಂದ ಇನ್ನು ಮುಂದೆ ಸದಾ ಶಿವಾರ್ಚನೆಯಿಂದಲೇ ಕಾಲಕಳೆಯುವೆನು. ॥೧೭॥

ಸರ್ವದಾ ಸುಖಪ್ರದನಾದ ಆ ಶಂಕರನೇ ನನಗೆ ದಿಕ್ಕು. ಅವನ ಅರ್ಚನೆಯಿಂದ ನನಗೆ ಅತಿಶಯವಾದ ಸೌಖ್ಯವು ಲಭಿಸುವುದು. ಹೀಗೆ ಕೇವಲ ಸ್ಮರಣ ಮಾತ್ರದಿಂದಲೇ ಮುಕ್ತಿಪ್ರದನಾಗುವ ಪರಮೇಶ್ವರನ ಅನುಗ್ರಹವಿರುವಾಗ ನನಗೆ ಮತ್ತಾವುದು ಬೇಕೆನಿಸುವುದು? ॥೧೮॥

ಮಂಗಲಾಪತಿಪದಾಂಬುಜಾರ್ಚನಂ
ಸರ್ವಮಂಗಲವಿಶೇಷಸಾಧನಂ ।
ಸಿದ್ಧಿಸಾಧನಮಿದಂ ವಿಹಾಯ ಮೇ
ಕೃತ್ಯಮನ್ಯದಿಹ ರೋಚತೇಽಪಿ ನ ॥೧೯॥

ಚಂದ್ರಮೌಲಿಚರಣಾಂಬುಜಾರ್ಚನಂ
ಧ್ಯಾನಸಾಧನಮಿದಂ ಮನೋಽಪಿ ಮೇ ।
ಅನ್ಯಕಾರ್ಯವಿಮುಖಂ ವಿಶೇಷತೋ
ಜಾಯತಾಮಿತಿ ಮತಿಃ ಪ್ರಜಾಯತೇ ॥೨೦॥

ಜೀರ್ಣಮಂಗಮಧುನಾ ವಿಶೇಷತಃ
ಶಂಕರಾರ್ಚನಮತಿರ್ನ ಮೇ ಯದಿ ।
ತರ್ಹಿ ಜೀವನಮಿದಂ ವೃಥಾ ಭವೇ
ದಿತ್ಯವೈಮಿ ಮುನಿವಾಕ್ಯಕೋಟಿಭಿಃ ॥೨೧॥

---

ಗೌರೀಪತಿಯಾದ ಮಹಾದೇವನ ಪಾದಕಮಲಾರ್ಚನೆಯಿಂದ ಸಕಲ ಸನ್ಮಂಗಳಗಳೂ ಲಭಿಸುವುವು. ಇಂತಹ ಸಕಲ ಸಿದ್ಧಿಗೂ ಮೂಲಕಾರಣವಾದ ಈ ಶಂಕರಪೂಜೆಯನ್ನು ಬಿಟ್ಟು ಮತ್ತಾವ ಕಾರ್ಯದಲ್ಲಿ ತಾನೇ ನನ್ನ ಮನಸ್ಸು ಪ್ರವರ್ತಿಸೀತು ? ॥೧೯॥

ಸರ್ವದಾ ನನ್ನ ಮನಸ್ಸು ಈಶ್ವರನ ಪಾದಕಮಲಧ್ಯಾನದಲ್ಲಿಯೇ ಮಗ್ನವಾದದ್ದಾಗಿ ಅನ್ಯಕಾರ್ಯಗಳಲ್ಲಿ ಆಸಕ್ತಿಯನ್ನು ಪಡೆಯದೇ ಈಶ್ವರಾರಾಧನೆಯಲ್ಲಿಯೇ ಕಾಲಕಳೆಯಲಿ ಎಂದು ಪ್ರಾರ್ಥಿಸುವೆನು. ॥೨೦॥

ವಯಃಪರಿಣತಿಯಿಂದ ನನ್ನ ಅವಯವಗಳೆಲ್ಲವೂ ಶಿಥಿಲವಾಗುತ್ತಿವೆ. ಅಷ್ಟಾದರೂ ಈಶ್ವರಪೂಜೆಯಲ್ಲಿ ಮಾತ್ರ ನನ್ನ ಮನಸ್ಸು ಸ್ಥಿರವಾಗಿ ನಿಂತಿಲ್ಲ. ಋಷಿಗಳ ಮಾತುಗಳನ್ನು ಸ್ಮರಿಸಿಕೊಂಡರೆ ಇಲ್ಲಿನವರೆಗಿನ ನನ್ನ ಜೀವನವೆಲ್ಲಾ ವ್ಯರ್ಥವೇ ಆಯಿತಲ್ಲಾ ! ॥೨೧॥

ಆರ್ಜಿತಂ ನ ಸುಕೃತಂ ಮಯಾ ಪುರಾ
ನ ಸ್ಮೃತೋಽಪಿ ಗಿರಿಜಾಮನೋಹರಃ ।
ಸೇವಿತೋಽಪಿ ನ ಚ ಶಾಂಭವೋ ಮುಹು
ರ್ವ್ಯರ್ಥಮೇವ ಗತಮಸ್ಯ ಜೀವನಂ ॥೨೨॥

ಶಾಂಭವೈಸ್ಸಹ ಕದಾಪಿ ಸಂಗಮೋ
ನಾಭವದ್ಗಿರಿಶಲಿಂಗಪೂಜನಂ ।
ಜನ್ಮ ತಾವದಹಹಾ ವೃಥಾ ಗತಂ
ಹಾ ಕಿಮಸ್ಯ ದುರದೃಷ್ಟಮದ್ಭುತಂ ॥೨೩॥

ವಾರ್ಧಕೇ ಕಥಮುಮಾಪತಿಪ್ರಿಯೈಃ
ಶಾಂಭವೈಸ್ಸಹ ವಿಶೇಷತೋಽಧುನಾ ।
ಸಂಗಮೋಽತಿ ಗಿರಿಶಾರ್ಚನಾದರಃ
ಶೀರ್ಣದೇಹಪರಿಪಾಕದುಃಖತಃ ॥೨೪॥

ನ ಶ್ರುತಾಪಿ ಮುಹುರಾದರಾತ್ಕಥಾ
ಸಾ ಪರಾ ಗಿರಿಶಪೂಜಕೋದಿತಾ ।
ಜೀರ್ಣಕರ್ಣಕರಣೇನ ತತ್ಕಥಾ
ವರ್ಣಮಾತ್ರಮಪಿ ಗೃಹ್ಯತೇ ಕಥಂ ॥೨೫॥

---

ಇಲ್ಲಿನವರೆಗೆ ನಾನು ಯಾವ ಪುಣ್ಯಕಾರ್ಯಗಳನ್ನೂ ಮಾಡಿ ಪುಣ್ಯಸಂಪಾದನೆ ಮಾಡಲಿಲ್ಲ. ಪಾರ್ವತೀಪತಿಯನ್ನು ಸ್ಮರಿಸಲಿಲ್ಲ. ಶಂಕರಭಕ್ತರನ್ನು ಸೇವಿಸಲಿಲ್ಲ. ಅಯ್ಯೋ! ಈ ನನ್ನ ಕಳೆದ ಜೀವನವೆಲ್ಲಾ ವ್ಯರ್ಥವಾಯಿತಲ್ಲವೆ! ॥೨೨॥

ಶಂಕರಭಕ್ತರ ಸಹವಾಸವನ್ನೇ ಇಲ್ಲಿನವರೆಗೂ ನಾನು ಮಾಡಲಿಲ್ಲ. ಶಿವಲಿಂಗವನ್ನು ಭಕ್ತಿಯಿಂದಾರಾಧಿಸಲಿಲ್ಲ. ಆಹಾ ನನ್ನದು ಎಂತಹ ದುರದೃಷ್ಟ. ನನ್ನ ಜನ್ಮವೆಲ್ಲಾ ವ್ಯರ್ಥವಾಯಿತಲ್ಲಾ! ॥೨೩॥

ಈ ಮುಪ್ಪಿನಲ್ಲಿ ಪರಶಿವ ಭಕ್ತರ ಸಮಾಗಮವು ನನಗೆ ಎಲ್ಲಿಂದ ದೊರಕುವುದು? ಒಂದು ವೇಳೆ ದೊರಕಿದರೂ ಅಂಗಗಳ ಬಲಹೀನತೆಯಿಂದ ಈಶ್ವರಾರ್ಚನೆಯಲ್ಲಿ ನನಗೆ ಮನಸ್ಸು ಬರುವುದು ತಾನೆ ಹೇಗೆ? ॥೨೪॥

ಶಕ್ತಿಯಿದ್ದಾಗ ನಾನು ಈಶ್ವರಪೂಜಾ ವಿಷಯಕವಾದ ಯಾವ ಒಂದು

ಗರ್ಭವಾಸಜನಿತಾತಿದುಃಖತಃ
ಶಂಕರಸ್ತು ನ ಸಮರ್ಚಿತಸ್ತದಾ ।
ತತ್ಪುರೀಷವಿಷಕೀಟಕೋಟಿಭಿ
ರ್ದಂಶನೇ ಸತಿ ಶಿವಸ್ಮೃತಿಃ ಕಥಂ ॥೨೬॥

ರೇತಸಾ ಖಲು ಶರೀರಮುದ್ಭೃತಂ
ಲೋಹಿತೇನ ಜನಿತಂ ಕುಯೋನಿಷು ।
ಸೂಕರಾಳಿಷು ಬಹುಷ್ವನೇಕಧಾ
ತೇನ ಭುಕ್ತಮಪಿ ದುಃಖಮನ್ವಹಂ ॥೨೭॥

ಗರ್ಭವಾಸಪರಿಪೀಡಿತಸ್ಯ ಮೇ
ತತ್ಪುರೀಷಜಲಸಂಯುತಸ್ಯ ಚ ।
ದುಃಖಮೇವ ಸಮಭೂನ್ಮುಹುರ್ಮುಹು
ರ್ದಾರುಣಂ ವಿಷಮಿವೇಹ ಭಕ್ಷಿತಂ ॥೨೮॥

---

ಕಥೆಯನ್ನೂ ಕೇಳಲಿಲ್ಲ. ಕರ್ಣಪಾಟವವು ಕಮ್ಮಿಯಾಗಿರುವಾಗ ಈಶ್ವರ ಕಥೆಗಳಲ್ಲಿನ ಒಂದಕ್ಷರವನ್ನಾದರೂ ನಾನು ಭಕ್ತಿಯಿಂದ ಕೇಳುವುದು ಹೇಗೆ? ॥೨೫॥

ಜನನೀಗರ್ಭದಲ್ಲಿ ಉಂಟಾದ ಕ್ಲೇಶಾದಿಗಳಿಂದ ಪೀಡಿತನಾದ ನಾನು ಪರಶಿವನನ್ನು ಅರ್ಚಿಸಲಿಲ್ಲ. ಗರ್ಭಕೋಶದಲ್ಲಿ ಅಡಗಿರುವ ಕ್ರಿಮಿರಾಶಿಯಿಂದ ಕಚ್ಚಲ್ಪಡುವ ನನಗೆ ಶಂಕರಸ್ಮೃತಿಯು ಬರುವುದು ತಾನೆ ಹೇಗೆ? ॥೨೬॥

ಪುಂರೇತಸ್ಸಿನಿಂದಲೂ, ಸ್ತ್ರೀರಕ್ತದಿಂದಲೂ ದೇಹಪಡೆದ ನಾನು ಹಂದಿಯೇ ಮೊದಲಾದ ಅನೇಕ ಕ್ಷುದ್ರಪ್ರಾಣಿಗಳ ಯೋನಿಯಿಂದ ಜನ್ಮತಾಳಿದೆನು. ಅವುಗಳು ತಿಂದ ಆಹಾರವನ್ನೇ ನಾನು ಅವುಗಳ ಗರ್ಭದಲ್ಲಿದ್ದು ತಿಂದು ಜೀವಿಸಿದೆನು. ॥೨೭॥

ಗರ್ಭವಾಸದಲ್ಲಿ ಪೀಡಿತನಾಗಿದ್ದ ನಾನು ಆ ಪ್ರಾಣಿಗಳ ಪುರೀಷಜಲದಲ್ಲಿ ಮುಳುಗಿದವನಾಗಿ, ಸರ್ವದಾ ದುಃಖವನ್ನೇ ಅನುಭವಿಸುತ್ತಾ ಭಯಂಕರವಾದ ಆ ವಿಷಸದೃಶವಾದ ಸೀರನ್ನೇ ಭಕ್ಷಿಸಿದೆನು. ॥೨೮॥

ದೃಷ್ಟಕಷ್ಟನಿನಿವಾರಕಂ ಚ ಕಿಂ
ಗರ್ಭವಾಸನಿರತಸ್ಯ ದೃಶ್ಯತೇ ।
ಅಜ್ಞತಾ ಖಲು ತದಾತಿ ಗರ್ಹಿತಾ
ಸಾ ಮುಹುರ್ಮುಹುರಪಾರದುಃಖದಾ ॥೨೯॥

ಕೀಟಯೋನಿಷು ಯದಾ ಜನಿಸ್ತದಾ
ಬಂಭರಾದಿಷು ಪುನರ್ಭ್ರಮೋದಯಃ ।
ತದ್ಭ್ರಮಾಪಸರಣಾದಿಕಾರಣಂ
ತತ್ರ ಕಿಂಚಿದಪಿ ದೃಶ್ಯತೇ ಕಥಂ ॥೩೦॥

ಸೂಕರಾದಿಜಠರೇ ಯದೈಕದಾ
ನೇಕಜಂತುತನುಸಂಗಮಸ್ತದಾ ।
ಕಷ್ಟಮೇವ ತನುಸನ್ನಿಕರ್ಷಣಾ
ದ್ಭುಕ್ತಮೇವ ಬಹುಧಾ ಮುಹುರ್ಮುಹುಃ ॥೩೧॥

ಸೂಕರೀಜಠರಪಾವಕಾಹತಾ
ವಿಷ್ಟಯಾ ಜಠರಪೂರಣೋದ್ಯತಾ ।

---

ಅಂತಹ ಗರ್ಭದಲ್ಲಿ ಸೇರಿದವನಿಗೆ ತತ್ಪರಿಹಾರಕ ವಸ್ತುವು ಮತ್ತಾವುದಿರುವುದು? ಇಂತಹ ಅಪಾರವಾದ ದುಃಖಕ್ಕೆ ನಮ್ಮನ್ನು ಎಳೆಯುತಕ್ಕದ್ದು, ನಮ್ಮ ಅತಿನಿಂದಿತವಾದ ಅಜ್ಞತೆಯೇ ಅಲ್ಲವೆ? ॥೨೯॥

ಕ್ರಿಮಿಗಳ ಉದರದಲ್ಲಿ ಸೇರಿ ಕೀಟಜನ್ಮವನ್ನೂ ಪಡೆದುದಾಯಿತು. ಅದರಲ್ಲಿಯೂ ಭ್ರಮರಜನ್ಮದಿಂದ ಎಲ್ಲೆಲ್ಲಿಯೂ ಸುತ್ತಿದ್ದಾಯಿತು. ಆ ವಿಧವಾದ ಚಾಂಚಲ್ಯವನ್ನು ನಿವಾರಿಸಿ ಸ್ಥಿರಮನಸ್ಸನ್ನುಂಟುಮಾಡುವ ಮುಖ್ಯ ವಸ್ತುವಾವುದೆಂಬುದನ್ನೇ ನಾನು ಕಾಣೆನಲ್ಲಾ! ॥೩೦॥

ಹಂದಿಯೇ ಮೊದಲಾದ ಅನೇಕ ಜಂತುಗಳ ಗರ್ಭದಲ್ಲಿ ಸೇರಿ, ಆಯಾ ಪ್ರಾಣಿಗಳಲ್ಲಿಯೇ ಬೆರೆತು ಅವುಗಳ ಆಹಾರಾದಿಗಳನ್ನೇ ಆಹಾರಾದಿಗಳನ್ನಾಗಿ ಮಾಡಿಕೊಂಡು ಬೆಳೆದಿರುವ ದೇಹವಿದು. ॥೩೧॥

ಹೆಣ್ಣುಹಂದಿಯು ಜಠರಾಗ್ನಿಯಿಂದ ಪರಿಣತವಾದ ಸೂಕರೀಮಲದಲ್ಲಿ ಸೇರಿ

ತನ್ಮಲಾವಿಲತನುರ್ಯದಾ ತದಾ
ತೇನ ದುಃಖಮನುಭುಕ್ತಮೇವ ಹಿ ॥೩೨॥

ಸೂಕರಸ್ಯ ಖಲು ರೇತಸಾ ತನುಃ
ಕಾಪಿ ಪಾಪಪರಿಪಾಕಯೋಗಜಾ ।
ಜಾತು ನೈವ ಹಿ ಪರಂ ತು ಸಾ ಮುಹು
ರ್ಜನ್ಮಕೋಟಿಷು ಶಿವಾರ್ಚನಂ ವಿನಾ ॥೩೩॥

ಯೇನ ಕೇನಚಿದಪಿ ಸ್ಮೃತಃ ಶಿವಃ
ಪೂಜಿತೋಽಪಿ ಸಕೃದಾದರಾಚ್ಛ್ರುತಃ ।
ಜನ್ಮಸಂಗಪರಿಹಾರಕೋ ಭವೇ
ದಿತ್ಯಪಿ ಶ್ರುತಿಶಿರಃ ಸ್ಮೃತಂ ಮಯಾ ॥೩೪॥

ಮೋಹಜಾಲಪರಿವೇಷ್ಟಿತಸ್ಯ ಮೇ
ಶಂಕರಾರ್ಚನರತಾಂಗಸಂಗಮಃ ।
ನಾಭವತ್ಪರಮಶೋಕನಾಶಕಃ
ಪಾಪಕರ್ಮಪರಿಪಾಕತೋ ಮಮ ॥೩೫॥

---

ಆ ಕೊಳೆಯಲ್ಲಿಯೇ ನನ್ನ ದೇಹವನ್ನು ಮುಳುಗಿಸಿ ಆದರ ಆಹಾರವನ್ನೇ ನಾನು ಭುಜಿಸುತ್ತಾ ಕಷ್ಟವನ್ನನುಭವಿಸಿದೆನು. ॥೩೨॥

ಗಂಡುಹಂದಿಯು ರೇತಸ್ಸಿನಿಂದ ಕೂಡಿದ ಈ ದೇಹವು ಯಾವುದೋ ಪಾಪ ಕರ್ಮಪರಿಪಾಕದಿಂದ ಉದ್ಭವಿಸಿತು. ಆದರೆ ಮತ್ತೆ ಆ ಜನ್ಮವು ಬರದಂತೆ ಮಾಡಿ ಕೊಳ್ಳಲು ಶಿವಾರ್ಚನೆಯೊಂದನ್ನು ಬಿಟ್ಟರೆ ಮತ್ತಾವುದು ತಾನೆ ಸಾಧ್ಯವಾದೀತು? ಶಿವಾರ್ಚನೆಮಾಡದಿದ್ದರೆ ಎಷ್ಟು ಜನ್ಮಗಳಲ್ಲಾದರೂ ಈ ದುಃಖಾನುಭವವು ನಾಶ ವಾಗುವುದಿಲ್ಲ. ॥೩೩॥

ಯಾವ ರೀತಿಯಲ್ಲಿ ಶಂಕರನನ್ನು ಸ್ಮರಿಸಿಕೊಂಡರೂ, ಪೂಜಿಸಿದರೂ, ಧ್ಯಾನಿ ಸಿದರೂ ಈ ಜನ್ಮಾಂತರ ದುಃಖಗಳು ಪರಿಹಾರವಾಗುವುವು ಎಂಬುದನ್ನು ತಿಳಿದೇ ನಾನು ಪ್ರಣವಮಂತ್ರದಿಂದ ಶಂಕರನನ್ನು ಸ್ಮರಿಸಿಕೊಂಡೆನು. ॥೩೪॥

ಅಜ್ಞಾನಾವೃತನಾದ ನನಗೆ ಇಲ್ಲಿನವರೆಗೂ ಶಂಕರಪಾದಸೇವಕರ ಸಹವಾ

ಶಾಂಕರೇಣ ಸಹ ಭಾಷಣಂ ಮುಹುಃ
ಪಾತಕಾನಿ ವಿಲಯಂ ಪ್ರಯಾಂತ್ಯಪಿ ।
ಯಾತಿ ಯಾತಿ ಯಮಯಾತನಾಭಯಂ
ತನ್ನ ಜಾತಮತಿದುಷ್ಕೃತಾತ್ಮನಃ ||೩೬||

ಶಾಂಕರಾಯ ನವರತ್ನಮಂದಿರಂ
ದತ್ತಮೇವ ನ ಪುರಾ ಮಯಾ ಮುದಾ ।
ರತ್ನಕೋಶಪರಿರಕ್ಷಣಂ ವೃಥಾ
ಜಾತಮೇವ ಬಹುದುಃಖಸಾಧನಂ ||೩೭||

ಆರ್ಜಿತಂ ಚ ಗಣನಾವಿವರ್ಜಿತಂ
ಹೇಮ ತೇನ ನ ಶಿವಾರ್ಚನಂ ಕೃತಂ ।
ಪಟ್ಟಕೂಲಗಿರಯಃ ಸಮಾರ್ಜಿತಾಃ
ಶಾಂಕರೇಷು ನ ಸಮರ್ಪಿತಾಃ ಖಲು ||೩೮||

---

ಸವೇ ಒದಗಿರಲಿಲ್ಲ. ಮತ್ತು ನನ್ನ ಪಾಪಕರ್ಮದ ಫಲವಾಗಿ ಇಲ್ಲಿನವರೆಗೂ ಅತಿಶಯವಾದ ದುಃಖಾದಿಗಳು ನಾಶವಾಗಲಿಲ್ಲ. ||೩೫||

ಈಶ್ವರಭಕ್ತರೊಡನೆ ಮಾತನಾಡುವುದರಿಂದಲೇ ಸಕಲ ಪಾಪಗಳೂ ನಾಶವಾಗುವುವು. ಮತ್ತು ಯಮಯಾತನೆಯು ಸಹ ತೋರಿಬರುವುದಿಲ್ಲ. ಹೀಗಿದ್ದರೂ ಅತಿ ಪಾಪಿಷ್ಠನಾದ ನನಗೆ ಇಲ್ಲಿನವರೆಗೂ ಅಂತಹ ಪರಶಿವ ಭಕ್ತರೊಡನೆ ಸಂಭಾಷಿಸುವ ಪುಣ್ಯವಿಶೇಷವು ಒದಗಲಿಲ್ಲವಲ್ಲಾ ! ||೩೬||

ಶಂಕರ ಕಿಂಕರರಿಗೆ ಯಾವ ವಿಧವಾದ ರತ್ನಾಭರಣಗಳನ್ನೂ ದಾನಮಾಡಲಿಲ್ಲ. ಅವರಿಗಾಗಿ ರತ್ನಮಯವಾದ ವಸತಿಗಳನ್ನು ಕಲ್ಪಿಸಲಿಲ್ಲ. ಬಹು ದುಃಖಸಾಧನವಾದ ಈ ರತ್ನನಿಧಿಗಳನ್ನು ಮಾತ್ರ ಕಷ್ಟಪಟ್ಟು ಸಂರಕ್ಷಿಸಿದೆನು. ಇದೆಲ್ಲವೂ ವ್ಯರ್ಥವಲ್ಲವೇ ? ||೩೭||

ಲೆಕ್ಕವಿಲ್ಲದಷ್ಟು ಸುವರ್ಣನಾಣ್ಯಗಳನ್ನು ಕೂಡಿಹಾಕಿದೆನು. ಅವುಗಳಿಂದ ಒಂದು ಸಾರಿಯೂ ಶಿವಾರ್ಚನೆ ಮಾಡಲಿಲ್ಲ. ರೇಷ್ಮೆಯ ಪರ್ವತವನ್ನೇ ಸಂಪಾದಿಸಿದೆನು. ಅದನ್ನು ಶಿವಸೇವಕರಿಗೆ ಮಾತ್ರ ಎಂದೂ ದಾನಮಾಡಲಿಲ್ಲ. ||೩೮||

ಗೋಕುಲಾನ್ಯಪಿ ಬಹೂನಿ ಯಾನಿ ಮೇ
ತಾನಿ ಶಾಂಕರವಶಾನಿ ಭಕ್ತಿತಃ ।
ನಾರ್ಪಿತಾನಿ ನ ಶಿವೋಽಪಿ ಗೋರಸಾ
ಪಾರಪೂರಪರಿವೇಷ್ಟಿತಃ ಕೃತಃ ॥೩೯॥

ಕೋಟಿಶೋ ನ ಘೃತಕಂಬಲೈರ್ಮುಹುಃ
ಶಾಂಗಲಿಂಗಮಭಿವೇಷ್ಟಿತಂ ಕೃತಂ ।
ಪೂಜಿತಂ ಚ ಮಧುಪೂರರಾಶಿಭಿ
ರ್ನಾದರೇಣ ದಧಿಪೂರರಾಶಿಭಿಃ ॥೪೦॥

ಶರ್ಕರಾಗಿರಿಭಿರರ್ಚಿತಃ ಶಿವೋ
ಗಂಧನೀರನಿಕರೈರಹರ್ನಿಶಂ ।
ಪುಷ್ಪಕುಂಕುಮಫಲಾಂಬುರಾಶಿಭಿ
ರ್ನಾರ್ಚಿತಂ ಗಿರಿಶಲಿಂಗಮುತ್ತಮಂ ॥೪೧॥

ಚಂದ್ರಭಾಗಗಿರಿದೀಪಮಾಲಿಕಾ
ಕೋಟಿಭಿಶ್ಚ ನ ಶಿವಾರ್ಚನಂ ಕೃತಂ ।

---

ಇಲ್ಲಿನವರೆಗೆ ಅನೇಕ ಗೋವುಗಳ ಸಮೂಹವನ್ನೆಲ್ಲಾ ಕೂಡಿ ರಕ್ಷಿಸಿದೆನು. ಅವುಗಳಲ್ಲಿ ಕೆಲವನ್ನಾದರೂ ಶಂಕರಭಕ್ತರಿಗೆ ದಾನಮಾಡಲಿಲ್ಲ. ಅಲ್ಲದೆ ಗೋಕ್ಷೀರ ದಿಂದ ಪರಶಿವನಿಗೆ ಅತಿಶಯವಾಗಿ ಎಂದೂ ಅಭಿಷೇಕಾದಿಗಳನ್ನು ಮಾಡಲಿಲ್ಲ.॥೩೯॥

ಕೋಟಿಸಂಖ್ಯೆಯ ತುಪ್ಪದ ಗಡಿಗೆಗಳಿಂದಲೂ, ವಸ್ತ್ರಾದಿಗಳಿಂದಲೂ ಶಂಕರಲಿಂಗವನ್ನು ಅರ್ಚಿಸಲಿಲ್ಲ. ಜೇನುತುಪ್ಪದ ಮತ್ತು ಮೊಸರಿನ ರಾಶಿಯಿಂದ ಪರಶಿವಲಿಂಗವನ್ನು ಎಂದೂ ಅಭಿಷೇಕಮಾಡಲಿಲ್ಲ. ॥೪೦॥

ಸಕ್ಕರೆಯ ರಾಶಿಯಿಂದಲೂ, ಗಂಧೋದಕದಿಂದಲೂ, ಪುಷ್ಪೋದಕ, ಕುಂಕು ಮೋದಕ, ಫಲೋದಕ ಇವೇ ಮೊದಲಾದ ಅಭಿಷೇಕದ್ರವ್ಯಗಳಿಂದಲೂ ಪರಶಿವನ ದಿವ್ಯ ಲಿಂಗವನ್ನು ಪೂಜಿಸಲಿಲ್ಲ. ॥೪೧॥

ಚಂದ್ರಭಾಗಪರ್ವತದ ದೀವಿಗೆಗಳಲ್ಲಿ ಕೋಟಿಸಂಖ್ಯೆಯ ದೀಪಸಾಲುಗಳ ನ್ನಿಟ್ಟು ದೀಪಾರಾಧನೆ ಮಾಡಲಿಲ್ಲ. ಪರ್ವತೋಪಮವಾದ ಧೂಪರಾಶಿಯಿಂದ ಶಂಕರನಿಗೆ ಧೂಪವನ್ನು ಅರ್ಪಿಸಲಿಲ್ಲ. ॥೪೨॥

ಧೂಪಪರ್ವತಸಮೂಹಧೂಪತೋ
ಧೂಪಿತೋಽಪಿ ನ ಮುಹುರ್ಮಹೇಶ್ವರಃ ॥೪೨॥

ಶಾಂಕರೋ ನ ಗುರುರರ್ಚಿತೋ ಮಯಾ
ಶಂಕರಾರ್ಚನವಿಧಾನಬೋಧಕಃ ।
ನಾಪಿ ರುದ್ರಜಪಸಾತ್ಕೃತೋಽಸ್ಮ್ಯಹಂ
ಭೂತಿಪುಂಡ್ರಸಮಲಂಕೃತೋಽಪಿ ವಾ ॥೪೩॥

ಫಾಲಮಂಡಲಮಿದಂ ನ ಭಸ್ಮನಾ
ಭೂಷಿತಂ ಕರಗಲಾದಿಕಂ ಚ ಮೇ ।
ಕಿಂ ಚ ಪಂಚಮರವೇನ ವಂಚಿತ
ಭೃಂಚರೀಕಕುಲವಂಚಿತೋಽಪ್ಯಹಂ ॥೪೪॥

ಕಿಂ ಚ ಪಂಚಶರಚೇಷ್ಟಯಾ ಮುಹುಃ
ಕಷ್ಟಮೇವ ಬಹುಧಾನುಭೂಯತೇ ।
ಕಾಮಿನೀಕನಕಕಂಕಣಧ್ವನಿಃ
ಕರ್ಣಭೂಷಣತಯಾ ನಿಷೇವಿತಃ ॥೪೫॥

---

ಶಂಕರಭಕ್ತರಾಗಿ ಶಂಕರಾರ್ಚನೆಯ ವಿಧಿಯನ್ನು ಬೋಧಿಸುವ ಗುರುಗಳನ್ನು ನಾನು ಎಂದೂ ಆರಾಧಿಸಲಿಲ್ಲ. ವಿಭೂತಿಯಿಂದ ತ್ರಿಪುಂಡ್ರವನ್ನು ಧರಿಸಿಕೊಂಡು ಈಶ್ವರಪ್ರೀತಿಗಾಗಿ ರುದ್ರಾಧ್ಯಾಯವನ್ನು ಭಕ್ತಿಪೂರ್ವಕವಾಗಿ ಜಪಿಸಲಿಲ್ಲ. ॥೪೩॥

ಎಂದೂ ಭಸ್ಮದಿಂದ ಹಣೆಗೂ, ಕಂಠಕ್ಕೂ, ಕೈಗೂ, ತ್ರಿಪುಂಡವನ್ನು ರಚಿಸಿಕೊಳ್ಳಲಿಲ್ಲ. ಕೋಕಿಲಾಲಾಪಕ್ಕೂ, ಭ್ರಮರಗಳ ಧ್ವನಿಗೂ ಆಸೆಪಟ್ಟು ನಿಂತರೂ ಪರಮೇಶ್ವರನಲ್ಲಿ ಮಾತ್ರ ನನ್ನ ಮನಸ್ಸನ್ನು ಸ್ಥಿರಗೊಳಿಸಲಿಲ್ಲ. ॥೪೪॥

ಕಾಮಬಾಧೆಯಿಂದ ನಾನು ಅನೇಕವಾದ ಕಷ್ಟಗಳನ್ನೆಲ್ಲಾ ಅನುಭವಿಸಿದೆನು. ಸ್ತ್ರೀಯರ ಕೈಬಳೆಯ ಧ್ವನಿಯನ್ನು ಕಿವಿಗೆ ಇಂಚರವನ್ನಾಗಿ ಮಾಡಿಕೊಂಡು ಸಂತೋಷವಾಗಿ ಕೇಳಿ ಆನಂದಪಟ್ಟೆನು. ॥೪೫॥

ಯೌವನೇನ ಪರಿವೇಷ್ಟಿತಸ್ಯ ಮೇ
ಕಾಮಿನೀಕಮಲಲೋಚನಾದರಃ ।
ನಾದರಃ ಶಿವಪದಾಂಬುಜಾರ್ಚನೇ
ತೇನ ತಾವದಫಲಾ ಜನಿರ್ಮಮ ॥೪೬॥

ಪುಂಡರೀಕಸದೃಶೇನ ನೇಕ್ಷಿತಂ
ವೀಕ್ಷಣೇನ ಶಿವಲಿಂಗಮರ್ಚಿತಂ ।
ಮಾರಮಂದಿರವಿಲೋಕನಾದರಾ
ದಾರ್ಜಿತಂ ಬಹುವಿಧಂ ಚ ಪಾತಕಂ ॥೪೭॥

ಅಂಗನಾಂಗಕರಸಂಕರಾದರೇ
ಶಾಂಗಲಿಂಗಕರಸಂಗಮಾದರಃ ।
ನಾಭವಜ್ಜನಿರಯಂ ಲಯಂ ಗತಾ
ಖಿನ್ನಖಿನ್ನಹೃದಯಸ್ಯ ಸತ್ವರಂ ॥೪೮॥

---

ಯುವಕನಾಗಿದ್ದಾಗ ನಾನು ಕೇವಲ ಕಾಮಿನಿಯರ ಕಮಲಲೋಚನೆಗೆ ಮರುಳಾದೆನೇ ಹೊರತು ಶಿವಪಾದಾಂಬುಜಧ್ಯಾನದಲ್ಲಿ ಮನಸ್ಸನ್ನಿಡಲಿಲ್ಲ. ಆದರಿಂದ ಆಗಿನ ನನ್ನ ವಯಸ್ಸೆಲ್ಲಾ ವ್ಯರ್ಥವಾಯಿತು. ॥೪೬॥

ಕಮಲದಂತಿರುವ ನನ್ನ ಕಣ್ಣುಗಳಿಂದ ಶಿವಲಿಂಗವನ್ನು ನಾನು ವಿಷ್ಣುವಿನಂತೆ ಅರ್ಚನೆಮಾಡಲಿಲ್ಲ. ಆದರೆ ಮನ್ಮಥನಿಗೆ ಮನೆಯಂತಿರುವ ಸ್ತ್ರೀಯರ ಗುಹ್ಯೇಂದ್ರಿಯಾದಿಗಳನ್ನು ನೋಡುವುದರಿಂದಲೇ ಅನೇಕವಾದ ಪಾಪರಾಶಿಯನ್ನು ಸಂಪಾದಿಸಿಕೊಂಡೆನು. ॥೪೭॥

ಸ್ತ್ರೀಯರ ಕೈಯನ್ನು ಹಿಡಿಯುವುದರಲ್ಲಿ ಇದ್ದ ನನ್ನ ಆಸಕ್ತಿಯು ಶಂಕರಭಕ್ತರ ಕೈಯ್ಯನ್ನು ಮುಟ್ಟುವುದರಲ್ಲಿರಲಿಲ್ಲ. ಹೀಗಾಗಿ ಅನೇಕ ದುಃಖಗಳಿಂದ ಕೂಡಿದ ನನ್ನ ಜನ್ಮವು ಇಲ್ಲಿನವರೆಗೂ ಹೀಗೆ ಲಯವಾಗಿರುವುದು. ॥೪೮॥

ಶ್ರೌತಭಸ್ಮಕರಪುಂಜಮಂಜುಲಾ
ಕೋಮಲಾತಿವಿಮಲಾ ನ ಮೇ ತನೂಃ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೪೯॥

ಲಿಂಗಪೂಜನವಿಶೇಷಸಾಧನಂ
ಬಿಲ್ವಪತ್ರಮಪಿ ನಾರ್ಜಿತಂ ಮಯಾ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೫೦॥

ಶಾಂಗಲಿಂಗಮಮಲೈರ್ಜಲೈರಲಂ
ನಾಭಿಷಿಕ್ತಮಪಿ ಭಕ್ತಿಪೂರ್ವಕಂ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೫೧॥

ಶಾಂಕರಾಯ ನ ದುಕೂಲಮರ್ಪಿತಂ
ಚಂದನಂ ಚ ನ ಸಮರ್ಪಿತಂ ಮಯಾ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೫೨॥

---

ಶ್ರುತಿವಿಹಿತವಾದ ಭಸ್ಮರಾಶಿಯಿಂದ ನನ್ನ ದೇಹವನ್ನು ಕೋಮಲವನ್ನಾಗಿಯೂ, ಪವಿತ್ರವಾದದ್ದನ್ನಾಗಿಯೂ ಮಾಡಿಕೊಳ್ಳಲಿಲ್ಲ. ಅದಕ್ಕೆ ಬದಲಾಗಿ ಅನೇಕ ಜನ್ಮಗಳಿಂದ ಹಂದಿಯ ಯೋನಿಯಲ್ಲಿ ಜನಿಸುವುದನ್ನು ಸಂಪಾದಿಸಿಕೊಂಡೆನು.॥೪೯॥

ಶ್ರೀಶಿವಲಿಂಗಪೂಜೆಗೆ ಅತ್ಯಾವಶ್ಯಕವಾಗಿರುವ ಬಿಲ್ವಪತ್ರೆಯನ್ನು ನಾನು ಸಂಪಾದಿಸಿ, ಶಂಕರನನ್ನು ಪೂಜಿಸಲಿಲ್ಲ. ಅದರಿಂದಲೇ ಅನೇಕ ಜನ್ಮಗಳು ಸೂಕರ ಯೋನಿಯಲ್ಲಿ ಜನ್ಮವೆತ್ತುವಂತಾಯಿತು. ॥೫೦॥

ಶಂಭುಲಿಂಗಕ್ಕೆ ನಿರ್ಮಲೋದಕದಿಂದ ಭಕ್ತಿಪೂರ್ವಕವಾಗಿ ಅಭಿಷೇಕ ಮಾಡಲಿಲ್ಲ. ॥೫೧॥

ಈಶ್ವರನಿಗೆ ನಾನು ಭಕ್ತಿಯಿಂದ ಎಂದೂ ರೇಷ್ಮೆಮಡಿಯನ್ನು ಸಮರ್ಪಿಸಲಿಲ್ಲ. ಸುಗಂಧಮಯವಾದ ಚಂದನವನ್ನು ಲೇಪಿಸಲಿಲ್ಲ. ಶಂಕರಲಿಂಗಕ್ಕೆ ನುಚ್ಚಾ

ನಾರ್ಚಿತಂ ಮುಹುರಖಂಡತಂಡುಲೈ
ಶ್ಯಾಂಗಲಿಂಗಮತಿತುಂಗಮಂಗದೈಃ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೫೩॥

ಬಿಲ್ವಕೋಮಲದಲೈರ್ಮಹೇಶ್ವರೋ
ನಾರ್ಚಿತಃ ಕಮಲಪುಷ್ಪಮಾಲಯಾ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೫೪॥

ಧೂಪಧೂಮಪರಿವೇಷವೇಷ್ಟಿತಂ
ಮಂದಿರಂ ನ ಕೃತಮೇವ ಶಾಂಕರಂ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೫೫॥

ಮಂದಿರಂ ಚ ನವರತ್ನರಂಜಿತಂ
ಶಂಕರಾಯ ನ ನಿವೇದಿತಂ ಮಯಾ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೫೬॥

ಗೋಘೃತೇನ ಚ ನ ದೀಪಮಾಲಿಕಾ
ಕ್ವಾಪಿ ಕಾಪಿ ರಚಿತಾ ಶಿವಾಲಯೇ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೫೭॥

---

ಗದಿರುವ ಯವಾಕ್ಷತೆಗಳಿಂದ ಅಲಂಕಾರಮಾಡಲಿಲ್ಲ. ತೋಳುಬಳೆಯೇ ಮುಂತಾದ ಆಭರಣಗಳಿಂದ ಅಲಂಕರಿಸಲಿಲ್ಲ. ಕೋಮಲವಾದ ಬಿಲ್ವಪತ್ರೆಗಳಿಂದಲೂ, ಕಮಲ ಪುಷ್ಪಗಳ ಮಾಲೆಯಿಂದಲೂ ಪೂಜಿಸಲಿಲ್ಲ. ಹಾಗೆಯೇ ಪರಶಿವನಿಗೆ ಗಂಧಬಂಧುರ ವಾದ ಸುಂದರಾಲಯವನ್ನು ನಿರ್ಮಿಸಿ ಅರ್ಪಿಸಲಿಲ್ಲ. ನವರತ್ನಮಯವಾದ ಶಿವಾಲಯಗಳನ್ನು ರಚಿಸಲಿಲ್ಲ. ಹಸುವಿನ ತುಪ್ಪದಿಂದ ಉರಿಯುವ ದೀಪಮಾಲಿಕೆ

ಓದನೋಽಪಿ ನ ನಿವೇದಿತೋ ಮಯಾ
ಶಂಕರಾಯ ಘೃತಶರ್ಕರಾನ್ವಿತಃ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೫೮॥

ನ ಪ್ರದಕ್ಷಿಣಪುರಸ್ಸರಂ ನಮಃ
ಶಂಕರಸ್ಯ ಮುಹುರಾದರಾನ್ಮಯಾ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೫೯॥

ನಾರ್ಪಿತಂ ಕನಕಕಾಂಚಿರಂಜಿತಂ
ಛತ್ರಮೇಕಮಪಿ ಶಾರ್ವಮಸ್ತಕೇ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೬೦॥

ಚಾರುಚಾಮರಸಮೀರಣಾರ್ಪಣೈಃ
ಸೇವಿತೋಽಪಿ ನ ಮಯಾ ಮಹೇಶ್ವರಃ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೬೧॥

ನಿರ್ಮಲಾಮಿತಜಲೈಃ ಸುಶೀತಲೈಃ
ಕ್ಷಾಳಿತೋಽಪಿ ನ ಮಯಾ ಶಿವಾಲಯಃ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೬೨॥

---

ಗಳನ್ನೂ ತುಪ್ಪ, ಸಕ್ಕರೆ ಇವೇ ಮೊದಲಾದ ಮಧುರರಸದ್ರವ್ಯಗಳಿಂದ ಪಾಚಿತವಾದ ಓದನಗಳನ್ನು ಸಮರ್ಪಿಸಲಿಲ್ಲ. ಮತ್ತು ಪ್ರದಕ್ಷಿಣಪೂರ್ವಕವಾದ ಪ್ರಣಾಮಾದಿಗಳಿಂದ ಸ್ವಾಮಿಯನ್ನು ತೃಪ್ತಿಪಡಿಸಲಿಲ್ಲ. ಚಿನ್ನದ ಕಡ್ಡಿಗಳಿಂದ ಶೋಭಿಸುವ ಸುವರ್ಣ ಛತ್ರಿಯನ್ನು ಪರಶಿವನಿಗೆ ಹಿಡಿಯಲಿಲ್ಲ. ಮನೋಹರವಾದ ಚಾಮರಗಳಿಂದ ಮಹೇಶ್ವರನಿಗೆ ಗಾಳಿ ಬೀಸಲಿಲ್ಲ. ಶೀತಲವೂ, ಸುಗಂಧವೂ ಆದ ಜಲ

ದರ್ಪಣಂ ಚ ವಿನಿವೇದಿತಂ ಮಯಾ
ಶಂಕರಾಯ ನ ಸುವರ್ಣಭೂಷಣಂ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೬೩॥

ನರ್ತನಂ ಚ ನ ಕೃತಂ ಶಿವಾಂಗಣೇ
ಶಂಕರಸ್ಮರಣಪೂರ್ವಕಂ ಮಯಾ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೬೪॥

ಶಾಂಗಲಿಂಗಮಭಿಷಿಚ್ಯ ಸಾದರಂ
ತಜ್ಜಲಂ ಶಿರಸಿ ನಾರ್ಪಿತಂ ಮಯಾ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೬೫॥

ಶಂಕರಾರ್ಪಿತಜಲಂ ಮುಹುರ್ಮಯಾ
ಪೀತಮೇವ ನ ಮಹಾಘನಾಶಕಂ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೬೬॥

ಶಂಕರಾಯ ವಿನಿವೇದಿತಂ ಫಲಂ
ನೀರಮನ್ನಮಪಿ ಭುಕ್ತಮೇವ ನ ।
ತೇನ ಸೂಕರಕುಯೋನಿಸೇವನಂ
ಜಾತಮೇವ ಬಹುಕಲ್ಪಕೋಟಿಷು ॥೬೭॥

---

ಧಾರೆಯಿಂದ ಈಶ್ವರಾಲಯವನ್ನು ತೊಳೆಯಲಿಲ್ಲ. ಸ್ವಾಮಿಗೆ ರತ್ನಗನ್ನಡಿಗಳನ್ನಾಗಲಿ, ಸುವರ್ಣಭೂಷಣಗಳನ್ನಾಗಲಿ ಕೊಡಲಿಲ್ಲ. ಭಕ್ತಿಪರವಶನಾಗಿ, ಶಿವನಾಮಸ್ಮರಣೆಯಿಂದ ಶಿವಾಲಯದಲ್ಲಿ ನಾಟ್ಯವಾಡಲಿಲ್ಲ. ಶಂಕರಲಿಂಗಕ್ಕೆ ಶುದ್ಧೋದಕದಿಂದ ಅಭಿಷೇಕಮಾಡಿ, ಆ ತೀರ್ಥಪ್ರಾಶನಮಾಡಲಿಲ್ಲ. ಪಾಪನಾಶಕರವಾದ ಶಂಕರನ ಪಾದತೀರ್ಥವನ್ನು ನಾನು ಯಾವಾಗಲೂ ಪಾನಮಾಡಲಿಲ್ಲ. ಶಂಕರನಿಗೆ

ಕಷ್ಟಕಾಲನಿಗನೋಽಪ್ಯಭೂದಹೋ
ಶಾಂಕರಾಗಮನತೋಽ ಗೃಹಾಂಗಣೇ ।
ಇಷ್ಟಸಿದ್ಧಿರಧುನಾ ಭವಿಷ್ಯತೀ,
ತ್ಯಷ್ಟಮೂರ್ತಿಕೃಪಯಾ ಪರಂ ಮಮ ॥೬೮॥

ಶಂಕರಾತಿರುಚಿರೋಽರುಮಂದಿರಂ
ಶಾಂಕರಾಂಗಮಿತಿ ತೇನ ಸಂಗಮೇ ।
ದುರ್ಲಭಂ ನ ಕಿಮಪೀತಿ ಮೇ ಮತಿಃ
ಸಂತತಂ ಭವತು ಶಂಕರಾರ್ಚನೇ ॥೬೯॥

ಶಂಕರಾಮಿತಕಥಾಸುಧಾರಸೈ
ಸ್ಸೂರ್ಣಮೇವ ಮಮ ಕರ್ಣಪೂರಣೇ ।
ಜೀರ್ಣಮೇವ ಮಮ ಪುಣ್ಯವರ್ಣನಂ
ಚಾರಣೈರಮರಕೋಟಿಭಿಸ್ಸಹ ॥೭೦॥

---

ನಿವೇದಿಸಿದ ಫಲವನ್ನಾಗಲಿ, ಜಲವನ್ನಾಗಲಿ ಪ್ರಸಾದರೂಪದಿಂದ ನಾನು ಭಕ್ಷಿಸಲಿಲ್ಲ. ಈ ಕಾರಣಗಳಿಂದಲೇ ಕೋಟಿ ಜನ್ಮಗಳಿಂದಲೂ ಹಂದಿಯೇ ಮೊದಲಾದ ಕ್ಷುದ್ರ ಪ್ರಾಣಿಗಳ ಜನ್ಮದಲ್ಲಿ ಅವತರಿಸಿ ಬಹುವಾಗಿ ಕಷ್ಟಪಟ್ಟೆನು. ಈಗ ಅಂತಹ ಕಷ್ಟವು ಪರಿಹೃತವಾಯಿತು. ಶಂಕರಭಕ್ತನ ಆಗಮನದಿಂದ ನನ್ನ ಇಷ್ಟಾರ್ಥಗಳೆಲ್ಲಾ ಸಿದ್ಧಿಸಿದಂತಾದುವು. ಅಷ್ಟಮೂರ್ತಿಯಾದ ಮಹೇಶ್ವರನ ಕೃಪೆಯು ಒದಗಿ ದಂತೆಯೇ ಆಯಿತು. ಇದರಲ್ಲಿ ಸಂಶಯವಿಲ್ಲ. ॥೫೨-೫೩-೫೪-೫೫-೫೬-೫೭-೫೮-೫೯-೬೦-೬೧-೬೨-೬೩-೬೪-೬೫-೬೬-೬೭-೬೮॥

ಶಿವಾಲಯವೂ ಸಹ ಒಂದು ಈಶ್ವರನ ಭಕ್ತಿಸಾಧಕವಾದ ಅಂಗ ಎಂದು ತಿಳಿದಿರುವೆನು. ಅದರ ಸಹವಾಸದಿಂದಲೂ ಶಂಕರಾರ್ಚನಬುದ್ಧಿಯು ಉತ್ಪನ್ನ ವಾಗುವುದಲ್ಲದೆ, ದುರ್ಲಭವಾದ ವಸ್ತುಗಳೆಲ್ಲಾ ಸುಲಭಸಾಧ್ಯವೆನಿಸುವುವು. ॥೬೯॥

ಶಂಕರನ ಅಮೃತಮಯವಾದ ಕಥಾಪರಂಪರೆಗಳನ್ನು ಕೇಳಿ ನನ್ನ ಕಿವಿಯು ತುಂಬಿಹೋಗಿರುವುದು. ಅದರಿಂದ ನನಗೆ ಒದಗಿರುವ ಪುಣ್ಯರಾಶಿಯನ್ನು ದೇವತಾವೃಂದವೆಲ್ಲವೂ ಹೊಗಳುತ್ತಿರುವುದು. ॥೭೦॥

ಶಂಕರೋಽಪಿ ಕರುಣಾರಸಾರ್ಣವೋ
ಮದ್ಗುಣಾನಪಿ ಸವರ್ಣಯಿಷ್ಯತಿ ।
ಮಾಮಕೋಽಯಮಿತಿ ಮಾಮಕಾರ್ಚನಾ
ತ್ಸೋಽಪಿ ಶಾಂಕರಸಮರ್ಚನೋತ್ಸುಕಃ ॥೭೦॥

ಯದ್ಯಪಿ ಪ್ರಬಲಪಾಪರಾಶಿಭಿ
ರ್ನಾಪೃತೋಽಸ್ಮಿ ಸತತಂ ತಥಾಪ್ಯಹಂ ।
ಶಾಂಕರಾಂಘ್ರಿಕಮಲಾವಲೋಕನಾ
ನ್ನಷ್ಟಪಾತಕಕುಲೋ ನ ಸಂಶಯಃ ॥೭೨॥

ಕಾಲತೋಽಪಿ ನಭಯಂ ಮಮಾಧುನಾ
ಕಾಲಕಾಲಭಜನಪ್ರಿಯಾನ್ವಯಾತ್ ।
ಕಾಲಕಾಲಕಲನೋತ್ಸವೋಽಪಿ ಮೇ
ವರ್ಧತೇ ಮುಹುರನುಕ್ಷಣಂ ಮುಹುಃ ॥೭೩॥

---

ಶಂಕರನು ಕರುಣಾಸಮುದ್ರನು. ನಾನು ಅಂತಹವನನ್ನು ಭಜಿಸುವುದರಿಂದ ನನ್ನ ಮೇಲೆ ಕರುಣೆಯಿಟ್ಟು ನನ್ನಲ್ಲಿರುವ ಗುಣವನ್ನು ಮಾತ್ರ ಗ್ರಹಿಸಿ ನನ್ನನ್ನೂ ಭಕ್ತವೃಂದಕ್ಕೆ ಸೇರಿಸಿಕೊಂಡು, ಭಕ್ತರಕ್ಷಣೆಯಲ್ಲಿ ಆತನೂ ಉತ್ಸುಕನಾಗುವನು. ಭಕ್ತಪರಾಧೀನನಾದ ಶಂಕರನಿಗೆ ಭಕ್ತರೇ ಪೂಜ್ಯರಲ್ಲವೇ ! ॥೭೦॥

ಈಗ ನಾನಾದರೋ ಅನೇಕ ಪಾಪಸಮುದಾಯಗಳಿಂದ ತುಂಬಿದವನಾಗಿದ್ದೇನೆ. ಆದರೂ ಈಗ ನಾನು ಮಾಡುವ ಈಶ್ವರ ಪಾದಕಮಲದ ದರ್ಶನದಿಂದ ಸಕಲ ಪಾಪಮುಕ್ತನಾಗುವೆನು. ಇದರಲ್ಲಿ ಸಂಶಯವಿಲ್ಲ. ॥೭೨॥

ಈಗ ನನಗೆ ಒದಗಿರುವ ಶಂಕರಪ್ರಿಯನಾದ ಮಹರ್ಷಿಯ ಸಮಾಗಮದಿಂದ ಯಮನ ಭಯವು ತಪ್ಪಿದಂತಾಯಿತು. ಅಲ್ಲದೆ ಕಾಲಕಾಲನಾದ ಪರಮೇಶ್ವರನ ಪೂಜೆಯಲ್ಲಿ ಔತ್ಸುಕ್ಯವೂ ಹೆಚ್ಚಿದಂತಾಯಿತು. ಇದರಿಂದ ನಾನು ಧನ್ಯನಾದೆನು. ॥೭೩॥

ಸೋಽಯಮಭ್ಯುದಯಕಾಲ ಏವ ಮೇ
ಕಾಲಕಾಲಚರಣಾಂಬುಜಾರ್ಚಿತಃ ।
ಮದ್ಗೃಹಂ ಪ್ರತಿ ಸಮಾಗತೋಽಧುನಾ
ಶಾಂಕರಃ ಸಶಿವ ಶಂಕರಾಲಯಃ ॥೭೪॥

ಶಂಕರಃ ಸ ಖಲು ದೀನವತ್ಸಲಃ
ಶಾಂಕರಾಕೃತಿಮುಪೇತ್ಯ ಮದ್ಗೃಹಂ ।
ಪ್ರಾಪ ಪಾಪವಿನಿವೃತ್ತಿಮಾದರಾತ್
ಕರ್ತುಮೇವ ಕರುಣಾರಸಾರ್ಣವಃ ॥೭೫॥

ಏತದೇವ ಸುದಿನಂ ಯತೋಽಧುನಾ
ಶಂಕರಸ್ಮರಣಸಂಗತಂ ಮನಃ ।
ಅದ್ಯ ತಾವದಶುಭಗ್ರಹಾನ್ವಯೋ
ನಷ್ಟ ಏವ ಹಿ ಶುಭಗ್ರಹಾನ್ವಯೇ ॥೭೬॥

ಯದ್ಯದುತ್ತಮಮಿಹಾಸ್ತಿ ಮಂದಿರೇ
ತತ್ತದದ್ಯ ಕನಕಾದಿಕಂ ಧನಂ ।

---

ಶಂಕರನಿಗೆ ಆಲಯದಂತಿರುವ ಶಂಕರಭಕ್ತನಾದ ಮಹರ್ಷಿಯು ನನ್ನ ಮನೆಗೆ ಬಂದದ್ದರಿಂದ ನನಗೆ ಒಂದು ಅನಿರ್ವಚನೀಯವಾದ ಏಳಿಗೆಯೊದಗಿದೆ. ಈ ನನ್ನ ಗೃಹವೂ ಸಹ ಪವಿತ್ರವಾದದ್ದಾಗಿ ಶಂಕರಾಲಯವೆನಿಸಿರುವುದು. ॥೭೪॥

ದೀನವತ್ಸಲನಾದ ಮಹೇಶ್ವರನೇ, ತನ್ನ ಭಕ್ತರ ವೇಷದಿಂದ ನಮ್ಮ ಮನೆಗೆ ಈಗ ಬಂದಿರುವನು. ಇದಕ್ಕೆ ಕಾರಣವೇನೆಂದರೆ ಶಂಕರನು ಭಕ್ತರನ್ನು ಉದ್ಧರಿಸಿ ಕಾಪಾಡಬೇಕೆಂಬ ದೊಡ್ಡ ಕುತೂಹಲವೇ ಅಲ್ಲವೆ! ॥೭೫॥

ಶಂಕರನಾಮಸ್ಮರಣೆಮಾಡಿದ ಈ ದಿನವೇ ಶುಭದಿನ. ಪಾಪಗ್ರಹಗಳಿಂದ ಒದಗುವ ಪಾಪಫಲವೆಲ್ಲಾ ಶುಭಗ್ರಹರೂಪವಾದ ಪರಮೇಶ್ವರ ಭಕ್ತಸಂಸರ್ಗದಿಂದ ನಿವೃತ್ತವಾದಂತಾಯಿತು. ॥೭೬॥

ನನ್ನ ಮನೆಯಲ್ಲಿ ಈಗ ಇರುವ ಧನಕನಕಾದಿ ಸಕಲ ಉತ್ತಮ ವಸ್ತುಗಳೆಲ್ಲ

ಶಂಕರಾಯ ವಿನಿವೇದಿತಂ ಮಯಾ
ಸ್ವತ್ವಮಸ್ಯ ವಿನಿವೃತ್ತಮೇವ ಮೇ ॥೭೭॥

ಶಂಕರಾಯ ವಿನಿವೇದಿತಂ ಧನಂ
ಶಂಕರಾಯ ವಿನಿವೇದ್ಯತೇ ಮಯಾ ।
ತತ್ತು ದತ್ತಮಿಹ ವಿತ್ತಮದ್ಯ ಮೇ
ಕೋಟಿಕೋಟಿಗುಣಿತಂ ಭವಿಷ್ಯತಿ ॥೭೮॥

ವಿತ್ತಪಾತ್ರಮಿತಿ ನಿಶ್ಚಿತಂ ಮಯಾ
ಶಾಂಕರಸ್ಯ ಕರ ಏವ ನಾಪರಃ ।
ಸಾದರಂ ಯದಿ ತದರ್ಪಿತಂ ಮಯಾ
ತತ್ರ ತೇನ ಸುಖಮಕ್ಷಯಂ ಭವೇತ್ ॥೭೯॥

ಕಾಮಧೇನುರಿವ ಶಾಂಕರೋ ಧನಂ
ಹರ್ಷವರ್ಷಸಮಲಂಕೃತೋ ಮುಹುಃ ।
ದಾತುಮೇವ ಯವಸಂ ಸಮಾಪ್ನುಯಾತ್
ದುಗ್ಧಮೇವ ಮುಹುರಾದರಾದ್ಬಹು ॥೮೦॥

---

ವನ್ನೂ ಈಶ್ವರನಿಗಾಗಿ ಸಮರ್ಪಣೆಮಾಡಿರುವೆನು. ಈ ಕಾಲದಿಂದಲೇ ಅವುಗಳ ಮೇಲಿನ ಯಜಮಾನಿಕೆಯು ನನ್ನದಾಗಿರುವುದಿಲ್ಲ. ಎಲ್ಲವೂ ಪರಶಿವನದೇ. ॥೭೭॥

ನನ್ನ ಸೌಖ್ಯಕ್ಕಾಗಿ ಕೂಡಿಹಾಕಿಕೊಂಡಿದ್ದ ಧನವನ್ನೆಲ್ಲಾ ಇಂದು ಶಂಕರನಿಗಾಗಿ ಸಮರ್ಪಿಸಿರುವೆನು. ಈಗ ನಾನು ಕೊಟ್ಟಿರುವ ಅಲ್ಪ ದ್ರವ್ಯವೂ ಸಹ ಶಂಕರಾರ್ಪಣೆಮಾಡಿದಮೇಲೆ ಅದು ಕೋಟಿಪಾಲು ಮಿಗಿಲಾಗಿ ಮತ್ತೆ ನನಗೇ ದೊರೆಯುವುದು. ॥೭೮॥

ನನ್ನ ಹಣದ ರಾಶಿಗೆಲ್ಲಾ ಸರಿಯಾದ ಸತ್ಪಾತ್ರರು ಶಂಕರ ಕಿಂಕರರೆಂದೇ ನನ್ನ ಭಾವನೆ. ಹಾಗೆ ನಾನು ಅವರಿಗೆ ಇದನ್ನೆಲ್ಲಾ ದಾನಮಾಡುವುದರಿಂದ ನನ್ನ ಸೌಖ್ಯವು ಇನ್ನೂ ವೃದ್ಧಿಗೊಳ್ಳುವುದು. ॥೭೯॥

ಶಂಕರಭಕ್ತನೆಂಬುವನು ಕಾಮಧೇನುವಿನಂತೆ ನನ್ನಿಂದ ಅಲ್ಪವಿತ್ತವನ್ನು ಸ್ವೀಕರಿಸಿ ಅದನ್ನೇ ಬಹು ಸೌಖ್ಯರೂಪದಿಂದ ಅನುಗ್ರಹಿಸುವನು. ಕಾಮಧೇನುವು

ನೀರಸೇಽಪಿ ಯವಸೇಽಪಿ ಭಕ್ಷಿತೇ
ದುಗ್ಧಮತ್ರ ಬಹುದೀಯತೇ ಗವಾ ।
ತದ್ವದೇವ ಸ ದದಾತಿ ಶಾಂಭವಃ
ಸಿದ್ಧಿಮಲ್ಪಧನಪೂಜಿತೋಽಪಿ ಸನ್ ॥೮೧॥

ಶಾಂಕರೇ ಸತಿ ನ ದೇವಧೇನುಭಿಃ
ಕೃತ್ಯಮಸ್ತಿ ಸುರಪಾದಪೈರಪಿ ।
ತತ್ಪದಾಂಬುಜವಿಲೋಕನಾದ್ಯತಃ
ಸಿದ್ಧಿರೇವಮನುಧಾವತಿ ಸ್ವತಃ ॥೮೨॥

ಭಸ್ಮಭೂಷಣಪರಿಗ್ರಹೇಣ ಮೇ
ಸರ್ವಸಿದ್ಧಿಗಣಸಂಶ್ರಯೋಽಪಿ ಹಿ ।
ಕಿಂ ಕಿಮದ್ಯ ನ ಕರಿಷ್ಯತಿ ಪ್ರಿಯಂ
ಕಾಮಧೇನುರಿವ ಕಾಮಸಾಧನಂ ॥೮೩॥

---

ನಾವು ಕೊಟ್ಟ ಹುಲ್ಲನ್ನು ತಿಂದು ಅಮೃತೋಪಮವಾದ ಹಾಲನ್ನು ಕೊಡುವುದಲ್ಲವೆ ? ॥೮೦॥

ನೀರಸವಾದ ಹುಲ್ಲನ್ನು ತಿಂದು ರಸವತ್ತಾದ ಹಾಲನ್ನು ಕೊಡುವ ಹಸುವಿನಂತೆ ಶಾಂಕರನು ಅಲ್ಪ ದ್ರವ್ಯದಿಂದ ತೃಪ್ತನಾಗಿ ಅತಿಶಯವಾದ ಮತ್ತು ಶಾಶ್ವತವಾದ ಮೋಕ್ಷಸುಖವನ್ನು ದಯಪಾಲಿಸುವನು. ॥೮೧॥

ಶಂಭುಭಕ್ತನು ತೃಪ್ತನಾದರೆ ಕಾಮಧೇನು, ಕಲ್ಪವೃಕ್ಷ ಇವುಗಳಿಂದ ನಮಗೆ ಯಾವ ಪ್ರಯೋಜನವೂ ಬೇಕಿಲ್ಲ. ಅಂತಹ ಶಿವಸೇವಕರ ಪಾದದರ್ಶನದಿಂದಲೇ ನಮ್ಮ ಸಿದ್ಧಿಗಳು ನಮ್ಮನ್ನೇ ಹಿಂಬಾಲಿಸಿ ಬರುತ್ತವೆ. ಅಂದರೆ ಸಕಲ ಇಷ್ಟಾರ್ಥಗಳೂ ಒಡನೆಯೇ ಸಿದ್ಧಿಸುತ್ತವೆ. ॥೮೨॥

ಶಿವಪ್ರೀತಿಕರವಾದ ಭಸ್ಮಾಭರಣವನ್ನು ಧರಿಸಿದ ಮಾತ್ರದಿಂದಲೇ ನನ್ನ ಸಕಲ ಇಷ್ಟಾರ್ಥಗಳೂ ಸುಲಭವಾಗಿ ನೆರವೇರುವುವು. ಹಾಗಿರುವಾಗ ಶಿವಸೇವಕರ ದರ್ಶನದಿಂದ ಕಾಮಧೇನುದರ್ಶನದಂತೆ ಯಾವ ಫಲಗಳು ತಾನೇ ದೊರೆಯಲಾರವು ? ॥೮೩॥

ಯಃ ಪ್ರಸಾದಮುಪಹಾಯ ಮಾಯಯಾ
ತ್ಯಕ್ತ ಏವ ಶಿವಪೂಜಕಾರ್ಚನಂ ।
ಕರ್ತುಮಿಚ್ಛತಿ ಸ ಏವ ಸರ್ವಥಾ
ಪುಣ್ಯವಾನಿತಿ ಗುಣೇನ ಗೀಯತೇ ॥೮೪॥

ಭರ್ಗ ಭೀಮ ಭವ ಶಂಕರೇತಿ ವಾ
ನೀಲಕಂಠ ಶಿವ ಶರ್ವ ಸರ್ವಗ ।
ಕಾಲಕಾಲಗಿರಿಶೇತಿ ವಾ ಮುಹು
ಶ್ಚಿತ್ತಪೋತ ಸಶಿವಂ ಸ್ಮರ ಸ್ಮರ ॥೮೫॥

ಅಂಧಕಾಸುರ ಹರಾಮರೇಶ್ವರಾ
ಪಾರಧೀರಕರುಣಾರಸಾಕರ
ಮಾರಸಂಹರ ಮಹೇಶ್ವರೇತಿ ವಾ
ಚಿತ್ತಪೋತ ಸಶಿವಂ ಸ್ಮರ ಸ್ಮರ ॥೮೬॥

ಚಂದ್ರಶೇಖರ ಸುರಾಸುರಾರ್ಚಿತಾ
ನಂಗಭಂಗಕರತುಂಗವಿಗ್ರಹ ।

---

ಯಾವನು ಅಜ್ಞಾನದಿಂದ ಬಿಡುಗಡೆಹೊಂದಿ ಫಲಾಪೇಕ್ಷೆಯಿಲ್ಲದೆ ಶಿವಪೂಜಕರನ್ನು ಅರ್ಚಿಸುವನೋ ಅವನೇ ಪುಣ್ಯಶಾಲಿಯು, ಅವನೇ ಸುಗುಣಿಯು. ಇದನ್ನು ಎಲ್ಲರೂ ಒಪ್ಪುವರು. ॥೮೪॥

ಎಲೈ ಅಲ್ಪವಾದ ಮನಸ್ಸೆ, ಪಾರ್ವತೀಪತಿಯಾದ ಪರಶಿವನನ್ನು ಭರ್ಗ, ಭೀಮ, ಭವ, ಶಂಕರ, ನೀಲಕಂಠ, ಶಿವ, ಶರ್ವ, ಸರ್ವಗ, ಕಾಲಕಾಲ, ಗಿರಿಶ ಇವೇ ಮೊದಲಾದ ನಾಮಗಳಲ್ಲಿ ಯಾವ ಹೆಸರಿನಿಂದ ಬೇಕಾದರೂ ಭಜಿಸು. ॥೮೫॥

ಅಂಧಕಾಸುರ, ಹರ, ಅಮರೇಶ್ವರ, ಅಪಾರಧೀರ, ಕರುಣಾಸಾಗರ, ಮುರಾರಿ, ಮಹೇಶ್ವರ ಮುಂತಾದ ಯಾವ ನಾಮದಿಂದಲಾದರೂ ಭಜಿಸು. ಎಲೈ ಮನಸ್ಸೇ, ಯಾವ ರೀತಿಯಿಂದಾದರೂ ಶಂಕರನಾಮಸ್ಮರಣೆ ಮಾಡು. ॥೮೬॥

ಚಂದ್ರಶೇಖರ, ದೇವಾಸುರಪೂಜಕ, ಮನ್ಮಥನಾಶಕ, ವಿಶ್ವರೂಪ, ಶಿವಲಿಂಗ

ಶಾಂಗಲಿಂಗನಿಲಯಾವ್ಯಯೇತಿ ವಾ
ಚಿತ್ತಪೋತ ಸ ಶಿವಂ ಸ್ಮರ ಸ್ಮರ ॥೮೭॥

ಸೃಷ್ಟಿಪಾಲನವಿನಾಶಕಾರಣಾ
ನಂತಸುಂದರವಿಹಾರವಿಗ್ರಹ ।
ಭೂತಿಭೂಷಣವಿಶೋಭಿತೇತಿ ವಾ
ಚಿತ್ತಪೋತ ಸಶಿವಂ ಸ್ಮರ ಸ್ಮರ ॥೮೮॥

ಶೈಲರಾಜತನಯಾಕುಚೋಲ್ಲಸ
ತ್ಕುಂಕುಮಾಂಚಿತಪದಾಂಬುಜಾಂಚಲ ।
ಅಂಬಿಕಾರಮಣ ಮಾಮವೇತ್ಯಪಿ
ಚಿತ್ತಪೋತ ಸಶಿವಂ ಸ್ಮರ ಸ್ಮರ ॥೮೯॥

ತಾರಕಾರುಚಿರಹಾರಕಂಧರ
ವ್ಯಾಪೃತಾದ್ರಿತನಯಾಕರಾಂಚಲಂ ।
ಚಂಚಲಾಚಲಸಮಾನಮಾನಸಾ
ಸೀನ ಮಾಮವ ಹರೇತಿ ಪಾ ಸ್ಮರ ॥೯೦॥

---

ನಿಲಯ, ನಾಶರಹಿತ ಇವೇ ಮೊದಲಾದ ಯಾವ ಹೆಸರಿನಿಂದಾದರೂ ಪಾರ್ವತೀ ಪತಿಯಾದ ಶಂಕರನನ್ನು ಧ್ಯಾನಿಸು. ॥೮೭॥

ಸೃಷ್ಟಿಸ್ಥಿತಿನಾಶಕರ್ತನೇ, ಸುಂದರರೂಪಿಯೇ, ಭಸ್ಮೋದ್ಧೂಳಿತ ಗಾತ್ರನೇ, ಎಂಬುದಾಗಿ ಪಾರ್ವತೀಪತಿಯಾದ ಶಂಕರನನ್ನು ಸರ್ವದಾ ಭಜನೆಮಾಡು. ॥೮೮॥

ಎಲೈ ಅಲ್ಪಮನಸ್ಸೇ, ಪಾರ್ವತೀದೇವಿಯ ಕುಚಭಾಗಗಳಲ್ಲಿ ಕಂಡುಬರುವ ಕುಂಕುಮರಾಗವು ಶಂಕರನ ಪಾದಕಮಲಗಳಲ್ಲಿ ಅಲಂಕೃತವಾಗಿರುವುದು. ಅಂತಹ ಪಾರ್ವತೀಕಾಂತನಾದ ಮಹೇಶ್ವರನನ್ನು ಸ್ವಾಮಿಯೇ ನನ್ನನ್ನು ರಕ್ಷಿಸು ಎಂದು ಸರ್ವದಾ ಪ್ರಾರ್ಥನೆಮಾಡು. ॥೮೯॥

ನಕ್ಷತ್ರಗಳಂತೆ ಹೊಳೆಯುವ ರತ್ನಮಾಲಿಕೆಯಿಂದ ಅಲಂಕೃತವಾದ ಪಾರ್ವತಿಯ ಕಂಠಭಾಗದಲ್ಲಿ ಇಟ್ಟಿರುವ ತೋಳುಗಳುಳ್ಳ ಪರಮೇಶ್ವರನೇ, ನೀನು

ಕಲ್ಪಕೋಟಿಕೃತಪಾತಕಾನಿ ಮೇ
ಸಂಹರ ಸ್ಮರಹರ ಸ್ಮೃತೋಽಪಿ ಮಾಂ ।
ಮಾಮಕೋಽಯಮಿತಿ ಗೋಚರಂ ಕುರು
ತ್ರಾಹಿ ಮಾಮಿತಿ ಮನಃ ಸ್ಮರ ಸ್ಮರ ॥೯೧॥

ಭೂತಿಭೂಷಿತತನುರ್ಭವೇ ಭವೇ
ಭಾಗ್ಯಭಾರಪರಿಪಾಕತಃ ಶಿವಂ ।
ಪೂಜಯಾಮಿ ಬಹುಧಾ ಧನೈರಹಂ
ಪಾಹಿ ಮಾಮಿತಿ ಮನಃ ಸ್ಮರ ಸ್ಮರ ॥೯೨॥

ಮತ್ಕೃತಾಮಿತಮಹಾಪರಾಧಭೀ
ರ್ಭೂತನಾಥ ಚರಣಾಂಬುಜಸ್ಮೃತೇಃ ।
ಯಾತು ನಾಶಮಿತಿ ಸಾದರಂ ಹರಂ
ನಾನುವಾರಮಪಿ ಕಿಂ ಮನಃ ಸ್ಮರ ॥೯೩॥

---

ಅತಿ ಚಂಚಲವಾದ ಪರ್ವತದಂತಿರುವ ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ಕುಳಿತು ನನ್ನನ್ನು ರಕ್ಷಿಸು ಎಂದು ಬೇಕಾದರೂ ಶಂಕರನನ್ನು ಪ್ರಾರ್ಥಿಸು. ॥೯೦॥

ಎಲೈ ಮನಸ್ಸೇ, ಸ್ಮರಾರಿಯಾದ ಶಂಕರನಲ್ಲಿ ಕಲ್ಪಕೋಟಿಗಳಿಂದ ಸಂಪಾದಿಸಿರುವ ಪಾಪರಾಶಿಯನ್ನು ಪರಿಹರಿಸುವಂತೆ ಪ್ರಾರ್ಥನೆಮಾಡಿಕೋ. ಮತ್ತು ಕೇವಲ ಸ್ಮರಣೆಯಿಂದಲೇ ಶಂಕರನು ತೃಪ್ತನಾಗಿ ಆತ್ಮೀಯಭಾವನೆಯಿಂದ ರಕ್ಷಿಸುವಂತೆ ಬೇಡಿಕೊ. ॥೯೧॥

ಮನಸ್ಸೇ, ಇನ್ನು ಮುಂದೆ ಪ್ರತಿ ಜನ್ಮದಲ್ಲಿಯೂ ಭೂತಿಭಸಿತಾಂಗನಾಗಿ ಸಂಪಾದಿಸಿದ ಸಕಲೈಶ್ವರ್ಯದಿಂದಲೂ ಪರಶಿವನನ್ನು ಪೂಜಿಸುವಂತೆಯೂ, ಆ ಪೂಜೆಯಿಂದ ತುಷ್ಟನಾಗಿ ನನ್ನನ್ನು ಸರ್ವದಾ ರಕ್ಷಿಸುತ್ತಿರಬೇಕೆಂದೂ ಶಂಕರನನ್ನು ಪ್ರಾರ್ಥಿಸಿಕೋ. ॥೯೨॥

ಕುತ್ಸಿತವಾದ ಮನಸ್ಸೇ, ಪರಶಿವನನ್ನು ಈರೀತಿಯಾಗಿ ಪ್ರಾರ್ಥಿಸು. "ನಾನು ಮಾಡಿದ ಮಹಾಪರಾಧಗಳ ಭಯವನ್ನು ತಪ್ಪಿಸಿ, ಸರ್ವದಾ ನಿನ್ನ ಪಾದಕಮಲಧ್ಯಾನದಿಂದ ಮತ್ತೆ ಆ ಭಯವು ಹುಟ್ಟದಂತೆ ಮಾಡು" ಹೀಗೆಂಬುದಾಗಿ ಪದೇ ಪದೇ ಕೇಳಿಕೋ. ॥೯೩॥

ಭಾವಲಿಂಗನಿಲಯಾಪ್ರಮೇಯ ಮೇ
ಮಂಗಲಾರಮಣಮಂಗಲಂ ಕುರು ।
ತಾವಕಂ ಕುರು ಕುರು ಕ್ರಮೇಣ ಮಾ
ದೀನಮಿತ್ಯಪಿ ಮನಃ ಸ್ಮರ ಸ್ಮರ ॥೯೪॥

ಲೀಲಯಾಲಮನುವೇಲಮನ್ವಯಾ
ಪಾಯಕಾಯವಿಷಯೈರಲಂ ಬಲೈಃ ।
ಕಾಲಕಾಲಕಲನೇನ ಕಾಲಭೀ
ರ್ನೇತಿ ಕಾಲಹರಮೇವ ಸಂಸ್ಮರ ॥೯೫॥

ಮನ್ಮನಃ ಸರಸಿಜಾಸನಾಶ್ರಯಃ
ಕಿಂ ಕ್ಷಣಾರ್ಧಮಪಿ ಮಾ ಸದಾಶಿವ ।
ಇತ್ಯನುಕ್ಷಣಮುಮಾಪತಿಂ ಭಜ
ಭ್ರಾಜಮಾನಮನಿಶಂ ಮನಃ ಸ್ಮರ ॥೯೬॥

---

ಭಾವನಾಲಿಂಗದಲ್ಲಿ ಅಪ್ರಮೇಯನಾಗಿ ನೆಲಸಿರುವ ಪರಮೇಶ್ವರನೇ, ನನಗೆ ಸರ್ವದಾ ಪಾರ್ವತೀಪತಿಯಲ್ಲಿ ತೃಪ್ತಿಯನ್ನೊದಗಿಸು. ಮತ್ತು ದೀನನಾಗಿರುವ ನನ್ನನ್ನು ಕ್ರಮಕ್ರಮವಾಗಿ ನಿನ್ನ ಸಾಯುಜ್ಯಕ್ಕೆ ಸೇರಿಸಿಕೊ ಎಂದು ಪ್ರಾರ್ಥಿಸು. ॥೯೪॥

ಎಲೈ ಮನಸ್ಸೇ, ಕೊನೆಮೊದಲಿಲ್ಲದೆ ಸರ್ವದಾ ಅಪಾಯಕರವಾಗಿ ಮೇಲೆ ಮೇಲೆ ಬರುವ ವಿಷಯಸುಖಗಳು ಇನ್ನು ಮುಂದೆ ಬೇಡ. ಮತ್ತು ಕಾಲಕ್ಕೆ ನಿಯಾಮಕನಾಗಿರುವ ಯಮನ ಭಯವು ಮುಂದೆ ಬರದಂತೆ ಕಾಲಕಾಲನಾದ ಪರಮೇಶ್ವರನನ್ನೇ ಸ್ಮರಿಸು. ॥೯೫॥

ಎಲೈ ಮನಸ್ಸೇ, ಮಂಗಳಪ್ರದನಾದ ಸದಾಶಿವನು ಸ್ವಲ್ಪ ಹೊತ್ತಾದರೂ ನನ್ನ ಮನಸ್ಸಂಜ ಕಮಲದಲ್ಲಿ ಸ್ಥಿರವಾಗಿ ನೆಲಸಿರಲಿ ಎಂದು ಪ್ರತಿಕ್ಷಣವೂ ತೇಜಃಜ್ವಾಲಿಯಾದ ಪರಶಿವನನ್ನು ಪ್ರಾರ್ಥಿಸುತ್ತಿರು. ॥೯೬॥

ಮಂದಿರಾಣಿ ತವ ಸುಂದರಾಣಿ ಚೇತ್
ಮಂದರೇಽಪಿ ವಸತಿಃ ಕಥಂ ತವ ।
ತದ್ವದೀಶ ಮಮ ಮಾನಸಾಸನೇ
ಸಂವಸೇತಿ ಸತತಂ ಮನಃ ಸ್ಮರ ॥೯೭॥

ಶಂಕರಾತಿರುಚಿರಂ ನ ಸುಂದರಂ
ಚಿತ್ರಮಂದಿರಮಥಾಪಿ ಸುಂದರಂ ।
ತ್ವತ್ಕಥಾಮೃತಸುಧಾನುಲೇಪನಾ
ದಿತ್ಯಪಿ ಸ್ಮರಹರಂ ಸ್ಮರ ಸ್ಮರ ॥೯೮॥

ನರ್ಮದಾಕಠಿನಲಿಂಗಸಂಗಮೇ
ಸಂಗತೇ ಮತಿರಭೂದ್ಯಥಾ ತಥಾ ।
ಮಾನಸೇಽಪಿ ಮಮ ಸಂವಸಾದರಾತ್
ಇತ್ಯನುಕ್ಷಣಮುತ ಕ್ಷಣಂ ಸ್ಮರ ॥೯೯॥

ದೀನಬಂಧುರಿತಿ ಯಾ ಪ್ರಥಾಸ್ತಿ ತೇ
ಸಾ ಯಥಾ ನ ವಿತಥಾ ತಥಾ ಕುರು ।

---

ಪರಶಿವನೇ, ನಿನ್ನ ಮಂದಿರವು ಅತ್ಯಂತ ಸುಂದರವಾಗಿರುವುದಾದರೆ ಮಂದರ ಪರ್ವತವನ್ನು ಏಕೆ ಅವಲಂಬಿಸಿದೆ? ಅದೇರೀತಿ ನನ್ನ ಮನಸ್ಸೆಂಬ ಪೀಠದಲ್ಲಿಯೂ ಸ್ವಲ್ಪ ಹೊತ್ತು ನೆಲಸಿ ನನ್ನನ್ನುದ್ಧರಿಸು, ಎಂದು ಸರ್ವದಾ ಪ್ರಾರ್ಥಿಸು. ॥೯೭॥

ಪರಶಿವನಿಂದ ಅತ್ಯಂತ ಮನೋಹರವೂ ಸುಂದರವೂ ಆದ ವಸ್ತುವೇ ಇಲ್ಲ. ಇಂತಹ ಪರಶಿವಕಥಾಮೃತಲೇಪದಿಂದ ಮತ್ತೂ ಸುಂದರವಾಗಿರುವ ಮನಸ್ಸೆಂಬ ಮನೆಯನ್ನು ಆಶ್ರಯಿಸು ಎಂದು ಮನ್ಮಥಾರಿಯಾದ ಪರಶಿವನನ್ನು ಪದೇ ಪದೇ ಸ್ಮರಿಸು. ॥೯೮॥

ಪರಮೇಶ್ವರನೇ, ನಮದಾಲಿಂಗವೆಂಬ ಕಠಿನವಾದ ಶಿವಲಿಂಗದಲ್ಲಿ ನೆಲಸುವ ಮನಸ್ಸುಳ್ಳ ನೀನು, ಅದರಂತೆಯೇ ಕಠಿನವಾಗಿರುವ ನನ್ನ ಮನಸ್ಸಿನಲ್ಲಿಯೂ ಸ್ವಲ್ಪಹೊತ್ತು ನೆಲಸು ಎಂದು, ಎಲೈ ಮನಸ್ಸೇ, ಶಂಕರನನ್ನು ಬೇಡಿಕೋ. ॥೯೯॥

ಪರಶಿವನೇ, ಪಾರ್ವತೀಮನೋಹರನೇ, ನಿನಗೆ ದೀನಬಂಧುವೆಂಬ ಬಿರುದಿ

ಮಾಮವಾಗತನಯಾಮನೋಹರ
ತ್ರಾಹಿ ಮಾಮಿತಿ ಮನಃ ಸ್ಮರ ಸ್ಮರ ॥೧೦೦॥

ನಾನುವಾರಮಗರಾಜಕನ್ಯಕಾ
ಸಾನುರಾಗಚರಣಾಂಬುಜಾದರಂ ।
ಕಿಂ ಮುಹುರ್ಮುಹುರಪರ್ಣನಾಯಕೇ
ತ್ಯುಚ್ಚರನ್ನುರುತರಂ ಮನಃ ಸ್ಮರ ॥೧೦೧॥

ಸತ್ವರಂ ಕಿಮಿತಿ ನ ಪ್ರಸನ್ನತಾ
ಮಾಪ ಶಂಕರ ಇತಿ ತ್ವರಾ ತ್ವಯಾ ।
ಕಿಂ ಕೃತಾನುಚಿತಕಾರಿತಾ ಕಥಂ
ಮಯ್ಯಪೀತಿ ಮನಸಾ ಸ್ಮರ ಸ್ಮರ ॥೧೦೨॥

ಕಃ ಕಲ್ಯಾಣಪರಂಪರಾರ್ಣವಪರಂ ತಂ ಶಂಕರಂ ನ ಸ್ಮರೇತ್
ಗೌರೀಚಾರುಕುಚೋರುಕುಂಕುಮರಸಾಸಾರಾರುಣಾಂಘ್ರಿಂ ಪರಂ ।
ಸೋಽಹಂ ಭಾವನಯಾಪಿ ಸಂಸ್ಮರ ಮಹಾದೇವಂ ಮುಹುರ್ಮೋಽಹಭೀ
ಸ್ತ್ಯಾಜ್ಯಾ ಪೂಜ್ಯತಮೋತ್ತಮೋತ್ತಮತಮಂ ಸೋಮಂ ಮನಃ ಸಂಸ್ಮರ ॥೧೦೩॥

---

ರುವುದು. ಅದು ವ್ಯರ್ಥವಾಗದಂತೆ ದೀನನಾಗಿರುವ ನನ್ನನ್ನು ಸರ್ವದಾ ರಕ್ಷಿಸು ಎಂದು ಪದೇ ಪದೇ ಪ್ರಾರ್ಥಿಸು. ॥೧೦೦॥

ಮನಸ್ಸೇ, ಸರ್ವದಾ ಪಾರ್ವತಿಗೆ ಪ್ರೀತಿಪಾತ್ರವಾದ ಪಾದಕಮಲಗಳುಳ್ಳ ಪರಶಿವನನ್ನು ಪಾರ್ವತೀಪತಿಯೆಂಬ ಶಬ್ದದಿಂದ ಸರ್ವದಾ ಸ್ಮರಿಸುತ್ತಿರು. ॥೧೦೧॥ ಶಂಕರನನ್ನು ಎಷ್ಟು ಪ್ರಾರ್ಥನೆಮಾಡಿದರೂ ಜಾಗ್ರತೆ ನನಗೆ ಪ್ರಸನ್ನನಾಗಲಿಲ್ಲ ವೇಕೆ? ಎಂದು ಆತುರಪಡಬೇಡ. ಅದಕ್ಕೆ ಅನುಕೂಲವಾಗದ ಯಾವುದೋ ದೋಷವು ತನ್ನಲ್ಲಿದೆ ಎಂಬುದಾಗಿ ತಿಳಿದು ಪುನಃ ಪುನಃ ಶಂಕರನನ್ನು ಭಜಿಸು. ॥೧೦೨॥

ಎಲೈ ಮನಸ್ಸೇ, ಕಲ್ಯಾಣಪರಂಪರೆಗೆ ಸಿಧಿಯಂತಿರುವ ಶ್ರೀ ಪರಮೇಶ್ವರ ನನ್ನು ಧ್ಯಾನಮಾಡದಿರುವವನು ಯಾರು? ಪರಶಿವನ ಪಾದಕಮಲವು ಗೌರೀ

**ಆಕಲ್ಪಂ ಮಮ ಜೀವನಂ ಭವತು ಮೇ ಭಕ್ತಿರ್ಭವೇ ಭಸ್ಮನಿ**
**ಶ್ರೀರುದ್ರಾಕ್ಷವಿಭೂಷಣೇ ಶಿವಪುರೀವಾಸೇ ಶಿವಾರಾಧಕೇ ।**
**ನಿತ್ಯಂ ಶಂಕರಶಾಂಗಲಿಂಗಭಜನೇ ತತ್ಪೂಜನೇ ತಜ್ಜಪೇ**
**ತದ್ಧ್ಯಾನೇ ತದವೇಕ್ಷಣೇಽಪಿ ಸುತರಾಂ ಮತ್ಸಂತತೇರನ್ವಹಂ ॥೧೦೪॥**

**ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಪೂರ್ವಾರ್ಧೇ**
**ಜನಕಸತ್ಯಪ್ರತಿಜ್ಞಾವಾಕ್ಯನಿರೂಪಣಂ ನಾಮ**
**ಪಂಚಚತ್ವಾರಿಂಶೋಽಧ್ಯಾಯಃ**

---

ದೇವಿಯು ಪಾದವನ್ನೊತ್ತುವಕಾಲದಲ್ಲಿ ಆಕೆಯ ಕುಚಭಾಗದ ಮೇಲಿರುವ ಕುಂಕುಮರಾಗದ ಕೆಂಪನ್ನು ಪಡೆದು ಪ್ರಕಾಶಿಸುತ್ತಿರುವುದಲ್ಲವೆ! ಅಂತಹ ಪೂಜ್ಯ ದೇವತೆಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠನೆನಿಸಿದ ಮಹಾದೇವನನ್ನು ಅಜ್ಞಾನರಹಿತವಾದ ಸ್ಥಿರಮನಸ್ಸಿನ ಸೋಽಹಂಭಾವನೆಯಿಂದಲಾದರೂ ಸ್ಮರಿಸು. ಆ ಶಂಕರನ ಅನುಗ್ರಹ ವೊದಗುವುದು. ||೧೦೩||

ಪರಮೇಶ್ವರನೇ, ಕಲ್ಪಪರ್ಯಂತವಾಗಿಯೂ ನನ್ನ ಮನಸ್ಸು ಸರ್ವದಾ ಭಸ್ಮ ಧಾರಣೆಯಲ್ಲಿಯೂ ರುದ್ರಾಕ್ಷಿಯ ಸರವನ್ನು ಹಾಕಿಕೊಳ್ಳುವುದರಲ್ಲಿಯೂ, ಶಿವಕ್ಷೇತ್ರ ವಾಸದಲ್ಲಿಯೂ, ಶಿವಾರಾಧನೆಯಲ್ಲಿಯೂ ಪ್ರವರ್ತಿಸುತ್ತಿರಲಿ. ಅಲ್ಲದೆ ನಾನು ಎಲ್ಲಿ ಹೋದರೂ ಅಲ್ಲಿ ಶಂಕರಲಿಂಗಭಜನ, ಶಿವಲಿಂಗಾರ್ಚನೆ, ಶಿವಮಂತ್ರಜಪ, ಶಿವ ಮೂರ್ತಿತಪ, ಶಂಭುವಿನ ದರ್ಶನ ಇತ್ಯಾದಿ ಶಿವಪೂಜಾ ವಿಷಯಕಗಳಾದ ನಿತ್ಯ ಕಾರ್ಯಗಳು ಒದಗುತ್ತಿರಲಿ. ಸಾಂಸಾರಿಕವಾದ ಮತ್ತಾವ ವಿಷಯುಗಳಲ್ಲಿಯೂ ಬುದ್ಧಿಯು ಮುಂದೋಡದೇ ಸದಾ ಈಶ್ವರಚಿಂತೆಯಲ್ಲಿಯೇ ತೊಡಗಿರುವಂತೆ ಅನುಗ್ರಹಿಸು ಎಂದು ಜನಕಮಹಾರಾಜನು ನಾನಾರೀತಿಯಿಂದ ಪ್ರಾರ್ಥಿಸಿದನು. ||೧೦೪||

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಭಾಗದ ಪೂರ್ವಾರ್ಧದಲ್ಲಿ
ಜನಕಮಹಾರಾಜನ ಸತ್ಯಪ್ರತಿಜ್ಞೆಯ ನಿರೂಪಣೆಯೆಂಬ
ನಲವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಷಟ್ಚತ್ವಾರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಸ ಯಾಜ್ಞವಲ್ಕ್ಯೋ ಜನಕೋಕ್ತಿರೂಪಾಂ
ಸುಧಾಂ ಮುಹುಃ ಕರ್ಣಪುಟೈರಮಂದಂ ।
ಪೀತ್ವಾ ಮಹಾನಂದಮವಾಪ ಭಕ್ತ್ಯಾ
ಸ್ಮೃತ್ವಾ ಮಹಾದೇವಪದಾಂಬುಜಂ ಚ ॥೧॥

ಶ್ರೀಮನ್ಮಹಾದೇವಕಥಾಸುಧಾಬ್ಧಿ
ತರಂಗಮಾಲಾವಿಮಲಾನುವೇಲಂ ।
ಶ್ರೀಕಾಲಕಾಲಾರ್ಚನಸಾಧನಾನಾಂ
ಸಂಪಾದನಾಯ ಪ್ರಭವತ್ಯವಶ್ಯಂ ॥೨॥

---

## ನಲವತ್ತಾರನೆಯ ಅಧ್ಯಾಯ

ಹಾಗೆ ಪ್ರಮಾಣಪೂರ್ವಕವಾಗಿ ಶಿವಭಕ್ತಿಯನ್ನು ತೋರ್ಪಡಿಸಿದ ಜನಕ ಮಹಾರಾಜನ ಮಾತುಗಳನ್ನು ಕೇಳಿ ಯಾಜ್ಞವಲ್ಕ್ಯಮಹಾಮುನಿಯು ಬಹು ಸಂತೋಷಪಡುತ್ತಾ ಪರಶಿವನ ಪಾದಪದ್ಮಗಳನ್ನು ಸ್ಮರಿಸುತ್ತಾ ಆನಂದಭರಿತ ನಾದನು. ॥೧॥

ಶ್ರೀಮಹೇಶ್ವರನ ಕಥಾಮೃತದ ಪ್ರಭಾವವು ಅಜ್ಞಾನಿಗಳ ಮನಸ್ಸನ್ನೂ ಸಹ ಎಳೆದು ಅವರು ಪರಮೇಶ್ವರ ಪೂಜಾಯೋಗ್ಯರನ್ನಾಗಿ ಮಾಡತಕ್ಕದ್ದಾಗು ವುದು. ಇದೇ ಆ ಕಥಾಭಾಗದಲ್ಲಿರುವ ಸತ್ತ್ವ. ॥೨॥

ಅನುಗ್ರಹಃ ಶಂಕರಪಾದಪದ್ಮ
ಸ್ಮೃತೇರಯಂ ಭಕ್ತಿರಸೋದಯೋಽಪಿ ।
ಶ್ರೀಮನ್ಮಹಾದೇವ ಕೃಪಾಂಬುರಾಶಿ
ಕಲ್ಲೋಲಮಾಲಾಪ್ರಸರಪ್ರಸಾದಃ ॥೩॥

ಅಸ್ಮಾಕಮೇತತ್ಫಲು ಭಾಗ್ಯಮದ್ಯ
ವಿದ್ಯಾವಿಲಾಸೈಃ ಖಲು ಚಂದ್ರಮೌಳಿಃ ।
ಸ್ಮೃತೋ ಮಹಾನಂದಪದಪ್ರದಾತಾ
ಸ್ವಾನಂದರೂಪೋಽಪಿ ಸಚಿದ್ಘನೋಽಪಿ ॥೪॥

ಅನಾದ್ಯವಿದ್ಯಾವಿಲಯೋಽಪಿ ಜಾತ
ಸ್ತವಾಪ್ಯವಿದ್ಯಾವರಣೇ ವಿನಷ್ಟೇ ।
ತತ್ರಾವಶಿಷ್ಟಂ ಶಿವರೂಪಮೇಕ
ಮನೇಕಧಾ ಭಾತಿ ಚ ಭಾನಮೇವ ॥೫॥

---

ಮಹಾದೇವನ ಅನುಗ್ರಹರೂಪವಾದ ಪ್ರಸಾದವಿಲ್ಲದೆ ಶಂಕರಪಾದಪದ್ಮಸೇವೆ ಯಲ್ಲಿ ಭಕ್ತಿಯೂ, ತದ್ವಿಷಯಕವಾದ ಭಕ್ತಿಭಾವವೂ ಉಂಟಾಗುವಂತಿಲ್ಲ. ಈ ಮಹಿಮೆಯು ಈಶ್ವರ ಕಥಾಮಾತ್ರದಲ್ಲಿ ವಿಶ್ರಾಂತವಾಗಿರತಕ್ಕದ್ದು. ॥೩॥

ನಮ್ಮ ಭಾಗ್ಯವಿಶೇಷದಿಂದಲೇ ನಮಗೆ ಈಗ ಚಂದ್ರಶೇಖರನಾದ ಮಹೇಶ್ವ ರನನ್ನು ಅರಿಯುವ ಯೋಗ್ಯತೆಯುಂಟಾಗಿರುವುದು. ಆದ್ದರಿಂದಲೇ ಮಹಾನಂದ ಸ್ವರೂಪಿಯಾದ ಮಹೇಶ್ವರನನ್ನು ಧ್ಯಾನಿಸುತ್ತಾ ನಾವೂ ಸಹ ಆನಂದಾನುಭವದಲ್ಲಿ ಕಾಲಕಳೆಯುತ್ತಿರುವೆವು. ॥೪॥

ಈ ಶಂಕರಾರಾಧನೆಯಿಂದ ಅನಾದಿಯಾಗಿ ಬಂದ ಅವಿದ್ಯೆಯು (ಅಜ್ಞಾನವು) ನಾಶವಾಗಿ ಮಾಯಾವರಣವು ತಪ್ಪಿದ ಮೇಲೆ "ಶಿವೋಽಹಂ" ಎಂಬ ಪರಬ್ರಹ್ಮ ಸಾಕ್ಷಾತ್ಕಾರವಾಗುವುದು. ಅದೇ ಆನಂದಮಯವಾದ ಶಿವರೂಪವು. ಆ ಆನಂದಾನು ಭವವೇ ಮೋಕ್ಷ. ಆ ಶಿವಸ್ವರೂಪವೇ ಇಂದು ಜಗತ್ತಿನಲ್ಲಿ ನಾನಾರೂಪವಾಗಿ ತೋರಿಬರುತ್ತಿರುವುದು. ॥೫॥

ನ ತತ್ರ ಸೂರ್ಯೋऽಪಿ ವಿಭಾತಿ ಚಂದ್ರೋ
ನಾಗ್ನಿರ್ನ ತಾರಾಪಿ ನ ಚಾಪಿ ವಿದ್ಯುತ್ ।
ಸ್ವಯಂ ಪ್ರಕಾಶಃ ಖಲು ವೃತ್ತಿರೂಪಾ
ವಿದ್ಯಾ ನ ತತ್ರ ಪ್ರಸರತ್ಯವಶ್ಯಂ ॥೬॥

ಓಂಕಾರರೂಪಂ ಪ್ರವದಂತಿ ಕೇಚಿತ್
ತನ್ನಿರ್ವಿಕಾರಂ ಶಿವರೂಪಮೇಕಂ
ಸ ಏವ ತಾವತ್ಸ್ಫುರತಿ ಸ್ವಭಾವಾತ್
ನ ತಸ್ಯ ತು ಸ್ಫೋರಕಮಸ್ತಿ ಲೋಕೇ ॥೭॥

ಇತಿ ತದ್ವಚನಂ ಶ್ರುತ್ವಾ ಜನಕೋ ವಿನಯಾನ್ವಿತಃ ।
ಶಿವಜ್ಞಾನೋದಯಃ ಕೇನ ತದ್ವದ ಶ್ರುತಿಶೇಖರೈಃ ॥೮॥

॥ ಯಾಜ್ಞವಲ್ಕ್ಯ ಉವಾಚ ॥

ಶಿವ ಏವ ಪರಂ ಬ್ರಹ್ಮ ಶಿವ ಏವ ಶಿವಾತ್ಮಕಃ ।
ಇತಿ ಬುದ್ಧಿರ್ಮಹಾದೇವಲಿಂಗಾರಾಧನತೋ ನೃಪ ॥೯॥

---

ಅಲ್ಲಿ ಸೂರ್ಯನಾಗಲಿ, ಚಂದ್ರನಾಗಲಿ, ತಾರಾ, ಮಿಂಚುಗಳಾಗಲಿ, ಕಂಡು ಬರುವುದಿಲ್ಲ. ಅದು ಸ್ವಯಂಪ್ರಕಾಶವಾದದ್ದು. ಅದರಲ್ಲಿ ಅವಿದ್ಯೆಯ ಪ್ರಸಾರವೇ ತೋರಿಬರುವುದಿಲ್ಲ. ಅವಿದ್ಯಾಸಂಬಂಧಿಯಾದ ಪರಶಿವನೇ ಈ ಅಚಲವಾದ ಜಗತ್ತು. ॥೬॥

ಕೆಲವರು ಈ ಶುದ್ಧ ಶಿವನನ್ನೇ ಓಂಕಾರರೂಪಿಯಾದ ಪ್ರಣವವೆನ್ನುವರು. ಶಿವರೂಪವಾದ ಆ ವಸ್ತುವೊಂದೇ ನಿತ್ಯವಾದದ್ದು. ಮತ್ತು ಸ್ವಯಂಪ್ರಕಾಶಕವು. ಅದನ್ನು ಬೆಳಗಿಸುವಂತಹ ವಸ್ತುವು ಮತ್ತೊಂದಿಲ್ಲ." ॥೭॥

ಹೀಗೆ ಹೇಳಿದ ಯಾಜ್ಞವಲ್ಕ್ಯಋಷಿಯ ಮಾತುಗಳನ್ನು ಕೇಳಿದ ರಾಜನು ವಿನಯಶೀಲನಾಗಿ ಮತ್ತೆ ಋಷಿಯನ್ನು ಕುರಿತು ಶಿವಜ್ಞಾನವು ಯಾವ ವೇದೋಕ್ತ ಕರ್ಮದಿಂದ ಸುಲಭವಾಗಿ ಒದಗುವುದು ? ಎಂದು ಪ್ರಶ್ನಿಸಿದನು. ॥೮॥

ಶಿವನೇ ಪರಬ್ರಹ್ಮನು, ಶಿವನೇ ಸರ್ವಸ್ವರೂಪಿಯು ಎಂಬ ಜ್ಞಾನವು ಬರಬೇಕಾದರೆ ಶಿವಲಿಂಗಾರಾಧನೆಯನ್ನೇ ಮಾಡಬೇಕು. ಭಕ್ತಿಯಿಂದ ಶಂಕರ

ಮಹಾದೇವೇ ಮಹಾನಂದೇ ಪರಬ್ರಹ್ಮಣಿ ಶಂಕರೇ
ಭಕ್ತ್ಯಾ ಶಿವಾರ್ಚನೇನ ಸ್ಯಾತ್ ಭಕ್ತಿರವ್ಯಭಿಚಾರಿಣೀ ॥೧೦॥

ಶಿವಪೂಜಾ ಶ್ರುತಿಪ್ರೋಕ್ತಾ ಶಿವಲಿಂಗೇ ಶಿವಾತ್ಮಕೇ ।
ತಥೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೧೧॥

ಶಿವಮುದ್ದಿಶ್ಯ ಸುಕೃತಂ ಯದ್ಯತ್ಕೃತಮನೇಕಧಾ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೧೨॥

ಕೃತಾನಿ ಯೇನ ದಾನಾನಿ ಶಿವಪ್ರೀತ್ಯರ್ಥಮಾದರಾತ್ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೧೩॥

ಯೇನ ಕನ್ಯಾಪ್ರದಾನೇನ ಶೈವಃ ಸಂತೋಷಿತೋ ಮುಹುಃ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೧೪॥

ಯೇನ ರತ್ನಪ್ರದಾನೇನ ಶಾಂಭವಾಸ್ತೋಷಿತಾ ಮುಹುಃ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೧೫॥

ಯೇನಾಶ್ವಗಜದಾನಾದ್ಯೈಃ ಶಾಂಭವಾಸ್ತೋಷಿತಾ ಮುಹುಃ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೧೬॥

---

ನನ್ನು ಆರಾಧಿಸಿದರೆ ಮಹಾದೇವ ವಿಷಯಕವಾದ ಸ್ಥಿರಭಕ್ತಿಯೊದಗುವುದು. ಎಂದು ಯಾಜ್ಞ್ಯವಲ್ಕ್ಯಮಹರ್ಷಿಯು ರಾಜನಿಗೆ ಉಪದೇಶಿಸತೊಡಗಿದನು.॥೯-೧೦॥

ಶ್ರುತಿಪ್ರೋಕ್ತವಾದ ಶಿವಪೂಜೆಯನ್ನು ಶಿವಾತ್ಮಕವಾದ ಶಿವಲಿಂಗದಲ್ಲಿ ಅರ್ಪಿಸುವುದರಿಂದಲೂ, ಶಿವೋದ್ದೇಶಕವಾಗಿ ಮಾಡುವ ಸುಕೃತಕಾರ್ಯಗಳಿಂದಲೂ ಶಂಕರನಲ್ಲಿ ನಿಶ್ಚಲವಾದ ಭಕ್ತಿಯೊದಗುವುದು. ॥೧೧-೧೨॥

ಶಿವಪ್ರೀತಿಕರವಾದ ದಾನಾಚರಣೆಗಳಿಂದಲೂ, ಶಿವೋಪಾಸಕನಿಗೆ ಕನ್ಯಾದಾನ ಮಾಡುವುದರಿಂದಲೂ, ಶಂಕರನಲ್ಲಿ ಅನ್ಯಾದೃಶವಾದ ಭಕ್ತಿಯೊದಗುವುದು.॥೧೩-೧೪॥

ಶಂಕರಪೂಜಕರಿಗೆ, ರತ್ನ, ಅಶ್ವ, ಗಜ, ಅಸಂಖ್ಯಾತವಾದ ಗೋವುಗಳು, ಇವುಗಳನ್ನು ದಾನಮಾಡುವುದರಿಂದ ಶಿವನಲ್ಲಿ ಭಕ್ತಿಯುಂಟಾಗುವುದು. ಮತ್ತು

ಯೇನ ಗೋಕೋಟಿದಾನೇನ ಶಾಂಭವಾಸ್ತೋಷಿತಾ ಮುಹುಃ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೧೭॥

ಸುಶೀತಲಾಂಬುಸೇಕೇನ ಯೇನೈವಾರಾಧಿತಃ ಸ್ವಕಃ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೧೮॥

ಪಟ್ಟೆತೂಲಪ್ರದಾನೇನ ಯೇನೈವಾರಾಧಿತಶ್ಶಿವಃ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೧೯॥

ಯೇನ ದಿವ್ಯಾನ್ನದಾನೇನ ತೋಷಿತಃ ಪಾರ್ವತೀಪತಿಃ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೨೦॥

ರತ್ನಾಭರಣದಾನೇನ ಯೇನೈವಾರಾಧಿತಶ್ಶಿವಃ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೨೧॥

ರಥೋತ್ಸವಾದಿನಾ ನಿತ್ಯಂ ತೋಷಿತೋ ಯೇನ ಶಂಕರಃ ।
ತೇನೈವ ಜಾಯತೇ ಶಂಭೌ ಭಕ್ತಿರವ್ಯಭಿಚಾರಿಣೀ ॥೨೨॥

ಅವಿರಕ್ತೋ ವಿರಕ್ತೋ ವಾ ಭಕ್ತಿಮವ್ಯಭಿಚಾರಿಣೀಂ ।
ಪ್ರಾಪ್ಯ ಯಃ ಪಾರ್ವತೀಕಾಂತಂ ಅರ್ಚಯೇತ್ಸತು ಭಾಗ್ಯವಾನ್ ॥೨೩॥

ವೈರಾಗ್ಯಮಪಿ ಭೋಗೇಚ್ಛಾವಿರಹಃ ಕೇವಲಂ ಮತಃ ।
ನ ತು ಭಾಗ್ಯಪರಿತ್ಯಾಗೋ ವೈರಾಗ್ಯಮಿತಿ ಮೇ ಮತಿಃ ॥೨೪॥

---

ಶಿವಲಿಂಗಕ್ಕೆ ಶೀತಲವಾದ ಜಲಾಭಿಷೇಕಮಾಡುವುದರಿಂದಲೂ ಶಿವಾನುಗ್ರಹವೊದಗುವುದು. ||೧೫-೧೬-೧೭-೧೮||

ದಿವ್ಯವಾದ ರೇಷ್ಮೆವಸ್ತ್ರದಾನ, ಮೃಷ್ಟಾನ್ನ ನೈವೇದ್ಯ, ರತ್ನಾಭರಣಾರ್ಪಣ, ರಥೋತ್ಸವಾದಿಗಳ ವಿಜೃಂಭಣೆ, ಇವುಗಳಿಂದ ಶಂಕರನನ್ನು ತೃಪ್ತಿಪಡಿಸಿದವರಿಗೆ ಶ್ರೀಮಹೇಶ್ವರನಲ್ಲಿ ಅನನ್ಯಸದೃಶವಾದ ಭಕ್ತಿಯೊದಗುವುದು. ||೧೯-೨೦-೨೧-೨೨||

ವೈರಾಗ್ಯದಿಂದಾಗಲಿ, ಆಶಾವಿಶಿಷ್ಟನಾಗಿಯಾಗಲಿ, ಅಬಾಧಿತವಾದ ಭಕ್ತಿಯಿಂದ ಶಂಕರನನ್ನು ಅರ್ಚಿಸಿದರೆ, ಅದೇ ಅವನ ಭಾಗ್ಯವು. ಅವನೇ ಭಾಗ್ಯಶಾಲಿ

ಭಾಗ್ಯೇ ತ್ಯಕ್ತೇ ಲಿಂಗಪೂಜಾ ಸಾಂಗಾ ತು ನ ಭವಿಷ್ಯತಿ ।
ನಿರಂಗಂ ವೈದಿಕಂ ಕರ್ಮ ನ ಫಲಾಯೇತಿ ಮೇ ಮತಿಃ ॥೨೫॥

ಲಿಂಗಾರ್ಚನೇನ ಕರ್ತವ್ಯಂ ಫಲಂ ವಿವಿಧಮಿತ್ಯತಃ ।
ತದರ್ಚನಂ ಚ ಕೇನೇತಿ ಸಾಧನಂ ಸಮುಪೇಕ್ಷಿತಂ ॥೨೬॥

ಭಾವನಾ ಪ್ರತ್ಯಯಪ್ರಾಪ್ತಾ ಕುರ್ಯಾದಿತಿ ತತಃ ಪರಂ ।
ಕಿಮಿತ್ಯೇವ ತದಾಕಾಂಕ್ಷಾ ವಸ್ತುತಃ ಫಲಗೋಚರಃ ॥೨೭॥

ಕಮನೀಯಫಲಾಕಾಂಕ್ಷಾ ತಾವದಾದೌ ಪ್ರಜಾಯತೇ ।
ಸರ್ವೇಷಾಮವಿಶೇಷೇಣ ತದೇವ ಸಮುಪೇಕ್ಷಿತಂ ॥೨೮॥

---

ಯೆನಿಸುವನು. ಸುಖಾಭಿಲಾಷೆಯಿಲ್ಲದಿರುವುದೇ ವೈರಾಗ್ಯ. ಐಶ್ವರ್ಯವನ್ನೆಲ್ಲಾ ತ್ಯಾಗಮಾಡುವುದು ವೈರಾಗ್ಯವೆಂದು ನಾನು ಹೇಳುವುದಿಲ್ಲ. ॥೨೩-೨೪॥

ಐಶ್ವರ್ಯವನ್ನೆಲ್ಲಾ ಕಳೆದುಕೊಂಡವನು ಪೂಜಾಕಾರ್ಯದಲ್ಲಿ ಸಂಪೂರ್ಣ ಸಮರ್ಥನೆನಿಸುವುದಿಲ್ಲ. ಆಗ ಪೂಜೆಯೂ ಸಾಂಗವೆನಿಸುವುದಿಲ್ಲ. ನಿರಂಗವಾದ ವೈದಿಕಕರ್ಮವು ಫಲಪ್ರದವಲ್ಲ ಎಂಬುದೇ ನನ್ನ ಅಭಿಪ್ರಾಯ. ಲಿಂಗಾರ್ಚನೆಯಿಂದಲೇ ಸಕಲ ಫಲವನ್ನೂ ಹೊಂದುವಾಗ, ಅಂತಹ ಅರ್ಚನಕಾರ್ಯಕ್ಕೆ ಸಾಧನವು ಐಶ್ವರ್ಯವಲ್ಲವೆ? ಅದಿಲ್ಲದೆ ಪೂಜಾಕಾರ್ಯವನ್ನು ನಿರ್ವಹಿಸುವುದು ಹೇಗೆ? ೨೫-೨೬॥

ಬಳಿಕ ಪ್ರತ್ಯಯಾರ್ಥವಾದ ಭಾವನೆಗೆ ಸಾಧ್ಯಾಕಾಂಕ್ಷೆಯು ಉಂಟಾಗುವುದು. ಎಂದರೆ ಫಲಭಾವನೆಗೆ ಮೂರು ಆಕಾಂಕ್ಷೆಗಳಿರುವುವು. ಅವುಗಳಲ್ಲಿ ಮೊದಲು ಸಾಧ್ಯಾಕಾಂಕ್ಷೆ, ಎರಡನೆಯದಾಗಿ ಸಾಧನಾಕಾಂಕ್ಷೆ, ಮತ್ತು ಮೂರನೆಯದಾಗಿ ಕಥಂಭಾವಾಕಾಂಕ್ಷೆ ಎಂದು ಹೀಗೆ ಆಕಾಂಕ್ಷಾತ್ರಯವಿರುವುದು. ಸಾಧ್ಯಾಕಾಂಕ್ಷೆಯೆಂದರೆ ಫಲವಿಷಯಕವಾದ ಆಕಾಂಕ್ಷೆ ಎಂದರ್ಥ. ಆದುದರಿಂದ ಫಲಭಾವನೆಗೆ ತಕ್ಕಂತೆ ಆಕಾಂಕ್ಷಿತವಾದ ಪದಾರ್ಥವು ತನ್ನಲ್ಲಿ ಅನ್ವಯಿಸಿದ ಬಳಿಕ ಅದರ ಆಕಾಂಕ್ಷೆಯು ಶಾಂತವಾಗುವುದು. ॥೨೭॥

ಮೇಲೆ ಹೇಳಿದ ಮೂರು ವಿಧವಾದ ಆಕಾಂಕ್ಷೆಗಳಲ್ಲಿ ಮೊದಲು ಫಲಾಕಾಂಕ್ಷೆಯು ಉತ್ಪನ್ನವಾಗುವುದು. ಸ್ವರ್ಗಾದಿರೂಪವಾದ ಯಾವ ಫಲವನ್ನು ಸಕಲ ಜನರೂ ಇಚ್ಛಿಸುವರೋ ಅಂತಹ ಫಲವಿಷಯಕವಾದ ಆಕಾಂಕ್ಷೆಯೇ ಭಾವನೆಗೆ ಉಂಟಾಗುವುದು. ॥೨೮॥

ತತಃ ಪರಂ ತತ್ಫಲಂ ಚ ಸ್ವಾರಾಜ್ಯಂ ಪ್ರಾಜ್ಯಮಿತ್ಯಪಿ ।
ತೇನೈವ ಸಫಲಾಕಾಂಕ್ಷಾ ಶಾಂತಾ ಭವತಿ ವಸ್ತುತಃ ॥೨೯॥

ತತ್ಫಲೇ ನಿಶ್ಚಿತೇ ಪಶ್ಚಾತ್ಕೇನೇತಿ ಕರಣೇ ಪರಂ ।
ಆಕಾಂಕ್ಷಾ ಜಾಯತೇ ಸಾಪಿ ಶಾಂತಾ ಸ್ಯಾತ್ಕರಣಾರ್ಪಣೇ ॥೩೦॥

---

ಈರೀತಿಯಲ್ಲಿ ಫಲಭಾವನೆಗೆ ಫಲಾಕಾಂಕ್ಷೆಯು ಉಂಟಾಗುತ್ತಿರಲು ಶ್ರೇಷ್ಠವಾದ ಸ್ವಾರಾಜ್ಯವೆಂಬ ಫಲವು ಭಾವನೆಯಲ್ಲಿ ಅನ್ವಯಿಸುವುದು. ಎಂದರೆ ಕರ್ಮಕಾಂಡದಲ್ಲಿ "ರಾಜಾ ಸ್ವಾರಾಜ್ಯಕಾಮೋ ರಾಜಸೂಯೇನ ಯಜೇತ" ಎಂಬ ಒಂದಾನೊಂದು ಕರ್ಮವಿಧಾಯಕವಾದ ವಾಕ್ಯವಿರುವುದು. ಈ ವಾಕ್ಯದಲ್ಲಿ "ಯಜೇತ" ಎಂಬ ಕ್ರಿಯಾಪದವು ಕಾಣುವುದು. ಅದರಲ್ಲಿ ಯಜ್ ಮತ್ತು ತ ಎಂಬ ಎರಡು ಅಂಶಗಳಿರುವುವು. ಅವುಗಳಲ್ಲಿ ಮೊದಲನೆಯದಕ್ಕೆ ಪ್ರಕೃತಿ ಎಂದೂ, ಎರಡನೆಯದಕ್ಕೆ ಪ್ರತ್ಯಯವೆಂದೂ ಹೆಸರು. ಯಜ್ ಎಂಬ ಧಾತುವು ಸಾಮಾನ್ಯ ರೂಪದಿಂದ "ಯಾಗ" ಎಂಬ ಕ್ರಿಯೆಯನ್ನು ಬೋಧಿಸುವುದು. "ತ" ಎಂಬ ಪ್ರತ್ಯಯವು ಫಲಭಾವನೆಯನ್ನು ಬೋಧಿಸುವುದು. ಈರೀತಿಯಲ್ಲಿ ಪ್ರತ್ಯಯವು ಫಲಭಾವನೆಯನ್ನು ಬೋಧಿಸುತ್ತಿರಲು ಆ ಭಾವನೆಗೆ ಈ ಹಿಂದೆ ಹೇಳಿರುವ ಸಾಧ್ಯಾಕಾಂಕ್ಷೆಯೇ ಮುಂತಾದ ಮೂರು ಆಕಾಂಕ್ಷೆಗಳು ಉಂಟಾಗುವುವು. ಆಕಾಂಕ್ಷೆ ಎಂದರೆ, ಅಪೇಕ್ಷೆ ಎಂದು ಸಾಮಾನ್ಯವಾದ ಅರ್ಥ. ಆ ಆಕಾಂಕ್ಷೆಗಳಲ್ಲಿ ಮೊದಲನೆಯದಾದ ಸಾಧ್ಯಾಕಾಂಕ್ಷೆಯು ಉತ್ಪನ್ನವಾಗಲು ಸ್ವಾರಾಜ್ಯಕಾಮಃ ಎಂಬ ಸಮಸ್ತ ಪದದಲ್ಲಿ ಸೇರಿರುವ ಸ್ವಾರಾಜ್ಯವೆಂಬ ಫಲವು ಭಾವನೆಯಲ್ಲಿ ಅನ್ವಯಿಸುವುದು. ಫಲವು ಅನ್ವಯಿಸಿದ ಬಳಿಕ ಭಾವನೆಗೆ ಉತ್ಪನ್ನವಾದ ಆಕಾಂಕ್ಷೆಯು ಶಾಂತವಾಗುವುದು. ಭಾವನೆ ಎಂದರೆ ಕೃತಿ ಅಥವಾ ಪ್ರಯತ್ನ ಎಂದರ್ಥ. ॥೨೯॥

ಫಲವು ಭಾವನೆಯಲ್ಲಿ ಅನ್ವಯಿಸಿ "ಇದೇ ಫಲವು" ಎಂದು ನಿಶ್ಚಯವಾಗಿ ತಿಳಿದ ಬಳಿಕ ಭಾವನೆಯು ಸಾಧನವನ್ನು ಅಪೇಕ್ಷಿಸುವುದು. ಹೀಗೆ ಸಾಧನಾಕಾಂಕ್ಷೆಯು ಉಂಟಾಗಲು, ಸಾಧನವು ಭಾವನೆಯಲ್ಲಿ ಅನ್ವಯಿಸುವುದು. ಅಲ್ಲಿಗೆ ಭಾವನೆಗೆ ಉಂಟಾದ ಆ ಸಾಧನಾಕಾಂಕ್ಷೆಯು ಶಾಂತವಾಗುವುದು. ॥೩೦॥

ಫಲಸ್ಯ ತಸ್ಯ ಕರಣಂ ಶಿವಾರಾಧನಮಿತ್ಯಪಿ ।
ಶಂಕರಾರಾಧನೇನೇತಿ ಜ್ಞಾತಮೇವ ತೃತೀಯಯಾ ॥೩೧॥

ತೃತೀಯಾ ಕರಣಂ ವಕ್ತುಂ ಸಮರ್ಥಾ ತು ತಯಾ ವಿನಾ ।
ಜ್ಞಾತುಂ ನ ಶಕ್ಯತೇ ತಸ್ಯ ಬೋಧಕಂ ಚಾನ್ಯದತ್ರ ನ ॥೩೨॥

ತದ್ಬೋಧನಾರ್ಥನಿರ್ಮಾಣಂ ತಸ್ಯಾಸ್ತೇನ ತದೀಪ್ಸಿತಂ ।
ಕರಣಂ ಚ ಪ್ರಾಪ್ತಮೇತಿ ತದಾಕಾಂಕ್ಷಾ ಕ್ಷಯಂ ಗತಾ ॥೩೩॥

ಕರಣೇಽವಗತೇ ಪಶ್ಚಾತ್ಕಥಮಿತ್ಯಪಿ ಜಾಯತೇ ।
ಆಕಾಂಕ್ಷಾ ಸಾ ತು ಸರ್ವೇಷಾಮಂಗಾನಾಮೇಕದಾ ಮಿತಾ ॥೩೪॥

---

ಪ್ರಕೃತದಲ್ಲಿ "ಶಿವಲೋಕಪ್ರಾಪ್ತಿರೂಪವಾದ ಫಲಕ್ಕೆ ಶಿವನ ಆರಾಧನೆಯೇ ಸಾಧನವಾಗಿರುವುದು. ತೃತೀಯಾವಿಭಕ್ತಿಯು ಸಾಧನವನ್ನು ಬೋಧಿಸುವುದು. ಇಲ್ಲಿ "ಶಂಕರಾರಾಧನೇನ" ಎಂಬ ಪದದಲ್ಲಿ ತೋರುವ ತೃತೀಯಾ ವಿಭಕ್ತಿಯು ಶಿವಲೋಕಪ್ರಾಪ್ತಿರೂಪವಾದ ಫಲಕ್ಕೆ ಶಿವಾರಾಧನೆಯೇ ಸಾಧನವಾಗಿರುವುದು" ಎಂಬ ಅಂಶವನ್ನು ವ್ಯಕ್ತಪಡಿಸುವುದು. ॥೩೧॥

ತೃತೀಯಾವಿಭಕ್ತಿಯು ಸಾಧನವನ್ನು ತಿಳಿಯಪಡಿಸುವುದರಲ್ಲಿ ಸಮರ್ಥವಾಗಿರುವುದು. ಆ ವಿಭಕ್ತಿಯ ಸಹಾಯದಿಂದಲೇ ಸಾಧನವನ್ನು ಸುಲಭವಾಗಿ ಗ್ರಹಿಸಬಹುದು. ಪ್ರಕೃತಸ್ಥಳದಲ್ಲಿ ತೃತೀಯಾ ವಿಭಕ್ತಿಯನ್ನೊಂದನ್ನು ಬಿಟ್ಟು, ಸಾಧನವನ್ನು ತಿಳಿಯಪಡಿಸುವ ಇತರ ಯಾವ ವಿಭಕ್ತಿಯೂ ತೋರುವುದಿಲ್ಲ. ॥೩೨॥

ಯಾವ ಪದದ ಮೇಲೆ, ತೃತೀಯಾ ವಿಭಕ್ತಿಯು ಬಂದಿರುವುದೋ ಆ ಶಬ್ದದ ಅರ್ಥವೇ ಫಲಭಾವನೆಯಿಂದ ಅಪೇಕ್ಷಿಸಲ್ಪಟ್ಟ ಸಾಧನವಾಗಿರುವುದು. ತನ್ನಿಂದ ಅಪೇಕ್ಷಿಸಲ್ಪಟ್ಟ, ಆ ಸಾಧನವು ತನ್ನೊಡನೆ ಅನ್ವಯವನ್ನು ಹೊಂದುತ್ತಿರಲು, ಆಗ ತನ್ನ ಇಷ್ಟಾರ್ಥವು ನೆರವೇರಿದಂತಾಗಿ ಸಾಧನಾಕಾಂಕ್ಷೆಯು ಶಾಂತವಾಗುವುದು. ॥೩೩॥

ಸಾಧನಾಕಾಂಕ್ಷೆಯಿಂದ ಸಾಧನವು ತಿಳಿದುಬರಲು ಬಳಿಕ "ಅದು ಹೇಗೆ" ಎಂದು ಕಥಂಭಾವಾಕಾಂಕ್ಷೆಯು ಉತ್ಪನ್ನವಾಗುವುದು. ಎಂದರೆ ಲೋಕದಲ್ಲಿ ಯಾವುದಾದರೂ ಒಂದು ಕಾರ್ಯವನ್ನು ಸಾಧಿಸುವುದರಿಂದ ಈ ಫಲವು ಉತ್ಪನ್ನವಾಗುವುದು. ಎಂದರೆ ಲೋಕದಲ್ಲಿ ಯಾವುದಾದರೂ ಒಂದು ಕಾರ್ಯವನ್ನು

ದೃಷ್ಟ್ವಾ ಕೋಟೀನ(?) ನಾಂಗಾನಾಂ ಉಪಾದಾನಂ ಯತಸ್ತದಾ ।
ಸಕೃದೇವ ತದಾಕಾಂಕ್ಷಾ ಕಥಮಿತ್ಯೇವ ಜಾಯತೇ ॥೩೫॥

ತತಃ ಪರಂ ವಿಶೀರ್ಣಾಸ್ತೇ ತದಂಗವಿಧಯಃ ಪರಂ ।
ಪ್ರಧಾನಭಾವನಾಮೇವ ಪ್ರವಿಶಂತಿ ತದಿಚ್ಛಯಾ ॥೩೬॥

ಉತ್ಪಶ್ಯಂತ್ಯಂಗವಿಧಯಃ ಕ್ವಾಸ್ಮದ್ಗ್ರಾಹಕ ಇತ್ಯಪಿ ।
ಏವಮಾಗಾಸಿ ವಿಧಯಃ ತದಂಗವಿಧಯೋಽಪಿ ಹಿ ॥೩೭॥

---

ಸಾಧಿಸುವುದರಿಂದ ಈ ಫಲವು ಉತ್ಪನ್ನವಾಗುವುದು. ಎಂದು ನಮಗೆ ತಿಳಿದ ಬಳಿಕ ಆ ಫಲವನ್ನು ಹೊಂದುವ ಸಾಧನವು ಯಾವುದು ಎಂಬ ಜಿಜ್ಞಾಸೆಯು ಹುಟ್ಟು ವುದು. ಆ ಸಾಧನವು ತಿಳಿದ ಬಳಿಕ ಈ ಸಾಧನದಿಂದ ಫಲವನ್ನು ಪಡೆಯುವ ಬಗೆ ಹೇಗೆ ಎಂಬ ಜಿಜ್ಞಾಸೆಯು ತೋರುವುದು. ಇದನ್ನೇ ಕಥಂಭಾವಾಕಾಂಕ್ಷೆ, ಅಥವಾ ಇತಿಕರ್ತವ್ಯತಾಕಾಂಕ್ಷೆ ಎಂದು ತಾಂತ್ರಿಕರು ವ್ಯವಹರಿಸುವರು. ಅದರಂತೆಯೇ ವೈದಿಕಸ್ಥಲದಲ್ಲಿ ಫಲಭಾವನೆಗೆ ಮೇಲೆ ಹೇಳಿದ ಕಥಂಭಾವಾಕಾಂಕ್ಷೆಯು ಹುಟ್ಟೆ ಪ್ರಕೃತಕಾರ್ಯದ ಸನ್ನಿಧಿಯಲ್ಲಿ ಪಠಿತವಾಗಿರುವ ಅಂಗಗಳು ಭಾವನೆಯೊಂದಿಗೆ ಸಂಬಂಧಿಸಿ, ಭಾವನೆಗೆ ಉಂಟಾಗಿರುವ ಆ ಕಥಂಭಾವಾಕಾಂಕ್ಷೆಯನ್ನು ಹೋಗಲಾ ಡಿಸುವುವು. ॥೩೪॥

ಶಿವಾರಾಧನೆಗೆ ಅತ್ಯಗತ್ಯವಾಗಿ ಕಂಡುಬರುವ ಅಂಗಕರ್ಮಗಳಿಂದ ಆ ಕಥಂ ಭಾವಾಕಾಂಕ್ಷೆಯು ಪರ್ಯಾಪ್ತವಾಗುವುದಿಲ್ಲ. ಒಂದುವೇಳೆ ಉಪಾದಾನಕಾರಣತ್ವೇನ ತಿಳಿದು ಬಂದ ಇತರ ಕಾರಣಗಳಿಂದಲೂ ಇತಿಕರ್ತವ್ಯತಾಕಾಂಕ್ಷೆಯು ಶಾಂತವಾಗು ವುದಿಲ್ಲ. ॥೩೫॥

ಅಂಗಗಳೆಲ್ಲವೂ ಪ್ರಧಾನಭಾವನೆಯಾದ ಫಲಭಾವನೆಯಲ್ಲಿ ಸಂಬಂಧಿಸಿ, ಅದಕ್ಕೆ ಉಂಟಾಗಿದ್ದ ಕಥಂಭಾವಾಕಾಂಕ್ಷೆಯನ್ನು ಹೋಗಲಾಡಿಸಿದ ಬಳಿಕ ಪ್ರತ್ಯೇಕ ಪ್ರತ್ಯೇಕವಾಗಿ ತೋರಿಬರುವ ಆ ಅಂಗವಿಧಿಗಳು, ಪ್ರಕರಣದ ಮಹಿಮೆ ಯಿಂದ ಪ್ರಧಾನಭಾವನೆಯೊಂದಿಗೆ ಸೇರಿ ಏಕವಾಕ್ಯತೆಯನ್ನುಂಟುಮಾಡುವುವು. ॥೩೬॥

ಅಂಗವಿಧಿಗಳಿಗೆ "ತಮಗೆ ವಿನಿಯೋಗವೆಲ್ಲಿ" ಎಂಬ ಆಕಾಂಕ್ಷೆಯು ಉತ್ಪನ್ನವಾಗುವುದು. ಹೀಗೆಯೇ ಅಂಗಗಳೂ ಸಹ ತಮಗೆ ಎಲ್ಲಿ ವಿನಿಯೋಗ ಎಂಬುದನ್ನು ಅಪೇಕ್ಷಿಸುತ್ತವೆ. ॥೩೭॥

ಅಂಗಾನ್ಯವಾಂತರಾಪೂರ್ವದ್ವಾರಮಾಸಾದ್ಯ ಕೇವಲಂ ।
ಪರಮಾಪೂರ್ವಸಂಪತ್ತಿಹೇತುಭೂತಾನಿ ವಸ್ತುತಃ ॥೩೮॥

ತತ್ರಾದ್ಯಂ ಸಾಧನಂ ತಾವತ್ಫಲೇಚ್ಛಾ ಕರ್ತುರನ್ಯಥಾ ।
ತಸ್ಯ ಕರ್ತೃತ್ವನಿಷ್ಪತ್ತಿರ್ವಿನಾ ತು ನ ಫಲೇಚ್ಛಯಾ ॥೩೯॥

ಫಲೇಚ್ಛಯಾ ವಿರಕ್ತಸ್ಯ ಕರ್ಮಣ್ಯುದ್ಯಮ ಏವ ನ ।
ತತಃ ಕರ್ಮಪರಿತ್ಯಾಗೇ ವಿಧಿಃ ಕುಂಠಿತ ಏವ ಹಿ ॥೪೦॥

ಕಿಂ ಚ ಯದ್ವಿಹಿತಂ ಕರ್ಮ ಶಕ್ಯಂ ಚೇತ್ತ್ಯಜ್ಯತೇ ತದಾ ।
ತತ್ತ್ಯಾಗೇನೈವ ನರಕೋ ಭವಿಷ್ಯತಿ ನ ಸಂಶಯಃ ॥೪೧॥

ದೇಹಾತ್ಮವಾದಿನಃ ಕೇಚಿದ್ವಿಹಿತಾಕರಣಾತ್ಪರಂ ।
ನರಕಾವಾಸಮಾಸಾದ್ಯ ತಿಷ್ಠಂತಿ ಕ್ಲೇಶಪೂರ್ವಕಂ ॥೪೨॥

---

ಅಂಗಗಳು ಉತ್ಪತ್ತ್ಯಪೂರ್ವವೆಂಬ ಅದೃಷ್ಟವಿಶೇಷವನ್ನು ಹುಟ್ಟಿಸಿ, ಬಳಿಕ ಆ ಉತ್ಪತ್ತ್ಯಪೂರ್ವದ ಮೂಲಕ ಪರಮಾಪೂರ್ವವೆಂಬ ಅದೃಷ್ಟವನ್ನು ಉಂಟು ಮಾಡುವುದರಲ್ಲಿ ಕಾರಣವಾಗುತ್ತವೆ. ॥೩೮॥

ಹಿಂದೆ ಹೇಳಿದ ಉತ್ಪತ್ತ್ಯಪೂರ್ವಪರಮಾಪೂರ್ವಗಳಲ್ಲಿ, ಮೊದಲನೆಯದಾದ ಉತ್ಪತ್ತ್ಯಪೂರ್ವವು, ಪರಮಾಪೂರ್ವಕ್ಕೆ ಸಾಧನವಾಗಿರುತ್ತದೆ. ಯಜಮಾನನಿಗೆ ಫಲದಲ್ಲಿ ಇಚ್ಛೆಯು ಇರಬೇಕು. ಅದಿಲ್ಲದಿದ್ದರೆ, ಅವನಿಗೆ ಕರ್ತೃತ್ವವೇ ಸಂಭವಿಸಲಾರದು. ॥೩೯॥

ಫಲದಲ್ಲಿ ಇಚ್ಛೆಯಿಲ್ಲದಿರುವವನಿಗೆ, ಕರ್ಮದಲ್ಲಿ ಪ್ರವೃತ್ತಿಯೇ ಉಂಟಾಗುವುದಿಲ್ಲ. ಈ ಪ್ರಕಾರವಾಗಿ ಅವನು ಕರ್ಮವನ್ನೇ ಪರಿತ್ಯಜಿಸುತ್ತಿರಲು, ಕರ್ಮಗಳನ್ನು ಬೋಧಿಸುವ ವಿಧಿಗಳು ಹೀನಬಲವುಳ್ಳವುಗಳಾಗುವುವು. ॥೪೦॥

ಇದಲ್ಲದೇ, ವೇದವಿಹಿತವಾದ ಕರ್ಮವನ್ನು ಆಚರಿಸಲು ಶಕ್ತಿಯಿದ್ದರೂ ಅದನ್ನು ಪರಿತ್ಯಜಿಸಿದರೆ ಅದರಿಂದ ನರಕವೇ ಪ್ರಾಪ್ತವಾಗುವುದು. ಇದರಲ್ಲಿ ಸಂದೇಹವಿಲ್ಲ. ॥೪೧॥

ಹೀಗಿರುತ್ತಿರಲು, ಶರೀರವ್ಯತಿರಿಕ್ತನಾಗಿ, ಜನ್ಮಾಂತರದಲ್ಲಿ ದೊರಕಬಹುದಾದ ಸ್ವರ್ಗಾದಿರೂಪಫಲವನ್ನು ಅನುಭವಿಸುವ ಆತ್ಮನೊಬ್ಬನು ಪ್ರತ್ಯೇಕ ಇಲ್ಲವೆಂದೂ,

ಮಹಾಕ್ಲೇಶಾನುಬದ್ಧಾಯ ವಿಹಿತಂ ತ್ಯಜ್ಯತೇ ಜನೈಃ ।
ಅಶ್ರದ್ಧಯಾ ತತಸ್ತೇಷಾಂ ನರಕೇಷು ಸದಾ ಸ್ಥಿತಿಃ ॥೪೩॥

ಕೃತೇ ತ್ವವಶ್ಯಂ ವಿಹಿತೇ ಕರ್ಮಣಿ ಪ್ರಿಯಮಾತ್ಮನಃ ।
ಭವಿಷ್ಯತೀತಿ ಯತ್‌ಜ್ಞಾನಂ ತದ್ವಿಶ್ವಾಸ ಇತಿ ಶ್ರುತಃ ॥೪೪॥

ತಾದೃಶಜ್ಞಾನಸಂಪನ್ನಃ ಕರ್ಮಣ್ಯಧಿಕೃತಸ್ತತಃ ।
ತಸ್ಮಿನ್ಯಸ್ಯಾಸ್ತಿ ವೈರಾಗ್ಯಂ ಸ ನಿರ್ಭಾಗ್ಯೋ ವಿಶೇಷತಃ ॥೪೫॥

ಶಿವಾರ್ಚನೇ ಮನ್ಯೈತಾವದ್ವಾಂಛಿತಂ ಸರ್ವಥಾ ಫಲಂ ।
ಭವಿಷ್ಯತೀತಿ ವಿಶ್ವಸ್ಯ ಭಾಗ್ಯವಾನಧಿತಿಷ್ಠತಿ ॥೪೬॥

---

ಶರೀರವೇ ಆತ್ಮವೆಂದೂ ಭ್ರಾಂತರಾಗಿ ಚಾರ್ವಾಕರೇ ಮುಂತಾದ ಕೆಲವು ನಾಸ್ತಿಕರು, ಇಹಲೋಕದಲ್ಲಿ ವೇದವಿಹಿತವಾದ ಕರ್ಮಗಳನ್ನು ಅನುಷ್ಠಾನಮಾಡದೆ ದೇಹ ಪರಿತ್ಯಾಗದ ತರುವಾಯ, ನರಕಲೋಕವನ್ನು ಹೊಂದಿ ಅಲ್ಲಿ ವಿವಿಧವಾದ ಕಷ್ಟ ಪರಂಪರೆಗಳನ್ನು ಅನುಭವಿಸುವರು. ॥೪೨॥

ಅಂತಹ ನಾಸ್ತಿಕಜನರು ದಾರುಣವಾದ ಕಷ್ಟಪರಂಪರೆಗೆ ಕಾರಣವಾದ ನರಕಲೋಕವನ್ನು ಪಡೆಯುವುದಕ್ಕೋಸ್ಕರವೇ, ವೇದವಿಹಿತವಾದ ಕರ್ಮವನ್ನು ಪರಿತ್ಯಜಿಸುವರೆಂದು ಹೇಳಿದರೆ ಅದು ತಪ್ಪಾಗಲಾರದು. ಆದುದರಿಂದ ಅವರಿಗೆ ಕರ್ಮಾನುಷ್ಠಾನದಲ್ಲಿ ಅಶ್ರದ್ಧೆಯುಂಟಾಗಿ ಬಳಿಕ ಅವರು ನಿರಂತರವೂ ನರಕ ದಲ್ಲಿಯೇ ವಾಸಿಸುವರು. ॥೪೩॥

ವೇದವಿಹಿತವಾದ ಕರ್ಮವನ್ನು ಆಚರಿಸಿದರೆ, ತನಗೆ ಖಂಡಿತವಾಗಿಯೂ ಸುಖವುಂಟಾಗುವುದು, ಎಂದು ತಿಳಿದರೆ ಆ ತಿಳಿವಳಿಕೆಯನ್ನೇ ವಿಶ್ವಾಸ ಅಥವಾ ನಂಬಿಕೆ ಎಂದು ಹೇಳುವರು. ॥೪೪॥

ಅಂತಹ ವಿಶ್ವಾಸದಿಂದ ಯುಕ್ತನಾದರೆ ಅವನು ಆ ಕರ್ಮದಲ್ಲಿ ಅಧಿಕಾರಿ ಯೆಂದೆನಿಸಿಕೊಳ್ಳುವನು. ಯಾವನು, ಕರ್ಮಾನುಷ್ಠಾನದಲ್ಲಿ ವಿರಕ್ತನಾಗುವನೋ, ಅವನನ್ನು ಭಾಗ್ಯರಹಿತನೆಂದೇ ಹೇಳಬಹುದು. ॥೪೫॥

ಪುಣ್ಯಶಾಲಿಯಾದವನು, "ಶಿವನನ್ನು ಪೂಜಿಸುವುದರಿಂದ ನನಗೆ ಖಂಡಿತ ವಾಗಿಯೂ ಅಭೀಷ್ಟ ಸಿದ್ಧಿಯುಂಟಾಗುವುದು" ಎಂಬ ನಂಬಿಕೆಯನ್ನಿಟ್ಟು, ಶಿವನನ್ನು ಆರಾಧಿಸುವನು. ॥೪೬॥

ನೈಮಿತ್ತಿಕಂ ಚ ನಿತ್ಯಂ ಚ ಕಾಮಂ ಚೇತಿ ತ್ರಿಧಾ ಮತಂ ।
ಕರ್ಮತ್ರಯಫಲಂ ಕಾಮ್ಯೇ ನಾನ್ಯತ್ರೇತಿ ವದಂತ್ಯಪಿ ॥೪೭॥

ತೈಸ್ತಾವದ್ಭಾವನಾಗಂಧಗಂಧೋಽಸ್ಯಾಘ್ರಾತ ಏವ ನ ।
ವಿಧಿಸ್ವರೂಪಜ್ಞಾನೇನ ವಿನಾ ತೇ ಪ್ರಲಯಂತ್ಯಪಿ ॥೪೮॥

ಅಂಧ ಏವ ವಿಧಿಃ ಕಿಂ ಚ ಫಲಾಭಾವೇ ಪ್ರವರ್ತನಾ ।
ಕಥಮುಭ್ಯುತ್ಥಿತಾ ತೇನ ಸಾ ತ್ವಂಶತ್ರಯಮೇಷ್ಟಿತಾ ॥೪೯॥

ಆದ್ಯಾಂಶಃ ಫಲಮೇವೇತಿ ತದಾಹತ್ಯ ಶ್ರುತಂ ಕ್ವಚಿತ್ ।
ಕ್ವಚಿತ್ಕಲ್ಪ್ಯಂ ಕಲ್ಪನಾಪಿ ವಿಧ್ಯುತ್ಥಾನಾರ್ಥಮೇವ ಹಿ ॥೫೦॥

---

ಕರ್ಮವು, ನೈಮಿತ್ತಿಕ, ನಿತ್ಯ, ಕಾಮ್ಯ, ಎಂದು ಮೂರು ಬಗೆಯಾಗಿ ವಿಂಗಡಿಸಲ್ಪಟ್ಟಿರುವುದು. ಈ ಮೂರು ಕರ್ಮಗಳಿಂದ ಯಾವ ಯಾವ ಬಗೆಯ ಫಲಗಳುಂಟಾಗುವುವೋ, ಅವೆಲ್ಲವೂ ಕಾಮ್ಯವನ್ನೊಂದನ್ನು ಆಚರಿಸುವುದರಿಂದಲೇ ಉಂಟಾಗುವುವೆಂದು ತಿಳಿದವರು ಹೇಳುವರು. ಕಾಮ್ಯಕರ್ಮವನ್ನು ಬಿಟ್ಟು, ಇನ್ನಿತರ ಯಾವ ಕರ್ಮವನ್ನಾಚರಿಸಿದರೂ ಮೇಲೆ ಹೇಳಿದ ಸಕಲ ಫಲಗಳು ಉಂಟಾಗಲಾರವು. ॥೪೭॥

ಆ ನಾಸ್ತಿಕರಾದರೋ ಭಾವನೆಯ ಸ್ವರೂಪವನ್ನೇ ತಿಳಿದುಕೊಂಡಿರುವುದಿಲ್ಲ. ಹೀಗೆ, ವಿಧಿಸ್ವರೂಪವನ್ನು ತಿಳಿದುಕೊಳ್ಳದೇ, ಅವರು ವ್ಯರ್ಥವಾಗಿ ದುರ್ದೆಶೆಯನ್ನು ಹೊಂದುವರು. ॥೪೮॥

ಕರ್ಮಗಳಿಗೆ ಫಲವೇ ಇಲ್ಲದಿದ್ದರೆ, ವಿಧಿಯೇ ನಿರರ್ಥಕವಾಗುವುದು. ಏಕೆಂದರೆ ಫಲವು ಇಲ್ಲದಿದ್ದರೆ ವಿಧ್ಯರ್ಥವಾದ ಭಾವನೆಗೆ ಪ್ರವರ್ತಕತ್ವವೇ ಸಂಭವಿಸುವುದಿಲ್ಲ. ಆದುದರಿಂದ ವಿಧ್ಯರ್ಥವಾದ ಭಾವನೆಗೆ ಪ್ರವರ್ತಕತ್ವವು ಸಂಭವಿಸಬೇಕಾದರೆ, ಕರ್ಮಗಳಿಗೆ ಅವಶ್ಯವಾಗಿ ಫಲವು ಇದ್ದೇಇರಬೇಕು. ಆ ಭಾವನೆಯು ಹಿಂದೆ ಹೇಳಿದ ರೀತಿಯಲ್ಲಿ ಸಾಧ್ಯ, ಸಾಧನ, ಇತಿಕರ್ತವ್ಯತಾ ಎಂಬ ಮೂರು ಅಂಶಗಳನ್ನು ಅಪೇಕ್ಷಿಸುತ್ತದೆ. ॥೪೯॥

ಅವುಗಳಲ್ಲಿ ಮೊದಲನೆಯ ಅಂಶವೇ ಫಲವೆಂದೆನಿಸಿಕೊಳ್ಳುವುದು. ಅದೂ ಸೇರಿ, ಅಂಶತ್ರಯಗಳಾಗುವುವು. ಕೆಲವು ವಾಕ್ಯಗಳಲ್ಲಿ ಆ ಫಲವು ಶ್ರುತವಾಗಿರುತ್ತದೆ. ಇನ್ನು ಕೆಲವು ವಾಕ್ಯಗಳಲ್ಲಿ ಶ್ರುತವಾಗಿಲ್ಲದಿದ್ದರೂ ಅಲ್ಲಿ ಫಲವು ಕಲ್ಪಿಸಲ್ಪಡುತ್ತದೆ.

ವಿಧಿಸ್ತು ಫಲಮಾದಾಯ ಪ್ರಥಮಂ ಸಂಪ್ರವರ್ತತೇ ।
ತತ್ಕರ್ಮಮಾತ್ರಸಾಪೇಕ್ಷಂ ಕರ್ಮ ತೇನ ವಿನಾ ಕಥಂ ॥೫೧॥

ವಿಭೂತ್ಯುದ್ಧೂಲನಾದೀನಾಂ ನಿತ್ಯಾನಾಮಪಿ ಕರ್ಮಣಾಂ ।
ಫಲಮುಕ್ತಂ ಪೃಥಕ್ತೇಷಾಂ ನಿತ್ಯತ್ವೋಕ್ತಿಪುರಃಸರಂ ॥೫೨॥

ಫಲಾನಿ ಮಂತ್ರಲಿಂಗೇನಾಪ್ಯುಕ್ತಾನ್ಯೇವ ಹಿ ಕಾನಿ ಚಿತ್ ।
ಪ್ರಧಾನಬೋಧಕೈರ್ವಾಕ್ಯೈಃ ಫಲಂ ಯದಿ ನ ಬೋಧಿತಂ ॥೫೩॥

ಅಂಗವಾಕ್ಯೋಕ್ತಮಪ್ಯೇಕಂ ಫಲಂ ಯೋಗ್ಯಂ ಪ್ರಗೃಹ್ಯತೇ ।
ಯದಿ ತತ್ರಾಪಿ ನ ಫಲಂ ತದಾ ತತ್ಕಲ್ಪ್ಯಮೇವ ಹಿ ॥೫೪॥

---

ಪ್ರಯೋಜನವುಳ್ಳ ಕರ್ಮವನ್ನು ಬೋಧಿಸುವುದು ವಿಧಿಯ ಸ್ವಭಾವವಾಗಿರುತ್ತದೆ. ಆದುದರಿಂದ ವಿಧಿಗೆ ಸಫಲವಾದ ಕರ್ಮವನ್ನು ಬೋಧಿಸುವ ಆ ಸ್ವಭಾವಾನುಗುಣವಾಗಿಯೇ ಫಲವನ್ನು ಅವಶ್ಯವಾಗಿ ಕಲ್ಪಿಸುವುದಾಗಿರುತ್ತದೆ. ॥೫೦॥

ಮೊಟ್ಟಮೊದಲು ವಿಧಿಯು ಫಲವನ್ನು ಅಪೇಕ್ಷಿಸಿ, ಫಲಸಹಿತವಾಗಿ ಪುರುಷನನ್ನು ಕರ್ಮದಲ್ಲಿ ಪ್ರವರ್ತಿಸುವಂತೆ ಮಾಡುತ್ತದೆ. ಫಲವಾದರೋ ಕರ್ಮವನ್ನಪೇಕ್ಷಿಸುತ್ತದೆ. ಏಕೆಂದರೆ ಫಲವು ಸಿದ್ಧವಾಗಬೇಕಾದರೆ ಕರ್ಮವನ್ನು ಆಚರಿಸಬೇಕು. ಅದಿಲ್ಲದಿದ್ದರೆ ಫಲವು ಹೇಗೆ ತಾನೇ ಉಂಟಾದೀತು? ॥೫೧॥

ಭಸ್ಮಧಾರಣೆಯೇ ಮುಂತಾದ ಕರ್ಮಗಳು ನಿತ್ಯಕರ್ಮಗಳಾಗಿರುವುವೆಂಬುದನ್ನು ತಿಳಿಸಿ, ಬಳಿಕ ನಿತ್ಯಕರ್ಮಗಳಾದ ಅವುಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಫಲವನ್ನೂ ಸಹ ಹೇಳಿರುವರು. ॥೫೨॥

ಪ್ರಧಾನಕರ್ಮವನ್ನು ಬೋಧಿಸುವ ವಾಕ್ಯಗಳು ಫಲವನ್ನು ಬೋಧಿಸದಿದ್ದಲ್ಲಿ ಮಂತ್ರದಲ್ಲಿರುವ ಅರ್ಥಸಾಮರ್ಥ್ಯದಿಂದ ಕೆಲವು ಸ್ಥಳಗಳಲ್ಲಿ ಫಲವು ತಿಳಿದುಬರುತ್ತದೆ. ॥೫೩॥

ಕೆಲವು ಸ್ಥಳಗಳಲ್ಲಿ ಅಂಗಬೋಧಕವಾದ ವಾಕ್ಯಗಳಿಂದಲೂ ಸಹ ಫಲವು ತಿಳಿದುಬರುವುದುಂಟು. ಯಾವ ಸ್ಥಳದಲ್ಲಿ ಅಂಗವಾಕ್ಯಗಳಿಂದಲೂ ಫಲವು ತಿಳಿದುಬರುವುದಿಲ್ಲವೋ ಆಗ ಅಲ್ಲಿ ಯೋಗ್ಯವಾದ ಫಲವು ಹೊಸದಾಗಿ ಕಲ್ಪಿಸಲ್ಪಡುತ್ತದೆ. ॥೫೪॥

ರಾತ್ರಿಸತ್ರೇ ಫಲಂ ತಾವದಾಹತ್ಯ ಶ್ರುತಮೇವ ನ ।
ಪ್ರಧಾನಬೋಧಕೇ ವಾಕ್ಯೇ ನ ವಾಕ್ಯೇಽಪ್ಯಂಗಬೋಧಕೇ ॥೫೫॥

ನೈಮಿತ್ತಿಕೇ ತು ಯೋಗ್ಯಂ ತು ಕಲ್ಪನೀಯಂ ಫಲಂ ಖಲು ।
ತಸ್ಮಾನ್ನ ಕರ್ಮ ಕುತ್ರಾಪಿ ಫಲಹೀನಂ ಶ್ರುತಂ ಚ ನ ॥೫೬॥

ಏವಂ ಚ ಪರಿಭಾಷಾಪಿ ನಿತ್ಯತ್ವಾದ್ಯವಗಾಹಿನೀ ।
ಪ್ರಧಾನಬೋಧಕೈರ್ವಾಕ್ಯೈಃ ಫಲಸ್ಯಾಶ್ರವಣಾದಿತಿ ॥೫೭॥

ಆರ್ದ್ರಾದಿಯೋಗರೂಪಸ್ಯ ನಿಮಿತ್ತಸ್ಯ ಪ್ರಸಂಜನೇ ।
ನೈಮಿತ್ತಿಕಂ ಪೂಜನಂ ತು ವಿಹಿತಂ ಫಲಸಾಧನಂ ॥೫೮॥

ಇಷ್ಟಸಾಧನತಾಜ್ಞಾನಂ ಪ್ರವರ್ತಕಮಿತಿ ಶ್ರುತಂ ।
ಸರ್ವತ್ರಾಪ್ಯವಿಶೇಷೇಣ ಕೇನ ವಾ ತನ್ನಿವಾರ್ಯತೇ ॥೫೯॥

---

ಉದಾಹರಣೆಗೆ ರಾತ್ರಿ ಸತ್ರವೆಂಬ ಕರ್ಮವನ್ನು ತೆಗೆದುಕೊಂಡರೆ ಅಲ್ಲಿ ಪ್ರಧಾನಬೋಧಕವಾದ ವಾಕ್ಯದಿಂದಲಾಗಲಿ, ಅಥವಾ ಅಂಗವಾಕ್ಯದಿಂದಲಾಗಲೀ ರಾತ್ರಿಸತ್ರವೆಂಬ ಕರ್ಮಕ್ಕೆ ಯಾವ ಫಲವೂ ಉಕ್ತವಾಗಿಲ್ಲ. ಆದುದರಿಂದ ಅಲ್ಲಿ ಅರ್ಥವಾದ ವಾಕ್ಯದಿಂದ ಸಿದ್ಧವಾದ ಫಲವನ್ನೇ ಪ್ರಕೃತಕರ್ಮದ ಫಲವನ್ನಾಗಿ ಕಲ್ಪಿಸಬೇಕಾಗಿದೆ. ॥೫೫॥

ನೈಮಿತ್ತಿಕ ಕರ್ಮದ ಸ್ಥಳದಲ್ಲಿಯೂ ಸಹ, ಆಯಾ ಕರ್ಮಕ್ಕೆ ಅನುಗುಣವಾದ ಫಲವನ್ನು ಕಲ್ಪಿಸಲೇಬೇಕು. ಆದುದರಿಂದ ಎಲ್ಲಿಯೂ ಕರ್ಮವು ಫಲರಹಿತವಾದುದೆಂಬುದು ಕೇಳಿಬರುವುದಿಲ್ಲ. ॥೫೬॥

ಇದರಂತೆಯೇ ನಿತ್ಯಕರ್ಮಗಳಿಗೂ ಸಹ ಪ್ರಧಾನಬೋಧಕವಾದ ವಾಕ್ಯಗಳಿಂದ ಯಾವ ಫಲವೂ ಬೋಧಿಸಲ್ಪಟ್ಟಿರುವುದಿಲ್ಲವಾದರೂ ಅವುಗಳಿಗೆ ಕಲ್ಪಿತವಾದ ಫಲವು ಇದ್ದೇಇರುವುದೆಂಬ ಅಂಶವನ್ನು ಮನಸ್ಸಿನಲ್ಲಿಡಬೇಕು. ॥೫೭॥

ಆರ್ದ್ರಾನಕ್ಷತ್ರದಿಂದ ಕೂಡಿರುವ ದಿವಸದಲ್ಲಿ ಪೂಜೆಯು ವಿಶೇಷವಾಗಿ ವಿಹಿತವಾಗಿದೆ. ಆದುದರಿಂದ ಆರ್ದ್ರಾಯೋಗವೆಂಬ ನಿಮಿತ್ತದಿಂದ ಪ್ರಾಪ್ತವಾಗಿರುವ ನೈಮಿತ್ತಿಕವಾದ ಆ ಕರ್ಮವು ಫಲಕ್ಕೆ ಕಾರಣವಾಗಿರುವುದು. ॥೫೮॥

ಕರ್ಮವು ಇಷ್ಟಸಾಧನವಾಗಿರುವುದು ಎಂಬ ಇಷ್ಟಸಾಧನತಾಜ್ಞಾನವು ಯಜಮಾನನನ್ನು ಕರ್ಮದಲ್ಲಿ ಪ್ರವರ್ತಿಸುವಂತೆ ಮಾಡುವುದು. ಏಕೆಂದರೆ ಫಲವು

**ನಿಯೋಗಃ ಫಲಮಿತ್ಯುಕ್ತಂ ಯೇನ ತಂ ಪ್ರತಿ ಸಂಪ್ರತಿ ।**
**ವಕ್ತವ್ಯಮುಸ್ತಿ ತೇನಾಪಿ ದೇಯಮೇವ ತದುತ್ತರಂ ॥೬೦॥**

**ನಿಯೋಗಃ ಫಲಮಿತ್ಯಾಹುಃ ಕೇಚಿತ್ತೈರಪಿ ತತ್ಫಲಂ ।**
**ಸ್ವೀಕೃತಂ ತದಸದ್ವಾ ತು ಸದ್ವಾ ತದಪಿ ಚಿಂತ್ಯತೇ ॥೬೧॥**

**ಮೌನಂ ಚೇದುತ್ತರಂ ತತ್ರ ಸ ಫಲೇನ ಬಹಿಷ್ಕೃತಃ ।**
**ನಿಯೋಗಃ ಸಫಲಂ ಕರ್ಮ ನ ಕುತ್ರಾಪಿ ಶ್ರುತಂ ಖಲು ॥೬೨॥**

**ತಸ್ಮಾತ್ಕರ್ಮಾಣಿ ಸರ್ವಾಣಿ ಸಫಲಾನಿ ಶ್ರುತಾನ್ಯಪಿ ।**
**ವಿಶಿಷ್ಯ ವೈದಿಕಂ ಕರ್ಮ ಸಫಲಂ ಶಿವಪೂಜನಂ ॥೬೩॥**

---

ಯಾರಿಗೆ ತಾನೇ ಬೇಕಾಗಿರುವುದಿಲ್ಲ? ಯಾವಾಗ ಫಲಕ್ಕೆ ಸಾಧನವಾದ ಕರ್ಮದಲ್ಲಿ ಇಷ್ಟಸಾಧನತಾಜ್ಞಾನವುಂಟಾಗುವುದೋ ಆಗ ಆ ಜ್ಞಾನದಿಂದ ಇವನಿಗೆ ಕರ್ಮದಲ್ಲಿ ಪ್ರವೃತ್ತಿಯುಂಟಾಗುವುದು. ಅದನ್ನು ತಡೆಗಟ್ಟುವವನಾರು? ॥೫೯॥

ಯಾವನು ಕರ್ಮಗಳಿಗೆ ಪ್ರೇರಣೆಯೇ ಫಲವೆಂದು ಹೇಳುವನೋ, ಅವನನ್ನು ಕುರಿತು ಪ್ರೇರಣೆಯು ಸದ್ರೂಪವೇ ಅಥವಾ ಅಸದ್ರೂಪವೇ ಎಂದು ಪ್ರಶ್ನಿಸಬೇಕು. ಅವನು ಈ ಪ್ರಶ್ನೆಗೆ ಉತ್ತರವನ್ನು ಕೊಡಬೇಕು. ॥೬೦॥

ವೈದಿಕಕರ್ಮಗಳಿಗೆ ವಿಧ್ಯರ್ಥವಾದ ಪ್ರೇರಣೆಯೇ ಪ್ರಧಾನವಾದ ಫಲವೆಂದೂ, ಸ್ವರ್ಗಾದಿರೂಪವಾದ ಫಲವು ಗೌಣವಾಗಿರುವುದೆಂದೂ, ಕೆಲವರು ಹೇಳುವರು. ಪ್ರೇರಣಾರೂಪವಾದ ಆ ಫಲವು, ಸದ್ರೂಪವಾದ ಫಲವೇ ಅಥವಾ ಅಸದ್ರೂಪವಾದ ಫಲವೇ ಎಂಬುದನ್ನು ತಿಳಿಯಬೇಕು. ॥೬೧॥

ಅವನು ಈ ಪ್ರಶ್ನೆಗೆ ತಕ್ಕ ಉತ್ತರವನ್ನು ಹೇಳಲಾರದೇ ಮೌನವನ್ನು ತಾಳಿದರೆ ಆಗ ನಿಯೋಗವು ಕರ್ಮಗಳಿಗೆ ಫಲವಾಗುವುದಿಲ್ಲವೆಂಬುದು ಸಿದ್ಧವಾಗುವುದು. ಇದಲ್ಲದೆ ವೈದಿಕಕರ್ಮಗಳಿಗೆ ನಿಯೋಗವೇ ಫಲವಾಗಿರುವುದೆಂದು ಎಲ್ಲಿಯೂ ಹೇಳಿರುವುದಿಲ್ಲ. ॥೬೨॥

ಆದುದರಿಂದ ಸಕಲ ಕರ್ಮಗಳೂ ಸಹ ಸಫಲವಾದುವಾಗಿರುವುವೆಂದು ತಿಳಿದುಬಂದರೂ ಮುಖ್ಯವಾಗಿ ವೇದವಿಹಿತವಾದ ಶಿವಪೂಜೆಯೆಂಬ ಕರ್ಮವು ಸರ್ವಥಾ ಸಫಲವಾದುದೆಂಬುದನ್ನು ಮರೆಯಕೂಡದು. ॥೬೩॥

ತತ್ರಾಂಗಾನಿ ಬಹೂನ್ಯೇವ ತೈರಂಗೈರಖಿಲೈರಪಿ ।
ನಿಷ್ಪನ್ನಂ ಕರಣಂ ತೇನ ಫಲಂ ಭವತಿ ಸರ್ವಥಾ ॥೬೪॥

ಪ್ರಧಾನೇ ತು ಫಲಾಪೇಕ್ಷಾ ಮುಖ್ಯಮಂಗಂ ತಯಾ ವಿನಾ ।
ಪ್ರವೃತ್ತಿರೇವ ನಾಸ್ತೀತಿ ಫಲಂ ತಾವದಪೇಕ್ಷಿತಂ ॥೬೫॥

ಸಾಂಗಂ ನ ಕರ್ಮಣಾ ತಾವತ್ಫಲಂ ಭವತಿ ತಸ್ಯ ತು ।
ಉತ್ಪತ್ತಿರಂಗವಿರಹೇ ಸರ್ವಥಾ ನೇತಿ ನಿಶ್ಚಿತಂ ॥೬೬॥

ಅಂಗಾನಿ ತಾವದುಚ್ಯಂತೇ ತದಂಗಾಂಗಾನ್ಯನುಕ್ರಮಾತ್ ।
ಲಿಂಗಾರ್ಚನೇನ ಕರ್ತವ್ಯಂ ಆಯುರಿತ್ಯಾದಿವಾಕ್ಯತಃ ॥೬೭॥

ಲಿಂಗಾರ್ಚನಂ ತು ಕರಣಂ ಆಯುಃ ಫಲಮಿತಿ ಸ್ಮೃತಂ ।
ತತ್ರ ಲಿಂಗಾರ್ಚನಂ ಕೇನೇತ್ಯಾಕಾಂಕ್ಷಾಪಿ ಪ್ರಜಾಯತೇ ॥೬೮॥

---

ಆ ಶಿವಾರ್ಚನೆಯಲ್ಲಿ ಅನೇಕ ಅಂಗಗಳಿರುವುವು. ಅವೆಲ್ಲವೂ ಸಹ ಶಿವಾರ್ಚನೆಯಲ್ಲಿ ಸಾಧನವಾಗಿರುವುವು. ಸಾಧನಗಳಾದ ಆ ಅಂಗಗಳಿಂದ ಖಂಡಿತವಾಗಿಯೂ ಫಲವು ಲಭಿಸಿಯೇ ಲಭಿಸುವುದು. ॥೬೪॥

ಪ್ರಧಾನಕರ್ಮದಲ್ಲಿ ಫಲಕಾಮನೆಯೇ ಪ್ರಧಾನವಾದ ಅಂಗವಾಗಿರುವುದು. ಪ್ರಧಾನಾಂಗವಾದ ಆ ಫಲಕಾಮನೆಯು ಇಲ್ಲದಿದ್ದರೆ, ಕರ್ಮಾನುಷ್ಠಾನದಲ್ಲಿ ಪ್ರವೃತ್ತಿಯೇ ಉಂಟಾಗಲಾರದು. ಆದ್ದರಿಂದ ಫಲಕಾಮನೆಯೂ ಇರಬೇಕು. ॥೬೫॥

ಕರ್ಮಾನುಷ್ಠಾನವನ್ನು ಸಾಂಗವಾಗಿ ನೆರವೇರಿಸದಿದ್ದರೆ, ಯಜಮಾನನಿಗೆ ಸಂಪೂರ್ಣವಾದ ಫಲವು ದೊರಕಲಾರದು. ಏಕೆಂದರೆ, ಅಂಗಾನುಷ್ಠಾನವನ್ನು ಮಾಡದಿದ್ದರೆ, ಸಂಪೂರ್ಣವಾದ ಫಲವೇ ಸಿದ್ಧವಾಗುವುದಿಲ್ಲ. ॥೬೬॥

ಪ್ರಕೃತದಲ್ಲಿ, ಶಿವಲಿಂಗಾರ್ಚನೆಗೆ ಸಾಧನಗಳಾದ ಅಂಗಗಳನ್ನೂ ಮತ್ತು ಅಂಗಗಳ ಅಂಗಗಳನ್ನೂ ಮತ್ತು ಅವುಗಳ ಉಪಾಂಗಗಳನ್ನೂ ಸಹ ಕ್ರಮವಾಗಿ ಹೇಳುವೆನು. "ಆಯುರಾಶಾಸ್ತೇ" ಎಂಬಿವೇ ಮೊದಲಾದ ವಾಕ್ಯಗಳನ್ನು ಪಠಿಸಿ, ಲಿಂಗಾರ್ಚನೆಯನ್ನು ಮಾಡಬೇಕಷ್ಟೆ. ॥೬೭॥

ಲಿಂಗಾರ್ಚನೆಯು ಅಲ್ಲಿ ಸಾಧನವಾಗಿಯೂ, ದೀರ್ಘವಾದ ಆಯುಃಫಲವುಳ್ಳದ್ದಾಗಿಯೂ ಇರುತ್ತದೆ. ಹೀಗಿರುವಲ್ಲಿ, ಲಿಂಗಾರ್ಚನೆಯು, ಯಾವ ಸಾಧನದಿಂದ ಸಾಧ್ಯವಾಗಿರುವುದು" ಎಂದು ಸಾಧನಾಕಾಂಕ್ಷೆಯು ಹುಟ್ಟುವುದು. ॥೬೮॥

ತದಾಕಾಂಕ್ಷಾನಿವೃತ್ತಿಸ್ತು ಬಿಲ್ವಪತ್ರಾದಿಸಾಧನೈಃ ।
ವೈರಾಗ್ಯಂ ಯದಿ ಕರ್ತುಃ ಸ್ಯಾದ್ಬಿಲ್ವಪತ್ರಾದಿಸಾಧನೈಃ ॥೬೯॥

ತದಾ ತತ್ಕರಣಸ್ಯೈವ ನಿಷ್ಪತ್ತಿರ್ನೋಪಜಾಯತೇ ।
ಧೂಪದೀಪಾದಿದಾನಂ ಚ ಧನಸಾಪೇಕ್ಷಮಿತ್ಯತಃ ॥೭೦॥

ತತೋ ಧನೇ ನ ವೈರಾಗ್ಯಂ ಕಿಂ ಚಾರ್ಜಿತಧನೈಃ ಪರಂ ।
ಶಂಕರಾರಾಧನಂ ಕುರ್ಯಾತ್ತೇನ ತತ್ಸಫಲಂ ಧನಂ ॥೭೧॥

ಪಂಚಾಮೃತಾಭಿಷೇಕಾದ್ಯಾಃ ಸರ್ವೇಽಪಿ ಧನಮೂಲಕಾಃ ।
ಧನಾಭಾವೇ ಕಥಂ ಕ್ಷೀರಂ ದಧಿಮಧ್ವಾಜ್ಯಮೇವ ವಾ ॥೭೨॥

ಸ್ನಾನಂ ಚ ವಿಹಿತಂ ಲಿಂಗೇ ಶುದ್ಧಪಕ್ವಫಲೋದಕೈಃ ।
ತತ್ರ ತಾವತ್ಫಲಪ್ರಾಪ್ತಿಃ ನ ಧನೇನ ವಿನಾ ಖಲು ॥೭೩॥

---

ಈ ರೀತಿಯಲ್ಲಿ ಸಾಧನಾಕಾಂಕ್ಷೆಯು ಉಂಟಾದರೆ, ಬಿಲ್ವಪತ್ರಾದಿ ಸಾಧನಗಳೇ ಆ ಆಕಾಂಕ್ಷೆಯನ್ನು ಶಾಂತಗೊಳಿಸುತ್ತವೆ. ಎಂದರೆ ಬಿಲ್ವಪತ್ರೆ ಮುಂತಾದ ದ್ರವ್ಯಗಳು, ಶಿವಲಿಂಗಾರ್ಚನೆಯಲ್ಲಿ ಸಾಧನಗಳೆಂದು ತಾತ್ಪರ್ಯ. ಅರ್ಚಕನಿಗೆ, ಬಿಲ್ವಪತ್ರ ಮತ್ತು ಧೂಪದೀಪಾದಿ ಸಾಧನಗಳನ್ನು ಸಂಗ್ರಹಿಸುವುದರಲ್ಲಿ, ವೈರಾಗ್ಯವು ಉಂಟಾದರೆ, ಶಿವಾರ್ಚನೆಗೆ ಉಪಯುಕ್ತವಾದ ಸಾಧನಗಳೇ ಇಲ್ಲದಂತಾಗುವುವು. ಧೂಪದೀಪಾದಿ ಸಾಮಗ್ರಿಗಳನ್ನು ಧನ ಸಹಾಯದಿಂದ ಸಂಗ್ರಹಿಸಬಹುದಾಗಿದೆ. ||೬೯-೭೦||

ಆದುದರಿಂದ, ಸಕಲ ಸಾಮಗ್ರಿಗಳನ್ನು ಒದಗಿಸುವುದರಲ್ಲಿ ಸಹಾಯಕವಾಗಿರುವ ಧನದಲ್ಲಿ ವೈರಾಗ್ಯವನ್ನು ತಾಳಬಾರದು. ಇದಲ್ಲದೇ, ತಾನು ಸಂಪಾದಿಸಿದ ಧನದಿಂದ, ಶಿವನನ್ನು ಆರಾಧಿಸಬೇಕು. ಹಾಗಾದರೆ ಆ ಧನವು ಸಾರ್ಥಕವಾಗುವುದು. ||೭೧||

ಪಂಚಾಮೃತದ ಅಭಿಷೇಕವೇ ಮುಂತಾದ ಕಾರ್ಯಗಳಿಗೆ ಧನವೇ ಕಾರಣವಾಗಿರುತ್ತದೆ. ಏಕೆಂದರೆ ಕೈಯಲ್ಲಿ ಹಣವಿಲ್ಲದಿದ್ದರೆ ಹಾಲು, ಮೊಸರು, ಜೇನು ತುಪ್ಪ, ತುಪ್ಪ ಮೊದಲಾದ ಪದಾರ್ಥಗಳನ್ನು ಸಂಪಾದಿಸುವ ಬಗೆ ಹೇಗೆ? ||೭೨||

ಶುಭ್ರವಾಗಿಯೂ, ಪಕ್ವವಾಗಿಯೂ ಇರುವ ನಾರಿಕೇಳವೇ ಮುಂತಾದ

ಪರಮಾನ್ನಾದಿಕಾನ್ನಾನಿ ನೈವೇದ್ಯಾಯ ಶ್ರುತಾನ್ಯಪಿ ।
ತಾನಿ ತಾವದ್ಧನಾಭಾವೇ ನ ಭವಂತ್ಯೇವ ಸರ್ವಥಾ ॥೭೪॥

ಶ್ರುತಮಾಹತ್ಯ ವೇದೇಷು ಸೌವರ್ಣಾಭರಣಾರ್ಪಣಂ ।
ತದಾಭರಣನಿಷ್ಪತ್ತಿರ್ಧನಾಭಾವೇ ಕಥಂ ಭವೇತ್ ॥೭೫॥

ಭಾರ್ಯಾಯಾಮಪಿ ವೈರಾಗ್ಯಮಯುಕ್ತಮಿತಿ ನಿಶ್ಚಿತಂ ।
ಶಿವನೈವೇದ್ಯಪಾಕಾಯ ವಿನಿಯುಕ್ತಾ ಯತಃ ಸ್ವತಃ ॥೭೬॥

ವಿನಿಯೋಗಾನುಸಾರೇಣ ಸಾಪಿ ತಾವದಪೇಕ್ಷಿತಾ ।
ಶಿವಾರ್ಚನೋಪಯುಕ್ತಾನಾಂ ತ್ಯಾಗೇ ಪಾಪಂ ಮಹತ್ಫಲು ॥೭೭॥

---

ಹಣ್ಣುಗಳ ರಸದಿಂದ ಶಿವಲಿಂಗವನ್ನು ಸ್ನಾನಮಾಡಿಸಬೇಕಾಗಿರುವುದು. ಹೀಗಿರುತ್ತಿರಲು ದ್ರವ್ಯವೇ ಇಲ್ಲದಿದ್ದರೆ ಆ ಹಣ್ಣುಗಳು ದೊರಕುವುದಿಲ್ಲವಷ್ಟೆ? ॥೭೩॥

ಪರಮಾನ್ನವೇ ಮೊದಲಾದ ಪಕ್ವಾನ್ನಗಳನ್ನು ದೇವರಿಗೆ ನಿವೇದಿಸಬೇಕೆಂದು ಶ್ರುತಿಸ್ಮೃತಿಗಳ ಮೂಲಕ ಕೇಳಿಬರುತ್ತಿದೆ. ದ್ರವ್ಯವೇ ಇಲ್ಲದಿದ್ದರೆ ಆ ಪಕ್ವಾನ್ನಗಳು ಎಂದಿಗೂ ಲಭಿಸಲಾರವು. ॥೭೪॥

ಲಿಂಗಕ್ಕೆ ಸುವರ್ಣಮಯವಾದ ಆಭರಣಗಳನ್ನು ಸಮರ್ಪಿಸಬೇಕೆಂದು ವೇದಗಳಲ್ಲಿ ಹೇಳಲ್ಪಟ್ಟಿರುತ್ತದೆ. ಹಣವೇ ಇಲ್ಲದಿದ್ದರೆ ಆ ಆಭರಣಗಳನ್ನು ಸಂಪಾದಿಸುವ ಬಗೆ ಹೇಗೆ? ॥೭೫॥

ಅರ್ಚಕನು ಪತ್ನಿಯಲ್ಲಿಯೂ ಸಹ ವೈರಾಗ್ಯವನ್ನು ಪಡೆಯುವುದು ಉಚಿತವಲ್ಲ. ಏಕೆಂದರೆ ಆವಳನ್ನು ಶಿವನಿಗೆ ಪ್ರಿಯವಾದ ನೈವೇದ್ಯಗಳನ್ನು ಸಿದ್ಧಪಡಿಸುವುದರಲ್ಲಿ ನಿಯುಕ್ತಳಾಗಿಸಬೇಕು. ॥೭೬॥

ಪತ್ನಿಯು ಶಿವನೈವೇದ್ಯದ ಪಾಕದಲ್ಲಿ ವಿನಿಯುಕ್ತಳಾಗಿರುವುದರಿಂದ ಅದಕ್ಕನುಗುಣವಾಗಿ ಅರ್ಚಕನಿಗೆ ಪತ್ನಿಯಾದ ಅವಳ ಅಪೇಕ್ಷೆಯು ಬೇಕಾಗುವುದು. ಶಿವಾರ್ಚನೆಯಲ್ಲಿ ಉಪಯುಕ್ತವಾದ ವಸ್ತುಗಳನ್ನು ತ್ಯಜಿಸುವುದರಿಂದ ಮಹತ್ತಾದ ಪಾಪವು ಸಂಭವಿಸುವುದು. ॥೭೭॥

ಅತಸ್ತತ್ತ್ಯಾಗಮಾತ್ರಂ ತು ನ ವೈರಾಗ್ಯಂ ತಥಾ ಸತಿ ।
ವೈರಾಗ್ಯವಾರ್ತಾ ಸರ್ವತ್ರ ವಸ್ತುತಃ ಪಾರಿಭಾಷಿಕೀ ॥೭೮॥

ಪರಿಭಾಷಾಪಿ ನಿಷ್ಪನ್ನಾ ಪದಾರ್ಥಸ್ಯ ವಿಶೇಷತಃ ।
ಶಿವಾರ್ಚನೋಪಯುಕ್ತತ್ವಕರಣತ್ವಾನುರೋಧತಃ ॥೭೯॥

ತಸ್ಮಾದ್ಯದಾರ್ಜಿತಂ ವಿತ್ತಂ ತನ್ನಿವೇದನಮೀಶ್ವರೇ ।
ತದ್ವೈರಾಗ್ಯಮಿತಿ ಪ್ರೋಕ್ತಂ ತೇನ ನ ಪ್ರತ್ಯವೈತಿ ಚ ॥೮೦॥

ಶತಾನಂದ ಇತಿಖ್ಯಾತೋ ರಾಜಾ ಪರಮಧಾರ್ಮಿಕಃ ।
ಗುಣವಾನ್ ವೀರ್ಯವಾನ್ನಿತ್ಯಂ ಶಿವಪೂಜಾಪರಾಯಣಃ ॥೮೧॥

ಶಿವಪೂಜಾದಿಧರ್ಮಾಣಾಂ ವಿಶೇಷೇಣ ವಿಚಾರಕಃ ।
ಮಹಾದೇವಃ ಪೂಜನೀಯಃ ಕಥಂ ಕುತ್ರೇತಿ ಚಿಂತನಾತ್ ॥೮೨॥

---

ಆದುದರಿಂದ ಪತ್ನಿಯನ್ನು ತ್ಯಜಿಸಿದ ಮಾತ್ರದಿಂದಲೇ, ವೈರಾಗ್ಯವು ಉಂಟಾಗಲಾರದು. ಅರ್ಚನೆಗೆ ಉಪಯುಕ್ತವಾದ ಪದಾರ್ಥಗಳನ್ನು ತ್ಯಜಿಸಿದ ಮಾತ್ರದಿಂದಲೇ ವೈರಾಗ್ಯವು ಉಂಟಾಗುವುದೇ ಆದರೆ, ಸಕಲ ಲೌಕಿಕ ವೈದಿಕ ಸ್ಥಳಗಳಲ್ಲಿಯೂ ವೈರಾಗ್ಯವೆಂಬ ಶಬ್ದವು ಕೇವಲ ಪರಿಭಾಷೆಯಿಂದ ಸಿದ್ಧವಾದುದೇ ಆಗುವುದಲ್ಲದೇ, ಅದು ಅನ್ವರ್ಥಸಂಜ್ಞೆಯನ್ನು ಹೊಂದಲಾರದು. ॥೭೮॥

ಪ್ರಾಯಶಃ ಶಿವಾರ್ಚನೆಯಲ್ಲಿ ಉಪಯುಕ್ತವಾದ ಪದಾರ್ಥಗಳನ್ನು ಸಾಧನ, ಕರಣ ಎಂಬಿವೇ ಮೊದಲಾದ ಪಾರಿಭಾಷಿಕವಾದ ಶಬ್ದಗಳಿಂದ ವ್ಯವಹರಿಸುವುದು ವಾಡಿಕೆಯಲ್ಲಿರುವುದು. ॥೭೯॥

ಆದುದರಿಂದ ತಾನು ಸಂಪಾದಿಸಿದ ದ್ರವ್ಯವನ್ನು ಈಶ್ವರನಿಗೋಸ್ಕರ ಅರ್ಪಿಸುವುದೇ ವೈರಾಗ್ಯವೆಂದೆನಿಸಿಕೊಳ್ಳುವುದು. ಈ ರೀತಿಯಲ್ಲಿ ಅದನ್ನು ಈಶ್ವರನಲ್ಲಿ ಅರ್ಪಿಸುವುದರಿಂದ ಯಾವ ಪಾಪವೂ ಸಂಭವಿಸುವುದಿಲ್ಲ. ॥೮೦॥

ಹಿಂದೆ ಶತಾನಂದನೆಂಬ ರಾಜನು ಗುಣಶಾಲಿಯಾಗಿ ಧರ್ಮಿಷ್ಠನೆನಿಸಿ ರಾಜ್ಯವಾಳುತ್ತಿದ್ದನು. ಆತನು ನಿತ್ಯವೂ ಶಿವಪೂಜೆಯಲ್ಲಿಯೇ ನಿರತನಾಗಿ, ಶಿವಪೂಜಾಕ್ರಮವನ್ನು ಸರಿಯಾಗಿ ತಿಳಿಯಬೇಕೆಂದು ಆಗಾಗ್ಗೆ ವಿದ್ವಾಂಸರಲ್ಲಿ ವಿಚಾರಮಾಡುತ್ತಿದ್ದನು. ॥೮೧-೮೨॥

ಕೃತಜ್ಞೇಷು ವರಿಷ್ಠೋಽಪಿ ಸತ್ಯವ್ರತಪರಾಯಣಃ ।
ಶಾಂಭವೇಷು ದಯಾಳುಶ್ಚ ತಪ್ತೋಽಷಣರತಸ್ಸದಾ ॥೮೩॥

ಸತ್ಯಪ್ರತಿಜ್ಞಸ್ಸರ್ವಜ್ಞೋ ನೀತಿಶಾಸ್ತ್ರವಿಶಾರದಃ ।
ಪ್ರಜಾನಾಂ ಪಾಲನೇ ದಕ್ಷೋ ದಕ್ಷಃ ಪರನಿಬರ್ಹಣೇ ॥೮೪॥

ಕೀರ್ತಿಮಾನ್ನಿಪುಣೋ ಧನ್ಯಃ ಶುಚಿಶ್ಚ ವಿಗತಸ್ಪೃಹಃ ।
ಅಸೂಯಾವರ್ಜಿತೋ ನಿತ್ಯಂ ಪ್ರಭಾಮಂಡಲಮಂಡಿತಃ ॥೮೫॥

ಯುದ್ಧಕಾಲೇ ಸುರಾಣಾಂ ಚ ಸರ್ವಥಾಪಿ ಭಯಪ್ರದಃ ।
ಸರ್ವಲಕ್ಷಣಸಂಪನ್ನಃ ಸರ್ವಾಶಾಪರಿಪೂರಕಃ ॥೮೬॥

ತಮೇಕದಾ ಗುರುಃ ಪ್ರಾಪ ಶೇಷೇಣಾಪಿ ಸಮನ್ವಿತಃ ।
ಸಮಾಗತಂ ಸಮಾಲೋಕ್ಯ ಪೂಜಯಾಮಾಸ ಶಾಂಭವಂ ॥೮೭॥

ತತಸ್ತೇನ ಸಹಾಲಾಪಾಃ ಕೃತಾಶ್ಚ ಶಿವಪೂಜನೇ ।
ಉಪಯುಕ್ತಾಃ ಪ್ರಯತ್ನೇನ ತಮುವಾಚ ಗುರುಂ ನೃಪಃ ॥೮೮॥

---

ಕೃತಜ್ಞರಾದವರಲ್ಲಿ ಇವನೇ ಶ್ರೇಷ್ಠನೆನಿಸಿದ್ದನು. ಸತ್ಯಪರಿಪಾಲನೆಮಾಡುತ್ತಾ ಶಂಭುಭಕ್ತರಲ್ಲಿ ದಯಾಳುವಾಗಿ, ಉಪವಾಸಾದಿಗಳಿಂದ, ದೇವರನ್ನು ತೃಪ್ತಿಪಡಿಸುತ್ತಾ, ನೀತಿಜ್ಞರಾಜನೆನಿಸಿಕೊಂಡಿದ್ದನು. ಪ್ರಜಾರಕ್ಷಣೆಯಲ್ಲಿಯೂ, ಶತ್ರುಸಂಹಾರದಲ್ಲಿಯೂ ದಕ್ಷನೆನಿಸಿಕೊಂಡಿದ್ದನು. ॥೮೩-೮೪॥

ಆ ರಾಜನು ಕೀರ್ತಿಶಾಲಿಯಾಗಿಯೂ, ನಿಪುಣನಾಗಿಯೂ, ಆಸೆ, ಅಸೂಯೆ ಇವುಗಳನ್ನು ದೂರಮಾಡಿದವನಾಗಿಯೂ ಇದ್ದನು. ಯುದ್ಧದಲ್ಲಿ ದೇವತೆಗಳನ್ನೂ ಸಹ ಹೆದರಿಸುವಷ್ಟು ಪರಾಕ್ರಮಿಯಾಗಿ, ಶೂರನೆನಿಸಿಕೊಂಡಿದ್ದನು. ಸರ್ವಲಕ್ಷಣ ಸಂಪನ್ನನೆನಿಸಿ ಬಡವರ ಸರ್ವವಿಧವಾದ ಆಶಾಪರಿಹಾರಮಾಡುವಷ್ಟು ಸಮರ್ಥನಾಗಿಯೂ ಇದ್ದನು. ॥೮೫-೮೬॥

ಹೀಗಿರುವಾಗ ಒಂದುಸಾರಿ ದೇವಗುರುವು, ಶೇಷನೊಡಗೂಡಿ ಶತಾನಂದನ ಸಭೆಗೆ ಬಂದನು. ಹಾಗೆ ಬಂದ ಶಂಭುಭಕ್ತನಾದ ಗುರುವನ್ನು ಅತಿಥಿಸತ್ಕಾರಗಳಿಂದ ಪೂಜಿಸಿ, ಉಪಯುಕ್ತವಾದ ಕೆಲವು ಪ್ರಶ್ನೆಗಳನ್ನು ಮಾಡಿದನು. ॥೮೭-೮೮॥

|| ಶತಾನಂದ ಉವಾಚ ||

ಧರ್ಮಾಣಾಂ ಪರಮೋ ಧರ್ಮಃ ಕೋ ವಾ ಧರ್ಮಸ್ತ್ವಯಾಮಿತಃ ।
ಧರ್ಮೋತ್ತಮೋತ್ತಮತ್ವೇನ ಜ್ಞಾತಧರ್ಮಂ ವದಾಧುನಾ ॥೮೯॥

ದೇವೋತ್ತಮೋತ್ತಮತ್ವೇನ ಕೋ ವಾ ದೇವಸ್ತ್ವಯಾಮಿತಃ ।
ಶ್ರುತಿಭಿಃ ಕಸ್ಯ ವಾ ಧರ್ಮಃ ಕೀರ್ತಿತಃ ಕಃ ಪರಃ ಪ್ರಭುಃ ॥೯೦॥

ಧರ್ಮೋತ್ತಮೋತ್ತಮತ್ವೇನ ಶಿವಧರ್ಮಃ ಪ್ರಕೀರ್ತಿತಃ ।
ಶಿವಧರ್ಮಾತ್ಪರೋ ಧರ್ಮೋ ನಾಸ್ತಿ ನ ಶ್ರೂಯತೇ ಧ್ರುವಂ ॥೯೧॥

ತೇನೈವ ಶಿವಧರ್ಮೇಣ ಸರ್ವಾನ್ಕಾಮಾನವಾಪ್ನುಯಾತ್ ।
ಯಂ ಯಂ ಕಾಮಯತೇ ಕಾಮಂ ತಂ ತಂ ಕಾಮಾರಿಧರ್ಮತಃ ॥೯೨॥

ಶಿವಪೂಜಾಪರೋ ಧರ್ಮಸ್ತಥೈವ ಶಿವಪೂಜಯಾ ।
ಶಿವಪಾದಾಬ್ಜಭೃಂಗತ್ವಂ ಪ್ರಾಪ್ನೋತ್ಯೇವ ನ ಸಂಶಯಃ ॥೯೩॥

---

ಓ, ಗುರುದೇವನೇ, ಧರ್ಮಗಳಲ್ಲೆಲ್ಲಾ ಉತ್ತಮವಾದ ಧರ್ಮವಾವುದು? ನೀನು ಯಾವುದನ್ನು ಶ್ರೇಷ್ಠವಾದ ಧರ್ಮವೆಂದು ತಿಳಿದಿರುವೆಯೋ ಆ ಅಂಶವನ್ನು ನನಗೂ ವಿವರಿಸುವವನಾಗು. ಮತ್ತು ದೇವಶ್ರೇಷ್ಠನು ಯಾರು? ಯಾವ ದೇವರ ಪೂಜೆಯಿಂದ ಅತಿಶಯವಾದ ಲಾಭವು ದೊರೆಯುವುದು? ಯಾವ ಧರ್ಮವು ಶ್ರುತಿಸಂಮತವಾದದ್ದು? ಅದನ್ನು ವಿವರಿಸಿ ಹೇಳುವವನಾಗು ಎಂದು ಪ್ರಾರ್ಥಿಸಿದನು. ||೮೯-೯೦||

ಆಗ ಗುರುವು ಹೀಗೆ ಉಪದೇಶಿಸಲಾರಂಭಿಸಿದನು. “ಲೋಕದಲ್ಲಿರುವ ಧರ್ಮಗಳಲ್ಲೆಲ್ಲಾ ಉತ್ತಮವಾದ ಧರ್ಮವೆಂದರೆ ಶಿವಧರ್ಮವೊಂದೇ. ಅದಕ್ಕಿಂತ ದೊಡ್ಡದಾದ ಧರ್ಮವು ಲೋಕದಲ್ಲಿ ಮತ್ತಾವುದೂ ಇಲ್ಲ. ಶಿವಧರ್ಮಾನುಯಾಯಿಗೆ ಅಭೀಷ್ಟಾರ್ಥಗಳೆಲ್ಲಾ ಅನಾಯಾಸವಾಗಿ ಸಿದ್ಧಿಸುವುವು. ||೯೧-೯೨||

ಶಿವಪೂಜೆಯಿಂದ ಬರುವ ಧರ್ಮವು ಶಿವಪೂಜಾಪರನಿಗೆ ಮಾತ್ರ ಲಭಿಸುವುದು. ಅಂತಹವನು ಸರ್ವದಾ ಶಿವಪಾದಕಮಲದಲ್ಲಿ ಭೃಂಗದಂತೆ ಓಡಾಡುತ್ತಿರು

ತತ್ಫಲಂ ನೋಗ್ರತಪಸಾ ನ ಯಾಗಾರ್ಬುದಕೋಟಿಭಿಃ ।
ಪರಂ ತು ಶ್ರೀಮಹಾದೇವಕೃಪಯಾ ಪರಯಾ ಖಲು ॥೯೪॥

ಸಂಪ್ರಾಪ್ಯ ಭೂರಿಪುಣ್ಯೇನ ಭಕ್ತಿಮವ್ಯಭಿಚಾರಿಣೀಂ ।
ಕ್ಷಣಂ ವಾ ಶಂಕರಂ ಸ್ಮೃತ್ವಾ ಮುಕ್ತೋ ಭವತಿ ಪಾತಕೈಃ ॥೯೫॥

ಪರಂ ತು ಶ್ರೀಮಹಾದೇವಪಾದಾಂಬುಜರತೋ ಭವೇತ್ ।
ಸಾ ಪೂಜಾ ಲಿಂಗಪೂಜೇತಿ ವಿಜ್ಞೇಯಾ ಶ್ರುತಿಶೇಖರೈಃ ॥೯೬॥

ಮಹಾಪಾತಕತೂಲಾದ್ರಿಃ ಶಿವನಾಮಾಗ್ನಿಲೇಶತಃ ।
ದಗ್ಧಃ ಕ್ಷಣೇ ನಭವತೀತ್ಯವಧಾರಯ ಸಾದರಂ ॥೯೭॥

ಯಸ್ಯ ಶಂಕರಪೂಜಾಯಾಂ ವಿಶ್ವಾಸೋಽತಿದೃಢಃ ಸದಾ ।
ತೇನ ಕೀರ್ಣಸ್ಯ ಸಂಸಾರೋ ನಾನಾಪಾತಕಸಾಗರಃ ॥೯೮॥

---

ವನು. ಶಿವಪೂಜೆಯಿಂದ ಬರುವಂತಹ ಫಲವು ಉಗ್ರತಪಸ್ಸಿನಿಂದಲೂ, ಕೋಟ್ಯಂತರ ಯಾಗಗಳಿಂದಲೂ, ಲಭಿಸಲಾರದು. ಆದ್ದರಿಂದ ಮಹಾದೇವಕೃಪೆಯೇ ಸರ್ವ ಸಮ್ಮತವಾದ ಶಿವಧರ್ಮ. ||೯೩-೯೪||

ಅನೇಕ ಸುಕೃತಗಳಿಂದ ಶಿವನಲ್ಲಿ ಸಹಜವಾದ ಭಕ್ತಿಯುತ್ಪನ್ನವಾಗುವುದು. ಅಂತಹ ಅನ್ಯಾದೃಶ ಭಕ್ತಿಯಿಂದ ಕ್ಷಣಕಾಲ ಶಂಕರನನ್ನು ಭಜಿಸಿದರೂ, ಅವನು ಮುಕ್ತನೆನಿಸುವನು. ಯಾರು ಮಹಾದೇವನ ಪಾದಾರ್ಚನೆಯಲ್ಲಿಯೇ ದೃಢಸಂಕಲ್ಪ ದಿಂದಿರುವರೋ, ಅವರೇ ಶಿವಲಿಂಗಪೂಜಕರು. ಆ ಭಕ್ತಿಪೂರ್ವಕವಾದ ಅರ್ಚನೆಯೇ ನಿಜವಾದ ಲಿಂಗಾರ್ಚನೆ. ಇದನ್ನೇ ವೇದಜ್ಞರು ಸ್ವಾಭಿಪ್ರಾಯವೆಂದು ಹೇಳುವರು. ||೯೫-೯೬||

ಮಹಾಪಾಪವೆಂಬ ಹತ್ತಿಯ ಪರ್ವತಕ್ಕೆ ಶಿವನಾಮವೇ ಬೆಂಕಿಯ ಕಿಡಿ. ಶಿವನಾಮಸ್ಮರಣೆಯಿಂದಲೇ ಆ ಪಾಪರಾಶಿಯೆಲ್ಲಾ ದಗ್ಧವಾಗುವುದೆಂದು ತಿಳಿ. ಯಾರಿಗೆ ಶಂಕರ ಸೇವೆಯಲ್ಲಿ ಹೆಚ್ಚಿನ ನಂಬಿಕೆಯಿರುವುದೋ, ಅವರು ಪರಿವಾರ ಸಮೇತವಾಗಿ ಪಾಪಸಮುದ್ರದಿಂದ ದಾಟಿ ಮುಂದೆ ಹೋಗುವರು. ||೯೭-೯೮||

ಶಿವಾರ್ಚನಪ್ರಭಾವಸ್ತು ಶ್ರುತಿಷು ಪ್ರಥಿತಸ್ಸ ತು ।
ಏಕಯಾ ಜಿಹ್ವಯಾ ವಕ್ತುಂ ಶಕ್ಯ ಏವ ನ ವಸ್ತುತಃ ॥೯೯॥

ಸಹಸ್ರಜಿಹ್ವಃ ಶೇಷೋಽಯಮನೇನಾಪಿ ನ ಸರ್ವಥಾ ।
ಶಿವಧರ್ಮಪ್ರಭಾವೋ ಯಃ ಸ ತು ವಕ್ತುಂ ನ ಶಕ್ಯತೇ ॥೧೦೦॥

ಕೃತಂ ಪೂರ್ವಮನೇನಾಪಿ ತಪೋ ಘೋರತರಂ ಪುರಾ ।
ಶಿವಧರ್ಮಾವಬೋಧಾಯ ಯುಗಾನಾಮಯುತಂ ನೃಪ ॥೧೦೧॥

ಅನೇನ ತಪಸಾ ತಾವತ್ಸಧರ್ಮೋ ಜ್ಞಾತ ಏವ ನ ।
ತತ್ಪ್ರಭಾವೋ ನ ಸಹಸಾ ಶಿವಾನ್ಯೈರ್ಜ್ಞಾತ ಏವ ನ ॥೧೦೨॥

ಶಿವಃ ಪರಮಧರ್ಮಜ್ಞಶ್ಶಿರೋಮಣಿರಿತಿ ಸ್ಮೃತಃ ।
ತಥಾ ಚ ಶಿವಧರ್ಮಾಣಾಂ ತತ್ತ್ವಂ ವೇದ ಸದಾಶಿವಃ ॥೧೦೩॥

ಶಿವಧರ್ಮಪರಿಜ್ಞಾನಂ ಶಿವಯಾ ಶಿವಸನ್ನಿಧೌ ।
ಕಥಂಚಿತ್ತತ್ಪರಿಜ್ಞಾತಂ ಕುಮಾರಸ್ಯಾಪಿ ವಸ್ತುತಃ ॥೧೦೪॥

---

ಶಿವಾರ್ಚನೆಯ ಮಹಿಮೆಯು ವೇದ ಪ್ರತಿಪಾದ್ಯಮಾನವಾದುದು. ಆ ಫಲವನ್ನು ಒಂದು ನಾಲಿಗೆಯುಳ್ಳ ನಾವು ವಿವರಿಸಲಾರೆವು. ಸಾವಿರ ನಾಲಿಗೆಗಳುಳ್ಳ ಆದಿಶೇಷನಿಗೂ ಅದು ಅಸಾಧ್ಯವೆನಿಸಿರುವಾಗ ಯಾರಿಗೆ ತಾನೇ ಆ ಪೂಜಾಮಹಿಮೆಯನ್ನು ವಿವರಿಸಲು ಸಾಧ್ಯವಾದೀತು? ॥೯೯-೧೦೦॥

ಈರೀತಿ ಶಿವಧರ್ಮವನ್ನು ತಿಳಿಯಬೇಕೆಂಬ ಕುತೂಹಲ ಹುಟ್ಟುವುದಕ್ಕೂ ಹಿಂದೆ ಹತ್ತು ಸಾವಿರ ಯುಗಪರ್ಯಂತ ಘೋರವಾದ ತಪಸ್ಸನ್ನಾಚರಿಸಿರಬೇಕು. ಇಷ್ಟು ತಪಸ್ಸನ್ನಾಚರಿಸಿದವರಿಗೆ ಆ ಶಿವಧರ್ಮದ ಅರಿವುಂಟಾಗುವುದು. ಶಿವನಲ್ಲದ ಇತರ ದೇವತಾರಾಧಕರಿಗೆ ಇದರ ಪ್ರಭಾವದ ತಿಳಿವಳಿಕೆಯು ಎಂದೂ ಗೋಚರಿಸಲಾರದು. ॥೧೦೧-೧೦೧॥

ಶಿವನು ಸರ್ವಧರ್ಮವನ್ನೂ ತಿಳಿದು ಸರ್ವಜ್ಞನೆನಿಸಿಕೊಂಡಿರುವನು. ಅಂತಹ ಶಂಕರನ ಮರ್ಮವನ್ನು ತಿಳಿದವನು ಸಾಕ್ಷಾತ್ಸದಾಶಿವಸ್ವರೂಪಿಯೇ ಆಗುವನು. ಅದೇ ಶಿವಧರ್ಮವು ಪರಶಿವನಿಂದಲೇ ಪಾರ್ವತಿಗೆ ಹೇಳಲ್ಪಟ್ಟದ್ದರಿಂದ, ಕುಮಾರಸ್ವಾಮಿಗೆ ಸ್ವಲ್ಪಮಟ್ಟಿಗೆ ಶಿವರಹಸ್ಯದ ಅರಿವುಂಟಾಯಿತು. ॥೧೦೩-೧೦೪॥

ನಂದಿಕೇಶಾದಿಭಿರ್ಧರ್ಮಃ ಶೈವಃ ಕಶ್ಚಿತ್ಕಥಂ ಚ ನ ।
ಜ್ಞಾಯತೇ ಮಾದೃಶೇನಾಪಿ ಕಥಂ ವಾ ನವಿಶೇಷತಃ ॥೧೦೫॥

ಜಾನಾತಿ ಶಾಂಭವಂ ಧರ್ಮಂ ಲೋಕೇ ಪರಮಶಾಂಭವಃ ।
ಸ ತಾವದಸ್ಮದಾದೀನಾಂ ದುಜ್ಞೇ೯ಯ ಇತಿ ನಿಶ್ಚಯಃ ॥೧೦೬॥

ನಿಧಯೋ ವಿವಿಧಾಸ್ಸಂತಿ ಶಿವಪೂಜನಬೋಧಕಾಃ ।
ತತ್ಪರಿಜ್ಞಾನಮಸ್ಮಾಕಮತಿದುರ್ಲಭಮೇವ ಹಿ ॥೧೦೭॥

ಗೋಪನಂ ಶಿವಧರ್ಮಾಣಾಂ ಶಂಕರೇಣ ಕೃತಂ ತತಃ ।
ತಜ್ಞಾನಂ ದುರ್ಲಭಂ ತೇಷಾಮಸ್ಮಾಕಂ ನೃಪಸತ್ತಮ ॥೧೦೮॥

ಲೋಕೇ ಕೋಽಪಿ ಮಹೇಶಧರ್ಮನಿರತಃ ಪೂತೋ ವಿನೀತಃ ಶ್ರುತೋ
ವೇದಾಂತೈರಮಿತೈರನಂತವಿಭವೈರ್ಭಾವಪ್ರಭಾವಾದರೈಃ ।
ಮನ್ಯೇ ದುರ್ಲಭಮೇವ ಶಾಂಭವಮಹಂ ಧರ್ಮೋತ್ತಮಂ ತಂ ಮುಹು
ರ್ವಂದೇ ಭಾವಮಭಾವಸಂಗರಹಿತಂ ಭಾವಪ್ರಭಾವೋತ್ಸುಕಂ ॥೧೦೯॥

---

ನಂದಿಕೇಶ್ವರನೇ ಮೊದಲಾದ ಈಶ್ವರಭಕ್ತರಿಗೂ ಶಿವಧರ್ಮದ ಪರಿಜ್ಞಾನವು ಅಷ್ಟಾಗಿ ಆಗಿರುವುದಿಲ್ಲ. ಹಾಗಿರುವಾಗ ನಮ್ಮಂತಹವರಿಗೆ ತಿಳಿಯುವುದು ಹೇಗೆ? ಶಂಕರನಿಗೆ ಅಚ್ಚುಮೆಚ್ಚಿನ ಭಕ್ತನಾವನುಂಟೋ ಅವನಿಗೆ ಮಾತ್ರ ತಿಳಿಯುವ ಆ ಪರಮಧರ್ಮವು ನಮ್ಮಂತಹವರಿಗೆ ತಿಳಿಯುವುದು ಹೇಗೆ? ||೧೦೫-೧೦೬||

ರಾಜಶ್ರೇಷ್ಠನೇ, ಶಿವಪೂಜೆಯನ್ನು ಬೋಧಿಸುವ ನಿಧಿಗಳು ಅನೇಕವಾಗಿರುವುವು. ಆದರೆ ಅದರ ನಿಗೂಢತತ್ತ್ವವನ್ನು ಅರಿಯುವುದು ಮಾತ್ರ ಅಸಾಧ್ಯ. ಏಕೆಂದರೆ ಆ ಮಹಾತತ್ತ್ವವನ್ನು ಶಂಕರನೇ ಮುಚ್ಚಿಟ್ಟಿರುವುದರಿಂದ, ಅದನ್ನು ತಿಳಿಯಲು ಇತರರಿಗೆ ಅವಕಾಶವಿಲ್ಲದಂತಾಗಿದೆ. ||೧೦೭-೧೦೮||

ಲೋಕದಲ್ಲಿ ಮಹೇಶ್ವರ ಧರ್ಮವನ್ನರಿತು, ಪರಿಶುದ್ಧನೂ, ವಿನೀತನೂ ವೇದಾಂತಗಳ ತತ್ತ್ವಾರ್ಥವನ್ನರಿತವನೂ, ಶಿವಭಾವಗಳನ್ನರಿತವನೂ ಆದ ಮಹಾಮಹಿಮನು ದೊರಕುವುದು ಅತ್ಯಂತ ದುರ್ಲಭವೇ. ಹಾಗೆ ಭಾವಾದಿಗಳಿಗೆ

ವೇದಾಂತಪ್ರಣುತಂ ಶಿವಾರ್ಚಕಪದಂ ವಂದೇ ಮುಕುಂದಾರ್ಚಿತಂ
ತದ್ವೃಂದಾರಕವೃಂದವಂದಿತಮುಮಾಕಾಂತಾರ್ಚಕಾರಾಧಿತಂ ।
ತತ್ಸೇವಾಜನಿರೋಗನಾಶಕತಯಾ ಜ್ಞಾತಾ ತದಾರಾಧನಾತ್
ಮುಕ್ತಿಃ ಶಂಕರಪೂಜಕಸ್ಯ ಮಹಿಮಾ ಕೇನಾಪಿ ನ ಜ್ಞಾಯತೇ ॥೧೧೦॥

ಧನ್ಯಾಃ ಶಾಂಭವಧರ್ಮಬೋಧನಿಧಯಃ ಶೈವೋತ್ತಮಾಃ ಸರ್ವಥಾ
ತತ್ಪಾದಾಂಬುರುಹಾರ್ಚಕೋಽಪಿ ಸುತರಾಂ ಧನ್ಯಃ ಸಧನ್ಯೋತ್ತಮಃ ।
ತತ್ಪಾದಾಂಬುಜರೇಣುಭಿರ್ಯದಿ ಶಿರಃ ಪೂತಂ ನ ಭೀತಿಸ್ತದಾ
ಕಾಲಾದಪ್ಯತ ಏವ ಸಂಸೃತಿಭಯಂ ನೇತಿ ಸ್ಮರಾಮೋ ವಯಂ ॥೧೧೧॥

ಅಸ್ಮಾಕಂ ಶಿವಪೂಜನೋತ್ಸುಕಶಿವಾಚಾರಜ್ಞಾತಾ ಧಾರಕ
ಧ್ಯಾನೇನಾಪಿ ಪದೇ ಪದೇಽಪಿ ನಿಧಯಃ ಸಂಸಾರವಾರ್ತಾಪಿ ನ ।

---

ಒಳಗಾಗದೆ ಸ್ಥಿರವಾಗಿ ಶಂಕರನನ್ನು ನಂಬಿದವರಿಗೆ, ನಾನು ಪ್ರಣಾಮಮಾಡುವೆನು. ಮತ್ತು ಅವರೇ ಶ್ರೇಷ್ಠತಮರಾದವರೆಂದು ನಾನು ಹೇಳುವೆನು. ॥೧೦೯॥

ಮಹಾದೇವನನ್ನು ಭಕ್ತಿಯಿಂದ ಪೂಜಿಸುವವನ ಮಹಿಮೆಯನ್ನು ತಿಳಿಯಲು ಸಾಧ್ಯವೇ ಇಲ್ಲ. ಆತನು ಉಪನಿಷತ್ತುಗಳಿಂದಲೂ ಸ್ತುತಿಸಲ್ಪಟ್ಟಿರುವನು. ವಿಷ್ಣುವೂ, ಇತರ ದೇವತೆಗಳೂ ಸಹ ಶಿವಾರಾಧಕನನ್ನು ಗೌರವಿಸುವರು. ಇತರ ಶಿವಪೂಜಕರಂತೂ ಸರ್ವದಾ ಅವನನ್ನೇ ಹಿಂಬಾಲಿಸುವರು. ಭಕ್ತಿಪೂರ್ವಕವಾದ ಶಂಕರಾರಾಧನೆಯಿಂದ ಮನುಷ್ಯರ ಕಾಯಿಕವಾದ ಮತ್ತು ಮಾನಸಿಕವಾದ ಸಕಲ ರೋಗಗಳೂ ನಿವಾರಣೆಯಾಗುವುವು. ಇದರಲ್ಲಿ ಸಂಶಯವೇ ಇಲ್ಲ. ॥೧೧೦॥

ಶಂಭುವಿನ ನಿಜವಾದ ತತ್ತ್ವವನ್ನರಿತು, ಶಂಕರನನ್ನು ಪೂಜಿಸುವವರೇ ನಿಜವಾದ ಧನ್ಯರು. ಅವರೇ ಶ್ರೇಷ್ಠರು. ಅಷ್ಟಲ್ಲದೆ ಅವರನ್ನು ಭಕ್ತಿಯಿಂದ ಅರ್ಚಿಸುವವರೂ ಸಹ ಕೃತಾರ್ಥರಾಗುವರು. ಯಾರ ಶಿರಸ್ಸಿನಮೇಲೆ ನಿಜವಾದ ಭವಭಕ್ತರ ಪಾದದ ಧೂಳು ಬೀಳುವುದೋ, ಅವರು ಪವಿತ್ರರೆನಿಸುವರು. ಅವರಿಗೆ ಯಮನಿಂದಾಗಲಿ, ಸಂಸಾರದ ಇತರ ದುಃಖಗಳಿಂದಾಗಲಿ ಭಯವಿರುವುದಿಲ್ಲವೆಂಬುದೇ ನಮ್ಮ ಸಿದ್ಧಾಂತ. ಇದು ನಿಜ. ॥೧೧೧॥

ಶಂಕರಪೂಜೆ, ಶಿವಧರ್ಮ, ಇವುಗಳನ್ನು ಸಂಪೂರ್ಣವಾಗಿ ಅರಿತಿರುವ ಮಹಾತ್ಮರನ್ನು ಧ್ಯಾನಿಸಿ, ಧ್ಯಾನಿಸಿ ನಾವೂ ಸಹ ಸಂಸಾರದ ದುಃಖಗಳನ್ನು ಕಳೆದು

**ನಿರ್ಧೂತಾಖಿಲಕಲ್ಮಷಾಃ ಶಿವಪದಂ ಯಾಮೋ ನ ಯಾಮಂ ಭಯಂ ।**
**ಪಶ್ಯಾಮೋ ನಿಯಮಾದಿಕಾಭ್ಯಸನಜಕ್ಲೇಶಂ ನ ಮೃಶ್ಯಾಮಹೇ ॥೧೧೨॥**

**ಇತಿ ಶ್ರೀಶಿವರಹಸ್ಯೇ ತೃತೀಯಾಂಶೇ ಹರಾಖ್ಯೇ ಪೂರ್ವಭಾಗೇ ಶತಾನಂದಗುರುಸಂವಾದೇ ಶಿವಧರ್ಮಾನುಸರಣಂ ನಾಮ ಷಟ್ಚತ್ವಾರಿಂಶೋಽಧ್ಯಾಯಃ.**

---

ಕೊಂಡಿದ್ದೇವೆ. ಅದರಿಂದ ನಾವೂ ಸಹ ಶಿವಧರ್ಮಜ್ಞರೆನಿಸಿದ್ದೇವೆ. ಮತ್ತು ಸಕಲ ಪಾಪಗಳಿಂದ ಬಿಡುಗಡೆ ಹೊಂದಿದ್ದೇವೆ. ಇನ್ನು ನಮಗೆ ಯಮನಿಂದಲೂ ಬಾಧೆಯಿರುವಂತಿಲ್ಲ. ಶಿವಪೂಜೆಯೊಂದನ್ನು ಬಿಟ್ಟು ಉಳಿದ ಇತರ ನಿಯಮಾದಿ ವ್ರತಗಳು ಕೇವಲ ಆಯಾಸಕರಗಳೆಂದೇ ನಾವು ಭಾವಿಸಿರುವೆವು. ಅದಕ್ಕಾಗಿಯೇ ನಾವು ಅಷ್ಟಾಗಿ ಅದರಲ್ಲಿ ಮುಂದುವರಿಯುವುದಿಲ್ಲ." ಎಂದು ಗುರುವು ಶತಾನಂದ ರಾಜನಿಗೆ ಉಪದೇಶಮಾಡಿದನು. ॥೧೧೨॥

ಇಲ್ಲಿಗೆ ಶ್ರೀಶಿವರಹಸ್ಯದ'ಹರನಾಮಕವಾದ ಮೂರನೆಯ ಅಂಶದ ಪೂರ್ವಾರ್ಧದಲ್ಲಿ ಶತಾನಂದ ಗುರುಸಂವಾದರೂಪವಾಗಿ ಶಿವಧರ್ಮಾನುಸರಣವೆಂಬ ನಲವತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಸಪ್ತಚತ್ವಾರಿಂಶೋಽಧ್ಯಾಯಃ

|| ಸ್ಕಂದ ಉವಾಚ ||

ಗುರುಗೌರವವಾಕ್ಯಾನಿ ಶತಾನಂದಃ ಪುನಃ ಪುನಃ ।
ಶ್ರುತ್ವಾ ಪ್ರಹೃಷ್ಟಸ್ತಂ ಪ್ರಾಹ ಶಿವಪೂಜಾಕ್ರಮಂ ನೃಪಃ ॥೧॥

ಶಿವಾರ್ಚನವ್ರತಪರೈಃ ಕಿಂ ಕಾರ್ಯಂ ಪ್ರತ್ಯಹಂ ಗುರೋ ।
ತತ್ಸಾವದಧುನಾ ಸರ್ವಂ ನಿವೇದಯ ಯಥಾಕ್ರಮಂ ॥೨॥

|| ಗುರುರುವಾಚ ||

ಅರುಣೋದಯವೇಲಾಯಾಂ ಸಮುತ್ಥಾಯ ಬಹಿಃ ಪರಂ ।
ಶೌಚಾದಿಕಂ ನಿವೃತ್ಯಾದೌ ಸ್ನಾತ್ವಾ ತೀರ್ಥೋದಕೇ ಶುಭೇ ॥೩॥

ಉದ್ಧೂಳ್ಯ ಭಸ್ಮನಾಂಗಾನಿ ತ್ರಿಪುಂಡ್ರಂ ಚ ಪ್ರಯತ್ನತಃ ।
ರುದ್ರಾಕ್ಷಧಾರಣಂ ಕೃತ್ವಾ ಪಶ್ಚಾತ್ಸಂಧ್ಯಾಂ ಸಮಾಪ್ಯ ಚ ॥೪॥

---

## ನಲವತ್ತೇಳನೆಯ ಅಧ್ಯಾಯ

ಶ್ರೀಗುರುವು ಹೇಳಿದ ಗಂಭೀರವಾಣಿಯನ್ನು ಕೇಳಿ ಶತಾನಂದಮಹರ್ಷಿಯು ಸಂತುಷ್ಟನಾಗಿ ಮತ್ತೆ ಶಿವಪೂಜಾಕ್ರಮವನ್ನೂ, ಶಿವಾರ್ಚಕನು ಅನುಸರಿಸಬೇಕಾದ ನಿಯಮಗಳನ್ನೂ ದಯೆಯಿಂದ ತಿಳಿಸಬೇಕೆಂದು ಪ್ರಾರ್ಥಿಸಿದನು. ||೧-೨||

ಶಿವಾರ್ಚಕನಾದವನು ಅರುಣೋದಯಕಾಲಕ್ಕೇ ಎದ್ದು ಶೌಚಾದಿಗಳನ್ನು ನೆರವೇರಿಸಿಕೊಂಡು ತೀರ್ಥೋದಕದಲ್ಲಿ ಸ್ನಾನಮಾಡಿ ತನ್ನ ದೇಹವನ್ನೆಲ್ಲಾ

ಶಿವಾರಾಧನಸಾಮಗ್ರ್ಯಾ ಲಿಂಗೇ ಶಂಕರಮರ್ಚಯೇತ್ ।
ರುದ್ರಾಧ್ಯಾಯಂ ಸ್ಮರನ್ನೇವ ತನ್ಮಂತ್ರಾರ್ಥಮನುಸ್ಮರನ್ ॥೫॥

ಶಿವಪ್ರವಣಚಿತ್ತಸ್ಸನ್ನಾಸೀನೋಽಪಿ ಕುಶಾಸನೇ ।
ವ್ಯಾಘ್ರಾಜಿನೇ ವಾ ಪೂತಾತ್ಮಾ ವಿಭೂತ್ಯುದ್ಧೂಲನಾದಿನಾ ॥೬॥

ಚಿತ್ರಾಸನೇ ವಾ ಮಾಂಜಿಷ್ಠೇ ಶ್ವೇತೇ ವಾ ಕಂಬಲಾಸನೇ ।
ನೀಲಪೀತೇಽಪಿ ಹಾರಿದ್ರೇ ಕಾರ್ಬುರೇ ವಾ ವಿಶೇಷತಃ ॥೭॥

ಸ್ವಾಂತಃ ಸಿಂಹಾಸನಾಸೀನಮುಮಾಲಿಂಗಿತವಿಗ್ರಹಂ ।
ಕರ್ಪೂರಗಿರಿಸಂಕಾಶಂ ದುಕೂಲಪರಿವೇಷ್ಟಿತಂ ॥೮॥

ರತ್ನಾಭರಣಸಂಯುಕ್ತಮನಂತವಿಭವಂ ಪ್ರಭುಂ ।
ಹರಂ ಸರ್ವಮನಾರಾಧ್ಯಂ ಆನಂದಘನಮವ್ಯಯಂ ॥೯॥

---

ಭಸ್ಮದಿಂದ ಬಳಿದುಕೊಂಡು ಭಸ್ಮತ್ರಿಪುಂಡ್ರವನ್ನೂ, ರುದ್ರಾಕ್ಷಿಯ ಸರವನ್ನೂ ಧರಿಸಿಕೊಂಡು ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮುಗಿಸಿಕೊಳ್ಳಬೇಕು. ಎಂದು ಮುಂತಾಗಿ ಗುರುವು ಶಿವಧರ್ಮಗಳನ್ನು ಮತ್ತೆ ವಿವರಿಸತೊಡಗಿದನು. ॥೩-೪॥

ಶಿವಾರಾಧನೆಗೆ ಬೇಕಾದ ಸಾಮಗ್ರಿಗಳನ್ನು ಸಂಪಾದಿಸಿಕೊಂಡು ಈ ಶಿವಲಿಂಗದಲ್ಲಿ ಈಶ್ವರನನ್ನು ಪೂಜಿಸಬೇಕು. ರುದ್ರಾಧ್ಯಾಯವನ್ನು ಅರ್ಥಸಹಿತವಾಗಿ ಮನನ ಮಾಡುತ್ತಾ ಶಿವಾರಾಧನೆಯಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿ ದರ್ಭಾಸನದಲ್ಲಾಗಲಿ, ವ್ಯಾಘ್ರಾಜಿನದ ಮೇಲಾಗಲಿ ವಿಭೂತಿಧಾರಣೆಯಿಂದ ಪವಿತ್ರಗಾತ್ರನಾಗಿ ಕುಳಿತು ಪೂಜಿಸಬೇಕು. ॥೫-೬॥

ಚಿತ್ರಮಯವಾದ ಪೀಠದಲ್ಲಿಯಾಗಲಿ, ಹೊಳೆಯುವ ಆಸನದಲ್ಲಾಗಲಿ, ಶುಭ್ರವಾದ ಕಂಬಳಿಯ ಮೇಲಾಗಲಿ, ನೀಲ, ಹಳದಿ, ಪೀತ, ಅಥವಾ ಮಿಶ್ರವರ್ಣವಿಶಿಷ್ಟವಾದ ಪೀಠದ ಮೇಲಾಗಲಿ ಕುಳಿತು ಶಂಕರಪೂಜೆ ಮಾಡಬಹುದು. ಶಂಕರನು ತನ್ನ ಮನಸ್ಸೆಂಬ ದಿವ್ಯಸಿಂಹಾಸನದಲ್ಲಿ ಮಂಡಿಸಿ ಉಮಾದೇವಿಯಿಂದ ಆಲಿಂಗಿತನಾಗಿರುವನು. ಕರ್ಪೂರಗಿರಿಯಂತೆ ಶುಭ್ರವಾದ ದೇಹವುಳ್ಳವನು. ದಿವ್ಯವಾದ ಪಟ್ಟೆಮಡಿಯನ್ನು ಹೊದ್ದಿರುವವನು, ರತ್ನಾಭರಣಗಳಿಂದ ಕೂಡಿ ಐಶ್ವರ್ಯಯುಕ್ತ

ತ್ರಿಲೋಚನಂ ನೀಲಕಂಠಂ ತ್ರಿಶೂಲಕರಮುಕ್ಷರಂ
ದಧಾನಂ ವಾಮಹಸ್ತಾಬ್ಜೇ ಮೇರುಚಾರುಶರಾಸನಂ ॥೧೦॥

ಜಟಾಜೂಟತಟಾಬದ್ಧಚಂದ್ರರೇಖಾವಿರಾಜಿತಂ ।
ತ್ರಿಪುಂಡ್ರವಿಲಸತ್ಫಾಲಂ ಭಕ್ತಸಂರಕ್ಷಣೇಕ್ಷಣಂ ॥೧೧॥

ಅಷ್ಟಾಪದತಟಿತ್ಕೂಟಸನ್ನಿಭಂ ಸುಂದರಾನನಂ ।
ಉತ್ಫುಲ್ಲಮಂದಮಂದಾರ ಮಲ್ಲಿಕಾಸಮಲಂಕೃತಂ ॥೧೨॥

ಬಿಲ್ವಪಲ್ಲವವೀತಾಂಗಮನಂಗಹರಮವ್ಯಯಂ ।
ಚಾರುಚಾಮೀಕರಾಕಾರಕರಕಂಕಣಮಂಡಿತಂ ॥೧೩॥

ಪ್ರಸ್ಫುರನ್ನೂಪುರಾಪಾರಶಿಂಜಿತಾತತಿಸೇವಿತಂ ।
ಮುನಿಮಾನಸಭೃಂಗಾಂಗಸಂಘಾತಾಂಘ್ರಿಸರೋರುಹಂ ॥೧೪॥

---

ನಾಗಿರುವ ಸರ್ವೇಶ್ವರನೇ, ಆರಾಧ್ಯನು, ಆನಂದಮಯನು, ನಾಶರಹಿತನು " ಎಂಬ ಭಾವನೆಯಿಂದ ಶಂಕರನನ್ನು ಆರಾಧಿಸಬೇಕು. ||೭-೮-೯||

ಶಂಕರನಿಗೆ ಕಣ್ಣುಗಳು ಮೂರು. ಕಂಠವು ನೀಲವಾಗಿರುವುದು. ಕೈಯ್ಯಲ್ಲಿ ತ್ರಿಶೂಲವಿರುವುದು. ಎಡಗೈಯಿಂದ ಮೇರುಪರ್ವತವನ್ನೇ ಬಿಲ್ಲನ್ನಾಗಿ ಮಾಡಿಕೊಂಡು ಹಿಡಿದಿರುವನು. ಜಟೆಯಲ್ಲಿ ಚಂದ್ರರೇಖೆಯೂ, ಹಣೆಯಲ್ಲಿ ತ್ರಿಪುಂಡ್ರವೂ, ಕಟಾಕ್ಷದಲ್ಲಿ ಭಕ್ತರಕ್ಷಣೆಯ ಕರುಣೆಯೂ, ತೋರಿಬರುತ್ತಿರುವುದು. ಎಂಟು ದಿಕ್ಕುಗಳಿಂದಲೂ ಬರುವ ಮಿಂಚಿನ ಬಳ್ಳಿಗಳಂತೆ ಕೂಡಿರುವ ಅಷ್ಟಮೂರ್ತಿಯು ಅರಳಿದ ಮಂದಾರ, ಮಲ್ಲಿಕಾ ಮುಂತಾದ ಪುಷ್ಪಗಳಿಂದ ಅಲಂಕೃತನಾಗಿರುವನು. ||೧೦-೧೧-೧೨||

ಬಿಲ್ವವೃಕ್ಷದ ಚಿಗುರುಗಳಿಂದ ಶಂಕರನ ದೇಹವೆಲ್ಲಾ ಭೂಷಿತವಾಗಿರುವುದು. ಮನೋಹರವಾದ ಸುವರ್ಣದ ಬಳೆಗಳೂ ಶಂಕರಕರಗಳನ್ನು ಅಲಂಕರಿಸಿವೆ. ಧ್ವನಿಗೈಯ್ಯುವ ಕಾಲುಬಳೆಗಳಿಂದಲೂ ಮುನಿಮಾನಸವೆಂಬ ದುಂಬಿಗಳಿಂದಲೂ ಸುಂದರವಾದ ಪಾದಪದ್ಮಗಳು ಶಂಕರನಿಗೆ ವಿರಾಜಿಸುತ್ತಿವೆ. ||೧೩-೧೪||

ಮೃಗಾಂಕಿತಕರಂ ದೇವಂ ವರದಾಭಯಪಾಣಿನಂ ।
ಕರುಣಾರಸಸಂಪೂರ್ಣಂ ವಿರೂಪಾಕ್ಷಂ ವಿಚಿಂತಯೇತ್ ॥೧೫॥

ತತಃ ಪರಂ ಮಹಾದೇವಂ ಲಿಂಗೇ ತುಂಗೇ ಮನೋಹರೇ ।
ಪೂಜಯೇದಾರ್ಜಿತೈರ್ದ್ರವ್ಯೈರಮಲೈಃ ಕಮಲಾದಿಭಿಃ ॥೧೬॥

ಲಿಂಗಾರ್ಚನಂ ಬಿಲ್ವಪತ್ರೈರ್ದ್ವಿತ್ರೈರ್ವಾ ವಿಮಲೈಃ ಕೃತಂ ।
ಸರ್ವಕಾಮಪ್ರದಂ ಪುಣ್ಯಂ ತದ್ವೇದಾಂತೇಷು ವಿಶ್ರುತಂ ॥೧೭॥

ಏವಂ ಸಂಪೂಜ್ಯ ಪೂಜಾಂತೇ ಕುರ್ಯಾದಾತ್ಮನಿವೇದನಂ ।
ಪೂಜಾನಿವೇದನಂ ಕೃತ್ವಾ ಪ್ರಣಮ್ಯ ಚ ಮುಹುರ್ಮುಹುಃ ॥೧೮॥

ಮನ್ಮಾನಸಂ ಭವ ಭವಚ್ಚರಣಾರ್ಚನಾಯ
ತಾವತ್ಪ್ರಸೂನಮಿದಮಸ್ತು ಶರೀರಮಸ್ಯ ।
ಧೂಪಾಯ ನಿತ್ಯಮಸವೋಽಪ್ಯುಪಹಾರಯೋಗ್ಯಾ
ಶ್ಚಕ್ಷೂಂಷಿ ದೀಪಕಲಿಕಾಫಲತಾಂ ಪ್ರಯಾಂತು ॥೧೯॥

---

ಶಂಕರನು ಒಂದು ಕೈಯ್ಯಲ್ಲಿ ಜಿಂಕೆಯನ್ನೂ, ಮತ್ತೊಂದು ಕೈಯ್ಯಲ್ಲಿ ವರದಮುದ್ರೆ, ಅಭಯಮುದ್ರೆಗಳನ್ನೂ ತೋರ್ಪಡಿಸುತ್ತಿರುವನು. ಇಂತಹ ಕರುಣಾರಸಭರಿತನಾದ ಶಂಕರನನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು. ಧ್ಯಾನಾನಂತರ ಲಿಂಗಮಯನಾಗಿರುವ ಮಹಾದೇವನನ್ನು ಪೂಜಾಸಾಮಗ್ರಿಗಳಿಂದಲೂ ಕಮಲಗಳಿಂದಲೂ ವಿಧಿವತ್ತಾಗಿ ಆರಾಧಿಸಬೇಕು. ॥೧೫-೧೬॥

ಬಿಲ್ವಪತ್ರೆಯು ಶಿವಾರ್ಚನೆಗೆ ಬಹುಮುಖ್ಯವಾದದ್ದು. ಎರಡಾಗಲಿ, ಮೂರಾಗಲಿ ಬಿಲ್ವದಳಗಳು ಶಿವಪ್ರೀತಿಕರಗಳಾಗಿ, ಸರ್ವಕಾಮ್ಯಫಲಗಳನ್ನೂ ಒದಗಿಸುವುವು. ಬಿಲ್ವಾರ್ಚನೆಯು ವೇದಸಮ್ಮತವಾದದ್ದು. ಹೀಗೆ ಪೂಜಿಸಿ, ಆತ್ಮನಿವೇದನೆಯಿಂದ ಶಿವಾರ್ಚನೆಯನ್ನು ಪೂರ್ತಿಗೊಳಿಸಿ ಪ್ರಣಾಮಾದಿಗಳನ್ನು ಮಾಡಬೇಕು. ॥೧೭-೧೮॥

ಪರಮೇಶ್ವರನೇ, ನನ್ನ ಮನಸ್ಸು ನಿನ್ನ ಪಾದಗಳ ಅರ್ಚನೆಯ ಕಾಲದಲ್ಲಿ ಪುಷ್ಪದಂತಾಗಲಿ. ಶರೀರವೇ ಧೂಪವಸ್ತುವಾಗಲಿ, ನನ್ನ ಪ್ರಾಣಗಳೇ ನೈವೇದ್ಯವಾಗಿಯೂ, ಕಣ್ಣುಗಳು ದೀಪಗಳಾಗಿಯೂ ಪರಿವರ್ತಿತವಾಗಲಿ. ॥೧೯॥

ಯದ್ಯನ್ಮದೀಯಮನಘಂ ವಸು ಚಂದ್ರಮೌಲೇ
ತತ್ತತ್ತ್ವದೈವ ಪದಪೂಜನಯೋಗ್ಯಮಸ್ತು ।
ಸ್ವಾಮಿಂಸ್ತ್ರಿಲೋಚನ ಮಮೇಹ ಪವಿತ್ರಗಾತ್ರಂ
ಲಿಂಗಾರ್ಚನಾಯ ಭಗವನ್ ಅನುಕೂಲಮಸ್ತು ॥೨೦॥

ಧೀರೈಃ ಸಹಾರಸುಕುಮಾರಕುಮಾರದಾರೈಃ
ಸಾಕಂ ನಿರಾಕುಲಮುಮಾರಮಣಾರ್ಚನೇನ ।
ಕಾಲಂ ನ ಯಾತಿ ವಿಮಲೈಃ ಕಮಲಾವಿಲಾಸೈಃ
ಶ್ರೀಕಾಲಕಾಲಸಕಲೈಃ ಸಕಲೈರಲಂ ಮೇ ॥೨೧॥

ಜನ್ಮಾನಿ ಸಂತು ಶತಶೋಥ ಸಹಸ್ರಶೋ ವಾ
ಕಿಂ ತಾವತಾಪಿ ಯದಿ ಭಕ್ತಿರುಮಾಸಹಾಯೇ ।
ಧನ್ಯಾನಿ ತಾನಿ ಸಕಲಾನಿ ತದೇತಿ ಮನ್ಯೇ
ಧನ್ಯಂ ತ್ರಿಲೋಚನಕೃಪೈಕನಿಧಾನಭೂತಂ ॥೨೨॥

---

ಸ್ವಾಮಿಯೇ, ತ್ರಿಲೋಚನನೇ, ನನ್ನಲ್ಲಿರುವ ನಿಧಿಯೆಲ್ಲಾ ನಿನ್ನ ಪೂಜೆಗೆ ಅನುಕೂಲವಾಗಿ ಪರಿಣಮಿಸಲಿ. ನನ್ನ ಈ ದೇಹವು ಸದಾ ಲಿಂಗಾರ್ಚನೆಗೆ ಅನುಕೂಲವಾಗಿರಲಿ. ॥೨೦॥

ನನಗೆ ಲಭಿಸುವ ಪತ್ನೀಪುತ್ರರೆಲ್ಲರೂ ಧೀರರಾಗಿ, ಹರಭಕ್ತರಾಗಿರಲಿ. ಮತ್ತು ಅವರೊಡನೆ ನಾನು ನಿರಾಕುಲವಾಗಿ ಶಿವಲಿಂಗಾರ್ಚನೆ ಮಾಡುತ್ತಿರುವಂತೆ ಅನುಗ್ರಹಿಸು. ಮತ್ತು ನನ್ನಲ್ಲಿರುವ ಲಕ್ಷ್ಮೀವಿಲಾಸವೆಲ್ಲವೂ ಸಕಲ ಕಲಾಪರಿಪೂರ್ಣನಾದ ಪರಶಿವನ ಪೂಜೆಗಾಗಿಯೇ ಕಳೆದುಹೋಗಲಿ. ಇದರಿಂದಲೇ ನನ್ನ ಆಯುಸ್ಸೆಲ್ಲವೂ ಕಳೆಯುವಂತಾಗಲಿ. ॥೨೧॥

ನನಗೆ ನೂರಲ್ಲದಿದ್ದರೆ ಸಾವಿರ ಜನ್ಮಗಳು ಬೇಕಾದರೂ ಲಭಿಸಲಿ, ಪ್ರತಿ ಜನ್ಮದಲ್ಲಿಯೂ ಉಮಾಪತಿಯಾದ ಶಂಕರನ ಪೂಜಾಕಾರ್ಯದಲ್ಲಿ ಭಕ್ತಿಯೊಂದು ಮಾತ್ರ ಒದಗಲಿ. ಅದರಿಂದ ಆ ಜನ್ಮಗಳೆಲ್ಲವೂ ತ್ರಿಲೋಚನನ ಕೃಪೆಗೆ ಪಾತ್ರಗಳಾಗಿ ಧನ್ಯವೆನಿಸುವುವು. ॥೨೨॥

ಮತ್ಪ್ರಾರ್ಥನೀಯಮಿದಮೇವ ಭವತ್ಪದಾಬ್ಜ
ಭಕ್ತಿರ್ಭವತ್ಪದಸರೋರುಹಪೂಜನಾಯ ।
ತೇನೈವ ಮೇ ಸಕಲಸಿದ್ಧಿಪರಂಪರಾಸ್ಯಾ
ದೇತಾವದೇವ ಮಮ ದೇಯಮಪಿ ತ್ವಯಾಪಿ ॥೨೩॥

ಭಕ್ತಿರ್ಭವೇ ಪ್ರತಿಭವೇಪಿ ವಿರಕ್ತಿರರ್ಥೇ
ಶಕ್ತಿರ್ಗಿರೀಶ ನಗರೀಗಮನೇನುರಕ್ತಿಃ ।
ಲಿಂಗಾರ್ಚನೇ ರತಿರನಂಗಹರೇ ಪ್ರವೃತ್ತಿ
ರ್ಬಿಲ್ವಾರ್ಚನೇ ಮತಿರುಮೇಶಕಥಾಸು ಮೇ ಸ್ಯಾತ್ ॥೨೪॥

ಅದ್ಯಾವಧಿಪ್ರಲಯಕಾಲಮಹಾವಸಾನ
ಪರ್ಯಂತಮಂತಕರಿಪುತ್ರಿಪುರಾಂತಕಾಖ್ಯಾ ।
ನೃತ್ಯಂ ಕರೋತು ರಸನಾರುಚಿರಾಂಗಣೇ ಮೇ
ಶ್ರೀಶೂಲಪಾಣಿಚರಣೇ ಕರವಾಣಿ ವಾಣೀಂ ॥೨೫॥

---

ಪರಮೇಶ್ವರನೇ, ನಿನ್ನಲ್ಲಿ ನನ್ನ ಪ್ರಾರ್ಥನೆಯಿಷ್ಟೆ. ಯಾವಾಗಲೂ ನಿನ್ನ ಪಾದಕಮಲಾರ್ಚನೆಯು ಸರ್ವದಾ ನನಗೆ ಲಭಿಸಲಿ. ಇದರಿಂದಲೇ ನನಗೆ ಸಕಲ ಸಿದ್ಧಿಗಳೂ ಒದಗುವಾಗ ಇದಕ್ಕಿಂತಲೂ ದೊಡ್ಡ ವರವು ಮತ್ತಾವುದಿರುವುದು ? ಭಗವಂತನೇ, ನೀನು ಅದನ್ನು ಮಾತ್ರ ದಯಪಾಲಿಸು. ॥೨೩॥

ಸ್ವಾಮಿಯೇ, ಪ್ರತಿ ಜನ್ಮದಲ್ಲಿಯೂ ನನಗೆ ನಿನ್ನಲ್ಲಿ ಅತಿಶಯವಾದ ಭಕ್ತಿಯುಂಟಾಗಿರಲಿ. ಇತರ ದ್ರವ್ಯಗಳಲ್ಲಿ ಅನಾಸಕ್ತಿಯೂ, ಕೈಲಾಸಗಮನದಲ್ಲಿ ಆಸಕ್ತಿಯೂ ಜನಿಸಲಿ. ಲಿಂಗಾರ್ಚನೆಯಲ್ಲಿ ಪ್ರೀತಿಯೂ, ಆಶಾತ್ಯಾಗದಲ್ಲಿ (ಪರಶಿವನಲ್ಲಿ) ಪ್ರವೃತ್ತಿಯೂ, ಬಿಲ್ವಾರ್ಚನೆಯಲ್ಲಿ ಸುಬುದ್ಧಿಯೂ, ಶಿವಕಥೆಗಳಲ್ಲಿ ಆದರವೂ ನನಗೆ ಲಭಿಸಲಿ. ॥೨೪॥

ಇಲ್ಲಿಂದ ಮುಂದಿನ ಮಹಾಪ್ರಲಯಪರ್ಯಂತ, ಅಂತಕರಿಪು, ತ್ರಿಪುರಾಂತಕ ಎಂಬ ಶಿವನಾಮವೆಂಬ ನಾಟ್ಯಸ್ತ್ರೀಯು ನನ್ನ ನಾಲಿಗೆಯೆಂಬ ನಾಟ್ಯರಂಗದಲ್ಲಿ ಪರಶಿವನ ಚರಣಧ್ಯಾನಗಾನದಿಂದ ಸರ್ವದಾ ನರ್ತನ ಮಾಡುತ್ತಿರಲಿ. ॥೨೫॥

ಯೋಗ್ಯೈರಲಂ ಸಕಲಯಾಗಕುಲೈರಲಂ ಮೇ
ದಾನೈರಲಂ ಪರಿಮಲೈಃ ಕಮಲಾವಿಲಾಸೈಃ ।
ಅನ್ಯೈಶ್ಚ ಧರ್ಮನಿಕರೈಃ ಸುಕರೈರಪಾರೈ
ಗೌರೀಮನೋರಮಣ ತೇ ಚರಣಂ ಭಜಾಮಿ ॥೨೬॥

ಭಾಗ್ಯೈರಲಂ ಬಹುವಿಧೈರ್ನಿಧಿಕೋಟಿಭಿರ್ವಾ
ಮಾತಂಗಕೋಟಿಭಿರಲಂ ತುರಗಾರ್ಬುದೈರ್ವಾ ।
ಗೋಕೋಟಿಕೋಟಿಭಿರಲಂ ಮಹಿಷೀಕುಲೈರ್ವಾ
ಗೌರೀಮನೋರಮಣ ತೇ ಚರಣಂ ಭಜಾಮಿ ॥೨೭॥

ಗರ್ಭೇರ್ಭಕತ್ವಸಮಯೇಪಿ ವಿವೇಕಶೂನ್ಯ
ಸ್ತ್ವತ್ಪಾದಪದ್ಮವಿಮುಖಃ ಕುಮುಖಃ ಕಠೋರಃ ।
ತತ್ತಾವದೀಶಕೃಪಯಾ ನ ಪುನರ್ಮಮಾಸ್ತು
ಗೌರೀಮನೋರಮಣ ತೇ ಚರಣಂ ಭಜಾಮಿ ॥೨೮॥

---

ಗೌರೀಮನೋಹರನಾದ ಮಹೇಶ್ವರನೇ, ಅನೇಕ ಯಾಗಸಮೂಹಗಳಿಂದಲೂ, ದಾನಾದಿಗಳಿಂದಲೂ ನನಗೆ ಯಾವ ಫಲವೂ ದೊರಕಲಾರದು. ಐಶ್ವರ್ಯಾದಿಗಳಿಂದ ನನಗೆ ಪ್ರಯೋಜನವಿಲ್ಲ. ಅಷ್ಟು ಕಷ್ಟತರಗಳಾದ ಕಾರ್ಯಗಳಿಗಿಂತಲೂ, ಸರ್ವದಾ ನಿನ್ನ ಚರಣಕಮಲದಲ್ಲಿ ನಿರತಿಶಯವಾದ ಭಕ್ತಿಯಿರುವಂತೆ ನನಗೆ ಅನುಗ್ರಹಮಾಡು. ||೨೬||

ಅನೇಕ ಕೋಟಿಸಂಖ್ಯೆಯ ನಿಧಿಯಿಂದಲೂ, ಅಸಂಖ್ಯಾತವಾದ ಹಸ್ತ್ಯಶ್ವಾದಿಗಳಿಂದಲೂ, ಗೋಕೋಟಿಯಿಂದಲೂ, ಮಹಿಷೀಸಮೂಹದಿಂದಲೂ, ನನಗೆ ಅಷ್ಟು ತೃಪ್ತಿಯುಂಟಾಗಲಾರದು. ಗೌರೀಪತಿಯೇ, ನಿನ್ನ ಪಾದವನ್ನು ಸರ್ವದಾ ಸೇವಿಸುವೆನು. ||೨೭||

ಶಂಕರನೇ, ಗರ್ಭದಲ್ಲಿ ನಾನು ಶಿಶುತ್ವವನ್ನು ಪಡೆದು ವಾಸಮಾಡುತ್ತಿರುವಾಗಲೂ, ನಿನ್ನ ಪಾದಪದ್ಮಧ್ಯಾನವಿರುವಂತೆ ಅನುಗ್ರಹಮಾಡು. ನಿನ್ನ ಪಾದಪದ್ಮಧ್ಯಾನವಿಮುಖನಾಗಿ ಬಾಳುವ ಕಠೋರ ಪ್ರಕೃತಿಯು ಎಂದೂ ನನಗೆ ಬರದಂತೆ ಅನುಗ್ರಹಿಸು. ||೨೮||

ಪೌಗಂಡಮಂಡಿತತನುವ್ಯಸನಪ್ರಹರ್ಷ
ವರ್ಷಾಭಿಯೋಗಮಭಿಭೋಗಮಪಿ ಪ್ರಪದ್ಯ ।
ಭಕ್ತ್ಯಾ ಸ್ಮೃತೋಽಸಿ ಭಗವನ್ ನ ಮಯಾ ಜಡೇನ
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೨೯॥

ಸೋನ್ಮಾದಯೌವನವನೋಪಹತೇನ ತೇನ
ನಾರಾಧಿತೋಽಸಿ ನ ಮನಾಗಪಿ ಕೀರ್ತಿತೋಽಸಿ ।
ತತ್ತಾವದೀಶ್ವರಪುನರ್ನಮವಾಸ್ತು ಮಾಸ್ತು
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೩೦॥

ನಾರೀಮನೋಹರವಿಹಾರಪರಾಭಿಭೂತ
ಚಿತ್ತೇನ ತಾವದಸಕೃನ್ನನಮಸ್ಕೃತೋಽಸಿ ।
ತನ್ಮಾಸ್ತು ಮಾಸ್ತು ಹರ ಮಾಸ್ತು ಕದಾಪಿ ಮಾಸ್ತು
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೩೧॥

---

ಕೌಮಾರಾವಸ್ಥೆಯಲ್ಲಿ ಸೇರಿದ ನಾನು ಸುಖದುಃಖಮಿಶ್ರಿತವಾಗಿ ಅನೇಕ ವರ್ಷಗಳನ್ನು ಹೇಗೋ ಕಳೆದೆನು. ಭಗವಂತನೇ, ಅಷ್ಟುಕಾಲವೂ ನಿನ್ನ ಪಾದಧ್ಯಾನಮಾಡುವೆನು. ॥೨೯॥

ಯೌವನವೆಂಬ ಉನ್ಮಾದದಶೆಯಲ್ಲಿ ಸಿಕ್ಕಿದವನಾಗಿ ವಿಷಯಸುಖಗಳಲ್ಲಿ ಮುಳುಗಿ, ನಿನ್ನನ್ನು ಪೂಜಿಸಲಿಲ್ಲ. ಭಕ್ತಿಯಿಂದ ಪ್ರಾರ್ಥಿಸಲಿಲ್ಲ. ಅಂತಹ ಈಶ್ವರ ಪೂಜಾವೈಮುಖ್ಯವು ಮುಂದೆ ಎಂದೂ ನನಗೆ ಬೇಡ. ಆ ರೀತಿ ನನಗೆ ಅನುಗ್ರಹ ಪ್ರದಾನಮಾಡು. ॥೩೦॥

ಸ್ತ್ರೀಯರ ಹಾವಭಾವಾದಿಗಳಿಗೆ ಮನಸೋತು, ಅಲ್ಲಿಯೇ ಮನಸ್ಸಿಟ್ಟವನಾಗಿ ನಿನ್ನನ್ನು ಎಂದೂ ಮನಃಪೂರ್ವಕವಾಗಿ ಸ್ಮರಿಸಲಿಲ್ಲ. ನಮಸ್ಕರಿಸಲಿಲ್ಲ. ಶಂಭುವೇ ಮುಂದೆ ಇಂತಹ ನಾಸ್ತಿಕಮನಸ್ಸು ನನಗೆ ಎಂದೂ ಒದಗಬೇಡ. ಖಂಡಿತವಾಗಿಯೂ ಈ ಸ್ಥಿತಿಯು ನನಗೆ ಎಂದೂ ಬರಬೇಡ. ॥೩೧॥

ವಿತ್ತಾರ್ಜನಾಯ ಬಹುದೇಶನಿವಾಸದೋಷ
ವ್ಯಾಪಾರಪೂರಿತತನುರ್ನ ತದಾ ಕದಾಪಿ।
ಅಭ್ಯರ್ಚಿತೋಽಪಿ ಹಿ ಮಯಾ ತದಪಾಸ್ಯಮೇವ
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೩೨॥

ದಾರೋರುಹಾರಪರಿಹಾರವಿಹಾರಕಾರಾ
ಕಾರಾನುಕಾರಕರಣೇನ ವಯೋಽಪಿ ನೀತಂ।
ತೇನಾಲಮೇವ ಹರಹಾರಭಯಾಪಹಾರ
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೩೩॥

ಹಾರಪ್ರವೀರ ವರಮಾದರತೋ ಹರಾರಂ
ಹಾರಂ ಸಹಾರಮನುವಾರಮಪಿ ಸ್ಮರಾಮಿ।
ನಾದ್ಯಾಪಿ ಹಾರಚಿರಸಂಗತಿರಾವಿರಾಸೀ
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೩೪॥

---

ದ್ರವ್ಯಸಂಪಾದನೆಯ ಉದ್ದೇಶಕ್ಕಾಗಿ ನಾನಾದೇಶಗಳಲ್ಲಿ ಸಂಚರಿಸಿದೆನು. ನಾನಾ ಉದ್ಯೋಗಗಳಿಗಾಗಿ ದೇಹವನ್ನು ಸವೆಸಿದೆನು. ಅಷ್ಟಾದರೂ ನಿನ್ನನ್ನು ಮಾತ್ರ ಧ್ಯಾನಿಸಲಿಲ್ಲ. ಅಂತಹ ಜನ್ಮವು ಮುಂದೆ ಎಂದೂ ನನಗೆ ಬೇಡ. ಪರಶಿವನ ಪಾದಪದ್ಮವನ್ನು ಸರ್ವದಾ ಧ್ಯಾನಿಸುವಂತೆ ನನಗೆ ವರಪ್ರದಾನ ಮಾಡು. ॥೩೨॥

ಪತ್ನಿಯ ಅತಿಶಯ ಪ್ರೇಮಸಂಪಾದನೆಗಾಗಿ, ಅನೇಕ ಆಹಾರವಿಹಾರಾದಿಗಳಿಂದಲೂ, ಅದಕ್ಕೆ ಬೇಕಾದ ಸಾಮಗ್ರೀ ಸಂಪಾದನೆಯಿಂದಲೂ ನನ್ನ ಆಯುಸ್ಸನ್ನೆಲ್ಲಾ ಕಳೆದೆನು. ಆದರಿಂದಲೇ ನಾನು ಪರಶಿವನ ಪಾದಧ್ಯಾನಕ್ಕೆ ಇಲ್ಲಿನವರೆಗೂ ಮನಗೊಡಲಾಗಲಿಲ್ಲ. ಈಗಲಾದರೋ ಗೌರೀಪತಿಯ ಪಾದವನ್ನು ಭಜಿಸುವೆನು. ॥೩೩॥

ಪರಶಿವನೇ, ನಿನ್ನ ಭಕ್ತರಲ್ಲಿ ಅತಿಶಯವಾದ ಪ್ರೀತಿಯನ್ನು ತೋರ್ಪಡಿಸುವೆ. ಅಂತಹ ಮಹಿಮಾಶಾಲಿಗಳಾದ ನಿನ್ನ ಭಕ್ತರನ್ನೆಲ್ಲಾ ನಾನು ಬಹುವಾಗಿ ಸ್ಮರಿಸುತ್ತಿರುವೆನು. ಹಿಂದೆಮಾತ್ರ ಹರಭಕ್ತರ ಸಂಸರ್ಗದಲ್ಲಿ ನನಗೆ ಮನಸ್ಸು ಸೇರಲಿಲ್ಲ. ಈಗಲಾದರೂ ಶಂಕರಪಾದಾರವಿಂದವನ್ನು ಮನಸಾಭಜಿಸುವೆನು. ॥೩೪॥

ಮಾರೋಪಕಾರಕಶರಪ್ರವರಪ್ರಹಾರ
ಸಂಹಾರಭೀರುತರುಣೀಚರಣೋಪಘಾತ್ಯೈಃ ।
ನೀತಂ ದಿನಂ ಪ್ರತಿದಿನಂ ಶಮನಂ ನ ಮೇನೇ
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೩೫॥

ಸಂಸಾರಸಾಗರವಿಚಾರವಿದೂರಗರ್ತೇ
ವೃತ್ತಿಂ ಸ ವೃತ್ತಿರಪಿ ಹಾರಮನೋಹರೇಷು ।
ಹಾರೋಪಕಾರಕರಣೇಽಪಿ ನ ಮೇ ಪ್ರವೃತ್ತಿಃ
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೩೬॥

ಮಂದಾರಕುಂದನವಬಿಲ್ವದಲಪ್ರವಾಲ
ವಲ್ಲೀದಲೈರಪಿ ನ ಲಿಂಗಸಮರ್ಚನಾಯ ।
ಯತ್ನಃ ಕೃತಃ ಕ್ರತುಶತಾದಿಕಧರ್ಮಜಾಲೈಃ
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೩೭॥

---

ಪರಶಿವನೇ, ಮನ್ಮಥನ ಬಾಣಗಳನ್ನು ಬೀರುವುದರಿಂದ ಅತಿಬಲಿಷ್ಠರಾಗಿದ್ದರೂ ಭೀರುಗಳೆನಿಸಿದ ತರುಣಿಯರ ಪಾದತಾಡನಕ್ಕೆ ಸಿಕ್ಕಿದವನಾಗಿ ನಿನ್ನ ಪಾದಸ್ಮರಣೆ ಮಾಡದೇ, ಅನೇಕ ಕಾಲಗಳನ್ನು ಕಳೆದೆನು. ಆದರಿಂದ ಬೇರೆ ನನಗೆ ಯಾವ ಶಾಂತಿಯೂ ದೊರಕಲಿಲ್ಲ. ಈಗ ಪಾರ್ವತೀಮನೋಹರನಾದ ನಿನ್ನ ಪಾದಕಮಲವನ್ನು ಧ್ಯಾನಮಾಡುವೆನು. ॥೩೫॥

ದೇವದೇವನೇ, ಸಂಸಾರವೆಂಬ ಮಹಾಸಾಗರದ ಆಳವಾದ ಬಾವಿಯಲ್ಲಿ ನನಗೆ ಪ್ರವೃತ್ತಿಯುಂಟಾಗುವಂತೆ, ಹರಭಕ್ತರ ಸೇವೆಯಲ್ಲಿ ನನಗೆ ಆಸಕ್ತಿ ದೊರೆಯಲಿಲ್ಲ. ಅವರ ಸೇವಾಕಾರ್ಯಗಳಲ್ಲಿ ನಾನು ಬೇರೆ ಮುಂದುವರಿಯಲಿಲ್ಲ. ಈಗ ಶಂಕರನ ಪಾದಧ್ಯಾನದಲ್ಲಿ ಕಾಲಕಳೆಯುವೆನು. ॥೩೬॥

ಲಿಂಗಾರ್ಚನೆಗಾಗಿ ಮಂದಾರ, ಕುಂದ ಮುಂತಾದ ಪುಷ್ಪಗಳನ್ನೂ, ಪ್ರವಾಳದಂತೆ ಹೊಳೆಯುವ ಬಿಲ್ವದಳಗಳನ್ನೂ ಸಂಪಾದಿಸಲಿಲ್ಲ. ಮತ್ತು ನೂರಾರು ಯಾಗಗಳನ್ನು ಆಚರಿಸುವುದರಿಂದ ನಿನ್ನ ಪ್ರೀತಿಸಂಪಾದನೆಗೂ ಪ್ರಯತ್ನಮಾಡಲಿಲ್ಲ. ಗೌರೀಪತಿಯ ಪಾದವನ್ನು ಈಗಲಾದರೂ ಧ್ಯಾನಮಾಡುವೆನು. ॥೩೭॥

ಅಂಗಾರಸಾಗರವಿಕಾರಶರೀರಭಾರ
ಸಂಹಾರ ಮಾರಹರಹಾರವಿಚಾರಹೀನಃ ।
ದೈನಂದಿನಪ್ರಲಯಸಂಹರಣಪ್ರವೀರ ।
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೩೮॥

ಮಾಮೇವ ಮಾಮಕಧಿಯಾ ಪರಿಪಶ್ಯ ಪಶ್ಯ
ಕಾ ತಾವತಾಪಿ ತವ ತಾತ ವತಾತಿಹಾನಿಃ ।
ತ್ವಂ ದೀನಬಂಧುರಿತಿ ಕಿಂ ಶ್ರುತಿಷು ಶ್ರುತೋಽಪಿ
ಗೌರೀಮನೋರಮಣ ತ್ವಚ್ಚರಣಂ ಭಜಾಮಿ ॥೩೯॥

ಇತಿ ಸ್ತುತ್ವಾ ಮಹಾದೇವಂ ಪ್ರಣಿಪತ್ಯ ಪುನಃ ಪುನಃ ।
ಬಿಲ್ವಾದ್ಯೈರರ್ಚನಂ ಕೃತ್ವಾ ಕುರ್ಯಾನ್ನೈವೇದ್ಯಭೋಜನಂ ॥೪೦॥

ಶಿವನೈವೇದ್ಯಶೇಷಸ್ಯ ಭೋಜನೇನಾಪಿ ಶಂಕರಃ ।
ಹಾರಂ ಪದಂ ದದಾತ್ಯೇವ ಹಾರಾಹಾರಾಯ ಸಾದರಂ ॥೪೧॥

---

ಎಂದಾದರೊಂದುದಿನ ಅಗ್ನಿಯಲ್ಲಿ ದಗ್ಧವಾಗುವ ಈ ಶರೀರಕ್ಕಾಗಿ, ಮಾರಾರಿಯಾದ ನಿನ್ನ ಧ್ಯಾನದಲ್ಲಿ ವಿಮುಖನಾದೆನು. ನಿತ್ಯದಲ್ಲಿಯೂ ಪ್ರಲಯಾದಿ ಸಂಹಾರ ಕಾರ್ಯಗಳಲ್ಲಿ ಉತ್ಸುಕನಾಗಿರುವ ಮಹೇಶ್ವರನೇ, ಈಗ ಗೌರೀಪತಿಯೆನಿಸಿದ ನಿನ್ನ ಪಾದಧ್ಯಾನದಲ್ಲಿ ಅತ್ಯಾಸಕ್ತನಾಗಿರುವೆನು. ॥೩೮॥

ಮಹೇಶ್ವರನೇ, ನನ್ನನ್ನು ಇನ್ನುಮುಂದೆ ನಿನ್ನವನನ್ನಾಗಿಯೇ ಭಾವಿಸಿಕೋ. ಇದರಿಂದ ಜಗತ್ಕುಟುಂಬಿಯಾದ ನಿನಗೆ ಉಂಟಾಗುವ ಹಾನಿಯಾವುದು? ದೀನಬಂಧುವೆಂದು ನಿನ್ನನ್ನು ಸಕಲ ಶ್ರುತಿಗಳೂ ಸ್ತುತಿಸುತ್ತಿರುವಾಗ ನನ್ನನ್ನು ಅಲಕ್ಷಿಸುವುದು ಯಾವ ನ್ಯಾಯ?" ॥೩೯॥

ಹೀಗೆ ಮಹಾದೇವನನ್ನು ಬಹಳವಾಗಿ ಸ್ತುತಿಸಿ ಅನಂತರ ಬಿಲ್ವಾದಿಗಳಿಂದ ಅರ್ಚಿಸಿ, ದೇವನೈವೇದ್ಯಶೇಷವನ್ನು ಭೋಜನಮಾಡಬೇಕು. ॥೪೦॥

ಶಿವನಿಗೆ ನಿವೇದಿತವಾದ ಪದಾರ್ಥವನ್ನು ಯಾರು ಆದರದಿಂದ ಭಕ್ಷಿಸುವರೋ ಅಂತಹವರಿಗೆ ಶಂಕರನು ತನ್ನ ಸಾನ್ನಿಧ್ಯವನ್ನು ಕೊಡುವನು. ಅಲ್ಲದೆ ಭೋಜನಕಾಲದಲ್ಲಿ ಪ್ರತಿ ತುತ್ತಿಗೂ ಮಹಾದೇವನ ನಾಮಸ್ಮರಣೆ ಮಾಡುತ್ತಾ

ಪ್ರತಿಗ್ರಾಸೇಪಿ ಯತ್ನೇನ ಮಹಾದೇವಮನುಸ್ಮರೇತ್ ।
ಯಸ್ತಸ್ಯ ಪಾತಕಂ ತಾವತ್ ಕ್ಷಣೇನ ಲಯಮೇಷ್ಯತಿ ॥೪೨॥

ಸಿಕ್ಥಾನಾಂ ಸಂಖ್ಯಯಾ ಹಾರಃ ಸದಾ ಹಾರಾನುಮೋದನೇ ।
ಅದನೇನಾಪಿ ವಾ ನಿತ್ಯಂ ತಸ್ಯಾನಶನಜಂ ಫಲಂ ॥೪೩॥

ಹಾರೋಪಹಾರಕಬಲಂ ಸ್ಪೃಷ್ಟ್ವಾ ಸ್ಮರಹರಂ ಸ್ಮರನ್ ।
ಭುಕ್ತ್ವಾ ಮುಕ್ತೋ ಭವತ್ಯೇವ ಪಾಪಭೋಗೈಃ ಸಭಾಗ್ಯವಾನ್ ॥೪೪॥

ಹಾರೋಪಹಾರಂ ದೃಷ್ಟ್ವಾಪಿ ಮುಕ್ತೋ ದುರಿತರಾಶಿಭಿಃ ।
ತದ್ಭೋಜನಾನ್ಮಹಾನಂದಕಂದಕಂದಃ ಪ್ರಜಾಯತೇ ॥೪೫॥

ಹಾರೋ ಹರಂ ಸೋಪಹಾರಂ ದೃಷ್ಟ್ವಾ ಹರಹರೇತಿ ಯಃ ।
ವದತ್ಯುಚ್ಚೈಃ ಸ ಏವೋಚ್ಚಸ್ತತೋಪ್ಯುಚ್ಚೋ ನ ಕೋಪಿ ಹಿ ॥೪೬॥

ಹಾರೋಪಹಾರಸಮಯಂ ಯಃ ಪ್ರತೀಕ್ಷ್ಯಾಪ್ಯನುಕ್ಷಣಂ ।
ತುಷ್ಟಃ ಸೋಪಿ ವರಿಷ್ಠಃ ಸ್ಯಾದ್ವಸಿಷ್ಠಾದಿಮುನಿಷ್ವಪಿ ॥೪೭॥

---

ಭೋಜನಮಾಡಿದವನ ಸಕಲ ಪಾಪಗಳೂ ಕ್ಷಣಕಾಲದಲ್ಲಿ ನಾಶವಾಗುವುವು. ||೪೧-೪೨||

ಯಾರು ತಾವು ಆಹಾರ ಸ್ವೀಕಾರಕಾಲದಲ್ಲಿ ತುತ್ತಿನ ಸಂಖ್ಯೆಯಿಂದ ಶಂಕರ ನಾಮೋಚ್ಚಾರಣೆ ಮಾಡುತ್ತಾ ಭುಜಿಸುವರೋ ಅಂತಹವರು ಊಟಮಾಡಿದರೂ ಉಪವಾಸವ್ರತದ ಫಲವನ್ನು ಹೊಂದುವರು. ಶಿವನೈವೇದ್ಯವನ್ನು ಮುಟ್ಟಿ ಈಶ್ವರ ನಾಮಗಳನ್ನು ಉಚ್ಚರಿಸುತ್ತಾ ಭಕ್ಷಿಸಿದವನಾದರೆ ಅವನ ಸಕಲ ಪಾಪಗಳೂ ನಿವೃತ್ತಿಯಾಗಿ ಪುಣ್ಯಶಾಲಿಯೆನಿಸುವನು. ||೪೩-೪೪||

ಈಶ್ವರನ ನೈವೇದ್ಯದರ್ಶನಮಾತ್ರದಿಂದ ಪಾಪಮುಕ್ತನಾಗುವನು. ಹಾಗೆಯೇ ಭಕ್ಷಣದಿಂದ ಆನಂದಮಯನಾಗುವನು. ಹರಭಕ್ತನಾಗಿ ಹರಪ್ರಸಾದ ದರ್ಶನ ಮಾಡಿ, ಹರನಾಮೋಚ್ಚಾರಣೆಯಿಂದ ಅದನ್ನು ಭಕ್ಷಿಸಿದವನಿಗಿಂತ ದೊಡ್ಡವರು ಲೋಕದಲ್ಲಿ ಮತ್ತಾರಿರುವರು ! ||೪೫-೪೬||

ಶಿವಪ್ರಸಾದವನ್ನೇ ನಿರೀಕ್ಷಿಸುತ್ತಾ, ಅದನ್ನು ಭಕ್ಷಿಸಿ ಯಾವನು ತೃಪ್ತಿಗೊಳ್ಳುವನೋ ಅವನು ವಸಿಷ್ಠಾದಿ ಮಹರ್ಷಿಗಳಿಗಿಂತ ಅತ್ಯಂತ ಶ್ರೇಷ್ಠನೆನಿಸಿ

ಭಕ್ತಿರ್ಭವತಿ ಪುಣ್ಯೇನ ಶಿವನೈವೇದ್ಯಭೋಜನೇ ।
ಸಾ ಭಕ್ತಿರಚಲಾ ಯಸ್ಯ ಸ ಮುಕ್ತೋ ನಾತ್ರ ಸಂಶಯಃ ॥೪೮॥

ಹಾರೋಪಹಾರಪುಷ್ಟಾಂಗಂ ಹಾರಂ ದೃಷ್ಟ್ವಾಪಿ ದೂರತಃ ।
ಪ್ರೀತ್ಯಾ ಪ್ರಹೃಷ್ಟಹೃದಯೋ ಸ ಮುಕ್ತೋ ಭವತಿ ಧ್ರುವಂ ॥೪೯॥

ಹಾರೋಪಹಾರಪರಿಪಾಕವಿಶೋಕಮೇಕಂ
ಲೋಕೇ ಕಮುಪ್ಯತಿನಿರಂಕುಶಮಾಶ್ರಯಂತಿ ।
ಧನ್ಯಾಸ್ತದಂಘ್ರಿಕಮಲಂ ಕಮಲಾಲಯಸ್ಸ್ಯಾತ್
ತಂ ನಿತ್ಯಮೇವ ಕಮಲಾಪರಿಪೂಜಿತಂ ಚ ॥೫೦॥

ತಂ ತಾವತ್ಪರಮಂ ವದಂತಿ ಮುನಯೋ ಯೋ ಹಾರಮೇವಾದರಾ
ದಾಹಾರಂ ಪರಿಕಲ್ಪ್ಯ ಜೀವತಿ ಹರಂ ಹಾರ್ಯೈಃ ಸಹಾತ್ಯಾದರಾತ್ ।
ಸ್ಮೃತ್ವಾ ನೃತ್ಯತಿ ಹಾರನಾಮಪುನರಪ್ಯುನ್ಮತ್ತವತ್ಕೀರ್ತಯ ।
ಚ್ಛಾಂಗಂ ಲಿಂಗಮವೇಕ್ಷ್ಯ ಮೋಕ್ಷಸುಖದಂ ಭೂಯಃ ಪ್ರಣಮ್ಯಾನ್ವಹಂ ॥೫೧॥

---

ಕೊಳ್ಳುವನು. ಶಿವನೈವೇದ್ಯ ಭೋಜನವೆಂಬ ಪುಣ್ಯಾರ್ಜಿತವಾದ ಶಿವಭಕ್ತಿಯು ದೃಢವಾಗಿ ನಿಂತು ಆದರಿಂದ ಆತನು ಮುಕ್ತನೆನಿಸಿಕೊಳ್ಳುವುದರಲ್ಲಿ ಸಂಶಯವಿಲ್ಲ. ॥೪೭-೪೮॥

ಶಿವಪ್ರಸಾದ ಭಕ್ಷಣದಿಂದ ತುಂಬಿದ ದೇಹವುಳ್ಳ ಶಂಕರಭಕ್ತನನ್ನು ನೋಡಿ ಆನಂದಿಸಿದವನೂ ನಿಜವಾಗಿ ಮುಕ್ತನಾಗುವನು. ॥೪೯॥

ಶಿವಪ್ರಸಾದ ಸೇವನೆಯಿಂದ ಸಕಲ ದುಃಖವಿವರ್ಜಿತನಾಗಿ ಸರ್ವತಂತ್ರ ಸ್ವತಂತ್ರನೆನಿಸಿದ ಪುರುಷನನ್ನು ಯಾರು ಆಶ್ರಯಿಸುವರೋ ಅವರೇ ಧನ್ಯರು. ಅವರ ಪಾದಕಮಲವಿದ್ದ ಸ್ಥಳದಲ್ಲಿಯೇ ಲಕ್ಷ್ಮಿಯು ನೆಲಸುವಳು. ಲಕ್ಷ್ಮಿಯೇ ಅಂತಹವನನ್ನು ಪೂಜಿಸುವಳು. ॥೫೦॥

ಯಾರು ಹರಪ್ರಸಾದವನ್ನೇ ಮುಖ್ಯಾಹಾರವನ್ನಾಗಿ ಮಾಡಿಕೊಂಡು ಹರಭಕ್ತರೊಡನೆ ಸಂತೋಷದಿಂದ ಜೀವಿಸುವರೋ, ಮತ್ತು ಯಾರು ಸರ್ವದಾ ಹರನಾಮಸ್ಮರಣೆಮಾಡುತ್ತಾ ಉನ್ಮತ್ತರಂತೆ ಮೋಕ್ಷಸುಖಪ್ರದವಾದ ಶಂಕರಲಿಂಗ

ಹಾರೋದಾರಗುಣಾನುವರ್ಣನಪರಾ ಜಿಹ್ವಾಪಿ ಯೇನಾರ್ಜಿತಾ
ತತ್ಪಾದಾಂಬುಜರೇಣುಕಾಮುಪಗತೋ ಭೀತಿಂ ಜಹಾತ್ಯಂತಕಾತ್ ।
ಭೂತೇಭ್ಯಃ ಕಿಮುತೇತಿ ಸಂತತಮತಿಶ್ರಾಂತೋಽಪಿ ಕಾಂತಾದರ ।
ವ್ಯಾಪಾರಪ್ರಚುರಾನುಬಂಧರಹಿತೋ ಜೀವತ್ಯಹೋ ಕೇವಲಂ ॥೫೨॥

ಕರ್ಣ ಸ್ವಯಂ ನ ಶೃಣು ನೈವ ವದಸ್ವ ಜಿಹ್ವೇ
ನಾರ್ಚಸ್ವ ಹಸ್ತ ನ ವಿಲೋಕಯ ನೇತ್ರಯುಗ್ಮ ।
ಚೇತೋ ನ ಚಿಂತಯ ನ ಚಾಶ್ರಯ ಚಾನ್ಯದೇವಂ ।
ತ್ಯಕ್ತ್ವಾ ಮಹೇಶ್ವರಪದಾಂಬುಜಮಾದರೇಣ ॥೫೩॥

ಚೇತಶ್ಶಂಕರಮಾಶ್ರಯೇತರಸುರಾಂಸ್ತದ್ವಾರದೌವಾರಿಕಾನ್
ಹಾರದ್ವಾರವಿಚಾರಕಾತರತರಾಂತ್ಸೇಂದ್ರಾನುಪೇಂದ್ರಾದಿಕಾನ್ ।

---

ವನ್ನು ಸ್ಮರಿಸಿ, ನಮಸ್ಕರಿಸಿ ನರ್ತನಮಾಡುವರೋ, ಅಂತಹವರೇ ಅತ್ಯಂತ ಶ್ರೇಷ್ಠರೆಂದು ಸಕಲ ಮುನಿಗಳೂ ಹೊಗಳುವರು. ॥೫೧॥

ಯಾರು ಹರಭಕ್ತರ ಅಥವಾ ಹರ ಸಂಬಂಧವಾದ ಉದಾರಗುಣ ಕಥನಗಳನ್ನೇ ಮಾಡುತ್ತಾ ಸರ್ವದಾ ಜೀವಿಸುವರೋ, ಅಂತಹವರ ಪಾದಸೇವನೆಯಿಂದಿರುವ ಮನುಷ್ಯನಿಗೆ ಯಮನ ಭಯವೇ ಇರುವುದಿಲ್ಲ. ಇನ್ನು ಇತರ ಪ್ರಾಣಿಗಳ ಭಯಕ್ಕೆ ಅವಕಾಶವೆಲ್ಲಿರುವುದು ? ಅಂತಹವರು ಅತ್ಯಂತ ಬಳಲಿದವರಾಗಿದ್ದರೂ ಸಂಸಾರಸಂಬಂಧವಾದ ಸಕಲ ದುಃಖಗಳಿಂದಲೂ ಮುಕ್ತರಾಗಿ ಜೀವಿಸುವರು. ಇದರಲ್ಲಿ ಸಂಶಯವಿಲ್ಲ. ॥೫೨॥

ಕಿವಿಯೇ, ಶಿವಾತಿರಿಕ್ತವಾದ ದೇವನಾಮಗಳನ್ನು ಕೇಳಬೇಡ. ನಾಲಿಗೆಯೇ, ನೀನು ಹೇಳಬೇಡ. ಕೈಯೇ, ಶಿವಭಿನ್ನನಾದ ಮತ್ತೊಬ್ಬದೇವನನ್ನು ಅರ್ಚಿಸಬೇಡ. ನೇತ್ರಯುಗ್ಮಗಳೇ, ಅಂತಹ ಪರಶಿವನನ್ನೇ ನೋಡುತ್ತಿರು. ಶಿವನನ್ನು ಬಿಟ್ಟು ಬೇರೆ ದೇವರನ್ನು ಎಲೈ ಮನಸ್ಸೇ, ಎಂದೂ ಚಿಂತಿಸಬೇಡ ಮತ್ತು ಆಶ್ರಯಿಸಬೇಡ. ಶಿವಪಾದಧ್ಯಾನ ವೊಂದರಲ್ಲಿಯೇ ನೀವೆಲ್ಲರೂ ಅಡಗಿರುವವರಾಗಿರಿ. ॥೫೩॥

ಎಲೈ ಮನಸ್ಸೇ, ನಿನಗೆ ನಿಜವಾಗಿ ಶ್ರೇಯೋಭಿಲಾಷೆಯಿರುವುದಾದರೆ, ಶಂಕರನನ್ನು ಬಿಟ್ಟು ಮತ್ತಾವದೇವರನ್ನೂ ಆಶ್ರಯಿಸಬೇಡ. ಅಲ್ಲದೆ ಇಂದ್ರ,

ದೂರೇ ಸಂತ್ಯಜ ಸಂತ್ಯಜಾಂತ್ಯಜಮಿವ ಸ್ವಪ್ನೇಽಪಿ ಮಾ ಸಂಶ್ರಯ
ಶ್ರೇಯಶ್ಚೇತ್ತವ ವಾಂಛಿತಂ ಶಿವತರಂ ಸಾಂಬಂ ಸಮಾಲಂಬಯ ॥೫೪॥

ಚೇತಶ್ಚಿಂತಯ ಶಂಕರಂ ಜಪ ಶಿವಂ ಜಿಹ್ವೇ ನಮೇಶಂ ಶಿರೋ
ನೇತ್ರಾಂಭೋರುಹ ಶಾಂಗಲಿಂಗಮಮಲಂ ಪಶ್ಯಾದರೈಃಪೂಜಿತಂ ।
ರೇ ರೇ ಕರ್ಣಪುಟಾಶು ಶಂಕರಕಥಾಪೀಯೂಷಧಾರಾಃ ಪಿಬ
ಘ್ರಾಣಾಘ್ರಾಯ ಲಭಸ್ವ ಶಂ ಶಿವಪದಾಂಭೋಜಚ್ಯುತಂ ಕೇಸರಂ ॥೫೫॥

ರೇ ರೇ ಚಾರುಕರಾತಿಕೋಮಲಲಸದ್ಬಿಲ್ವೀದಲೈಃ ಶಂಕರಂ
ಲಿಂಗೇ ಪೂಜಯ ಲಿಂಗಮಸ್ತಕಮುಪಸ್ಪೃಶ್ಯಾದರೇಣಾನ್ವಹಂ ।
ಕೃತ್ವಾ ಹಸ್ತಪುಟಂ ಶಿರಸ್ಯಪಿ ಮುಹುರ್ನಾಟ್ಯೋತ್ಸವೈಃ ಶಂಕರಂ
ನತ್ವಾ ಸ್ವಾಭಿನಯೈರ್ವಿನೋದಯ ಮಹಾಮೃತ್ಯುಂಜಯಂ ಚಾವ್ಯಯಂ
॥೫೬॥

---

ಉಪೇಂದ್ರ ಮುಂತಾದ ದೇವತೆಗಳು ಈಶ್ವರ ಗೃಹದ್ವಾರ ರಕ್ಷಕರು. ಅದರಲ್ಲಿಯೂ ಅವರು ಅಹಮಹಮಿಕೆಯಿಂದ ಮುಂದುವರಿಯುತ್ತಿರುವರು. ಅಂತಹ ದ್ವಾರಪಾಲಕರನ್ನು ಅಂತ್ಯಜರಂತೆ ದೂರವಾಗಿಟ್ಟು, ಅವರನ್ನು ಸ್ವಪ್ನದಲ್ಲಿಯೂ ಸ್ಮರಿಸದೇ ಇರು. ॥೫೪॥

ಎಲೈ ಮನಸ್ಸೇ, ಶಂಕರನನ್ನೇ ಧ್ಯಾನಿಸು. ನಾಲಿಗೆಯೇ, ಮಹಾದೇವ ಮಂತ್ರವನ್ನೇ ಜಪಿಸು. ಶಿರಸ್ಸೇ, ಶಂಭುವಿಗೇ ಎರಗು. ಕಣ್ಣುಗಳೇ, ಪೂಜಿತವಾದ ಶಿವಲಿಂಗಗಳ ದರ್ಶನವನ್ನೇ ಪಡೆಯಿರಿ. ಕರ್ಣಗಳೇ, ಈಶ್ವರನ ಕಥಾಭಾಗವೆಂಬ ಅಮೃತವನ್ನೇ ಸೇವಿಸಿರಿ. ನಾಸಿಕವೇ, ಪರಶಿವನ ಪಾದಕಮಲದ ಕೇಸರಗಳ ಸುವಾಸನೆಯನ್ನೇ ಸೇವಿಸಿ ಸೌಖ್ಯಹೊಂದು. ॥೫೫॥

ಎಲೈ ಮನಸ್ಸೇ, ಮನೋಹರವೂ ಕೋಮಲವೂ ಆದ ಬಿಲ್ವದಳಗಳಿಂದ ಈಶ್ವರಲಿಂಗವನ್ನು ಪೂಜಿಸು. ಶಿವಮಸ್ತಕವನ್ನು ಭಕ್ತಿಯಿಂದ ಸ್ಪರ್ಶಿಸು. ಅಂಜಲಿಯನ್ನು ಶಿರಸ್ಸಿನಲ್ಲಿಟ್ಟು ಅವ್ಯಯನೂ, ಮೃತ್ಯುಂಜಯನೂ ಆದ ಈಶ್ವರನನ್ನು ನಾಟ್ಯೋತ್ಸವಾದಿಗಳಿಂದ ತೃಪ್ತಿಗೊಳಿಸು. ॥೫೬॥

ರೇ ರೇ ಮಾನಸರಾಜಹಂಸ ತರಸಾ ಸಾಂಬಾಂಘ್ರಿಪಂಕೇರುಹಂ
ಸೇಂದ್ರೋಪೇಂದ್ರವಿರಿಂಚಿಮಾನಸಮಹಾಹಂಸಪ್ರಶಂಸಾವಹಂ ।
ತತ್ತ್ವಂ ಸಂಭಜ ಸಂಭಜಾಂತಕಮಹಾವ್ಯಾಧಾನ್ನ ತೇ ತತ್ರ ಭೀಃ
ಭವ್ಯಂ ಭಾವಿ ಭವೋದ್ಭವಾದಭಯದಾತ್ಸಂಭಾವಿತಂ ಶೋಭನಂ ॥೫೭॥

ರೇ ರೇ ಚಿದ್ಭ್ರಮರ ಪ್ರಧಾವಸಿ ವೃಥಾ ಸಂಸಾರ ಘೋರೋಷರಾ
ಪಾರಾಂಭೋರುಹಗಂಧಲೋಲುಪ ನ ತೇ ಗಂಧೋ ನ ಚಾಂಭೋರುಹಂ ।
ಸಂಸಾರೋಷರಮಂಡಲೇಷು ಬಹುಧಾ ಶ್ರಾಂತೋಽಧುನಾ ಮಾ ಭಜ
ಬ್ರಹ್ಮಾನಂದಮರಂದಕಂದಮಸಕೃದ್ಗೌರೀಶಪಾದಾಂಬುಜಂ ॥೫೮॥

ರೇ ರೇ ಚಾರುಶಿರಃ ಪುನಃಪುನರುಮಾಕಾಂತಾಂಗಣೇ ಲುಂಠನೈ
ರಾಸ್ವೇದಾನತಿಭಿಶ್ಚ ಜನ್ಮ ತವ ತತ್ಸಾರ್ಥಂ ಕುರುಷ್ವಾದರಾತ್ ।

---

ಎಲೈ ಮನಸ್ಸೆಂಬ ರಾಜಹಂಸವೇ, ನೀನು ಶಂಕರನ ಪಾದಕಮಲವನ್ನು ಆಶ್ರಯಿಸು. ಆ ಕಮಲವು ಬ್ರಹ್ಮ, ವಿಷ್ಣು, ಇಂದ್ರ ಇವರೇ ಮುಂತಾದ ಮಾನಸ ರಾಜಹಂಸಗಳಿಂದ ಸೇವಿತವಾಗಿರುವುದು. ಅಲ್ಲದೆ ಅಲ್ಲಿ ಸೇರಿದ ರಾಜಹಂಸಗಳಿಗೆ ಎಂತಹ ದೊಡ್ಡ ವ್ಯಾಧನಿಂದಲೂ ಭಯವಿರಲಾರದು. ಅಂತಹ ಶಿವಪಾದಕಮಲ ಸೇವನೆಯಿಂದ ಮನುಷ್ಯರ ಜನ್ಮಾಂತರದಿಂದೊದಗುವ ಸಕಲ ಭಯವೂ ನಾಶವಾಗಿ ನಿಜವಾದ ಮುಕ್ತಿಪ್ರಾಪ್ತಿಯಾಗುವುದು. ॥೫೭॥

ಎಲೈ ಚಿತ್ತವೆಂಬ ದುಂಬಿಯೇ, ನೀನು ಸಂಸಾರವೆಂಬ ಘೋರವಾದ ನಿರ್ಜಲಸಮುದ್ರದಲ್ಲಿ ಕಮಲವನ್ನು ಹುಡುಕಿ ಅದರ ವಾಸನೆಯನ್ನು ಸೇವಿಸ ಬೇಕೆಂದು ತವಕಿಸುತ್ತಿರುವೆ. ಇದು ನಿನ್ನ ಭ್ರಮೆ. ಅಲ್ಲಿ ಕಮಲವೂ ಇಲ್ಲ. ಗಂಧವೂ ಇಲ್ಲ. ಅಂಥ ನಿರ್ಜಲ ಸಂಸಾರಸಮುದ್ರದಲ್ಲಿ ಸುತ್ತಿ ಬಳಲಿದ ನೀನು ಈಗಲಾದರೂ ಬ್ರಹ್ಮಾನಂದವೆಂಬ ಮಕರಂದದಿಂದ ತುಂಬಿದ ಗೌರೀಪತಿಯ ಪಾದಕಮಲವನ್ನು ಸೇವಿಸುವವನಾಗು. ಅದರಿಂದಲೇ ನಿನ್ನ ಇಷ್ಟಾರ್ಥವು ಸಿದ್ಧಿಸುವುದು. ॥೫೮॥

ಎಲೈ ಸುಂದರವಾದ ಶಿರಸ್ಸೇ, ನೀನು ಇನ್ನುಮುಂದೆ ಸರ್ವದಾ ಶಿವ ದೇವಾಲಯದಲ್ಲಿ ಶಿವಲಿಂಗದ ಎದುರಿಗೆ ಉರುಡಾಡುತ್ತಿರು. ಆದರಿಂದಲೇ ನಿನ್ನ ಜನ್ಮವನ್ನು ಸಾರ್ಥಕಪಡಿಸಿಕೋ. ಪದೇ ಪದೇ ನಮಸ್ಕಾರಮಾಡುವುದರಿಂದ ನಿನ್ನ

ಭೂಯಸ್ತತ್ಪ್ರಣತಿಪ್ರಭೂತಕಿಣಜಾಪಾರವ್ಯಥಾನಾಶಕಂ ।
ತತ್ಪಾದಾಂಬುಜಮಾಲ್ಯಗಂಧನಸುತಿ ಜ್ಞಾತಂ ಮಯಾ ತತ್ಕುರು ॥೫೯॥

ಸಂಸಾರೋರುತರೋಃ ಕಶೋರಪಿತರೋ ಘೋರಃ ಕುಠಾರಃ ಪರೋ
ಹಾರಾರಾಧನಮಿತ್ಯವೈಮಿ ತದಿದಂ ಸಂಸಾರಿಣಾಂ ದುರ್ಲಭಂ ।
ಯೇನೇದಂ ಸಕೃದಪ್ಯಸಂತಸುಕೃತೈರತ್ಯಾದರಾಚ್ಚೇತ್ಕೃತಂ
ನೀರೈರ್ವಾ ಸ ತರತ್ಯಪಾರವಿವಿಧವ್ಯಾಧಿಪ್ರಪೂರ್ಣಾರ್ಣವಂ ॥೬೦॥

ಏವಂ ಸ್ತುತ್ವಾ ಮಹಾದೇವಂ ಪ್ರಣಮ್ಯ ಚ ಪುನಃ ಪುನಃ ।
ಭುಕ್ತ್ವಾ ಶಂಕರನೈವೇದ್ಯಂ ಶಾಂಭವೈಸ್ಸಹ ಸಂವಸ ॥೬೧॥

ಶಾಂಭವೈಃ ಸಹ ಸಂವಾಸೋ ನ ತ್ಯಾಜ್ಯಃ ಸರ್ವಥಾ ತ್ವಯಾ ।
ಶಾಂಭವಾಂಛಿವನೈವೇದ್ಯೈಃ ಪರಿಪಾಲಯ ಸಾದರಂ ॥೬೨॥

ಶಾಂಭವಾ ಏವ ತೇ ರಾಜನ್ ಸಹಾಯಾಃ ಸಂತು ಸರ್ವಥಾ ।
ಲಿಂಗಾರ್ಚನಾದಿಸಮಯೇ ತದನ್ಯಾನ್ನಾವಲೋಕಯೇತ್ ॥೬೩॥

---

ತಲೆಯಲ್ಲಿ ಕಟ್ಟಿದ ಜಡ್ಡು ಪರಶಿವನ ಪಾದಕಮಲದ ರಜಸ್ಸಿನಿಂದ ಪರಿಹಾರವಾಗಿ ಅದೇ ನಿನಗೆ ಅತ್ಯಂತ ಸುಖಪ್ರದವೆನಿಸುವುದು. ಒಟ್ಟಿನಲ್ಲಿ ಪರಶಿವನ ಚರಣಕಮಲ ರಜಃಪ್ರಾಪ್ತಿಗಾಗಿ ಈಗ ಪ್ರಯತ್ನಿಸು. ॥೫೯॥

ಈ ಶಿವಾರಾಧನೆಯೆಂಬುದು ಸಂಸಾರವೆಂಬ ದೊಡ್ಡದಾದ ವೃಕ್ಷಕ್ಕೆ ಕೊಡಲಿಯಂತಿರುವುದು. ಇಂತಹ ಸಂಸಾರನಾಶಕವಾದ ಆರಾಧನೆಯು ಸಂಸಾರಿಗಳಿಗೆ ದೊರೆಯುವುದು ದುರ್ಲಭ. ಆದರೂ ಪುಣ್ಯವಶದಿಂದ ಇದರಲ್ಲಿ ಮನಸ್ಸಿಟ್ಟು ಕೇವಲ ಜಲದಿಂದಲಾದರೂ ಪರಶಿವನನ್ನು ತೃಪ್ತಿಗೊಳಿಸಿ ಪುಣ್ಯಾರ್ಜನೆಮಾಡಿದರೆ ಅಂತಹವನಿಗೆ ಘೋರನರಕದ ಭಯವು ತಪ್ಪುವುದಲ್ಲದೆ ಮಹಾಮಹಾ ವ್ಯಾಧಿಗಳಿಂದ ತುಂಬಿದ ಈ ಸಂಸಾರಸಮುದ್ರವನ್ನು ಸುಲಭವಾಗಿ ದಾಟುವ ಯೋಗ್ಯತೆಯು ಬರುವುದು. ॥೬೦॥

ಹೀಗೆ ಮಹಾದೇವನನ್ನು ಸ್ತುತಿಸಿ ಶಂಕರನ ಪ್ರಸಾದವನ್ನು ಭಕ್ಷಿಸಿ ಶಂಭುಭಕ್ತರೊಡನೆ ವಾಸಮಾಡಬೇಕು. ಶಾಂಕರರೊಡನೆ ಇರುವುದು ಬಹಳ ಶ್ರೇಯಸ್ಕರ. ಶಂಭುಭಕ್ತರನ್ನು ಶಂಕರಪ್ರಸಾದದಿಂದಲೇ ರಕ್ಷಿಸಬೇಕು. ಎಲೈ ರಾಜನೇ, ನಿನಗೆ

ಶಿವಾರ್ಚನಾದಿಸಮಯೇ ಶಾಂಭವೈಃ ಸಹ ಸಂಗಮೇ ।
ಶಿವಾರ್ಚನಂ ಸಾಂಗಮೇವ ಸಂಗಾತ್ತಸ್ಮಾತ್ಫಲಂ ಭವೇತ್ ॥೬೪॥

ಶಿವಮಂತ್ರಾಧಿಕಾರೋಽಪಿ ಶಾಂಭವಾನಾಂ ತಥಾ ಸತಿ ।
ಶಿವಮಂತ್ರೋಚ್ಚಾರಣಂ ಚ ಶಿವಾರ್ಚಾಂಗಮಿತಿ ಶ್ರುತಂ ॥೬೫॥

ಶಿವಮಂತ್ರಾರ್ಥಬೋಧೇನ ಪ್ರಹೃಷ್ಟಾಃ ಶಾಂಭವಾಃ ಪುನಃ ।
ಉಚ್ಚೈಃ ಪಠಂತಿ ತಾನ್ ಮಂತ್ರಾನ್ ತೇನಾರ್ಥಸ್ಮರಣಂ ಭವೇತ್ ॥೬೬॥

ತದರ್ಥಸ್ಮರಣಂ ಚಾಂಗಂ ಸೋಽಪ್ಯರ್ಥಃ ಸಂಸ್ಮೃತಸ್ತಥಾ ।
ಯಥಾ ಸ್ವಾಧ್ಯಾಯಸಂಪ್ರಾಪ್ತೇ ಮಂತ್ರೇಽಪೀತ್ಯವಧಾರಯ ॥೬೭॥

ಭುಕ್ತ್ವಾ ಶಿವಕಥಾಮೇವ ಶಾಂಭವೋತ್ತಮಬೋಧಿತಾಂ ।
ಶ್ರುತ್ವಾ ಸಾಯಮುಮಾಕಾಂತಂ ಪೂಜಯಿತ್ವಾ ಯಥೋಚಿತಂ ॥೬೮॥

---

ನಿಜವಾದ ಸಹಾಯಕರೆಂದರೆ ಈಶ್ವರಭಕ್ತರೇ. ಶಿವಲಿಂಗಾರ್ಚನೆಮಾಡುವಾಗ ತತ್ಪೂಜಾಪರರನ್ನೇ ನೋಡಬೇಕು. ಇತರರನ್ನು ನೋಡಲೇಬಾರದು.॥೬೧-೬೨-೬೩॥

ಶಿವಾರ್ಚನೆಮಾಡುವಾಗ ಶಿವಸೇವಕರ ಸಂಬಂಧವಿರಬೇಕು. ಅದರಿಂದ ಶಿವಪೂಜೆಯು ಸಾಂಗವೆನಿಸುವುದು. ಹರಭಕ್ತರ ಸಂಸರ್ಗವಿಲ್ಲದ ಶಿವಪೂಜೆಯು ಸಾಂಗವೆನಿಸಲಾರದು. ಶಿವಮಂತ್ರೋಚ್ಚಾರಣಯೋಗ್ಯತೆಯು ಶಿವಪೂಜಕರಿಗಲ್ಲದೆ ಮತ್ತಾರಿಗೂ ಸೇರದು. ಶಿವಮಂತ್ರೋಚ್ಚಾರಣೆಯೂ ಶಿವಪೂಜೆಯ ಅಂಗವಾದದ್ದೇ. ॥೬೪-೬೫॥

ಶಿವಮಂತ್ರಾರ್ಥದ ತಿಳಿವಳಿಕೆಯಿಂದ ಶಂಭುಭಕ್ತರು ಸಂತುಷ್ಟರಾಗುವರು. ಅದಕ್ಕಾಗಿಯೇ ಮಂತ್ರಾರ್ಥಸ್ಮರಣೆಯ ಉದ್ದೇಶದಿಂದ ಮಂತ್ರಗಳನ್ನು ಗಟ್ಟಿಯಾಗಿ ಉಚ್ಚರಿಸುವರು. ಈ ಅರ್ಥಜ್ಞಾನವೂ ಶಿವಪೂಜೆಗೆ ಒಂದು ಅಂಗವೆಂದೇ ಭಾವಿಸಬೇಕು. ಅಧ್ಯಯನ ಕಾಲದಲ್ಲಿಯೂ ಹೀಗೆ ಸ್ಪಷ್ಟವಾಗಿ ಅರ್ಥತಿಳಿಯುವಂತೆ ಉಚ್ಚರಿಸಬೇಕೆಂಬುದನ್ನು ಗ್ರಹಿಸಬೇಕು. ॥೬೬-೬೭॥

ಮಧ್ಯಾನ್ಹಕಾಲದಲ್ಲಿ ಶಿವಪ್ರಸಾದವನ್ನು ಭಕ್ಷಿಸಿ, ಅನಂತರ, ಶಂಭುಭಕ್ತರಿಂದ ಉಪದೇಶಿಸಲ್ಪಟ್ಟ ಶಿವಕಥೆಯನ್ನು ಶ್ರವಣಮಾಡಿ, ಮತ್ತೆ ಸಾಯಂಕಾಲ

ಪ್ರಹರಾನಂತರಂ ಶಯ್ಯಾಂ ಶಂಕರಾಯ ನಿವೇದಯ
ಶಯನೇಪ್ಯುಪಚಾರಾಂಸ್ತು ಕಲ್ಪನೀಯಾಃ ಪ್ರಯತ್ನತಃ ॥೬೯॥

ಸುಗಂಧಕುಸುಮಾದೀನಿ ದ್ರವ್ಯಾಣಿ ಶಿವಮಂದಿರೇ ।
ಸ್ಥಾಪನೀಯಾನಿ ಯತ್ನೇನ ಶಿವಾರ್ಥಮಿತಿ ಕೇವಲಂ ॥೭೦॥

ಯಸ್ತು ರಾತ್ರೌ ಮಹೇಶಾಯ ಪೂಜಾಂತೇ ಶಯನಾದಿಕಂ ।
ಕಲ್ಪಯೇತ್ತೇನ ಪುಣ್ಯೇನ ಭವೇದ್ಭೂಮಂಡಲಾಧಿಪಃ ॥೭೧॥

ಶಿವಾರ್ಚನಸಮಂ ಪುಣ್ಯಂ ನ ಶ್ರುತಂ ತೇನ ಸಿದ್ಧಯಃ ।
ಕರಸ್ಥಾ ಏವ ತತ್ಸಿದ್ಧಿರ್ವಿಶ್ವಾಸೇನ ಪರಂ ಭವೇತ್ ॥೭೨॥

ಮನುಷ್ಯಾಣಾಂ ತು ಸರ್ವೇಷಾಂ ಸರ್ವದಾ ಕಲುಷಾತ್ಮನಾಂ ।
ಮಹಾದೇವಾರ್ಚನೇ ಪ್ರೀತಿರ್ನ ಭವಿಷ್ಯತಿ ಸರ್ವಥಾ ॥೭೩॥

ಮನುಷ್ಯದೇಹಮಾಸಾದ್ಯ ವಿಶ್ವಸ್ಯಾಪಿ ಸದಾಶಿವಂ ।
ಯಃ ಪೂಜಯತಿ ಸರ್ವೇಶಂ ಸ ಮುಕ್ತೋ ಭವತಿ ಧ್ರುವಂ ॥೭೪॥

ವಿಶ್ವೇಶಪೂಜನಂ ಕೃತ್ವಾ ಕೃತ್ವಾ ವೀರೇಶ್ವರಾರ್ಚನಂ ।
ಕಾಶೀವಾಸರತೋ ಜಾತೋ ಬ್ರಾಹ್ಮಣಶ್ಯಾಸ್ತ್ರಪಾರಗಃ ॥೭೫॥

---

ಪಾರ್ವತೀಪರಶಿವರನ್ನು ಆರಾಧಿಸಿ, ರಾತ್ರಿ ಒಂದು ಯಾಮ ಕಳೆದಮೇಲೆ ಶಂಕರ ಪ್ರೀತ್ಯರ್ಥವಾಗಿ ಒಂದು ಹಾಸಿಗೆಯನ್ನು ಸಿದ್ಧಗೊಳಿಸಿ, ಅದನ್ನು ಫಲಪುಷ್ಪಗಳಿಂದ ಅಲಂಕರಿಸಿ, ಅದನ್ನು ಪರಶಿವನಿಗೆಂದು ಅರ್ಪಿಸಬೇಕು. ॥೬೮-೬೯-೭೦॥

ಯಾರು ಈರೀತಿ ಮಹೇಶ್ವರನಿಗೆ ಪೂಜಾಂತ್ಯದಲ್ಲಿ ಶಯನಾದಿಗಳನ್ನು ಕಲ್ಪಿಸುವರೋ, ಅವರು ಸುಕೃತಿಗಳೆನಿಸಿ, ಕೊನೆಗೆ ಚಕ್ರವರ್ತಿಗಳಾಗಿ ಜನಿಸುವರು. ಅಂತೂ ಶಿವಾರ್ಚನೆಗೆ ಸಮವಾದ ಪುಣ್ಯಕಾರ್ಯವು ಲೋಕದಲ್ಲಿ ಯಾವುದೂ ಇಲ್ಲ ವೆಂದು ಕೇಳಿರುವೆವು. ಅದರಿಂದಲೇ ಸಕಲ ಸಿದ್ಧಿಗಳೂ ಕರಗತಗಳಾಗಿರುವುವು ಎಂಬುದನ್ನು ಅರಿಯಬೇಕು. ॥೭೧-೭೨॥

ಪಾಪಾತ್ಮರಾದ ಮನುಷ್ಯರಿಗೆ ಶಿವಾರ್ಚನೆಯಲ್ಲಿ ಪ್ರೀತಿಯೇ ಹುಟ್ಟುವುದಿಲ್ಲ. ಮನುಷ್ಯ ದೇಹವನ್ನು ಪಡೆದು ಸದಾಶಿವನನ್ನು ಭಕ್ತಿಯಿಂದ ಪೂಜಿಸಿದವನು

ಸ ತಾವನ್ನಿತ್ಯಮಭ್ಯರ್ಚ್ಯ ಶಂಕರಂ ಲೋಕಶಂಕರಂ ।
ವೀರೇಶ್ವರಾಲಯಸ್ಯಾಪಿ ಕರೋತಿ ಪರಿಮಾರ್ಜನಂ ॥೭೬॥

ಸ ಕದಾಚಿನ್ಮಹಾದೇವಂ ನಿಶಿ ಸಂಪೂಜ್ಯ ಸಾದರಂ ।
ಕೃತ್ವಾ ನಿದ್ರಾಂ ಮಹಾದೇವಂ ದದರ್ಶ ಗಿರಿಜಾನ್ವಿತಂ ॥೭೭॥

ಸ ಪೃಷ್ಟಃ ಶಂಕರೇಣೈವ ಕಿಂ ಕರೋಷೀತಿ ಸಾದರಂ ।
ಆಚಾರಃ ಕಸ್ತವಾತ್ರೇತಿ ಪ್ರಾಹ ಸ್ನೇಹಪುರಸ್ಸರಂ ॥೭೮॥

ತದಾ ಪ್ರಾಹ ಸ ವಿಪ್ರೋಽಪಿ ಭಸ್ಮೋದ್ಧೂಲಿತವಿಗ್ರಹಃ ।
ರುದ್ರಾಧ್ಯಾಯೇನ ಚ ಸ್ತುತ್ವಾ ಪ್ರಣಮ್ಯ ಚ ಮುಹುರ್ಮುಹುಃ ॥೭೯॥

ತದ್ಭಸ್ಮನಾಂಗಾನಿ ವಿಲೇಪಯಾಮೋ
ರುದ್ರಾಕ್ಷರತ್ನೈಶ್ಚ ವಿಭೂಷಯಾಮಃ ।
ಪಂಚಾಕ್ಷರಂ ಪಾಪಹರಂ ಜಪಾಮೋ
ವಾರಾಣಸೀನಾಥ ಕಿಮಾಚರಾಮಃ ॥೮೦॥

---

ನಿಜವಾಗಿಯೂ ಮುಕ್ತನೆನಿಸುವನು. ಬ್ರಾಹ್ಮಣನಾದವನು ಶಾಸ್ತ್ರಪಾರಂಗತನಾಗಿ, ವಿಶ್ವೇಶ್ವರನಾದ ಪರಶಿವನನ್ನು ಆರಾಧಿಸುತ್ತಾ ಕಾಶೀನಗರವಾಸದಲ್ಲಿ ಆಸಕ್ತನಾಗಿ ರುವನು. ॥೭೩-೭೪-೭೫॥

ಹಿಂದೆ ಅಂತಹ ಬ್ರಾಹ್ಮಣನೊಬ್ಬನು ಒಂದುಸಾರಿ ಕಾಶಿಯಲ್ಲಿರುವ ವಿಶ್ವೇಶ ಲಿಂಗವನ್ನು ಪೂಜಿಸಿ, ವೀರೇಶ್ವರಾಲಯವನ್ನು ಗುಡಿಸಿಕೊಂಡು, ಅಲ್ಲಿಯೇ ಶಿವಾರ್ಚನಾನಂತರ ರಾತ್ರಿಯಲ್ಲಿ ಮಲಗಿ ನಿದ್ರಿಸಿದನು. ಸ್ವಪ್ನದಲ್ಲಿ ಅವನಿಗೆ ಪಾರ್ವತೀಸಹಿತನಾದ ಶಂಕರನ ದಿವ್ಯರೂಪು ಕಾಣಿಸಿಕೊಂಡಿತು. ॥೭೬-೭೭॥

ಒಡನೆಯೇ ಶಂಕರನು ಆ ಬ್ರಾಹ್ಮಣನನ್ನು ಕುರಿತು " ನಿನ್ನ ಕಾರ್ಯವೇನು ? ಯಾವ ಆಚಾರದಿಂದ ನೀನು ಇಲ್ಲಿ ವಾಸಿಸುವೆ ? ವಿಸ್ತಾರವಾಗಿ ಹೇಳು " ಎಂದು ವಿಶ್ವಾಸದಿಂದ ಪ್ರಶ್ನಿಸಿದನು. ಆಗ ಬ್ರಾಹ್ಮಣನು ಒಡನೆಯೇ ಭಸ್ಮೋದ್ಧೂಲಿತಗಾತ್ರ ನಾಗಿ, ರುದ್ರಾಧ್ಯಾಯಪಠನೆಯಿಂದ ಶಂಕರನನ್ನು ಸ್ತುತಿಸಿ, ಪದೇ ಪದೇ ವಂದಿಸುತ್ತಾ ಶಂಕರನನ್ನು ಕುರಿತು ಹೀಗೆಂದನು. ॥೭೮-೭೯॥

ಮಹೇಶ್ವರನೇ, ಭಸ್ಮದಿಂದ ದೇಹವನ್ನು ಬಳಿದುಕೊಳ್ಳುವೆವು. ರುದ್ರಾಕ್ಷಿ

ಧರ್ಮಾಣಿ ಸರ್ವಾಣಿ ವಿಚಾರಯಾಮಃ
ಕರ್ಮಾಣಿ ಸರ್ವಾಣಿ ನಿವಾರಯಾಮಃ ।
ಶ್ರೀಭಾವಲಿಂಗಂ ಹೃದಿ ಭಾವಯಾಮೋ
ವಾರಾಣಸೀನಾಥ ಕಿಮಾಚರಾಮಃ ॥೮೧॥

ಕುಂದೈರಮುಂದೈಃ ಶಿವಮರ್ಚಯಾಮೋ
ವೃಂದಾರವೃಂದಾಶ್ರಯಮಾಶ್ರಯಾಮಃ ।
ಗೌರೀಸಮೇತಂ ಸತತಂ ಭಜಾಮೋ ।
ವಾರಾಣಸೀನಾಥ ಕಿಮಾಚರಾಮಃ ॥೮೨॥

ಅಹರ್ನಿಶಂ ಸಾದರಮಿಂದಿರಾದಿ
ವೃಂದಾರನಾರೀಕಬರೀನಿರುದ್ಧಂ ।
ಗೌರೀಪದಾಂಭೋಜಯುಗಂ ಸ್ಮರಾಮೋ ।
ವಾರಾಣಸೀನಾಥ ಕಿಮಾಚರಾಮಃ ॥೮೩॥

---

ಯೆಂಬ ರತ್ನಗಳನ್ನು ಧರಿಸುವೆವು. ಪುಣ್ಯಕರವಾದ ಶಿವಪಂಚಾಕ್ಷರವನ್ನು ಜಪಿಸುವೆವು. ॥೮೦॥

ಸರ್ವಧರ್ಮಗಳನ್ನೂ ವಿಚಾರಮಾಡುತ್ತಾ ಪಾಪಕರ್ಮಗಳನ್ನೆಲ್ಲಾ ದೂರ ಮಾಡಿ ಕಳೆದುಕೊಳ್ಳುತ್ತಲಿದ್ದೇವೆ. ಭಾವಪ್ರದಾನವಾದ ಶ್ರೀಶಿವಲಿಂಗಗಳನ್ನು ಸರ್ವದಾ ಧ್ಯಾನಮಾಡುತ್ತಿರುವೆವು. ॥೮೧॥

ಸಂಪೂರ್ಣವಾಗಿ ಅರಳಿದ ಕೋಲುಮಲ್ಲಿಕಾಪುಷ್ಪಗಳಿಂದ ಶಂಕರನನ್ನು ಅರ್ಚಿಸುತ್ತೇವೆ. ದೇವತೆಗಳ ಗುಂಪನ್ನು ಸರ್ವದಾ ಭಜಿಸುತ್ತೇವೆ. ಗೌರೀಪತಿಯನ್ನು ಯಾವಾಗಲೂ ಬಿಡದೆ ಧ್ಯಾನಿಸುತ್ತೇವೆ. ॥೮೨॥

ಲಕ್ಷ್ಮಿಯೇ ಮೊದಲಾದ ಅನೇಕ ದೇವತಾಸ್ತ್ರೀಯರ ಶಿರೋಭಾಗದಿಂದ ಸೇವಿಸಲ್ಪಡುವ ಪಾರ್ವತಿಯ ಪಾದಾರವಿಂದಗಳನ್ನು ಹಗಲು ರಾತ್ರಿಯೂ ಬಿಡದೆ ಧ್ಯಾನಮಾಡುತ್ತಿರುವೆವು. ॥೮೩॥

ಕಾಶೀಪುರೀವೀಥಿಷು ಸಂಚರಾಮಃ
ಶೈವಾನಿ ನಾಮಾನಿ ಸದಾ ವದಾಮಃ ।
ಶ್ರೀಭಾವಮೂರ್ತಿಂ ಬಹುಧಾ ನಮಾಮೋ
ವಾರಾಣಸೀನಾಥ ಕಿಮಾಚರಾಮಃ ॥೮೪॥

ಪರಾತ್ಪರಂ ಯನ್ಮಹತೋ ಮಹಾಂತಂ
ಯದೇಕಮವ್ಯಕ್ತಮನಂತರೂಪಂ ।
ತದ್ರೂಪಮೇತದ್ಧೃದಿ ಚಿಂತಯಾಮೋ
ವಾರಾಣಸೀನಾಥ ಕಿಮಾಚರಾಮಃ ॥೮೫॥

ಆರಾಧ್ಯಮೇಕಂ ಶಿವರೂಪಮೇವ
ವಿಶ್ವಂ ಪುರಾಣಂ ತಮಸಃ ಪರಸ್ತಾತ್
ಅನಂತಕೋಟ್ಯರ್ಕಸಮಂ ಭಜಾಮೋ
ವಾರಾಣಸೀನಾಥ ಕಿಮಾಚರಾಮಃ ॥೮೬॥

ಆನಂದಕಲ್ಲೋಲಕುಲಾತಿಲೋಲ
ಲೀಲಾವಿಲಾಸಾಲಯ ಶೈಲಬಾಲಾಂ ।
ತ್ವಾಂ ಕಾಲಕಾಲಂ ಚ ವಿಲೋಕಯಾಮೋ
ವಾರಾಣಸೀನಾಥ ಕಿಮಾಚರಾಮಃ ॥೮೭॥

---

ಕಾಶೀನಗರದ ಬೀದಿಗಳಲ್ಲಿ ಸಂಚರಿಸುವೆವು. ಸರ್ವದಾ ಶಿವನಾಮಗಳನ್ನೇ ಉಚ್ಚರಿಸುತ್ತಿರುವೆವು. ಭಾವಲಿಂಗವನ್ನೇ ಸದಾ ಭಾವಿಸುತ್ತಿರುವೆವು. ಪರಶಿವನು ಪರಾತ್ಪರನು. ಮಹಾವಸ್ತುಗಳೆಲ್ಲಕ್ಕೂ ಮಹತ್ ಎನ್ನಿಸಿದವನು. ಅವ್ಯಕ್ತ ರೂಪಿಯು. ಮಾಯಾಸಂಸರ್ಗದಿಂದ ಅನೇಕರೂಪವುಳ್ಳವನು ಎಂಬ ಭಾವನೆ ಯಿಂದ ಸರ್ವದಾ ಮಹೇಶ್ವರನನ್ನೇ ಮನಸ್ಸಿನಲ್ಲಿ ಧ್ಯಾನಿಸುವೆವು. ॥೮೪-೮೫॥

ಶಿವರೂಪವೊಂದನ್ನೇ ಧ್ಯಾನಿಸುತ್ತಾ ಅನಾದಿಯಾದವನೂ, ಪುರಾಣ ಪುರುಷನೂ, ಅಜ್ಞಾನದಿಂದ ದೂರನಾದವನೂ ಅನಂತಕೋಟಿ ಸೂರ್ಯರಂತೆ ಹೊಳೆಯುವವನೂ ಆದ ಮಹೇಶ್ವರನನ್ನೇ ಸರ್ವದಾ ಆರಾಧಿಸುವೆವು. ಆನಂದ ರೂಪವಾದ ಅಲೆಗಳ ರಾಶಿಯಿಂದ ಕೂಡಿ ಸಮಸ್ತ ಶಿವಲೀಲೆಗಳಿಗೂ ಮೂಲಭೂತ

ಗಂಗಾಂಭಸಾ ಕುಂಭಸಮುನ್ನಿತೇನ
ವಾತೇನ ಶೀತೇನ ಸುಶೀತಲೇನ ।
ವೀರೇಶ್ವರಂ ತ್ವಾಮಭಿಷಿಂಚಯಾಮೋ
ವಾರಾಣಸೀನಾಥ ಕಿಮಾಚರಾಮಃ ॥೮೮॥

ಜಲಾಮಲೈಃ ಕೋಮಲಬಿಲ್ವಪಲ್ಲವೈಃ
ಶ್ರೌತೇನ ಶುದ್ಧೋಜ್ಜ್ವಲಭಸ್ಮನಾ ಚ ।
ವೀರೇಶಲಿಂಗಂ ಚ ಸಮರ್ಚಯಾಮೋ ।
ವಾರಾಣಸೀನಾಥ ಕಿಮಾಚರಾಮಃ ॥೮೯॥

ಇತ್ಯುಕ್ತ್ವಾ ಗಿರಿಜಾಕಾಂತಂ ಪ್ರಣಮ್ಯ ಚ ಪುನಃ ಪುನಃ ।
ಭಕ್ತ್ಯಾ ಸ್ತೋತುಂ ಸಮಾರೇಭೇ ಪುನಃ ಪುನರನನ್ಯಧೀಃ ॥೯೦॥

ಶ್ರೀಕಾಶೀನಾಥ ಕಾಶೀಪುರರುಚಿರಕಥಾಕರ್ಣನೇನ ಪ್ರವೃತ್ತಂ ।
ಚಿತ್ತಂ ಮತ್ತಂ ಕಥಂ ವಾ ಕಥಮಪಿ ನ ತಯೋರ್ವರ್ಣನೇ ವಾ ಪ್ರವೀಣಂ

---

ಳಾದ ಗೌರೀದೇವಿಯನ್ನೂ, ಕಾಲಕಾಲನಾದ ಮಹೇಶ್ವರನನ್ನೂ ತಪ್ಪದೇ ಭಜಿಸುವುದೇ ನಮ್ಮ ಮುಖ್ಯಕರ್ತವ್ಯವಾಗಿದೆ. ॥೮೬-೮೭॥

ದಿವ್ಯವಾದ ಕಲಶಗಳಿಂದ ತಂದ ಗಂಗೋದಕದಿಂದಲೂ, ಶೀತಲವಾದ ವಾಯುವಿನಿಂದಲೂ ವೀರೇಶ್ವರನೆನಿಸಿದ ನಿನ್ನ ಲಿಂಗಕ್ಕೆ ಅಭಿಷೇಕಮಾಡುವೆವು. ಹಾಗೆಯೇ ಪವಿತ್ರೋದಕಗಳಿಂದಲೂ, ಕೋಮಲವಾದ ಬಿಲ್ವದಳಗಳಿಂದಲೂ ವಿಧ್ಯುಕ್ತವಾಗಿ ತಯಾರಿಸಿದ ಭಸ್ಮದಿಂದಲೂ, ವೀರೇಶಲಿಂಗವನ್ನು ಪೂಜಿಸುತ್ತಲಿರುವೆವು. ವಾರಾಣಸೀಪುರಪತಿಯಾದ ಮಹೇಶ್ವರನೇ, ಇದನ್ನು ಬಿಟ್ಟು ನಮಗೆ ಮತ್ತಾವ ಆಚಾರವಿರುವುದು ? ಇದೇ ನಮ್ಮ ನಿತ್ಯಕರ್ಮವೆನಿಸಿದೆ.” ॥೮೮-೮೯॥

ಹೀಗೆ ಹೇಳಿ ಮತ್ತೆ ಆ ಬ್ರಾಹ್ಮಣನು ಶಂಕರನನ್ನು ವಂದಿಸುತ್ತಾ ದೃಢಭಕ್ತಿಯಿಂದ ಮತ್ತೆ ಹೀಗೆ ಸ್ತುತಿಸಲುಪಕ್ರಮಿಸಿದನು. ॥೯೦॥

ಪರಶಿವನೇ, ಕಾಶೀನಗರದ ಮತ್ತು ಕಾಶೀ ವಿಶ್ವೇಶ್ವರಲಿಂಗದ ಮಹಿಮಾಪೂರ್ಣವಾದ ಅನೇಕ ಕಥೆಗಳನ್ನು ಕೇಳಿದ್ದರೂ ನನ್ನ ಮನಸ್ಸು, ಅವುಗಳನ್ನು ವರ್ಣಿಸಿ ಮತ್ತೆ ಹೇಳಲು ಅಸಮರ್ಥವಾಗಿರುವುದು. ಕ್ಷಣವಾದರೂ ಪುಣ್ಯಕಥೆ

**ಕರ್ಣಂ ಶೀರ್ಣಂ ನ ಪುಣ್ಯಂ ಕ್ಷಣಮತಿನಿಪುಣಂ ಪ್ರಾಣಿನಾಂ ಪ್ರೀಣನಂ ವಾ**
**ತ್ರ್ಯಕ್ಷಾಕ್ಷ್ಣೋಭ್ಯಾಪರಾಧಾನ್ ಹರ ಹರ ಕರುಣಾಸಾರಪೂರೈಕಸಿಂಧೋ**
**॥೯೧॥**

**ಪುಣ್ಯಾರಣ್ಯಪ್ರಕೀರ್ಣಪ್ರಣತಸುರತರುಶ್ರೀಯುತಾನಂದಸಂಗ ।**
**ವ್ಯಾಸಂಗಾಭಂಗಗಂಗಾಜಲಮಿಲಿತತಲಶ್ರೀಫಲಶ್ರೀದಮೂಲೇ ।**
**ತುಂಗಂ ಲಿಂಗಂ ನಿರಂಗಂ ನಿಗಮಮನುಗತಂ ಪ್ರೋಕ್ಷಿತಂ ನೇಕ್ಷಿತಂ ವಾ ।**
**ತ್ರ್ಯಕ್ಷಾಕ್ಷ್ಣೋಭ್ಯಾಪರಾಧಾನ್ ಹರ ಹರ ಕರುಣಾಸಾರಪೂರೈಕಸಿಂಧೋ**
**॥೯೨॥**

**ಸ್ನಾತ್ವಾ ನ ಬ್ರಹ್ಮನಾಳೇ ಸಿತಭಸಿತಕೃತೋದ್ಧೂಲನಶ್ರೀತ್ರಿಪುಂಡ್ರ ।**
**ಶ್ರೀರುದ್ರಾಕ್ಷಾವೃತಾಂಗಃ ಕೃತನಿಯಮವಿಧಿಃ ಸ್ವರ್ಧುನೀಪೂರತೀರೇ**
**ಶ್ರೀರುದ್ರಾಧ್ಯಾಯವರ್ಣಪ್ರವಣನಿಪುಣಧೀರ್ನಸ್ಮರಾಮಿ ಸ್ಮರಾರಿಂ**
**ತ್ರ್ಯಕ್ಷಾಕ್ಷ್ಣೋಭ್ಯಾಪರಾಧಾನ್ ಹರ ಹರ ಕರುಣಾಸಾರಪೂರೈಕಸಿಂಧೋ**
**॥೯೩॥**

---

ಗಳನ್ನು ಕೇಳದೆ ನನ್ನ ಕಿವಿಯು ಹಾಗೆಯೇ ನಷ್ಟವಾಗುತ್ತಿರುವುದು. ಪ್ರಾಣಿಗಳಿಗೆ ಯಾವ ವಿಧವಾದ ತೃಪ್ತಿಯನ್ನೂ ಮಾಡಲಾರದೆ ನಾನು ಕಾಲಕಳೆದೆನು. ಪರಮೇಶ್ವರನೇ, ತ್ರಿಲೋಚನನೇ, ಇಂತಹ ಅಕ್ಷಮ್ಯವಾದ ನನ್ನ ಅಪರಾಧಗಳನ್ನು ದಯಾಸಮುದ್ರನಾದ ನೀನು ಮನ್ನಿಸಿ ನನ್ನನ್ನು ಉದ್ಧರಿಸು. ॥೯೧॥

ಪುಣ್ಯಕರಗಳಾದ ಅರಣ್ಯದಲ್ಲಿ ಹರಿದು ಬರುತ್ತಾ, ದೇವಲೋಕದ ವೃಕ್ಷಗಳಿಗೆ ಸಂಪತ್ತನ್ನೊದಗಿಸುತ್ತಾ, ಅದೇ ಕಾಂತಿಯನ್ನು ಭೂಲೋಕಕ್ಕೂ ಹೊಂದಿಸುವ ಇಚ್ಛೆಯಿಂದ ಹರಿಯುತ್ತಿರುವ ಗಂಗಾನದಿಯ ದಡದಲ್ಲಿ, ಬೆಳೆದಿರುವ ಬಿಲ್ವವೃಕ್ಷಗಳ ಬುಡದಲ್ಲಿ ಅನೇಕ ಶಿವಲಿಂಗಗಳಿರುವುವು. ಅವು ಎತ್ತರವಾಗಿಯೂ, ವೇದಪ್ರತಿಪಾದ್ಯಮಾನವಾಗಿಯೂ ಶೋಭಿಸುತ್ತಿರುವುವು. ಇಂತಹ ಶಿವಲಿಂಗಗಳಿಗೆ ನಾನು ಗಂಗಾಭಿಷೇಕವನ್ನಾಗಲಿ, ಭಕ್ತಿಪೂರ್ವಕವಾದ ವಂದನೆಯನ್ನಾಗಲಿ ಸಮರ್ಪಿಸಲಿಲ್ಲ. ಇಂತಹ ಮಹಾಪರಾಧವನ್ನು ಕರುಣಾಸಾಗರನೇ, ಕ್ಷಮಿಸುವವನಾಗು. ॥೯೨॥

ಬ್ರಹ್ಮನಾಳಕ್ಷೇತ್ರದಲ್ಲಿ ಸ್ನಾನಮಾಡಿ, ಭಸ್ಮಧಾರಣದಿಂದ ಪರಿಶುದ್ಧಗಾತ್ರನಾಗಿ, ರುದ್ರಾಕ್ಷಿಯಿಂದಾವೃತವಾದ ದೇಹವುಳ್ಳವನಾಗಿ, ನಿಯಮದಿಂದ ಗಂಗಾತೀರದಲ್ಲಿ ನಿಂತು, ರುದ್ರಾಧ್ಯಾಯಾದಿಗಳನ್ನು ಪಠಿಸಿ ಸ್ಮರಾರಿಯಾದ ಶಂಕರನನ್ನು ನಾನು

ಸಂಸಾರಾಪಾರಘೋರಜ್ವರಕರಖದಿರಾಂಗಾರಪೂರಪ್ರಸಾರ
ವ್ಯಾಪಾರಾನೇಕಶೋಕವ್ಯತಿಕರನಿಕರವ್ಯಾಕುಲೋ ಬಾಲಲೀಲಃ ।
ಕಾಲೇ ಕಾಲೇನುವೇಲಂ ಪ್ರಳಯಭಯಲಯಂ ನಾಶ್ರಯಾಮೋ ಮಹೇಶಂ
ತ್ರ್ಯಕ್ಷಾಕ್ಷೋಭ್ಯಾಪರಾಧಾನ್ ಹರ ಹರ ಕರುಣಾಸಾರಪೂರ್ಣೈಕಸಿಂಧೋ
॥೯೪॥
ಅಶ್ರಾಂತಾನಂತಚಿಂತಾಹೃತವಿತತಮತಿಃ ಸ್ವಾಂತಪದ್ಮಾಸನಸ್ಥಂ
ಶಾಂತಂ ಭಾಂತಂ ನಿತಾಂತಂ ನತಮಮರಗಣೈಃ ಸಂಸ್ತುತಂ ವೇದಸಂಘೈಃ ।
ಅಸ್ತಾವಿದ್ಯಾವಿಲಾಸವ್ಯಸನಮತಿಮತಂ ಸಾಧು ನಾರಾಧಯಾಮಃ
ತ್ರ್ಯಕ್ಷಾಕ್ಷೋಭ್ಯಾಪರಾಧಾನ್ ಹರ ಹರ ಕರುಣಾಸಾರಪೂರೈಕಸಿಂಧೋ
॥೯೫॥
ಭಸ್ಮಾಭ್ಯಂಗಂ ಕ್ಷಣಾರ್ಧಂ ಪ್ರತಿಹತವಿಮುಖಾನಂಗಮಂಗೀಕೃತಾಂಗಂ
ಶಾಂಗಂ ಗಂಗಾತರಂಗಪ್ರತಿಭಟವಿಲಸದ್ಭೋಗಿಭೋಗೋತ್ತಮಾಂಗಂ ।

---

ಧ್ಯಾನಮಾಡಲಿಲ್ಲ. ಇಂತಹ ಘೋರವಾದ ಅಪರಾಧಗಳನ್ನು ಕರುಣಾನಿಧಿಯಾದ ನೀನು ಕ್ಷಮಿಸಿ ನಮ್ಮನ್ನು ಕಾಪಾಡು. ॥೯೩॥

ಸಂಸಾರವೆಂಬ ಘೋರವಾದ ಕಗ್ಗತ್ತಲೆಯ ಕೆಂಡದ ರಾಶಿಯಲ್ಲಿ ಮುಳುಗಿ ಮುಳುಗಿ ತತ್ಸಂಬಂಧವಾದ ಅನೇಕ ದುಃಖಗಳನ್ನು ಅನುಭವಿಸಿ, ಇನ್ನೂ ಕೇವಲ ಬಾಲಕನಂತೆ ಕಾಲಕಾಲದಲ್ಲಿ ನಿನ್ನನ್ನು ಆರಾಧಿಸದೆ ಕಾಲಕಳೆದಿರುವೆನು. ಅಂತಹ ಸಕಲ ದುಃಖನಿವಾರಕವಾದ ನಿನ್ನ ನಾಮೋಚ್ಚಾರಣೆಯನ್ನೇ ನಾನು ಭಕ್ತಿಯಿಂದ ಮಾಡಲಿಲ್ಲ. ದಯಾಸಮುದ್ರನೇ, ಇಂತಹ ಅಗಾಧವಾದ ಅಪರಾಧವನ್ನು ಕ್ಷಮಿಸಿ ನನ್ನನ್ನು ಕಾಪಾಡು. ॥೯೪॥

ಪರಶಿವನೇ, ಅನಂತವಾದ ಸಂಸಾರದ ಚಿಂತೆಗಳಿಂದ ಮನಸ್ಸೆಲ್ಲವೂ ಕಲಕಿ ಹೋಗಿ, ನಮ್ಮ ಹೃದಯ ಮಧ್ಯವರ್ತಿಯೂ, ಶಾಂತನೂ, ಪ್ರಕಾಶಯುಕ್ತನೂ ದೇವದೇವಾದಿಗಳಿಂದ ಸ್ತುತನೂ ಆಗಿ, ಮಾಯಾರಾಹಿತ್ಯದಿಂದ ಶುದ್ಧನಾಗಿರುವ ಆತ್ಮಸ್ವರೂಪಿಯಾದ ನಿನ್ನನ್ನು ನಾವು ಧ್ಯಾನಿಸಲಿಲ್ಲ. ಪರಶಿವನೇ ಇಂತಹ ಮಹಾಪರಾಧವನ್ನು ಕ್ಷಮಿಸು. ॥೯೫॥

ಭಸ್ಮಲಿಪ್ತಗಾತ್ರನೂ, ಕ್ಷಣಾರ್ಧದಲ್ಲಿಯೇ ಮನ್ಮಥನನ್ನು ನಾಶಗೊಳಿಸಿದವನೂ, ಮತ್ತೆ ಅವನಿಗೆ ದೇಹವನ್ನಿತ್ತವನೂ, ಗಂಗಾಪ್ರವಾಹಕ್ಕೆ ಎದುರಾಗಿ

ತುಂಗೋತ್ಸಂಗಾಂಗಸಂಗಪ್ರಮುದಿತಗಿರಿಜಾಲಿಂಗಿತಾಂಗಂ ಚ ನೇಡೆ
ತ್ರ್ಯಕ್ಷಾಕ್ಷ್ಣೋಭ್ಯಾಪರಾಧಾನ್ ಹರ ಹರ ಕರುಣಾಸಾರಪೂರೈಕಸಿಂಧೋ ||೯೬||

ಮತ್ವಾ ಪಾಪಾನುತಾಪಂ ಪುನರಪಿ ಜನನಕ್ಲೇಶಕೇಶಾವಕಾಶಂ
ಶ್ರುತ್ವಾ ಕಾಶೀಮಶೇಷಶ್ರುತಿಶಿಖರಮತಾನಂದಪೀಯೂಷ ರಾಶಿಂ ।
ಶ್ರುತ್ವಾಪ್ಯಾಶಾತಿಪಾಶಪ್ರಶಮನಶಮನಂ ನಾಶ್ರಯಾಮೋ ನಿಶಾಂ ತಾಂ
ತ್ರ್ಯಕ್ಷಾಕ್ಷ್ಣೋಭ್ಯಾಪರಾಧಾನ್ ಹರ ಹರ ಕರುಣಾಸಾರಪೂರೈಕಸಿಂಧೋ ||೯೭||

ವಾರಂ ವಾರಂ ಸ್ಮರಾಮಿ ಸ್ಮರಹರಚರಣೌ ನಾದರೇಣ ಕ್ಷಣೇನ
ಕ್ಷೀಣಪ್ರಾಣಪ್ರಯಾಣಕ್ಷಣಕರಣರಣಪ್ರೇಕ್ಷಣಾ ದಕ್ಷಿಣೋಽಪಿ ।
ಪ್ರಾಣಪ್ರಾಣಾಗ್ನಿಹೋತ್ರವ್ರತಹಿತನಿಯಮಃ ಕಾಮುಕಾಮಃ ಪ್ರಕಾಮಂ
ತ್ರ್ಯಕ್ಷಾಕ್ಷ್ಣೋಭ್ಯಾಪರಾಧಾನ್ ಹರ ಹರ ಕರುಣಾಸಾರಪೂರೈಕಸಿಂಧೋ ||೯೮||

---

ನಿಂತು ಬೆಳಗುವ ದೇಹವುಳ್ಳ ಸರ್ಪಭೂಷಿತನೂ ಆದ ನಿನ್ನನ್ನು ನಾವು ಪೂಜಿಸಲಿಲ್ಲ. ಗಿರಿಜೆಯನ್ನು ತೊಡೆಯಲ್ಲಿ ಕೂರಿಸಿಕೊಂಡು ಸಂತೋಷಸಮುದ್ರದಲ್ಲಿ ಮುಳುಗಿರುವ ಮಹೇಶ್ವರನನ್ನು ಭಕ್ತಿಯಿಂದ ಧ್ಯಾನಿಸಲಿಲ್ಲ. ಇಂತಹ ಮಹಾಪರಾಧಗಳನ್ನು ಕ್ಷಮಿಸುವವನಾಗು. ||೯೬||

ಅತಿಶಯವಾದ ದುಃಖಗಳಿಂದ ಕೂಡಿದ ಅನೇಕ ಜನ್ಮಗಳು ಮುಂದೆ ಬರುತ್ತವೆಂಬುದನ್ನು ತಿಳಿದೂ ತನ್ನಿವಾರಣೆಗಾಗಿ ನನ್ನನ್ನು ಸ್ಮರಿಸಲಿಲ್ಲ. ಕಾಶೀಕ್ಷೇತ್ರವು ಸಕಲ ಉಪನಿಷತ್ಸಂಮತವಾಗಿ ಪವಿತ್ರಕ್ಷೇತ್ರವೆನಿಸಿಕೊಂಡಿದೆ ಎಂಬುದನ್ನು ಕೇಳಿಯೂ ಅಲ್ಲಿ ನೆಲಸಿ ಶಿವಾರಾಧನೆ ಮಾಡಲಿಲ್ಲ. ಆತಿಯಾಸೆಯಿಂದ ಒದಗುವ ಪಾಶದುಃಖವನ್ನು ನಿವಾರಿಸುವಂತಹ ಮಹೇಶ್ವರನನ್ನು ನಾವು ಸೇವಿಸಲಿಲ್ಲ. ಇಂತಹ ಅನೇಕ ಅಪರಾಧಗಳನ್ನು ಮನ್ನಿಸಿ ನನ್ನನ್ನು ಸಲಹು. ||೯೭||

ಮಾರಾರಿಯೇ, ನನ್ನ ಪ್ರಾಣವು ಕ್ಷೀಣವಾಗಿ ದೇಹವನ್ನು ಬಿಟ್ಟು ಹೋಗುವ ಕಾಲದಲ್ಲಿ ಒದಗುವ ಸಂಕಟಗಳನ್ನು ಪರಿಹರಿಸಲು ಶಕ್ತಿಯಿಲ್ಲದವನಾದರೂ, ಪ್ರಾಣರಕ್ಷಣೆಯ ಕಾರ್ಯಗಳಲ್ಲಿ ಆಸಕ್ತನಾಗಿದ್ದು, ಕದರ್ಥವಾದ ಕೆಲವು ನಿಯಮಗಳಿಗಾಗಿ ಆಸೆಪಡುತ್ತಾ ಕಾಲಕಳೆದೆನೇ ಹೊರತು, ನಿನ್ನನ್ನು ಭಜಿಸಿ ಮುಕ್ತಿಯನ್ನು ಮಾತ್ರ ಹೊಂದಲಿಲ್ಲ. ಇಂತಹ ಅಪರಾಧಗಳನ್ನು ಮನ್ನಿಸುವವನಾಗು. ||೯೮||

ಸಾನಂದಂ ವೇದವಂದ್ಯಂ ಸ್ಮರಹರಚರಣಾರಾಧನಧ್ಯಾನದಾನ
ವ್ಯಕ್ತಾಸಕ್ತಸ್ವಕರ್ಮಪ್ರತಿಭುವಮಭವಂ ಮೋಕ್ಷದಾನೇ ಭವತ್ವಾಂ ।
ನ ತ್ರ್ಯಕ್ಷೇ ಲಕ್ಷಶೋಽಪಿ ಕ್ಷಣಮಪಿ ಮರಣೇಪ್ಯಂಘ್ರಿಪದ್ಮಂ ತವೇಶ
ತ್ರ್ಯಕ್ಷಾಕ್ಷೋಽಭ್ಯಾಪರಾಧಾನ್ ಹರ ಹರ ಕರುಣಾಸಾರಪೂರ್ಕೈಕಸಿಂಧೋ
॥೧೦೦॥

ನಗ್ನೋಽ ಗೌರೀಸಹಾಯಸ್ಮೃತಿಜನಿತನಿಜಾನಂದಸಂದೋಹಮಗ್ನೋ
ಲಗ್ನಸ್ವರ್ಗಾಪವರ್ಗಪ್ರದಮಘಹರಾಪಾರಲಿಂಗಾರ್ಚನೇಪಿ ।
ನೋದ್ವಿಗ್ನಃ ಪಾಪಕೋಪಪ್ರಚುರವಿಷಯಜಾಪಾರದುಃಖಾಂಬುರಾಶೇ
ತ್ಯಕ್ಷಾಕ್ಷೋಽಭ್ಯಾಪರಾಧಾನ್ ಹರ ಹರ ಕರುಣಾಸಾರಪೂರ್ಕೈಕಸಿಂಧೋ
॥೧೦೧॥

ಗರ್ಭಾವಿರ್ಭಾವಭೋಗವ್ಯಪಗಮಸುಗಮೋಪಾಯಶೀತಾಂಶುಕಾಯ
ಶ್ರೀಪಾದಾಂಭೋಜಪೂಜಾಜಿತನಿಜಜನನವ್ಯಾಜಜಾತದ್ವಿಜಶ್ರೀಃ
ವಿಜ್ಞಾಭಿಜ್ಞೋಽನಭಿಜ್ಞಾಚ್ಯುತವಿತತನುತಿರ್ನಾನ್ಯತಂ ತ್ವಾಂ ಭಜಾಮಿ ।
ತ್ರ್ಯಕ್ಷಾಕ್ಷೋಽಭ್ಯಾಪರಾಧಾನ್ ಹರ ಹರ ಕರುಣಾಸಾರಪೂರ್ಕೈಕಸಿಂಧೋ
॥೧೦೨॥

---

ಪರಶಿವನೇ, ನೀನು ಆನಂದಮಯನಾದವನು. ವೇದವೇದ್ಯನು, ನಿನ್ನ ಪಾಪಕರ್ಮಗಳನ್ನೆಲ್ಲಾ ತೊಡೆದುಹಾಕುವವನು. ಇಂತಹ ನಿನ್ನ ನಾಮಾವಳಿಗಳನ್ನು ಲಕ್ಷಸಾರಿ ಉಚ್ಚರಿಸಲಿಲ್ಲ. ಅಲ್ಲದೆ ಮರಣಕಾಲದಲ್ಲಿ ಕ್ಷಣಮಾತ್ರವಾದರೂ ನಿನ್ನ ಪಾದಪದ್ಮವನ್ನು ಧ್ಯಾನಿಸಲಿಲ್ಲ. ಇಂತಹ ನನ್ನ ಘೋರವಾದ ಅಪರಾಧವನ್ನು ಮನ್ನಿಸಿ ಕಾಪಾಡು. ॥೧೦೦॥

ಗೌರೀಪತಿಯಾದ ಶಂಕರನನ್ನು ಸ್ಮರಿಸುತ್ತಾ ತದ್ರೂಪವಾದ ಆನಂದಸಾಗರದಲ್ಲಿ ನಾನು ಮುಳುಗಲಿಲ್ಲ. ಸ್ವರ್ಗ ಮತ್ತು ಮೋಕ್ಷಸುಖವನ್ನು ಕೊಡುವ ಈಶ್ವರಲಿಂಗಾರ್ಚನೆಯಲ್ಲಿ ಉತ್ಸುಕನಾಗಲಿಲ್ಲ. ಪಾಪ, ರೋಷ, ವಿಷಯಸುಖ, ಅನೇಕ ದುಃಖ, ಇವೇ ಮೊದಲಾದುವುಗಳಿಂದ ತುಂಬಿದ ಸಂಸಾರಸಮುದ್ರದಿಂದ ದೂರನಾಗಲಿಲ್ಲ. ಇಂತಹ ಅಸಾಧಾರಣವಾದ ಅಪರಾಧಗಳನ್ನು ಕ್ಷಮಿಸಿ, ದಯಾನಿಧಿಯಾದ ನೀನು ನನ್ನನ್ನುದ್ಧರಿಸು. ॥೧೦೧॥

ಸ್ತ್ರೀಗರ್ಭದಲ್ಲಿ ಪುನಃ ಜನಿಸುವ ಕಷ್ಟವನ್ನು ನೀಗಿಸುವುದೇ ಚಂದ್ರಶೇಖರನಾದ ಪರಶಿವನ ಪಾದಪೂಜೆ. ಅಂತಹ ಪೂಜೆಯಿಂದ ಸ್ವಲ್ಪಮಟ್ಟಿಗೆ ದ್ವಿಜತ್ವವನ್ನು

ತ್ರ್ಯಕ್ಷಸ್ವಾಶ್ರಿತರಕ್ಷಕಾದಿಭವನಾಧ್ಯಕ್ಷಾಧುನಾ ರಕ್ಷ ಮಾಂ
ರಕ್ಷ್ಯಂ ರಕ್ಷ್ಯಮುಪೇಕ್ಷ್ಯಸೇ ಕಿಮಿತಿ ಮಾಂ ದಕ್ಷೋಽಪಿ ಮದ್ರಕ್ಷಣೇ ।
ಫಾಲಾಕ್ಷಾಕ್ಷರವೀಕ್ಷಣಾಕ್ಷಯಮಹಾನಿಕ್ಷೇಪದಾಕ್ಷಾಯಣೀ
ವಕ್ಷೋಜಸ್ಫುರದಕ್ಷವೀಕ್ಷಯ ಕೃಪಾಲಕ್ಷ್ಯಂ ಪರೀಕ್ಷ್ಯ ಕ್ಷಣಂ ॥೧೦೩॥

ಇತಿ ಶ್ರೀವೀರೇಶ್ವರಂ ಸ್ತುತ್ವಾ ತದಾಜ್ಞಾಂ ಪ್ರಾಪ್ಯ ಸಾದರಂ ।
ಸ್ಥಿತ್ವಾ ಕಾಶ್ಯಾಂ ತದರ್ಚಾಯಾಂ ನಿರತಸ್ಸಮಭೂತ್ಸದಾ ॥೧೦೪॥

ಇದಂ ಸರ್ವಂ ಮಹದ್ಭಾಗ್ಯಂ ಶಿವಾರಾಧನಜಂ ಫಲಂ ।
ತತಸ್ತ್ವಮಪಿ ಯತ್ನೇನ ಶಿವಮಾರಾಧಯಾದರಾತ್ ॥೧೦೫॥

ಹಾರೋ ಹಾರವಿಚಾರತತ್ಪರಪರೋ ನೋದಾರದಾರಾದರ
ವ್ಯಾಹಾರವ್ಯವಹಾರಸಾದರವರವ್ಯಾಪಾರಭೀರುಃ ಪರಂ ।

---

ಪಡೆದೂ, ನಾನು ಅತಿಶಯಪ್ರಜ್ಞನೂ ಆಗದೆ, ಮೂಢನೂ ಆಗದೆ, ಬುದ್ಧಿಶೂನ್ಯನಾಗಿ ನಿನ್ನನ್ನು ಭಜಿಸಲಿಲ್ಲ. ಇಂತಹ ಮಹಾಪರಾಧವನ್ನು ಮನ್ನಿಸುವವನಾಗು. ||೧೦೨||

ತ್ರಿಲೋಚನನೇ, ಭಕ್ತರಕ್ಷಣಾದಿಗಳಿಗೆ ಅಧ್ಯಕ್ಷನಾಗಿರುವವನೇ, ರಕ್ಷಣೆಗೆ ಯೋಗ್ಯನಾಗಿರುವ ನನ್ನನ್ನು ರಕ್ಷಣೆಗೆ ದಕ್ಷನಾಗಿರುವ ನೀನು ಉಪೇಕ್ಷಿಸುವುದು ನ್ಯಾಯವೆ? ಹಣೆಯಲ್ಲಿ ನಾಶರಹಿತವಾಗಿರುವ ಕಣ್ಣನ್ನು ಹೊಂದಿರುವ ಪರಶಿವನೇ, ಮಹಾನಿಧಿಯಂತಿರುವ ಪಾರ್ವತಿಯ ಸ್ತನಗಳಲ್ಲಿ ಇಟ್ಟಿರುವ ದೃಷ್ಟಿಯುಳ್ಳವನೇ, ದಯಾಪಾತ್ರನಾದ ನನ್ನನ್ನು ಕಟಾಕ್ಷದಿಂದ ನೋಡಿ ಉದ್ಧರಿಸು." ||೧೦೩||

ಹೀಗೆಂದು ಆ ಬ್ರಾಹ್ಮಣನು ವೀರೇಶ್ವರನನ್ನು ಸ್ತುತಿಸಿ, ಅವನ ಅಪ್ಪಣೆಯಂತೆಯೇ, ಕಾಶೀನಗರದಲ್ಲಿ ವಾಸಿಸುತ್ತಾ, 'ಪರಶಿವಾರ್ಚನೆಯಲ್ಲಿಯೇ ಕಾಲಕಳೆಯುತ್ತಾ ಮುಕ್ತನಾದನು. ಆದ್ದರಿಂದ ಎಲೈ ರಾಜನೇ, ನೀನೂ ಸಹ ಮಹಾಭಾಗ್ಯವನ್ನು ಒದಗಿಸುವ ಶಿವಾರಾಧನೆಯಿಂದ ಸಕಲ ಸೌಭಾಗ್ಯಗಳನ್ನೂ ಪಡೆ ಎಂದು ಋಷಿಯು ಬೋಧಿಸಿದನು. ||೧೦೪-೧೦೫||

ಹರಭಕ್ತರ ವಿಚಾರಗಳನ್ನೇ ಸರ್ವದಾ ಅನುಸಂಧಾನಮಾಡುವ ಶಂಕರ ಕಿಂಕರನು ತನ್ನ ಕುಟುಂಬ ರಕ್ಷಣೆಯಲ್ಲಿಯೂ, ತನ್ನ ಆಹಾರವ್ಯವಹಾರಗಳಲ್ಲಿಯೂ ಸ್ವಲ್ಪವೂ ಆದರವಿಡದೆ, ಭಯಪಡದೆ, ಪ್ರತಿನಿಮಿಷವೂ ಸ್ಮರಹರನಾದ ಶಂಕರನನ್ನೇ

ವಾರಂ ವಾರಮನುಸ್ಮರಂತ್ಸ್ಮರಹರಂ ಹಾರೋಪಹಾರಾದರೋ ।
ಹಾರಾಚಾರವಿಚಾರಮೇವ ಕುರುತೇ ಸಂಸಾರಭಾರಂ ಹರನ್ ॥೧೦೬॥

ಇತಿ ಶ್ರೀಶಿವರಹಸ್ಯೇ ತೃತೀಯಾಂಶೇ ಹರಾಖ್ಯೇ ಪೂರ್ವಾರ್ಧೇ
ಬೃಹಸ್ಪತಿ ಶತಾನಂದಸಂವಾದೇ ವೀರೇಶ್ವರಸ್ತುತಿ ವರ್ಣನಂ ನಾಮ
ಸಪ್ತಚತ್ವಾರಿಂಶೋಽಧ್ಯಾಯಃ.

---

ಸೇವಿಸುತ್ತಲೂ, ಶಂಕರ ನೈವೇದ್ಯವನ್ನೇ ಭಕ್ಷಿಸುತ್ತಲೂ, ಶಂಕರಸೇವೆಯಿಂದ ಮುಕ್ತರಾದವರ ಕಥೆಗಳನ್ನೇ ಕೇಳುತ್ತಲೂ ಜೀವಿಸುವನು. ಇದರಿಂದ ಆತನಿಗೆ ಸಂಸಾರಸಂಬಂಧವಾದ ಯಾವ ದುಃಖಗಳೂ ಬಂದೊದಗಲಾರವು. ಇದರಲ್ಲಿ ಸಂಶಯವಿಲ್ಲ. ಎಂದು ಸ್ಕಂದಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಸಿದನು.||೧೦೬||

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಭಾಗದ ಪೂರ್ವಾರ್ಧದಲ್ಲಿ
ಬೃಹಸ್ಪತಿ, ಶತಾನಂದ ಇವರ ಸಂವಾದದಲ್ಲಿ ವೀರೇಶ್ವರಸ್ತುತಿಯೆಂಬ
ನಲವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಅಷ್ಟಚತ್ವಾರಿಂಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತಿ ತದ್ಗುರುವಾಕ್ಯಾನಿ ಗುರ್ವರ್ಥಾನಿ ವಿಶೇಷತಃ ।
ಶ್ರುತ್ವಾ ಶಂಕರಪೂಜಾಯಾಂ ಸಾದರಃ ಸ ತದಾಭವತ್ ॥೧॥

ಯೇ ಶಂಕರಧ್ಯಾನವಿಶಾರದಾಃ ಸದಾ
ತೇ ಧೀರದಾರಾದರಸಾದರಾಃ ಕಿಂ ।
ಪರಂತು ನೀಹಾರಕರಾರ್ಧಮೌಲಿ
ಮನೋಹರಾಹಾರವಿಚಾರಧೀರಾಃ ॥೨॥

---

## ನಲವತ್ತೆಂಟನೆಯ ಅಧ್ಯಾಯ

ಹೀಗೆ ಹೇಳಿದ ಅರ್ಥಗರ್ಭಿತವಾದ ಗುರುವಾಕ್ಯಗಳನ್ನು ಕೇಳಿ ಆ ರಾಜನು ಆಗಲೇ ಶಂಕರಪೂಜೆಯಲ್ಲಿ ಅತ್ಯಂತಾಸಕ್ತಿಯುಳ್ಳವನಾದನು. ಎಂದು ಯಾಜ್ಞ್ಯವಲ್ಕ್ಯಋಷಿಯು ಶಿವಧರ್ಮವನ್ನು ಮುಂದುವರಿಸಿದನು. ॥೧॥

ಯಾರು ಶಂಕರಧ್ಯಾನದಲ್ಲಿ ನಿಪುಣರೆನಿಸಿಕೊಳ್ಳುವರೋ, ಅವರು ಕೇವಲ ತಮ್ಮ ಕುಟುಂಬಭರಣೆಯಲ್ಲಿಯೇ ನಿರತರಾಗುವುದಿಲ್ಲ. ಅವರು ಅರ್ಧಚಂದ್ರಧಾರಿಯಾದ ಶಂಭುವಿನ ಮನೋಹರವಾದ ಮಹಿಮಾವಿಚಾರದಲ್ಲಿ ಆಸಕ್ತಿಯುಳ್ಳವರಾಗುವರಲ್ಲವೆ ? ॥೨॥

ನ ಜಾತು ಜಾನಂತಿ ಜನಿಂ ಜನನ್ಯಾಃ
ಪರಂ ವರಂ ಯೌವನಕಾರಣಂ ವಾ ।
ಜೀರ್ಣಂ ನ ಪಶ್ಯಂತಿ ಪರಂ ತು ತೇ ತು
ಹರಂ ಪ್ರಪಶ್ಯಂತಿ ಚಿರೇಣ ಹಾರಾಃ ॥೩॥

ಹಾರಾಮುದಾರಾಮುರುಹಾರಲಿಂಗ
ಸಮರ್ಚನಧ್ಯಾನನಿಧಾನಲಾಭಾತ್ ।
ವಂದೇ ಮುಕುಂದಾದಿಕದೇವವೃಂದ
ವಂದಾರುಮಂದಾರತರುಪ್ರಕಾಶಾಂ ॥೪॥

ಸಂಸಾರರೂಪಾಮಿತದರ್ಪಸರ್ಪ
ಪ್ರಸರ್ಪಣಪ್ರಾಣಸಮರ್ಪಣಾನಾಂ ।
ಘಾಲೇಕ್ಷಣಾಕ್ಷೀಣಕಥಾಸುಧಾಸು
ಕ್ಷಣೇಪ್ಯಪರ್ಣಾರಮಣಂ ಪ್ರಯಾಂತಿ ॥೫॥

---

ಅಂತಹ ಹರಭಕ್ತರು ಮಾತೃಗರ್ಭದಲ್ಲಿ ಮತ್ತೆ ಬರುವ ಜನ್ಮವನ್ನಾಗಲಿ, ಯೌವನಕ್ಕೆ ಕಾರಣವಾದ ಅಹಂಕಾರಾದಿಗಳನ್ನಾಗಲಿ, ವಯಸ್ಸಿನಿಂದ ಬರುವ ವಾರ್ಧಕ್ಯವನ್ನಾಗಲಿ ಕಾಣಲಾರರು. ಆದರೆ ಸರ್ವದಾ ಹರಪೂಜಾಸಕ್ತರಾಗಿಯೇ ನಿಲ್ಲುವರು. ॥೩॥

ಶ್ರೇಷ್ಠವಾದ ಈಶ್ವರಲಿಂಗಾರಾಧನೆಯೆಂಬ ಕಾರ್ಯವಿಶೇಷದಿಂದ ಲಬ್ಧವಾದ, ಮತ್ತು ವಿಷ್ಣುವೇ ಮೊದಲಾದ ಸಕಲ ದೇವತೆಗಳೆಂಬ ಮಂದಾರವೃಕ್ಷವನ್ನು ಪ್ರಕಾಶಿಸುವಂತೆ ಮಾಡುವ ಹರಸಂಬಂಧವಾದ ಹಾರವನ್ನು (ಹರಭಕ್ತನನ್ನು) ನಾನು ಧ್ಯಾನಮಾಡುವೆನು. ॥೪॥

ಸಂಸಾರವೆಂಬ ಘೋರಸರ್ಪಕ್ಕೆ ಪ್ರಾಣವನ್ನು ಅರ್ಪಿಸುವ ಸಂಸಾರಿಗಳು, ಈಶ್ವರ ಕಥೆಯೆಂಬ ಅಮೃತವನ್ನು ಸೇವಿಸಿದ್ದೇ ಆದರೆ ಕ್ಷಣಕಾಲದಲ್ಲಿ ಆ ಭಯ ಮುಕ್ತರಾಗಿ ಈಶ್ವರನ ಸಾನ್ನಿಧ್ಯವನ್ನು ಹೊಂದುವರು. ॥೫॥

ಕ್ವ ಶಂಕರಾಪಾರಕಥಾಸುಧಾರ್ಣವಃ
ಕ್ವ ಪಾತಕಾಕಾರಶರೀರಯೋಗಃ ।
ಕ್ವ ದುಷ್ಟಸಂಸಾರವಿಹಾರವಾಂಛಾ
ದಾರಾದರಾಪಾರರಸಾಭಿವಾಂಛಾ ॥೬॥

ಏಕೇನ ತೇನೈವ ದುರಾತ್ಮನಾ ವಾ
ಸಂಸಾರಸರ್ಪಾರ್ಪಿತಚೇತಸಾಪಿ
ಮಹೇಶ್ವರಾಪಾರಕಥಾಸುಧಾಲವೋ
ದೈವಾದವಾಪ್ತೋ ಯದಿ ಸೋಽಪಿ ಮುಕ್ತಃ ॥೭॥

ವಕ್ತುಂ ನ ಶಕ್ಯತೇ ರಾಜನ್ ಶಿವಾರ್ಚನಕಥಾರ್ಣವಃ
ತತ್ರ ರತ್ನಾನ್ಯಪಾರಾಣಿ ಹಾರರೂಪಾಣಿ ಸಂತ್ಯಪಿ ॥೮॥

ಹಾರಾ ಏವ ಮಹೋದಾರಾ ಮಹೇಶ್ವರಮನೋಹರಾಃ ।
ತೇಷಾಂ ಪ್ರಭಾವಃ ಕೇನಾಪಿ ನ ಜ್ಞಾತೋ ಲೇಶತೋಽಪಿ ವಾ ॥೯॥

---

ಈಶ್ವರನ ಅಗಾಧವಾದ ಚರಿತೆಯೆಂಬ ಸಮುದ್ರದ ಮುಂದೆ ಪಾಪಭೂಯಿಷ್ಠವಾದ ಈ ಶರೀರವಾಗಲಿ, ದುಷ್ಟವಾದ ಸಂಸಾರಾಭಿಲಾಷೆಯಾಗಲಿ, ಪತ್ನೀಸೌಖ್ಯಾದಿಗಳಲ್ಲಿ ಪ್ರವೃತ್ತಿಯಾಗಲಿ ನಿಂತೀತೇ? ॥೬॥

ಅಂತಹ ಸಂಸಾರವೆಂಬ ಸರ್ಪಕ್ಕೆ ಪ್ರಾಣಕೊಟ್ಟ ದುರಾತ್ಮನೂ ಸಹ ಒಂದು ಸಾರಿಯಾದರೂ ಅಕಸ್ಮಾತ್ತಾಗಿ ಈಶ್ವರಕಥಾಮೃತದ ಒಂದು ಹನಿಯನ್ನು ಪಾನ ಮಾಡಿದರೂ, ಆತನು ಸುಲಭವಾಗಿ ಮುಕ್ತನಾಗುವನೆಂಬುದರಲ್ಲಿ ಸಂಶಯವಿಲ್ಲ. ॥೭॥

ರಾಜನೇ, ಈಶ್ವರಕಥೆಯೆಂಬ ಸಮುದ್ರದ ಮಹಿಮೆಯನ್ನು ವರ್ಣಿಸಲು ಯಾರಿಂದಲೂ ಸಾಧ್ಯವಿಲ್ಲ. ಏಕೆಂದರೆ ಅದರಲ್ಲಿ ಹರರೂಪವಾದ ಅನೇಕ ರತ್ನಗಳಿರುವುವು. ಅಂತಹ ಹರವಿಷಯವೆಂಬ ರತ್ನಗಳೇ ಅಮೂಲ್ಯವಾದವುಗಳು. ಮತ್ತು ಹರಪ್ರಿಯವಾದವುಗಳು. ಅವುಗಳ ಪ್ರಭಾವದ ಏಕದೇಶವನ್ನು ತಿಳಿಯುವುದಕ್ಕೂ ಸಾಧ್ಯವಾಗುವುದಿಲ್ಲ. ॥೮-೯॥

ಹಾರರೂಪಾಣಿ ರತ್ನಾನಿ ದುರ್ಲಭಾನಿ ಜಗತ್ತ್ರಯೇ ।
ತತ್ಕಾಂತಿಪ್ರಸರೇಣೈವ ತಮೋನಾಶಃ ಪ್ರಜಾಯತೇ ॥೧೦॥

ಅಜ್ಞಾನರೂಪತಮಸಃ ಪ್ರಣಾಶಾಯ ಮಹೇಶ್ವರಃ ।
ಸಸರ್ಜ ಹಾರರತ್ನಾನಿ ತದ್ವಿನಾಶಸ್ತು ತೈಃ ಪರಂ ॥೧೧॥

ಏಕದಾಪಾರಸೂರ್ಯಾಣಾಮುದಯೋಽಪಿ ನ ಸರ್ವಥಾ ।
ನಾಜ್ಞಾನತಮಸೋ ನಾಶೋ ಹಾರಹಾರಪ್ರಭಾಂ ವಿನಾ ॥೧೨॥

ಕೃತಾ ಲೋಕೋಪಕಾರಾಯ ಹಾರಸೃಷ್ಟಿರ್ಹರೇಣ ತು ।
ಸ ಹಾರಃ ಕೇನಚಿತ್ಪುಣ್ಯೈರನಾರ್ಯೈರೇವ ಲಭ್ಯತೇ ॥೧೩॥

ಸರ್ವೋಪಕಾರಕೋ ಹಾರೋ ಮಹೇಶ್ವರಮನೋಹರಃ ।
ಯತಸ್ತಚ್ಚರಣಾಂಭೋಜರಜಃ ಪರಮಜೀವನಂ ॥೧೪॥

ಸಂಭಾಷಣಪ್ರೇಕ್ಷಣಾದ್ಯೈಃ ಪುನಾತಿ ಭುವನತ್ರಯಂ ।
ಶಾಂಭವಃ ಕೇವಲಂ ತಸ್ಯ ದರ್ಶನಂ ಪಾಪನಾಶನಂ ॥೧೫॥

---

ಇಂತಹ ಹರವಿಷಯುಗಳೆಂಬ ರತ್ನಗಳು ಮೂರು ಲೋಕದಲ್ಲಿಯೂ ದೊರಕಲಾರವು. ಅವುಗಳ ಕಾಂತಿಪ್ರಸರದಿಂದಲೇ ಅಜ್ಞಾನವೆಂಬ ಕತ್ತಲೆಯು ನಾಶವಾಗುವುದು. ಅದಕ್ಕಾಗಿಯೇ ಶಂಕರನು ಅವುಗಳನ್ನು ಕಲ್ಪಿಸಿರುವನು. ಅಜ್ಞಾನನಾಶಕ್ಕೆ ಅವುಗಳೇ ಮುಖ್ಯಸಾಧನ. ॥೧೦-೧೧॥

ಅನೇಕ ಸೂರ್ಯರು ಏಕಕಾಲದಲ್ಲಿ ಉದಯಿಸಿದರೂ ಅಜ್ಞಾನರೂಪವಾದ ಕತ್ತಲೆಯು ಪರಿಹಾರವಾಗುವುದಿಲ್ಲ. ಹರಚರಿತೆಯೆಂಬ ಶಿವಪ್ರಭಾವದಿಂದಲೇ ಅದು ನಿವೃತ್ತಿಯಾಗುವುದು. ಲೋಕೋಪಕಾರಬುದ್ಧಿಯಿಂದಲೇ ಈ ಹಾರವು ಶಂಕರನಿಂದ ಸೃಷ್ಟವಾಗಿರುವುದು. ಇಂತಹ ಹಾರವು (ಹರಭಕ್ತನು) ಎಲ್ಲೋ ಕೆಲವು ಪುಣ್ಯಶಾಲಿಗಳಿಗೆ ಮಾತ್ರ ದೊರಕುವುದೇ ಹೊರತು ಮತ್ತಾರಿಗೂ ಲಭಿಸದು. ॥೧೨-೧೩॥

ಮಹೇಶ್ವರ ಮನೋಹರವಾದ ಆ ಹಾರವು ಸರ್ವೋಪಕಾರಕವಾದದ್ದು. ಶಂಭುಸಂಬಂಧಿಯಾದ ಕಥೆಗಳ ಶ್ರವಣ, ಸಂಭಾಷಣ, ದರ್ಶನ ಮುಂತಾದುವುಗಳು

ಯಾನ್ಯಾರ್ಜಿತಾನಿ ಪಾಪಾನಿ ತಾನ್ಯನಂತಾನ್ಯಪಿ ಕ್ಷಣಾತ್ ।
ಶಾಂಗಾಂಗಸಂಗಮಾತ್ರೇಣ ಪ್ರಣಶ್ಯಂತಿ ನ ಸಂಶಯಃ ॥೧೬॥

ಶಾಂಗಲಿಂಗಾರ್ಚನರತೋ ಮನೋವಾಕ್ಕಾಯಕರ್ಮಭಿಃ ।
ಸ ಶಾಂಗ ಇತಿ ವಿಜ್ಞೇಯಸ್ತತ್ಸಂಗಾದೇವಮುಚ್ಯತೇ ॥೧೭॥

ಶಾಂಗಾಃ ಸ್ಪೃಷ್ಟಾಶ್ಚ ದೃಷ್ಟಾಶ್ಚ ಪೃಷ್ಟಾ ಅಪಿ ವಿಶೇಷತಃ ।
ಅಪಾರಪಾತಕಾಪಾರಪಾರಾವಾರಾಪಹಾರಕಾಃ ॥೧೮॥

ನ ಯದ್ಯಪಿ ವದಿಷ್ಯಂತಿ ಶಾಂಕರಾಃ ಸಹಸಾ ಪುನಃ ।
ತಥಾಪಿ ತೇಷಾಂ ವ್ಯಾಹಾರಾಃ ಶ್ರುತಾಃ ಪಾಪಾಪಹಾರಕಾಃ ॥೧೯॥

ಹಾರೋಪಚಾರವ್ಯಾಹಾರವ್ಯವಹಾರಾದರಾಃ ಪರಂ ।
ಹಾರಾಸ್ತದಾದರೇಣೈವ ಸಂಸಾರಾನ್ಮುಚ್ಯತೇ ಜನಃ ॥೨೦॥

---

ಜಗತ್ತ್ರಯವನ್ನೂ ಪರಿಶುದ್ಧಿಗೊಳಿಸುವುವು. ಶಂಭುಭಕ್ತರ ದರ್ಶನವೇ ಪಾಪನಾಶಕವಾಗುವುದು. ॥೧೪-೧೫॥

ಅನೇಕ ಜನ್ಮಗಳಿಂದ ಸಂಪಾದಿಸಲ್ಪಟ್ಟ ಪಾಪಶೇಷಗಳೆಲ್ಲವೂ ಶಂಭುಭಕ್ತನ ಅಂಗಸ್ಪರ್ಶದಿಂದಲೇ ಪರಿಹಾರವಾಗುವುದು. ಶಾಂಗನೆಂದರೆ ಯಾರು ಶಿವಲಿಂಗಾರ್ಚನೆಯನ್ನು, ಮನಸ್ಸು, ಮಾತು, ದೇಹ, ಕಾರ್ಯ ಇವುಗಳಿಂದ ದೃಢವಾಗಿ ನೆರವೇರಿಸುವರೋ ಅವರೇ ಶಾಂಗರು. ಅವರ ಸಹವಾಸದಿಂದಲೇ ಸಮಸ್ತ ಪಾಪವೂ ಪರಿಹೃತವಾಗುವುದು. ॥೧೬-೧೭॥

ಶಂಭುಲಿಂಗಪೂಜಕರ, ದರ್ಶನ, ಸ್ಪರ್ಶನ, ಸಂಭಾಷಣ ಇವುಗಳೇ ಪಾಪಿಗಳ ಪಾಪಸಮುದ್ರವನ್ನು ಒಣಗಿಸುವುವು. ಶಂಕರಸೇವಕರು ಹಠಾತ್ತಾಗಿ ಯಾವ ಮಾತನ್ನೂ ಆಡುವುದೇ ಇಲ್ಲ. ಒಂದುವೇಳೆ ಅವರು ಆಡಿದ ಒಂದೊಂದು ನುಡಿಯೂ ಕೇಳುವವನ ಸಕಲಪಾಪಗಳನ್ನೂ ನಿವಾರಿಸುವುದು. ಆದ್ದರಿಂದ ಶಿವಸೇವಕರಿಗೆ ಮಾಡುವ ಪೂಜೆ, ಉಪಚಾರ, ಅವರೊಡನೆ ಆಡುವ ಮಾತು, ವ್ಯವಹಾರ, ಆದರಣೆ ಮುಂತಾದುವುಗಳು ಸಂಸಾರದುಃಖಮೋಚಕಗಳೆಂದೇ ಅರಿಯಬೇಕು. ॥೧೮-೧೯-೨೦॥

ಹಾರವ್ಯಾಹಾರಮಾತ್ರಾಣಾಮಾದರೇಣ ತತಃ ಪರಂ ।
ಸಂಸಾರಸಾಗರಾದ್ಘೋರಾನ್ನರಾನ್ ಸಂತಾರಯೇಽಪ್ಯರಃ ॥೨೧॥

ಪುರಾ ದ್ರವಿಡದೇಶೇಷು ಮಣಿಮುಕ್ತಾನದೀತಟೇ ।
ವೃದ್ಧಾಚಲೇಶ್ವರಕ್ಷೇತ್ರೇ ರಾಜಾ ಪರಮಧಾರ್ಮಿಕಃ ॥೨೨॥

ಶಿವಾಲಯಾನಾಂ ನಿರ್ಮಾಣಂ ರತ್ನೈರೇವ ಮನೋಹರೈಃ ।
ಕಾರಯಾಮಾಸ ತತ್ತೀರೇ ಶಾಂಕರಾತಿಮನೋಹರೇ ॥೨೩॥

ಸ ತೇಷು ರತ್ನಲಿಂಗಾನಿ ಸ್ಥಾಪಯಾಮಾಸ ಕೋಟಿಶಃ ।
ತಸ್ಯ ವೃದ್ಧಾಚಲೇಶಸ್ಯ ಮನೋಜ್ಞೇ ಮಣಿಮಂಟಪೇ ॥೨೪॥

ಮಣಿದೀಪಾವಲಿಂ ಕೃತ್ವಾ ಪೂಜಯಾಮಾಸ ಶಂಕರಂ ।
ಅರುಣೋದಯಮಾರಭ್ಯ ಕೃತ್ಯಂ ತಸ್ಯ ಶಿವಾರ್ಚನಂ ॥೨೫॥

ನ ರಾಜ್ಯಪಾಲನೇಚ್ಛಾಪಿ ನೇಚ್ಛಾ ಸ್ವಾತ್ಮಾನುಪಾಲನೇ ।
ದಾರಾದಿವಿಷಯೇಚ್ಛಾ ತು ತಸ್ಯ ದೂರತರಾ ನೃಪ ॥೨೬॥

---

ಈಶ್ವರಭಕ್ತರೊಡನೆ ಮಾತನಾಡುವುದರಿಂದಲೇ ಮನುಷ್ಯನು ಹರಾನುಗ್ರಹವನ್ನಾರ್ಜಿಸಿ ಸಂಸಾರಸಾಗರದಿಂದ ಮುಕ್ತನಾಗುವನು. ಇದಕ್ಕೊಂದು ನಿದರ್ಶನವಿದೆ. ಹಿಂದೆ ದ್ರವಿಡದೇಶದಲ್ಲಿ ಮಣಿಮುಕ್ತಾನದಿಯ ದಡದಲ್ಲಿರುವ ವೃದ್ಧಾಚಲೇಶ್ವರ ಕ್ಷೇತ್ರದಲ್ಲಿ ಧರ್ಮಿಷ್ಠನಾದ ರಾಜನೊಬ್ಬನು ವಾಸಿಸುತ್ತಿದ್ದನು. ॥೨೧-೨೨॥

ಆತನು ಶಿವಾಲಯಗಳನ್ನು ಮನೋಹರವಾದ ರತ್ನಗಳಿಂದಲೇ ನಿರ್ಮಿಸಿ, ಆ ನದಿಯ ದಡದಲ್ಲಿ ಅನೇಕ ರತ್ನಲಿಂಗಗಳನ್ನು ಕೋಟಿಸಂಖ್ಯೆಯಿಂದ ಪ್ರತಿಷ್ಠೆ ಮಾಡಿಸಿದನು. ಅಲ್ಲದೆ ವೃದ್ಧಾಚಲೇಶ್ವರಸ್ವಾಮಿಗೆ ಮನೋಹರವಾದ ಒಂದು ರತ್ನಮಂಟಪವನ್ನು ಮಾಡಿಸಿ ಅದಕ್ಕೆ ರತ್ನದೀಪಗಳನ್ನೇ ಇಡಿಸಿ, ಅದರಲ್ಲಿ ಶಂಕರನನ್ನಿಟ್ಟು ಪೂಜಿಸಿದನು. ಆತನು ಮಾಡುವ ಈಶ್ವರ ಪೂಜೆಯು ದಿನವೂ ಅರುಣೋದಯ ಕಾಲದಿಂದಲೇ ಪ್ರಾರಂಭವಾಗುತ್ತಿದ್ದಿತು. ॥೨೩-೨೪-೨೫॥

ಆತನಿಗೆ ರಾಜ್ಯರಕ್ಷಣೆಯಲ್ಲಾಗಲಿ, ಸ್ವದೇಹ ಪೋಷಣೆಯಲ್ಲಾಗಲಿ, ಪತ್ನಿಸುಖಾದಿಗಳಲ್ಲಾಗಲಿ ಮನಸ್ಸು ಬರಲಿಲ್ಲ. ಪ್ರತಿಯಾಮದಲ್ಲಿಯೂ ಶಂಕರನನ್ನೇ

ಪ್ರತಿಪ್ರಹರಪೂಜಾಭಿಸ್ತೋಷಯಾಮಾಸ ಶಂಕರಂ ।
ತತ್ಪೂಜಾಸಾಧನದ್ರವ್ಯಮಮಿತಂ ಪ್ರತ್ಯಹಂ ನೃಪ ॥೨೭॥

ಪೂಜಾಂ ಪುನಃ ಪುನಃ ದೃಷ್ಟ್ವಾ ಪ್ರಹೃಷ್ಟಃ ಕಷ್ಟವರ್ಜಿತಃ ।
ಅನಿಷ್ಟಂ ನಾಶಯತ್ಯೇವ ಲೋಕಾನಾಂ ಸ್ವಾವಲೋಕನೈಃ ॥೨೮॥

ಮಹದೈಶ್ವರ್ಯಸಂಪನ್ನೋಽಪ್ಯಪಾರಗುಣಸಾಗರಃ ।
ಶಿವನಾಮಸುಧಾಧಾರಾಧರೋ ಧೀರಃ ಪರಂ ನೃಪ ॥೨೯॥

ಶಿವನಾಮಸುಧಾಧಾರಾರಸೈಸ್ತದ್ರಸನಾಚಿರಂ ।
ಪುಷ್ಟಾ ರಸಾಂತರಾಪೇಕ್ಷಾಂ ನ ಕರೋತ್ಯೇವ ಸರ್ವಥಾ ॥೩೦॥

ಕದಾಪಿ ಲೌಕಿಕಂ ನಾಮ ತೇನ ನೋಕ್ತಂ ಭ್ರಮಾದಪಿ ।
ಶಿವನಾಮ್ನಾ ಸಂಜ್ಞಯೈವ ಚರಂತ್ಯನುಚರಾ ಅಪಿ ॥೩೧॥

ಮೇಧ್ಯಾಖ್ಯಾಗ್ರಹಣೇನೈವ ಜಲಪಾತ್ರಸ್ಯ ಕೇವಲಂ ।
ಕುರ್ವಂತ್ಯಾನಯನಂ ತಸ್ಯ ದೇವತಾ ಅಪಿ ಶಂಕರಾಃ ॥೩೨॥

---

ಅರ್ಚಿಸುತ್ತಾ, ಅನೇಕ ಪೂಜಾದ್ರವ್ಯಗಳಿಂದ ಸ್ವಾಮಿಯನ್ನು ಪೂಜಿಸುತ್ತಿದ್ದನು. ||೨೬-೨೭||

ಅನಾಯಾಸವಾಗಿ ಹೀಗೆ ಶಿವಪೂಜೆಯನ್ನು ಪದೇಪದೇ ನೆರವೇರಿಸುತ್ತಾ, ಆದರಿಂದ ತನ್ನ ದೇಶದ ಅನಿಷ್ಟಗಳನ್ನೆಲ್ಲಾ ಪರಿಹರಿಸಿಕೊಂಡಿದ್ದನು. ಹೀಗೆ ಅತಿಶಯವಾದ ಐಶ್ವರ್ಯದಿಂದ ಕೂಡಿದವನಾಗಿದ್ದರೂ, ಶಿವನಾಮಗಳೆಂಬ ಅಮೃತ ಲಹರಿಯಲ್ಲಿ ಮುಳುಗಿದವನಾಗಿ ಸುಖದಿಂದ ಕಾಲಕಳೆಯುತ್ತಿದ್ದನು. ||೨೮-೨೯||

ಶಿವನಾಮೋಚ್ಚಾರಣೆಯೆಂಬ ಅಮೃತರಸಾಸ್ವಾದನದಿಂದ ಪುಷ್ಟವಾದ ಅವನ ನಾಲಿಗೆಯು ಮತ್ತಾವ ರಸದಲ್ಲಿಯೂ ಅಭಿಲಾಷೆಯುಳ್ಳದ್ದಾಗಲಿಲ್ಲ. ಆತನು ಎಂದೂ ಶಿವನಾಮಗಳನ್ನು ಬಿಟ್ಟು ಲೌಕಿಕವಾದ ಇತರ ಹೆಸರುಗಳನ್ನು ಹೇಳಲೇ ಇಲ್ಲ, ಸೇವಕರನ್ನೂ ಸಹ ಶಿವನಾಮಗಳಿಂದಲೇ ಕೂಗುತ್ತಿದ್ದನು. ||೩೦-೩೧||

ಪವಿತ್ರವಾದ ಮೇಧ್ಯ (ಪವಿತ್ರನಾದವನು) ನಾಮದ ಸಂಜ್ಞೆಯಿಂದಲೇ ಆತನ ಸೇವಕರು ಜಲಪಾತ್ರೆಯನ್ನು ರಾಜನಿಗೆ ಕೊಡುತ್ತಿದ್ದರು. ವಿದ್ಯುತ್ತಿನ ಹೆಸರಿನಿಂದ ದೀಪ ಪಾತ್ರೆಗಳನ್ನೂ, ತಪನನಾಮದಿಂದ ಛತ್ರಿಯನ್ನೂ ತಂದೊಪ್ಪಿಸು

ವಾತ್ಯಗ್ರಹಣಮಾತ್ರೇಣಾಪ್ಯುಶೀರವ್ಯಜನಾದಿನಾ ।
ವಾಯುಪ್ರಸಾರಂ ಕುರ್ವಂತಿ ಸೇವಕಾಸ್ತಸ್ಯ ಶಾಂಭವಾಃ ॥೩೪॥

ತಸ್ಯಾನ್ನಪತಿಶಬ್ದಾನಾಮಭಿಧಾನೇನ ಕೇವಲಂ ।
ಪ್ರಯಚ್ಛಂತ್ಯನ್ನಮನಘಂ ಮಹೇಶ್ವರನಿವೇದಿತಂ ॥೩೫॥

ಯದ್ಯದ್ವಸ್ತುಮಹಾದೇವಸಂಜ್ಞಯಾ ಸಂಜ್ಞಿತಂ ನೃಪ ।
ತತ್ತತ್ಪ್ರಾಪ್ಯ ಸ ರಾಜಾ ತು ಲೌಕಿಕಂ ತಂ ವದತ್ಯಪಿ ॥೩೬॥

ಯದಾ ವನಪತಿತ್ವೇನ ಸ್ಮೃತೋ ವನಪತಿಸ್ತದಾ ।
ತಸ್ಯ ಪುಷ್ಪವನೋದ್ಯೋಗೋ ಜಾತ ಇತ್ಯಪಿ ನಿಶ್ಚಿತಂ ॥೩೭॥

ಯದಾ ವೃಕ್ಷಪತಿತ್ವೇನ ಸ್ಮೃತೋ ವೃಕ್ಷಪತಿಸ್ತದಾ ।
ಬಿಲ್ವಾದಿಪೋಷಣೋದ್ಯುಕ್ತಾಸ್ತದೀಯಾಃ ಸೇವಕಾಸ್ತದಾ ॥೩೮॥

ಯದಾ ಕಕ್ಷಪತಿತ್ವೇನ ಸ್ಮೃತಃ ಕಕ್ಷಪತಿಸ್ತದಾ ।
ಪ್ರವೃತ್ತಾ ಏವ ತದ್ಭೃತ್ಯಾಃ ಪುಷ್ಪಕಕ್ಷಾಭಿರಕ್ಷಣೇ ॥೩೯॥

ಯದಾ ಪತ್ತಿಪತಿತ್ವೇನ ಸ್ಮೃತಃ ಪತ್ತಿಪತಿಸ್ತದಾ ।
ಪತ್ತಿಕೋಟಿಸಹಸ್ರಾಣಿ ಸಮಾಯಾಂತ್ಯಪಿ ದೂರತಃ ॥೪೦॥

---

ತ್ತಿದ್ದರು. (ಮೇಧ್ಯ, ವಿದ್ಯುತ್ತು, ತಪನ, ವಾತ್ಯ ಮುಂತಾದ ನಾಮಗಳು ರುದ್ರಾಧ್ಯಾಯದಲ್ಲಿ ಈಶ್ವರನ ಸ್ತುತಿರೂಪದಲ್ಲಿವೆ.) ॥೩೨-೩೩॥

ವಾತ್ಯಾ ಎಂಬ ಈಶ್ವರನಾಮದಿಂದ, ಲಾಮಂಚದ ಬೀಸಣಿಗೆಯಿಂದ ಸೇವಕರು ಬೀಸುತ್ತಿದ್ದರು. ಅನ್ನಪತಿ ಎಂಬ ಈಶ್ವರನಾಮೋಚ್ಚಾರಣೆಮಾಡಿದೊಡನೆಯೇ ಮಹೇಶ್ವರನ ನಿವೇದನವಸ್ತುವನ್ನು ರಾಜನಿಗೆ ಅರ್ಪಿಸುತ್ತಿದ್ದರು. ॥೩೪-೩೫॥

ಯಾವ ಯಾವ ವಸ್ತುಗಳು ಈಶ್ವರಸಂಜ್ಞೆಯಿಂದ ಕರೆಯಲ್ಪಡುವುವೋ, ಆಯಾ ವಸ್ತುಗಳನ್ನೇ ಆತನು ಸ್ವೀಕರಿಸುತ್ತಿದ್ದನು. ಉದ್ಯಾನಪಾಲಕನನ್ನು ವನಪತಿಯೆಂಬ ಹೆಸರಿನಿಂದ ಕರೆಯುತ್ತಿದ್ದನು. ॥೩೬-೩೭॥

ಬಿಲ್ವವೃಕ್ಷವೇ ಮೊದಲಾದ ವೃಕ್ಷಪಾಲಕರನ್ನು, ವೃಕ್ಷಪತಿ ಎಂಬ ಶಂಭುನಾಮದಿಂದಲೂ, ಪುಷ್ಪವಾಟಿಕೆಗಳ ರಕ್ಷಕರನ್ನು ಕಕ್ಷಪತಿ ಎಂಬ ಶಬ್ದದಿಂದಲೂ,

ನಿಷಂಗಿತ್ವೇನ ಗೌರೀಶಂ ಯದಾ ಸ್ಮರತಿ ಪಾರ್ಥಿವಃ ।
ತದಾ ನಿಷಂಗಮಾದಾಯ ಪ್ರಯಚ್ಛಂತಿ ಮನೋಹರಂ ॥೪೧॥

ಯದ್ಯೈವೇಷುಧಿಮಾನೀಶಃ ಸ್ಮೃತಸ್ತೇನ ಮಹಾತ್ಮನಾ ।
ತದೇಷುಧಿಸಹಸ್ರಾಣಿ ನೀಯಂತೇ ತಸ್ಯ ಸನ್ನಿಧಿಂ ॥೪೨॥

ತೇನಾರಣ್ಯಪತಿತ್ವೇನ ಸ್ಮೃತೋ ಯದಿ ಮಹೇಶ್ವರಃ ।
ಅರಣ್ಯಪಾಲನೋದ್ಯೋಗಸ್ತದ್ಭೃತ್ಯಾನಾಂ ಪ್ರಜಾಯತೇ ॥೪೩॥

ಸ ಹಿರಣ್ಯಪತಿತ್ವೇನ ಸ್ಮೃತಸ್ತೇನ ಶಿವೋ ಯದಾ ।
ತದಾ ಹಿರಣ್ಯಗಿರಯೋಽಪ್ಯಾನೀಯಂತೇಽಪಿ ಸೇವಕೈಃ ॥೪೪॥

ಸರಸ್ಯತ್ವೇನ ಗೌರೀಶಂ ಯದಾ ಸ್ಮರತಿ ಪಾರ್ಥಿವಃ ।
ತದಾ ತದ್ಭೃತ್ಯವರ್ಗಸ್ಯ ತತ್ಸರಃ ಪೋಷಣೋದ್ಯಮಃ ॥೪೫॥

ಕೂಪ್ಯತ್ವೇನ ಯದಾ ರಾಜಾ ಸ್ಮರತ್ಯೇವ ಸದಾಶಿವಂ ।
ತದಾ ಕೂಪೋಪಚಾರೇಷು ಪ್ರಯತಾಸ್ತಸ್ಯ ಸೇವಕಾಃ ॥೪೬॥

---

ಕಾಲಾಳುಗಳ ಗುಂಪನ್ನೂ, ಅವುಗಳ ಯಜಮಾನರನ್ನು ಪತ್ತಿಪತಿ ಎಂಬ ಶಿವನಾಮದಿಂದಲೂ ಕರೆಯುತ್ತಿದ್ದನು. ಅವರೂ ಆ ಹೆಸರುಗಳನ್ನರಿತು ವ್ಯವಹರಿಸುತ್ತಿದ್ದರು. ॥೩೮-೩೯-೪೦॥

ನಿಷಂಗಪತಿ ಎಂಬ ಶಿವಶಬ್ದೋಚ್ಚಾರಣೆಯಿಂದ, ಸೇವಕರು ಬಾಣಗಳನ್ನು ತಂದುಕೊಡುತ್ತಿದ್ದರು. ಇಷುಧಿಮಾನ್ ಎಂಬ ಶಂಭುನಾಮದಿಂದ ಸೇವಕರು ಬತ್ತಳಿಕೆಗಳನ್ನು ತಂದೊಪ್ಪಿಸುತ್ತಿದ್ದರು. ॥೪೧-೪೨॥

ಅರಣ್ಯಪತಿ ಎಂಬ ಶಬ್ದದಿಂದ ಶಂಕರನನ್ನು ಸ್ಮರಿಸಿದೊಡನೆಯೇ ಅರಣ್ಯಶಾಖಾಧಿಕಾರಿಗಳು ಓಡಿಬರುತ್ತಿದ್ದರು. ಹಿರಣ್ಯಪತಿಯೆಂಬ ಶಿವನಾಮಸ್ಮರಣೆ ಮಾಡಿದರೆ ಸೇವಕರು ಹಿರಣ್ಯಾದ್ರಿಯನ್ನು ತಂದು ಮುಂದಿಡುತ್ತಿದ್ದರು. ॥೪೩-೪೪॥

ಸರಸ್ಯವೆಂಬ ಶಂಕರನಾಮೋಚ್ಚಾರಣೆಯಿಂದ ಸರೋವರದ ರಕ್ಷಕರೂ, ಕೂಪ್ಯವೆಂಬ ಶಬ್ದೋಚ್ಚಾರಣೆಯಿಂದ ಬಾವಿಯನ್ನು ವಿಚಾರಿಸುವ ಭೃತ್ಯವರ್ಗವೂ ರಾಜನ ಮುಂದೆ ಬಂದು ನಿಲ್ಲುತ್ತಿದ್ದಿತು. ॥೪೫-೪೬॥

ವರ್ಷ್ಯರ್ತ್ವೇನ ಯದಾ ರಾಜಾ ಸ್ಮರತ್ಯೇವ ಮಹೇಶ್ವರಂ ।
ತದಾ ವೃಷ್ಟ್ಯರ್ಥಮುದ್ಯೋಗಸ್ತದ್ಭೃತ್ಯಾನಾಂ ಪ್ರಜಾಯತೇ ॥೪೭॥

ನಾದ್ಯತ್ವೇನ ಯದಾ ಶಂಭುಃ ಸ್ಮೃತಸ್ತೇನ ಮಹಾತ್ಮನಾ ।
ತದಾ ನದೀವಿಚಾರೇಷು ಪ್ರಯತಾಸ್ತಸ್ಯ ಸೇವಕಾಃ ॥೪೮॥

ಏವಂ ಸಂವಸತಸ್ತಸ್ಯ ಭೂಪಾಲಸ್ಯ ಮಹಾತ್ಮನಃ ।
ಆಸಾಯಂ ಭೋಜನಾಪೇಕ್ಷಾ ನ ಭವತ್ಯೇವ ಸರ್ವಥಾ ॥೪೯॥

ಸಾಯಂಕಾಲೇ ವಿಶೇಷೇಣ ಸ ಮಹಾದೇವಪೂಜನೇ ।
ಉದ್ಯುಕ್ತಶ್ಚಾಂಭವೈರ್ಯುಕ್ತೋ ವಿಮುಕ್ತಃ ಪಾಪಪರ್ವತೈಃ ॥೫೦॥

ಆಪಾದಮಸ್ತಕಂ ಸಮ್ಯುಗುದ್ಧೂಲ್ಯ ಸಿತಭಸ್ಮನಾ ।
ತ್ರಿಪುಂಡ್ರಧಾರಣಂ ಕೃತ್ವಾ ರುದ್ರಾಕ್ಷಾಣಾಂ ಚ ಧಾರಣಂ ॥೫೧॥

ರುದ್ರಾಕ್ಷರತ್ನಕೋಟೀರಂ ಧೃತ್ವಾ ಶಿರಸಿ ಸಾದರಂ ।
ರುದ್ರಾಕ್ಷಮಾಲಾಲಕ್ಷಾಣಾಂ ಶೋಭಯಾ ಸಮಲಂಕೃತಃ ॥೫೨॥

---

ವರ್ಷ್ಯವೆಂಬ ಹೆಸರನ್ನು ಉಚ್ಚರಿಸಿದೊಡನೆಯೇ ವೃಷ್ಟ್ಯರ್ಥವಾಗಿ ಪ್ರಯತ್ನಿಸುವ ಸೇವಕರೆಲ್ಲರೂ ಬರುತ್ತಿದ್ದರು. ನಾದ್ಯವೆಂಬ ಶಿವನಾಮೋಚ್ಚಾರಣೆಯಿಂದ ನದೀವಿಚಾರಮಾಡುವ ಸೇವಕರು ಬಂದು ನಿಲ್ಲುತ್ತಿದ್ದರು. ||೪೭-೪೮||

ಹೀಗೆ ಸಕಲ ವ್ಯವಹಾರಕ್ಕೂ ಶಿವನಾಮಗಳನ್ನೇ ಬಳಸುತ್ತಾ ಸಾಯಂಕಾಲ ಪರ್ಯಂತವಾಗಿಯೂ ಆಹಾರಾಪೇಕ್ಷೆಯಿಲ್ಲದೆ ಈ ಶಿವನಾಮಪಠನೆಯಿಂದಲೇ ವ್ಯವಹಾರದಲ್ಲಿ ಕಾಲಕಳೆಯುತ್ತಿದ್ದನು. ಸಾಯಂಕಾಲಾನಂತರ ಆ ರಾಜನು ಮತ್ತೆ ಮಹಾದೇವಪೂಜೆಗಾಗಿ ಅನೇಕ ಹರಸೇವಕರೊಡನೆ ಕಲೆಯುತ್ತಿದ್ದನು. ||೪೯-೫೦||

ತಲೆಯಿಂದ ಹಿಡಿದು ಕಾಲಿನವರೆಗೂ ಭಸ್ಮವನ್ನು ಲೇಪಿಸಿಕೊಳ್ಳುತ್ತಿದ್ದನು. ಅದರ ಮೇಲೆ ತ್ರಿಪುಂಡ್ರವನ್ನು ಧರಿಸಿ ರುದ್ರಾಕ್ಷಿಯ ಸರವನ್ನೂ ರುದ್ರಾಕ್ಷಿಯ ಕಿರೀಟವನ್ನೂ ಹಾಕಿಕೊಳ್ಳುತ್ತಿದ್ದನು. ಲಕ್ಷಸಂಖ್ಯೆಯ ರುದ್ರಾಕ್ಷಿಯ ಸರದಿಂದ ಆತನು ಅಲಂಕೃತನಾಗುತ್ತಿದ್ದನು. ||೫೧-೫೨||

ಭಸ್ಮರುದ್ರಾಕ್ಷಮಾಲಾಂಕ್ಯೈಃ ಶಾಂಕರೈಃ ಸಹ ಸಾದರಂ ।
ಗೋಕ್ಷೀರಾದಿಪ್ರವಾಹೈಶ್ಚ ಪೂಜಯಾಮಾಸ ಶಂಕರಂ ॥೫೩॥

ಚಂದನೈಃ ಕುಸುಮೈರ್ಬಿಲ್ವೈರ್ಧೂಪದೀಪೈಶ್ಚ ಸಾದರಂ ।
ಗೋಕ್ಷೀರಾದಿಪ್ರವಾಹೈಶ್ಚ ಪೂಜಯಾಮಾಸ ಶಂಕರಂ ॥೫೪॥

ಪೂಜಾಂತೇ ನೃತ್ಯತೂರ್ಯಾದ್ಯೈಸ್ತೋಷಯಿತ್ವಾ ಮಹೇಶ್ವರಂ ।
ಶಾಂಭವೈಸ್ಸಹ ಸಲ್ಲಾಪಂ ಕೃತ್ವಾ ಸ್ತೋತ್ರಂ ಮುಹುರ್ಮುಹುಃ ॥೫೫॥

ಸಸೌಭಾಗ್ಯಂ ಮಹೇಶಾಯ ನಿವೇದ್ಯ ನಿಯಮಾನ್ನೃಪಃ ।
ಹಾರೋಪಹಾರಶೇಷಾನ್ನೈಸ್ತೋಷಯಾಮಾಸ ಶಾಂಕರಾನ್ ॥೫೬॥

ಸಿದ್ಧಾಃ ಪ್ರದೋಷಸಮಯೇಷು ಮಹೇಶಪೂಜಾಂ ।
ಲಿಂಗೇಷು ರತ್ನರಚಿತೇಷು ಮನೋಹರೇಷು
ಕೃತ್ವಾ ಮೃಡಾಪರಿವೃಢಂ ದೃಢಭಕ್ತಿಭಾವೈ ।
ರ್ನೃತ್ಯಂತಿ ನಾಟ್ಯನಿಪುಣಾಃ ಸುರಕನ್ಯಕಾಶ್ಚ ॥೫೭॥

---

ಅದೇ ರೀತಿ ಭಸ್ಮ, ರುದ್ರಾಕ್ಷಿಯಸರ ಇವುಗಳಿಂದಲೂ ಇತರ ಶಂಭುಭಕ್ತರೊಡನೆಯೂ ಕೂಡಿ ಶಿವಲಿಂಗವನ್ನು ಹಸುವಿನ ಹಾಲಿನ ಅಭಿಷೇಕದಿಂದಲೂ, ಅನಂತರ ಚಂದನ, ಪುಷ್ಪ, ಬಿಲ್ವಪತ್ರೆ, ಧೂಪ, ದೀಪ, ಕ್ಷೀರನೈವೇದ್ಯ ಮುಂತಾದುವುಗಳಿಂದಲೂ ಪೂಜಿಸುತ್ತಿದ್ದನು. ॥೫೩-೫೪॥

ಪೂಜೆಯಾದಮೇಲೆ ನೃತ್ಯ, ಗೀತ, ವಾದ್ಯ ಇವುಗಳಿಂದಲೂ, ಶಂಭುಚಾರಿತ್ರಗಳನ್ನು ತಿಳಿದ ಭಕ್ತರೊಡನೆ ಸರಸಸಲ್ಲಾಪಗಳನ್ನಾಡುವುದರಿಂದಲೂ, ಪೂಜಾಂತ್ಯದಲ್ಲಿ ಹರಭಕ್ತರೊಡನೆ ಕುಳಿತು ಶಿವನೈವೇದ್ಯ ಭಕ್ಷಣದಿಂದಲೂ, ಶಂಭುವನ್ನು ಬಹುವಾಗಿ ತೃಪ್ತಿಪಡಿಸುವನು. ॥೫೫-೫೬॥

ಪ್ರದೋಷಕಾಲದಲ್ಲಿ ಸಿದ್ಧಪುರುಷರೂ ಸಹ ರತ್ನಖಚಿತವಾಗಿ ಮನೋಹರವಾಗಿರುವ ಶಿವಲಿಂಗಗಳಲ್ಲಿ ಪಾರ್ವತೀ ಸಮೇತನಾದ ಶಂಕರನನ್ನು ಧ್ಯಾನಿಸುತ್ತಾ, ಭಕ್ತಿಭರಿತರಾಗಿ, ಶಂಕರನನ್ನು ಆರಾಧಿಸುವರು. ಅದೇಕಾಲದಲ್ಲಿಯೇ ದೇವತಾಸ್ತ್ರೀಯರೂ ಸಹ ಶಂಕರನ ಮುಂದೆ ನಾಟ್ಯವಾಡುವರು. ॥೫೭॥

ಗಂಧರ್ವರಾಜನಗರೇಽಪಿ ಶಿವಾರ್ಚನೇನ ।
ನೀತಃ ಪ್ರದೋಷಸಮಯಃ ಸಸುಧಾಮಯೋಽಪಿ ।
ತೇಷಾಂ ನ ಕೃತ್ಯಮಿತರದ್ಗಿರಿರಾಜಕನ್ಯಾ ।
ನಾಥಾಂಘ್ರಿಪೂಜನಮಹಾವ್ರತದೀಕ್ಷಿತಾನಾಂ ॥೫೮॥

[1]ಸೋಮಂ ಚತುರ್ಮುಖಮುಖಾಸ್ತ್ರಿದಶಾಸ್ತ್ರಿನೇತ್ರಂ
ಲಿಂಗಸ್ವರೂಪಮಮಲಂ ಸುಧಯಾಭಿಷಿಚ್ಯ ।
ಮಂದಾರಕುಂದಕುಸುಮಾದಿಭಿರರ್ಚಯಂತಿ
ತೇ ದೇವದುಂದುಭಿನಿನಾದಪುರಸ್ಸರಂ ಹಿ ॥೫೯॥

ರಂಭಾದಿದೇವಗಣಿಕಾಃ ಶಿವಪೂಜನಾಂತೇ ।
ನೃತ್ಯಂ ಮಹೇಶನಿಕಟೇ ರಜನೀಮುಖೇಷು
ಕುರ್ವಂತಿ ಸಾದರಮಮಂದಮುದಾಪ್ರಯತ್ನೈಃ ।
ಸ್ವೇದಪ್ರಪೂರಪರಿಪೂರಿತದಿವ್ಯಗಾತ್ರಾಃ ॥೬೦॥

---

ಗಂಧರ್ವರಾಜನ ನಗರದಲ್ಲಿಯೂ, ಪ್ರದೋಷಕಾಲದಲ್ಲಿ ಶಿವಾರ್ಚನೆಯು ಬಹುಸಂಭ್ರಮದಿಂದ ನಡೆಯುವುದು. ಅಲ್ಲಿ ಸರ್ವವೂ ಅಮೃತಪ್ರಾಯವಾಗಿದ್ದರೂ, ಅಲ್ಲಿನವರೆಲ್ಲರೂ ಶಿವಾರ್ಚನಾಕಾಂಕ್ಷಿಗಳಾಗಿ, ಶಿವಪೂಜೆಯೊಂದನ್ನು ಬಿಟ್ಟು ಮತ್ತಾವ ಕೃತ್ಯಕ್ಕೂ ತೊಡಗುವುದೇ ಇಲ್ಲ. ॥೫೮॥

ಬ್ರಹ್ಮಾದಿ ಸಕಲ ದೇವತೆಗಳೂ ಸಹ ಪ್ರದೋಷಕಾಲದಲ್ಲಿ ಶಿವಲಿಂಗಕ್ಕೆ ಅಮೃತಾಭಿಷೇಕಮಾಡಿ, ಮಂದಾರ, ಮಲ್ಲಿಗೆ ಮುಂತಾದ ಸುಗಂಧಭರಿತವಾದ ಪುಷ್ಪಗಳಿಂದಲೂ, ದೇವದುಂದುಭಿನಾದದಿಂದಲೂ ಶಂಕರನನ್ನು ತೃಪ್ತಿಗೊಳಿಸುವರು. ॥೫೯॥

ಪೂಜಾಂತ್ಯದಲ್ಲಿ ರಂಭೆಯೇ ಮೊದಲಾದ ದೇವತಾಸ್ತ್ರೀಯರು ಪ್ರದೋಷ ಕಾಲಿಕವಾದ ನಾಟ್ಯವನ್ನು ಅತಿಶಯವಾದ ಸಂತೋಷದಿಂದ ಶಿವಸನ್ನಿಧಿಯಲ್ಲಿ ನೆರವೇರಿಸುವರು. ನಾಟ್ಯವಾಡಿ, ಆಡಿ ಅವರ ದೇಹವೆಲ್ಲಾ ಬೆವರಿನಿಂದ ತುಂಬಿ ಹೋಗುವುದು. ॥೬೦॥

---

1 ಸಾಯಂ (ಪಾ. ರ)

ಸ್ವೇದಾಪನೀತಕೃತಭಸ್ಮಸಿತತ್ರಿಪುಂಡ್ರಾ
ಸ್ನಾತಾಃ ಸ್ವರ್ಧುನೀಜಲನಿವೇಶನಪೂತಗಾತ್ರಾಃ ।
ಧೃತ್ವಾ ತ್ರಿಪುಂಡ್ರಮಮಲಂ ಪುನರೇವ ನೃತ್ಯಂ
ಕುರ್ವಂತಿ ಶಂಕರಮನೋಹರನುಂದಿರೇಷು ॥೬೧॥

ಲೋಕೇ ನ ಕೇಪಿ ರಜನೀಮುಖಮೇತ್ಯ ಭಕ್ತ್ಯಾ
ಕಾರ್ಯಾಂತರೇಷು ನಿರತಾಃ ಪ್ರಮದಾಶ್ಚ ಸಾಯಂ ।
ಧೃತ್ವಾ ತ್ರಿಪುಂಡ್ರಮಮಲಂ ಸಿತಭಸ್ಮನೈವ
ರುದ್ರಾಕ್ಷಧಾರಣಪರಾಃ ಪ್ರಭವಂತಿ ಭಾವಾಃ ॥೬೨॥

ಸಂಪಾದ್ಯ ಬಿಲ್ವಕುಸುಮಾದಿಕಮಾದರೇಣ
ಸಂಪೂಜಯಂತಿ ಗಿರಿಶಂ ಶಿವಲಿಂಗರೂಪಂ ।
ಕರ್ಪೂರದೀಪರುಚಿರಪ್ರಭಯಾ ಪ್ರದೀಪ್ತಂ
ವ್ಯಾಪ್ತಂ ಚ ಧೂಪವರಧೂಮಗಣೈರಪಾರೈಃ ॥೬೩॥

---

ಬೆವರಿನಿಂದ ಅವರು ಧರಿಸಿದ್ದ ಭಸ್ಮ, ತ್ರಿಪುಂಡ್ರಗಳೆಲ್ಲಾ ಅಳಿಸಿ ಹೋದ ಮೇಲೆ, ಆ ರಂಭಾದಿಗಳು ಮತ್ತೆ ಗಂಗಾನದಿಯಲ್ಲಿ ಮಿಂದು, ಪುನಃ ತ್ರಿಪುಂಡ್ರಾದಿಗಳನ್ನು ಧರಿಸಿ, ಶಿವಾಲಯಗಳಲ್ಲಿ ತಿರುಗಿಯೂ ನಾಟ್ಯವಾಡಲಾರಂಭಿಸುವರು. ॥೬೧॥

ಆ ಲೋಕದಲ್ಲಿ ಪ್ರದೋಷಕಾಲದಲ್ಲಿ ಯಾರೂ ಕಾರ್ಯಾಂತರಾಸಕ್ತರಾಗಿರುವುದಿಲ್ಲ. ಸ್ತ್ರೀಪುರುಷರೆಲ್ಲರೂ, ತ್ರಿಪುಂಡ್ರ, ಭಸ್ಮ ಇವುಗಳಿಂದಲೂ, ರುದ್ರಾಕ್ಷಿಯ ಮಾಲೆಗಳಿಂದಲೂ ಅಲಂಕೃತರಾಗಿ ಸರ್ವದಾ ಶಿವಧ್ಯಾನಾಸಕ್ತರಾಗಿಯೇ ಇರುವರು. ॥೬೨॥

ಬಿಲ್ವಪತ್ರೆಯೇ ಮೊದಲಾದ ಶಿವಪೂಜಾಸಾಮಗ್ರಿಗಳನ್ನು ಸಂಪಾದಿಸಿ, ಅದರಿಂದಲೂ, ಕರ್ಪೂರರನೀರಾಜನ, ಧೂಪ, ದೀಪಾದಿಗಳಿಂದಲೂ ಶಿವಲಿಂಗರೂಪಿಯಾದ ಶಂಕರನನ್ನು ಸರ್ವದಾ ಧ್ಯಾನಮಾಡುವರು. ॥೬೩॥

ನಾರಾಯಣೋ ಮೃದುಮೃದಂಗತಲಾಭಿಘಾತ
ನಮ್ರಾನನಶ್ಚರಣಘಾತವಿಧೂತದೋಷಃ ।
ಸ್ವೇದಾಂಬುಪೂರಪರಿಪೂರಿತ ಏವ ನಿತ್ಯಂ
ನೃತ್ಯಂ ಕರೋತಿ ನಿಯಮಾದ್ರಜನೀಮುಖೇಷು ॥೬೪॥

ಸಾಯಂ ರಮಾಪಿ ಶಿವಲಿಂಗಮನಂಗಭಂಗ
ಕ್ರೀಡಾಸ್ಪದಂ ಸುರಸರಿದ್ವರನೀರಪೂರೈಃ ।
ಕಸ್ತೂರಿಕಾರುಚಿರಚಂದನಪುಷ್ಪಮಾಲಾ
ಬಿಲ್ವಾದಿಭಿಃ ಶುಭದಮರ್ಚಯತಿ ಪ್ರಯತ್ನೈಃ ॥೬೫॥

ಪೂಜಾಂ ಸಮಾಪ್ಯ ಪರಿಗೃಹ್ಯ ಚ ರುದ್ರವೀಣಾಂ
ಗಾನಂ ಸಮಾಪ್ಯ ಶಿವನಾಮವಿಶೇಷಗಾನೈಃ ।
ನೃತ್ಯಂ ಕರೋತ್ಯಭಿನಯೇಷು ವಿಚಕ್ಷಣಾ ಸಾ
ನಾರಾಯಣಸ್ಯ ರಮಣೀ ತರುಣೀ ಸಮೇತಾ ॥೬೬॥

---

ವಿಷ್ಣುವೂ ಸಹ ಪ್ರದೋಷಕಾಲದಲ್ಲಿ, ಮೃದಂಗವನ್ನು ಬಾರಿಸುತ್ತಾ, ತಲೆಯನ್ನು ಬಗ್ಗಿಸಿಕೊಂಡು ನಾಟ್ಯವಾಡುತ್ತಾ, ತತ್ಪ್ರಯುಕ್ತವಾದ ಬೆವರಿನಿಂದ ತೋಯಲ್ಪಟ್ಟವನಾಗಿ ಶಂಕರನನ್ನು ತೃಪ್ತಿಗೊಳಿಸುವನು. ॥೬೪॥

ಅದೇ ಪ್ರದೋಷಕಾಲದಲ್ಲಿ ಲಕ್ಷ್ಮೀದೇವಿಯೂ ಸಹ ಮಾರಾರಿಯಾದ ಶಂಕರನನ್ನು ದೇವಗಂಗೋದಕದಿಂದಲೂ, ಕಸ್ತೂರಿಗಂಧ, ಚಂದನ, ಪುಷ್ಪಮಾಲಿಕೆ, ಬಿಲ್ವಪತ್ರೆ ಮುಂತಾದ ಪೂಜಾಸಾಮಗ್ರಿಗಳಿಂದಲೂ ಪ್ರಯತ್ನಪೂರ್ವಕವಾಗಿ ಪೂಜಿಸುವಳು. ॥೬೫॥

ಪೂಜೆಯಾದ ಮೇಲೆ, ಅಭಿನಯದಲ್ಲಿ ನಿಪುಣಳಾದ ಲಕ್ಷ್ಮೀದೇವಿಯೂ, ಈಶ್ವರಾರಾಧನೆಮಾಡಿ, ಮೊದಲು ರುದ್ರವೀಣೆಯಿಂದ ಶಿವನಾಮಕೀರ್ತನೆಗಳನ್ನು ಇಂಪಾಗಿ ಹಾಡಿ, ಅನಂತರ ಇತರ ಗೆಳತಿಯರೊಡನೆ ನರ್ತಮಾಡುವಳು. ॥೬೬॥

ನಾಟ್ಯೇನ ಸೇಯಮನಿಶಂ ಚ ನಿಶಾವಸಾನಂ
ಕೃತ್ವಾ ಪ್ರನೃತ್ಯತಿ ಪುನಃ ಪುನರಿಂದುಮೌಳಿಂ ।
ಸ್ಮೃತ್ವಾ ಮನೋಹರಶಿವಾಚರಣಾಂಬುಜಂ ಚ
ಭೂಯಃ ಪ್ರನೃತ್ಯತಿ ಹಸತ್ಯತಿಗಾನಲೋಲಾ ॥೬೭॥

ಗಂಗಾಪಿ ತುಂಗಸುತರಂಗಜಲಪ್ರವಾಹೈ
ರ್ಲಿಂಗಾಭಿಷೇಚನವಿಧಿಂ ವಿಧಿಭಿರ್ವಿದಿತ್ವಾ ।
ಶ್ರೀಚಂದನಾದಿಭಿರಲಂಕೃತಮೀಶಮಾಶು
ನತ್ವಾ ಪ್ರನೃತ್ಯತಿ ಶಿವೋತ್ಸವದರ್ಶನೇನ ॥೬೮॥

ಬ್ರಹ್ಮಾ ಶಿವಾರ್ಚನವಿಧಿಂ ನಿಯಮೈಃ ಸಮಾಪ್ಯ
ಭಕ್ತ್ಯಾ ಪ್ರದೋಷಸಮಯೇ ಶಿವಪೂಜನೇನ ।
ಪೂತೋ ಜಪತ್ಯನುದಿನಂ ಪ್ರಣವಾನ್ವಿತಾನಿ
ಪಂಚಾಕ್ಷರಾಣಿ ಶಿವನಾಮಮನೋಹರಾಣಿ ॥೬೯॥

---

ಆ ಲಕ್ಷ್ಮೀದೇವಿಯು ರಾತ್ರಿಯೆಲ್ಲಾ ನಾಟ್ಯವಾಡುತ್ತಾ ಮಧ್ಯೆಮಧ್ಯೇ ಇಂದುಮೌಳಿಯಾದ ಶಂಕರನನ್ನೂ, ಗೌರೀದೇವಿಯ ಪಾದಕಮಲವನ್ನೂ ಸ್ಮರಿಸಿ ಕೊಳ್ಳುತ್ತಾ ಮತ್ತೆ ಮತ್ತೆ ನರ್ತನಮಾಡುವಳು. ಸಂತೋಷದಿಂದ ಹಾಡುವಳು. ಹೀಗೆ ಶಂಕರಾರಾಧನೆಯಿಂದ ಸ್ವಾಮಿಯನ್ನು ತೃಪ್ತಿಪಡಿಸುವಳು. ॥೬೭॥

ಗಂಗಾದೇವಿಯೂ ಸಹ ಪ್ರದೋಷಕಾಲದಲ್ಲಿ ತನ್ನ ಎತ್ತರವಾದ ಅಲೆಗಳಿಂದ ಕೂಡಿದ ಪ್ರವಾಹದಿಂದಲೇ ಶಿವಲಿಂಗಾಭಿಷೇಕಮಾಡಿ, ಶ್ರೀಚಂದನವೇ ಮೊದಲಾದ ಪೂಜ್ಯವಸ್ತುಗಳಿಂದ ಶಿವಲಿಂಗವನ್ನಲಂಕರಿಸಿ, ಶಿವೋತ್ಸವದಿಂದ ಆನಂದಿತಳಾಗಿ ನಮಸ್ಕರಿಸುವಳು. ॥೬೮॥

ಬ್ರಹ್ಮನೂ ಸಹ ಇದೇ ರೀತಿ ಪ್ರದೋಷಕಾಲಗಳಲ್ಲಿ ಶಿವಾರ್ಚನೆ ಮಾಡುತ್ತಾ, ಭಕ್ತಿಯಿಂದ ಪ್ರತಿ ದಿನವೂ ಪ್ರಣವಮಂತ್ರ ಸಹಿತವಾದ ಮತ್ತು ಮನೋಹರವಾದ ಶಿವಪಂಚಾಕ್ಷರಗಳನ್ನು ಜಪಿಸುತ್ತಾ ತಾನು ಪರಿಶುದ್ಧನೆನಿಸಿಕೊಂಡಿರುವನು. ॥೬೯॥

ವಾಣೀ ಚ ವಾಗ್ಭಿರಮಿತಾಭಿರನಂತಕಾರ್ಯೈಃ ।
ಪ್ರಸ್ತೌತಿ ಶಂಕರಪದಾಂಬುಜಪೂಜನಂ ಚ ।
ಕೃತ್ವಾ ಪ್ರದೋಷಸಮಯೇಷ್ವಮರಾಂಗನಾಭಿಃ
ಸಾಕಂ ಪ್ರನೃತ್ಯತಿ ವಿಭೂತಿಪವಿತ್ರಗಾತ್ರಾ ॥೭೦॥

ದೇವಾಸ್ತಾವದುಮಾಸಹಾಯಚರಣಾಂಭೋಜಂ ಪ್ರದೋಷೇ ಮುಹು
ರ್ಬಿಲ್ವಾದ್ಯೈಃ ಕುಸುಮೈಶ್ಚ ಚಂದನವರೈಃ ಸಂಪೂಜ್ಯ ಜಾತೋತ್ಸವಾಃ ।
ತತ್ಪೂಜಾನಿರತಾಃ ಕದಾಪಿ ನ ಭವಂತ್ಯೇವಾಮೃತಾಸ್ವಾದನೇ
ಕೋ ವಾಸ್ಯಾದ್ವಿರತಃ ಪ್ರಮೋದವಿರತಃ ಕೋ ವಾ ಜಗನ್ಮಂಡಲೇ ॥೭೧॥

ಕಃ ಪ್ರಾಣೀ ಗಣನಾಥನಾಥಚರಣಾಂಭೋಜಾರ್ಚನಾನಾದರಃ
ಸಾಯಂಕಾಲಮವಾಪ್ಯ ದುರ್ಲಭತರಂ ಬ್ರಹ್ಮಣ್ಯಮಾಸಾದ್ಯ ಚ ।
ಕೃತ್ವಾ ಕೇವಲಮಂತ್ಯಜಾನಪಿ ಮಹಾಪಾಪಾಶ್ರಯಾನ್ ದುರ್ಮುಖಾನ್
ದುರ್ವೀರ್ಯಾರ್ನ್ ದುರದೃಷ್ಟಕೋಟಿಘಟಿತಾರ್ನ್ ಜಾರೋಪಜಾರೋದ್ಭವಾರ್ನ್
॥೭೨॥

---

ಸರಸ್ವತಿಯಾದರೋ, ತನ್ನ ಸುಂದರಮಯವಾದ ಅಮೃತವಾಣಿಯಿಂದ ಶಂಕರಪಾದಕಮಲವನ್ನು ಹೊಗಳಿ ಪೂಜಿಸುವಳು. ಮತ್ತು ಪ್ರದೋಷಕಾಲದಲ್ಲಿ ಇತರ ದೇವತಾಸ್ತ್ರೀಯರೊಡಗೂಡಿ, ವಿಭೂತಿಭಸಿತಗಾತ್ರಳಾಗಿ ನರ್ತನಮಾಡುವಳು. ॥೭೦॥

ದೇವತೆಗಳೂ ಸಹ ಪ್ರದೋಷಕಾಲದಲ್ಲಿ ಉಮಾಪತಿಯಾದ ಪರಶಿವನನ್ನು ಬಿಲ್ವವೇ ಮೊದಲಾದ ಪತ್ರಗಳಿಂದಲೂ, ನಾನಾವಿಧವಾದ ಕುಸುಮಗಳಿಂದಲೂ ಅರ್ಚಿಸುವರು. ಈ ಪೂಜಾಸಂಭ್ರಮದಲ್ಲಿ ಅವರು ಅಮೃತಪಾನವನ್ನು ಸಹ ದೂರಮಾಡುವರು. ಸಂತೋಷಾತಿಶಯದಲ್ಲಿ ಮುಳುಗಿದವರು ಇತರ ಕಾರ್ಯಗಳಿಗೆ ತೊಡಗುವುದು ಹೇಗೆ? ॥೭೧॥

ಪ್ರದೋಷಕಾಲದಲ್ಲಿ ಅವಶ್ಯಕವಾಗಿ ಪೂಜಿಸಲೇಬೇಕಾದ ಪರಬ್ರಹ್ಮವಸ್ತುವನ್ನು ಬಿಟ್ಟು, ಶಿವಪೂಜೆಯಲ್ಲಿ ಅನಾಸಕ್ತನಾಗಿ, ಕೇವಲ ಅಂತ್ಯಜರೂ, ಪಾಪಿಷ್ಠರೂ, ನಿರ್ವೀರ್ಯರೂ, ದುರದೃಷ್ಟಶಾಲಿಗಳೂ, ವ್ಯಭಿಚಾರಿಗಳೂ ಆದ ಜನರನ್ನು ಸೇವಿಸುವವನು ಪ್ರಾಣಿವರ್ಗಕ್ಕೆ ಸೇರಿದವನೇ ಅಲ್ಲವೆಂದು ಹೇಳಬಹುದು. ॥೭೨॥

ಮನ್ಯೇ ತಂ ಪುರುಷಾಧಮಂ ನರಖರಂ ದುರ್ವೀರ್ಯಪಾತೋದ್ಭವಂ ।
ಪಾಪಿಷ್ಠಾತಿವರಿಷ್ಠಮದ್ಯಪಕುಲೇ ಸ್ತ್ರೀಯೋನಿಗಂಧೋನ್ಮುಖಂ ।
ಯಃ ಸಾಯಂ ಶಿವಲಿಂಗಸಂಗರಹಿತಃ ಕಾರ್ಯಾಂತರವ್ಯಾಪೃತಃ ।
ಶಂಗಾರಾಧನಸಾಧನಾದಿವಿಮುಖೋ ಭೂಭಾರರೂಪಃ ಪರಂ ॥೭೩॥

ತದ್ವಂಶಃ ಪ್ರಲಯಂ ಪ್ರಯಾತಿ ಸಹಸಾ ತನ್ನಾಶಕೈಸ್ತೈರ್ವಿನಾ ।
ಬ್ರಹ್ಮಾಂಡಪ್ರಲಯೈಃ ಪ್ರದೋಷಸಮಯೇ ಯಃ ಶಂಕರಾನರ್ಚಕಃ
ತಚ್ಚಿತ್ತಂ ಖಲು ಪಿತ್ತನೀತಮನಿಶಂ ತಾತೋಽಪಿ ತಸ್ಯಾಧಮ ।
ಸ್ತನ್ಮಾತಾ ವ್ಯಭಿಚಾರಿಣೀ ಶುನಕಜಾ ಜಾತಾಪಿ ಸಾ ರಾಸಭೈಃ ॥೭೪॥

ಬ್ರಹ್ಮಾಂಡಾನಿ ಪುನಾತಿ ಶಂಕರಪರಃ ಸಾಯಂ ಶಿವಾರಾಧಕ ।
ಸ್ತತ್ತಾತಃ ಸುಕೃತೀ ಸತೀ ಚ ಜನನೀ ತತ್ಸೋದರೋ ಬ್ರಾಹ್ಮಣಃ ।
ತತ್ಸಂತಾನಸಮೃದ್ಧಿರಪ್ಯನುದಿನಂ ತಸ್ಯಾಭಿವೃದ್ಧಿಸ್ಸದಾ
ಸಂತೋಷೈರ್ಧನಧಾನ್ಯದಾರವಿಭವಾದ್ಯಭ್ಯುಚ್ಚಯಃ ಸಂತತಂ ॥೭೫॥

---

ಯಾವನು ಪ್ರದೋಷಕಾಲದಲ್ಲಿ ಶಿವಲಿಂಗಾರ್ಚನೆಯಿಂದ ವಿಮುಖನಾಗಿ, ಕಾರ್ಯಾಂತರಾಸಕ್ತನಾಗುವನೋ, ಅವನು ಪುರುಷಾಧಮನು. ಆತನು ಮನುಷ್ಯಾಕಾರದ ಕತ್ತೆಯು. ಮಹಾಪಾಪಿಷ್ಠರ ವಂಶದಲ್ಲಿ ಹುಟ್ಟಿ ಮದ್ಯಪಾಯಿಯಾಗಿ, ಸ್ತ್ರೀಯೋನಿಯ ವಾಸನೆಗೆ ಸಿಲುಕುವನೋ, ಆತನು ಭೂಭಾರಕನಾದ ಪುರುಷನೆಂದೇ ಹೇಳಬಹುದು. ॥೭೩॥

ಯಾರು ಪ್ರದೋಷಕಾಲದಲ್ಲಿ ಶಂಕರಾರ್ಚನೆಯನ್ನು ಮಾಡುವುದಿಲ್ಲವೋ, ಅವನ ವಂಶವು ಪ್ರಲಯ ಪರ್ಯಂತವಾಗಿ ಪದೇ ಪದೇ ನಾಶವಾಗುತ್ತಲೇ ಇರುವುದು. ಅವನ ಮನಸ್ಸು ಪಿತ್ತವಿಕಾರವಾಗಿ ಚಂಚಲವಾಗುವುದು. ತಂದೆಯು ಅಧಮ ವಂಶೀಯನಾಗಿಯೂ, ತಾಯಿಯು ವ್ಯಭಿಚಾರಿಣಿಯಾಗಿಯೂ, ನಾಯಿಯ ಅಥವಾ ಕತ್ತೆಯ ಜನ್ಮದಿಂದ ಭೂಮಿಯಲ್ಲಿ ಜೀವನ ನಡೆಸುವರು. ॥೭೪॥

ಶಂಕರಾರಾಧಕರಾದವರ ವಂಶವೇ ಪವಿತ್ರವಾದುದು. ಆತನು ಬ್ರಹ್ಮಾಂಡವನ್ನೇ ಪರಿಶುದ್ಧಗೊಳಿಸುವನು. ಶಂಕರಪೂಜಾಸಕ್ತನಾದವನ ತಂದೆಯು ಸುಕೃತಿಯಾದವನು. ತಾಯಿಯು ಪತಿವ್ರತೆ. ಅಣ್ಣತಮ್ಮಂದಿರು ಬ್ರಹ್ಮಮಾರ್ಗತತ್ಪರರು.

ತತ್ಪಾದಾಬ್ಜರಜಃ ಪರಂ ಶಿರಸಿ ಮೇ ತಸ್ಮೈ ನಮಃ ಸರ್ವದಾ
ಯಃ ಸಾಯಂ ಶಿವಲಿಂಗಪೂಜನರತಃ ಶ್ರಾಂತಃ ಪ್ರಣಾಮೈರ್ಮುಹುಃ ।
ನೃತ್ಯೋತ್ಸಾಹಕರಃ ಕರಾದಿವಿನಯೈರತ್ಯಾದರಾದಾದರ
ವ್ಯಾಹಾರೈರ್ಹರಶಂಕರ ಸ್ಮರಹರ ತ್ರಾಹೀತ್ಯಮುಂದೋತ್ಸವಃ ॥೭೬॥

ಸಂಗಸ್ತೇನ ಮನೂಸ್ತು ಸಂತತಮುಮಾಕಾಂತಂ ಪ್ರದೋಷೇಷು ಯಃ
ಕ್ಷೀರಾದ್ಯೈರಭಿಷಿಚ್ಯ ಲಿಂಗನಿಲಯಂ ಶ್ರೀಚಂದನಾಲೇಪನೈಃ ।
ಬಿಲ್ವೈರಪ್ಯಮಲೈರಮಂದವಿಲಸದ್ಗಂಧೈರ್ಮರಂದಾನ್ವಿತೈಃ
ಕುಂದ್ಯೈರರ್ಚಯತಿ ಪ್ರಕೃಷ್ಟವಿಭವೈಃ ಕರ್ಪೂರದೀಪಾದಿಭಿಃ ॥೭೭॥

ತತ್ಸಂಗೈರ್ದಿನಯಾಪನಂ ಭವತು ಮೇ ಯಃ ಸಾಯಮೀಶಾರ್ಚನ
ಧ್ಯಾನಾನಂದಘನೋ ವಿಭೂತಿಕವಚೋ ರುದ್ರಾಕ್ಷಭೂಷೋತ್ಸವಃ ।
ಜಿಹ್ವಾ ಶಂಕರನಾಮರೂಪ ಸುಸುಧಾಪಾನಾದರಾಸ್ವಾದನ
ವ್ಯಾಸಕ್ತಾಶಿವಲಿಂಗಪೂಜನಮಹೋತ್ಸಾಹಸ್ಯ ಸಾಯಂ ಮುಹುಃ ॥೭೮॥

---

ಸಂತಾನವಾದರೋ ಸಮೃದ್ಧಿಯಾಗಿ ಸದಾ ಸಂತೋಷದಿಂದಿರುವುದು. ಧನಧಾನ್ಯಾದಿಗಳ ಅಭಿವೃದ್ಧಿಯು ನಿರಂತರವಾಗಿ ತೋರಿಬರುತ್ತಿರುವುದು. ॥೭೫॥

ಯಾವನು ಪ್ರದೋಷಕಾಲದಲ್ಲಿ ಶಿವಲಿಂಗವನ್ನು ಭಕ್ತಿಯಿಂದರ್ಚಿಸಿ, ಪ್ರಣಾಮಾದಿಗಳಿಂದ ತಾನು ಆಯಾಸಪಡುವನೋ, ಯಾರು ನರ್ತನ, ಕೀರ್ತನ, ಇವುಗಳಿಂದ ಹರ, ಶಂಕರ, ಸ್ಮರಹರ, ತ್ರಾಹಿ ಮುಂತಾಗಿ ಹರನನ್ನು ಭಜಿಸುವನೋ, ಅಂತಹವನ ಪಾದರಜಸ್ಸು ನನ್ನ ತಲೆಯ ಮೇಲಿರಲಿ. ಅಂತಹವನಿಗೆ ಸರ್ವದಾ ನನ್ನ ನಮಸ್ಕಾರವಿರಲಿ. ॥೭೬॥

ಪ್ರದೋಷಕಾಲದಲ್ಲಿ ಶಿವಲಿಂಗವನ್ನು ಕ್ಷೀರಾದಿಗಳಿಂದ ಅಭಿಷೇಕಮಾಡಿ, ಬಿಲ್ವಪತ್ರೆ, ಗಂಧ, ಕುಂದಪುಷ್ಪ, ಶ್ರೀಗಂಧ, ಕರ್ಪೂರದೀಪ ಇವೇ ಮೊದಲಾದುವುಗಳಿಂದ ಅರ್ಚನೆ ಮಾಡುವ ಮಹಾತ್ಮನ ಸಹವಾಸವು ನನಗೆ ಸರ್ವದಾ ಇರಲಿ. ॥೭೭॥

ಯಾರು ಸಾಯಂಕಾಲದವೇಳೆ, ಈಶ್ವರಾರ್ಚನೆ, ಈಶ್ವರಧ್ಯಾನ, ವಿಭೂತಿ, ರುದ್ರಾಕ್ಷಿಧಾರಣ ಮುಂತಾದುವುಗಳಿಂದ ಪರಶಿವನನ್ನು ತೃಪ್ತಿಪಡಿಸುವರೋ,

**ವಾಸಸ್ಸ್ಯಾನ್ಮಮ ತಸ್ಯ ಮಂದಿರವರೇ ಯಃ ಸಾಯಮೀಶಾರ್ಚನಾ**
**ನಂದಾಪಾರತರಂಗಸಂಗತತನುರ್ಭೂತಿಪ್ರಭಾಭೂಷಿತಃ ।**
**ರುದ್ರಾಕ್ಷಾಭರಣಃ ಪ್ರತಿಕ್ಷಣಮಪಿ ಶ್ರೀಮನ್ನಿರೂಪಾಕ್ಷ ಮಾಂ**
**ರಕ್ಷ್ಯಂ ಪ್ರೇಕ್ಷ್ಯ ಪರೀಕ್ಷ್ಯ ಮಾಮಕಧಿಯಾ ರಕ್ಷೇತಿ ಯಃ ಸಂವದೇತ್ ॥೭೯॥**

**ಪಾತಾಲೇಪ್ಯುರಗೇಶ್ವರಪ್ರಭೃತಯಃ ಶ್ರೀಹಾಟಕೇಶಾರ್ಚನಂ ।**
**ಸಾಯಂ ಸಂತತಮೇವ ಶಾಂತಹೃದಯಾಃ ಸಾಯಂ ವಧೂಸಂಯುತಾಃ**
**ಧೂಪೈರ್ದೀಪಗಣೈಶ್ಚ ಚಂದನವರೈಃ ಪುಷ್ಪೈರಮಂದ್ಯೈರಪಿ ।**
**ಪ್ರಾಜ್ಯಾಜ್ಯಾನ್ನವರೈರಪಾರಮಧುರೈರ್ನಾಟ್ಯಾದಿಭಿಶ್ಚಾನ್ವಹಂ ॥೮೦॥**

**ಸಾಯಂಕಾಲಶಿವಾರ್ಚನಸ್ಯ ಮಹಿಮಾ ಕೇನಾಪಿ ನ ಜ್ಞಾಯತೇ**
**ತಸ್ಮಾದೇವ ವಿಮೋಹಮೇತ್ಯ ಬಹವಸ್ತ್ಯಕ್ತ್ವಾ ಶಿವಾರಾಧನಂ ।**

---

ಮತ್ತು ಯಾರ ನಾಲಿಗೆಯು ಕೇವಲ ಶಂಕರನಾಮಾಮೃತಪಾನಕ್ಕಾಗಿ ತ್ವರೆಗೊಂಡಿರುವುದೋ, ಯಾರಿಗೆ ಪ್ರದೋಷಾರಾಧನೆಯೇ ಉತ್ಸವದಂತಿರುವುದೋ ಅಂತಹವರ ಸಂಸರ್ಗದಿಂದಲೇ ನನ್ನ ಆಯುಸ್ಸು ಕಳೆಯುತ್ತಾ ಬರಲಿ. ॥೭೮॥

ಪ್ರದೋಷಕಾಲದಲ್ಲಿ ಶಿವಪೂಜಾನಿರತನಾಗಿ ಭಸ್ಮರುದ್ರಾಕ್ಷಿಗಳಿಂದೊಪ್ಪುತ್ತಾ ಪ್ರತಿಕ್ಷಣದಲ್ಲಿಯೂ ಯಾರು ಶರಣಾಗತನಾದ ತನ್ನನ್ನು ರಕ್ಷಿಸು, ಸಲಹು ಎಂಬ ದೀನವಾಕ್ಯಗಳಿಂದ ಶಂಕರನನ್ನೇ ಭಜಿಸುತ್ತಿರುವರೋ, ಅಂತಹವರ ಮನೆಯಲ್ಲಿ ನಾನು ಸರ್ವದಾ ವಾಸಮಾಡುವಂತೆ ಈಶ್ವರನು ಕರುಣಿಸಲಿ. ॥೭೯॥

ಪಾತಾಳಲೋಕದಲ್ಲಿಯೂ ಸಹ ಆದಿಶೇಷನೇ ಮೊದಲಾದವರು ಸುವರ್ಣಮಯವಾದ ಶಿವಲಿಂಗವನ್ನು ಪತ್ನಿಸಮೇತರಾಗಿ ಶಾಂತಮನಸ್ಸಿನಿಂದ ಆರಾಧಿಸುವರು. ಧೂಪದೀಪಾದಿಗಳಿಂದಲೂ, ಪತ್ರಪುಷ್ಪಾರ್ಚನಾದಿಗಳಿಂದಲೂ, ಮೃದುವಾದ ನೈವೇದ್ಯಾದಿಗಳಿಂದಲೂ, ಶ್ರಾವ್ಯವಾದ ಗೀತನಾಟ್ಯಾದಿಗಳಿಂದಲೂ ಶಂಕರನನ್ನು ತೃಪ್ತಿಪಡಿಸುವರು. ॥೮೦॥

ಪ್ರದೋಷಕಾಲದ ಶಿವಾರ್ಚನೆಯ ಮಹಿಮೆಯು ಯಾರಿಗೂ ಸರಿಯಾಗಿ ತಿಳಿಯದು. ಅದರಿಂದಲೇ ಅವರು ಹಾಗೆ ಶಿವಾರ್ಚನೆ ಮಾಡದೆ ಪಾಪಸಂಚಯದಿಂದ

ಕುಂಭೀಪಾಕಮುಪೇತ್ಯ ಗರ್ಭಜನಿತಕ್ಲೇಶಂ ಚ ಸಂಪ್ರಾಪ್ಯತೇ
ಸಂಸಾರಾರ್ಣವಮುಜ್ಜನೈರನುದಿನಂ ಕ್ಷಿಪ್ಯಂತಿ ಬಂಭಾರವೈಃ ॥೮೧॥

ಲೋಕೇ ಶಾಂಕರಸಂಗತಿಃ ಖಲು ಸದಾ ಸಾಯಂ ಶಿವಾರಾಧನ
ಧ್ಯಾನಾಯ ಪ್ರಭವತ್ಯವಶ್ಯಮುಸಕೃತ್ತತ್ಸಂಗತಸ್ತತ್ಫಲಂ ।
ಸಾ ಯಸ್ಯಾಸ್ತಿ ಸ ಏವ ಭಾಗ್ಯನಿವಹಾಧಾರಃ ಸುರಾರಾಧಿತೋ
ಯತ್ಪಾದಾಂಬುಜಪೂಜನೇನ ಭಗವಾನ್ ಫಾಲೇಕ್ಷಣಸ್ತುಷ್ಯತಿ ॥೮೨॥

ಆಕಲ್ಪಂ ಯದಿ ಧರ್ಮಕೋಟಿಭಿರಹೋರಾತ್ರಂ ಚ ಯೋ ನಿಯುತಾಂ
ಕಿಂ ತೈಃ ಸಾಯಮುಮಾಸಹಾಯಚರಣಾಂಭೋಜಾರ್ಚನಂ ಚೇದ್ಭವೇತ್
ಪಾತಿವ್ರತ್ಯಸಮಂ ಖಲು ವ್ರತಮಿದಂ ತ್ಯಾಗೇಸ್ಯ ಕಿಂ ದುರ್ಭಗೋ
ನ ಸ್ಯಾದೇವ ತತಃ ಕದಾಪಿ ನ ಪರಿತ್ಯಾಜ್ಯಂ ಶಿವಾರಾಧನಂ ॥೮೩॥

---

ಕುಂಭೀಪಾಕವೆಂಬ ನರಕಕ್ಕೆ ತುತ್ತಾಗುವರು. ಅಷ್ಟೇ ಅಲ್ಲದೆ ಸರ್ವದಾ ಸಂಸಾರ ಸಮುದ್ರಕ್ಕೆ ಸಿಕ್ಕಿ ಮುಳುಗಿದವರಾಗಿ ನಿತ್ಯವೂ ಕ್ಲೇಶಪಡುತ್ತಾ ಹಾಹಾಕಾರದಿಂದ ಜೀವನ ನಡೆಸುವರು. ॥೮೧॥

ಲೋಕದಲ್ಲಿ ಶಂಕರಸೇವಕರ ಸನ್ನಿಧಿಯೇ ಸತ್ಸನ್ನಿಧಿ. ಆದರಿಂದಲೇ ಮನುಷ್ಯನು ಈಶ್ವರಾರಾಧನೆ, ಈಶ್ವರಧ್ಯಾನ ಇವುಗಳ ಫಲವನ್ನು ಪಡೆಯುವನು. ಅಂತಹ ಸಹವಾಸವು ಯಾರಿಗೆ ಒದಗುವುದೋ ಆತನೇ ಭಾಗ್ಯಶಾಲಿಯು. ಆತನನ್ನೇ ದೇವತೆಗಳೂ ಸಹ ಪೂಜಿಸುವರು. ತನ್ನ ಭಕ್ತರ ಗಾಢಸೇವೆ ಮಾಡುವವರಿಗೇ ಶಂಕರನು ಅನುಗ್ರಹಪ್ರದನಾಗುವನು. ॥೮೨॥

ಪ್ರದೋಷಕಾಲದ ಶಿವಾರ್ಚನೆಯೊಂದು ನೆರವೇರಿಸಲ್ಪಟ್ಟರೆ ಅದರಿಂದ ಕಲ್ಪ ಪರ್ಯಂತವಾಗಿ ಅಹೋರಾತ್ರಿಗಳಲ್ಲಿ ತಪ್ಪದೆ ಆಚರಿಸಿದ ಧರ್ಮಕಾರ್ಯಗಳಿಂದ ಬರುವ ಸುಕೃತವೆಲ್ಲವೂ ಲಭಿಸುವುದು. ಸ್ತ್ರೀಯರಿಗೆ ಪಾತಿವ್ರತ್ಯ ಫಲವು ಅನಾಯಾಸವಾಗಿ ದೊರಕುವುದು. ಇದಕ್ಕಿಂತ ದೊಡ್ಡವ್ರತವು ಮತ್ತಾವುದೂ ಲೋಕದಲ್ಲಿಲ್ಲ. ಆದ್ದರಿಂದ ಎಷ್ಟೇ ಕಷ್ಟವಾದರೂ ಶಿವಾರಾಧನೆಯನ್ನು ಮಾತ್ರ ಎಂದಿಗೂ ಬಿಡಬಾರದು. ॥೮೩॥

**ಸಾಯಂಕಾಲಶಿವಾರ್ಚನೇನ ಭಗವನಾಂಸ್ತುಷ್ಟೋ ಯಥಾ ಶಂಕರಃ**
**ತದ್ವನ್ನಾನ್ಯವಿಶೇಷಕಾರನಿಯಮಾಚಾರೈಃ ಸ ತುಷ್ಯತ್ಯಪಿ ।**
**ತಸ್ಮಾತ್ಸಾಯಮುಮಾಸಹಾಯಭಜನಂ ಕೃತ್ವಾ ವಿಮುಕ್ತೋ ಭವೇ**
**ತ್ಪಾಪಾಪಾರಮಹಾಂಬುರಾಶಿಭಿರಪಿ ಪ್ರಾಪ್ನೋತಿ ಭಾಗ್ಯಾನಪಿ ॥೮೪॥**

**ಇತಿ ಶ್ರೀಶಿವರಹಸ್ಯೇ ತೃತೀಯಾಂಶೇ ಹರಾಖ್ಯೇ ಪೂರ್ವಾರ್ಧೇ ವೃದ್ಧಾಚಲರಾಜೇತಿಹಾಸ ಪ್ರದೋಷಪೂಜಾಮಹಿಮಾವರ್ಣನಂ ನಾಮ ಅಷ್ಟಚತ್ವಾರಿಂಶೋಽಧ್ಯಾಯಃ.**

---

ಪರಮೇಶ್ವರನು ಪ್ರದೋಷಾರ್ಚನೆಯಿಂದ ತೃಪ್ತಿಪಡುವಂತೆ ಮತ್ತಾವ ಕರ್ಮಗಳಿಂದಲೂ ಸಂತೋಷಪಡಲಾರನು. ಆದ್ದರಿಂದ ಸುಕೃತಿಯೆನಿಸಿದ ಮಾನವನು ಉಮಾಪತಿಯಾದ ಶಂಕರನನ್ನು ಪ್ರದೋಷಾರಾಧನೆಯಿಂದ ತೃಪ್ತಿಗೊಳಿಸಿದರೆ ಆತನು ಎಷ್ಟೇ ಪಾಪಕೋಟಿಯಿಂದ ಆವರಿಸಲ್ಪಟ್ಟಿದ್ದರೂ ಕೊನೆಗೆ ಅದರಿಂದ ಮುಕ್ತನೆನಿಸಿ ಶಿವಸಾಯುಜ್ಯವನ್ನು ಹೊಂದುವನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಎಂದು ಯಾಜ್ಞವಲ್ಕ್ಯಋಷಿಯು ರಾಜನಿಗೆ ಪ್ರದೋಷಪೂಜಾಮಹಿಮೆಯನ್ನು ವಿವರಿಸಿದನು. ॥೮೪॥

ಇಲ್ಲಿಗೆ ಶ್ರೀಶಿವರಹಸ್ಯದ ಹರನಾಮಕವಾದ ತೃತೀಯಾಂಶದ ಪೂರ್ವಾರ್ಧದಲ್ಲಿ ವೃದ್ಧಾಚಲರಾಜೇತಿಹಾಸವೆಂಬ ಪ್ರದೋಷ ಪೂಜಾಮಹಿಮಾಪ್ರತಿಪಾದಕವಾದ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಏಕೋನಪಂಚಾಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

**ರಾಜಾ ದ್ರವಿಡದೇಶಾನಾಂ ಶೂರಸೇನಾಧಿಪೋ ನೃಪಃ ।**
**ಚಕಾರ ಬಹುಧಾ ಧರ್ಮಾಂಛಿವಪೂಜನಲಕ್ಷಣಾನ್ ॥೧॥**

**ವಯೋ ನೀತಂ ಚ ತೈರೇವ ಸಾದರಂ ಶಂಕರಾರ್ಚನೈಃ ।**
**ಸಾಯಂ ಶಿವಾರ್ಚನಂ ತಸ್ಯ ವ್ರತಂ ಭೂಪಾಲಸತ್ತಮ ॥೨॥**

---

## ನಲವತ್ತೊಂಬತ್ತನೆಯ ಅಧ್ಯಾಯ

ಮತ್ತೆ ಯಾಜ್ಞವಲ್ಕ್ಯಮಹರ್ಷಿಯು ಜನಕರಾಜನಿಗೆ ಶಿವಧರ್ಮವನ್ನು ಬೋಧಿಸುತ್ತಾ ಒಂದು ಇತಿಹಾಸವನ್ನು ಆರಂಭಿಸಿದನು. ಹಿಂದೆ ದ್ರವಿಡದೇಶಕ್ಕೂ ಶೂರಸೇನದೇಶಕ್ಕೂ ಅಧಿಪತಿಯಾದ ಒಬ್ಬ ರಾಜನಿದ್ದನು. ಆತನು ನಾನಾವಿಧವಾದ ಶಿವಧರ್ಮಗಳನ್ನೂ ಶಿವಪೂಜೆಯನ್ನೂ ತಪ್ಪದೆ ನಡೆಸುತ್ತಿದ್ದನು. ॥೧॥

ಎಲೈ ರಾಜನೇ, ಆ ದ್ರಾವಿಡದೇಶದ ರಾಜನ ಆಯುಸ್ಸೆಲ್ಲವೂ ಭಕ್ತಿಪುರಸ್ಸರವಾದ ಶಿವಪೂಜೆಯನ್ನು ಮಾಡುವುದರಲ್ಲಿಯೇ ಕಳೆದುಹೋಗುತ್ತಿತ್ತು. ಆ ರಾಜನು ನಿತ್ಯವೂ ನಿಯಮದಿಂದ ಸಾಯಂಕಾಲದಲ್ಲಿ ಶಿವಪೂಜಾವ್ರತವನ್ನು ನಡೆಸುತ್ತಿದ್ದನು. ॥೨॥

ತಸ್ಮಿನ್ವ್ರತೇ ತಥಾ ತಸ್ಯ ವಿಶ್ವಾಸೋ ಮುಕ್ತಿದಾಯಕಃ ।
ತಥಾ ನಾನ್ಯವ್ರತೇ ರಾಜನ್ ತತ್ತುಲ್ಯಂ ವ್ರತಮೇವ ನ ॥೩॥

ತಸ್ಯ ವ್ರತಸ್ಯ ಮಹಿಮಾ ವೇದೇಷ್ವಪಿ ನಿರೂಪಿತಃ ।
ವಿಧಿರಪ್ಯವಿಶೇಷೇಣ ವೇದೇಷ್ವೇವ ಪ್ರಕೀರ್ತಿತಃ ॥೪॥

ವಿಧಾನಮಪಿ ವಕ್ಷ್ಯಾಮಿ ಸಾಯಂಕಾಲೇ ಶಿವಾರ್ಚನೇ ।
ತತ್ಫಲಾನ್ಯಪಿ ವಕ್ಷ್ಯಾಮಿ ವಿಶೇಷೇಣ ನೃಪೋತ್ತಮ ॥೫॥

ಪ್ರಾತರ್ಮಧ್ಯಾಹ್ನಕಾಲೇಽಪಿ ಮಧ್ಯೇಽಪಿ ಶಿವಪೂಜಕಃ ।
ಸಾಯಂ ಶಿವಾರ್ಚನಂ ಕೃತ್ವಾ ಭುಂಕ್ತೇ ಮಧ್ಯೇ ನ ಸರ್ವಥಾ ॥೬॥

---

ಅದರಿಂದ ಆ ರಾಜನು ನಿಶ್ಚಿಂತನಾಗಿಯೇ ಕಾಲಕಳೆಯುತ್ತಿದ್ದನು. ಶಿವ ಪೂಜಾವ್ರತದಿಂದಲೇ ಮುಕ್ತಿಯು ಲಭಿಸುವುದೆಂದು ಆ ರಾಜನಿಗೆ ಸಂಪೂರ್ಣ ನಂಬಿಕೆ ಇದ್ದಿತು. ನಿಜವಾಗಿಯೂ ಆ ಶಿವವ್ರತಕ್ಕೆ ಸಮಾನವಾದ ಬೇರೊಂದೂ ವ್ರತವಿರುವುದಿಲ್ಲವಷ್ಟೆ. ॥೩॥

ಆ ಶಿವವ್ರತದ ಮಹಿಮೆ ಎಷ್ಟು ಮಹತ್ತರವಾಗಿದೆ ಎಂಬುದನ್ನು ವೇದಗಳೂ ಸಹ ವಿವರಿಸಿವೆ. ಶಿವವ್ರತವಿಧಿಯೂ ವೇದಗಳಲ್ಲಿ ಸೂಕ್ಷ್ಮವಾಗಿ ಉಕ್ತವಾಗಿದೆ. ಆದ್ದರಿಂದ ಇನರ ವಿಚಾರವನ್ನು ಹೆಚ್ಚು ವಿಸ್ತಾರವಾಗಿ ಹೇಳಬೇಕಾಗಿಯೂ ಇಲ್ಲ. ॥೪॥

ಎಲೈ ರಾಜನೇ, ನಾನು ಅದೆಲ್ಲವನ್ನೂ ವಿವರಿಸುವೆನು. ಸಾಯಂಕಾಲದ ಸಮಯದಲ್ಲಿ ಮಾಡಬೇಕಾದ ಶಿವಾರ್ಚನೆಯ ವಿಧಿಯನ್ನೂ ವಿಸ್ತರಿಸಿ ಹೇಳು ತ್ತೇನೆ. ಕೇಳು. ॥೫॥

ಆ ಶಿವಪೂಜನ ವಿಧಿಯು ಈ ರೀತಿ ಇರುತ್ತದೆ. ಶಿವಪೂಜೆಯನ್ನು ಪ್ರಾತಃ ಕಾಲದಲ್ಲಿಯೂ ಮಧ್ಯಾಹ್ನಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಮಾಡಬೇಕು. ಈ ಮೂರು ಹೊತ್ತೂ ಪೂಜೆ ಆದಮೇಲೆ ಊಟಮಾಡಬೇಕು. ಮಧ್ಯೆ ಮಾಡ ಕೂಡದು. ॥೬॥

ಅಸ್ತಪೂರ್ವಮುಹೂರ್ತಂ ತು ಕೃತ್ವಾ ಶೌಚಾದಿಕಂ ಪರಂ ।
ಸ್ನಾತ್ವಾ ಶಿವೋದಕೇನೈವ ಕುರ್ಯಾದಾಚಮನಂ ಕ್ರಮಾತ್ ॥೭॥

ತತ್ಪೂರ್ವಂ ಭಸ್ಮ ಧೃತ್ವೈವ ನ ವಿನಾ ಭಸ್ಮಧಾರಣಂ ।
ಕುರ್ಯಾದಾಚಮನಂ ವಿಪ್ರೋ ಜಲಪಾನಂ ತು ತದ್ಯತಃ ॥೮॥

ಜಲಪಾನಾಧಿಕಾರೋಽಪಿ ಧೃತೇ ಭಸ್ಮನಿ ಜಾಯತೇ ।
ವಿನಾ ತೇನ ಜಲಂ ಪೀತ್ವಾ ರೇತಃಪಾನಾಘವಾನ್ ಭವೇತ್ ॥೯॥

ಅಭಸ್ಮನಾ ತು ನ ಸ್ಥೇಯಂ ಇತಿ ಯಾ ಶ್ರುತಿರಾದೃತಾ ।
ತಯಾ ಶ್ರುತ್ಯಾ ಯತೋ ನಿತ್ಯಂ ವಿಹಿತಂ ಭಸ್ಮಧಾರಣಂ ॥೧೦॥

ಮುಖಪ್ರಕ್ಷಾಲನಂ ಕೃತ್ವಾ ಸ್ನಾನಾತ್ಪೂರ್ವಮಪಿ ದ್ವಿಜೈಃ ।
ಭಸ್ಮನಾ ಘರ್ಷಯೇತ್ಫಾಲಂ ತದ್ಯಥಾ ನ ಪ್ಲುತಂ ಜಲೈಃ ॥೧೧॥

---

ಗ್ರಹ ನಕ್ಷತ್ರಗಳು ಅಸ್ತವಾಗುವುದಕ್ಕೆ ಒಂದು ಮುಹೂರ್ತ ಮುಂಚಿತವಾಗಿಯೇ ಹಾಸಿಗೆಯಿಂದ ಏಳಬೇಕು. ಅನಂತರ ಶೌಚವಿಧಿಗಳನ್ನೆಲ್ಲಾ ಪೂರೈಸಿ, ಶಿವತೀರ್ಥವೆನಿಸಿದ ನೀರಿನಲ್ಲಿ ಸ್ನಾನಮಾಡಿ, ವಿಧಿಗನುಸಾರ ಆಚಮನವನ್ನು ಮಾಡತಕ್ಕದ್ದು. ॥೭॥

ಆಚಮನವನ್ನು ಮಾಡುವುದಕ್ಕಿಂತ ಮೊದಲು ಭಸ್ಮವನ್ನು ಧರಿಸಬೇಕು. ಭಸ್ಮಧಾರಣವನ್ನು ಮಾಡಿಕೊಳ್ಳದೇ ಆಚಮನವನ್ನು ಮಾಡಕೂಡದು. ಏಕೆಂದರೆ ಆಚಮನವೂ ಜಲಪಾನವೇ ಆಗುತ್ತದೆಯಲ್ಲವೇ ? ॥೮॥

ಭಸ್ಮವನ್ನು ಧಾರಣೆಮಾಡಿದ ನಂತರವೇ ಜಲಪಾನಕ್ಕೆ ಅಧಿಕಾರಬರುವುದು. ಅದಕ್ಕಿಂತಲೂ ಮೊದಲು ಅಧಿಕಾರವೇ ಇರುವುದಿಲ್ಲ. ಒಂದುವೇಳೆ ಭಸ್ಮವನ್ನು ಧರಿಸದೆ ಜಲಪಾನಮಾಡಿದರೆ, ರೇತಸ್ಸನ್ನು ಪಾನಮಾಡಿದ ಪಾಪವು ಸಂಭವಿಸುವುದು. ॥೯॥

ಭಸ್ಮವನ್ನು ಧರಿಸದೇ ಇರಕೂಡದು ಎಂದು ಯಾವ ವಿಧಿ ಹೇಳುತ್ತದೆಯೋ ಅದೇ ವಿಧಿಯು ಅರ್ಥಿಕವಾಗಿ ಸರ್ವದಾ ಭಸ್ಮವನ್ನು ಧರಿಸಿರಲೇ ಬೇಕು ಎಂದು ವಿಧಿಸುತ್ತದೆ. ॥೧೦॥

ದ್ವಿಜರು ಪ್ರಾತಃಕಾಲ ಶೌಚಾದಿಗಳನ್ನು ತೀರಿಸಿದಬಳಿಕ, ಸ್ನಾನಮಾಡುವುದ

ಸ್ನಾನಕಾಲೇ ಭಾವಪೂತೋ ನಿವೇದ್ಯ ಜಲಮೀಶ್ವರೇ ।
ತೇನೈವಾಚಮನಂ ಕೃತ್ವಾ ನಿವೇದಿತಜಲೇನ ಹಿ ॥೧೨॥

ಸ್ನಾನಂ ಚ ಪ್ರತ್ಯಹಂ ಕುರ್ಯಾಜ್ಜಲೈಶ್ಶಿವನಿವೇದಿತೈಃ ।
ಕೋಷ್ಣೇನ ತೇನ ಕರ್ತವ್ಯಮಭಿಷೇಕೋದಕೇನ ವಾ ॥೧೩॥

ತತಃ ಸ್ನಾತ್ವಾ ಪ್ರಯತ್ನೇನ ಧೃತ್ವಾ ಭಸ್ಮಾಭಿಮಂತ್ರಿತಂ ।
ಪಶ್ಚಾದಾಚಮನಂ ಕುರ್ಯಾತ್ಪಶ್ಚಾದ್ವಸ್ತ್ರಸ್ಯ ಧಾರಣಂ ॥೧೪॥

ಪುನರಾಚಮ್ಯ ಸರ್ವಾಂಗಮುದ್ಧೂಲ್ಯ ಸಿತಭಸ್ಮನಾ ।
ತ್ರಿಪುಂಡ್ರಧಾರಣಂ ಕುರ್ಯಾತ್ಪಶ್ಚಾದ್ರುದ್ರಾಕ್ಷಧಾರಣಂ ॥೧೫॥

---

ಕ್ಕಿಂತ ಮೊದಲು ಹಣೆಗೆ ಭಸ್ಮವನ್ನು ಹಚ್ಚಿಕೊಳ್ಳಬೇಕು. ಆದರೆ ಆ ಭಸ್ಮವನ್ನು ನೀರಿನಲ್ಲಿ ಕಲಸಿ ಹಚ್ಚಬಾರದು. ||೧೧||

ಸ್ನಾನ ಮಾಡುವಾಗ ಮೊದಲು ಪರಿಶುದ್ಧವಾದ ಅಂತಃಕರಣದಿಂದ ಸ್ನಾನ ಜಲವನ್ನು ಪರಮೇಶ್ವರನಿಗೆ ಅರ್ಪಿಸಬೇಕು. ಮತ್ತು ಹಾಗೆಯೇ ಶಿವನಿವೇದಿತವಾದ ನೀರಿಂದ ಆಚಮನಮಾಡಬೇಕು. ||೧೨||

ಪ್ರತಿದಿನವೂ ಶಿವನಿವೇದಿತವಾದ ಅಥವಾ ಶಿವನಿಗೆ ಅಭಿಷೇಕವನ್ನು ಮಾಡಿರುವ ನೀರಿಂದಲೇ ಸ್ನಾನಮಾಡಬೇಕು. ಆ ನೀರು ಸ್ವಲ್ಪ ಕಾಯಿಸಿದ್ದರೂ ಬಾಧಕವಲ್ಲ. ||೧೩||

ಹಾಗೆ ಸ್ವಲ್ಪವೇ ಕಾಯಿಸಿದ ನೀರಿಂದ ಸ್ನಾನಮಾಡಿದ ಬಳಿಕ, ಭಸ್ಮವನ್ನು ಮಂತ್ರ ತಂತ್ರಗಳಿಂದ ಅಭಿಮಂತ್ರಿಸಿ ಹಚ್ಚಿಕೊಳ್ಳಬೇಕು. ಅನಂತರ ಆಚಮನವನ್ನು ಮಾಡಿ ಆಮೇಲೆ ವಸ್ತ್ರವನ್ನು ಧರಿಸಬೇಕು. ||೧೪||

ವಸ್ತ್ರವನ್ನು ಧರಿಸಿದಮೇಲೆ ಪುನಃ ಆಚಮನವನ್ನು ಮಾಡಿ ಭಸ್ಮಚೂರ್ಣವನ್ನು ಮೈಗೆಲ್ಲಾ ಸವರಿಕೊಳ್ಳಬೇಕು. ಹಾಗೆಯೇ ಲಕ್ಷಣವಾಗಿ ತ್ರಿಪುಂಡ್ರಾಕಾರವಾಗಿ ಭಸ್ಮವನ್ನು ಹಣೆಗೆ ಇಟ್ಟುಕೊಂಡು ರುದ್ರಾಕ್ಷಮಾಲೆಗಳನ್ನು ಯಥೋಚಿತವಾಗಿ ಅಂಗಗಳಲ್ಲೆಲ್ಲಾ ಧರಿಸತಕ್ಕದ್ದು. ||೧೫||

ತತಸ್ಸಂಧ್ಯಾಂ ಸಮಾಪ್ಯಾಶು ಶಿವಮಂದಿರಮಾವಿಶೇತ್ ।
ಪ್ರಕ್ಷಾಲಿತೇ ಪವಿತ್ರೇ ಚ ಶ್ರೀಮಹಾದೇವಮಂದಿರೇ ॥೧೬॥

ಉದಙ್ಮುಖಃ ಪ್ರಾಙ್ಮುಖೋ ವಾ ಯದ್ವಾ ಪಶ್ಚಾನ್ಮುಖೋ ದ್ವಿಜಃ ।
ಉಪವಿಶ್ಯ ಶಿವಂ ಧ್ಯಾಯೇಲ್ಲಿಂಗೇ ಸೋಮಾರ್ಧಶೇಖರಂ ॥೧೭॥

ಜಟಾಜೂಟತಟಾಘಾತೋದ್ಯತಚಂದ್ರಕಳಾಧರಂ ।
ತ್ರಿಣೇತ್ರಂ ನೀಲಕಂಠಂ ಚ ವರದಾಭಯಪಾಣಿನಂ ॥೧೮॥

ಸರ್ವಾಭರಣಸಂಯುಕ್ತಂ ದುಕೂಲಪರಿವೇಷ್ಟಿತಂ ।
ಹಿರಣ್ಯಬಾಹವೇ ತುಭ್ಯಂ ನಮ ಇತ್ಯನುಷಂಗತಃ ॥೧೯॥

ಧ್ಯಾತ್ವಾ ಭಕ್ತ್ಯಾ ಪ್ರಯತ್ನೇನ ದದ್ಯಾದಾಚಮನೀಯಕಂ ।
ತತಃ ಪಂಚಾಮೃತೈಃ ಕುರ್ಯಾದಭಿಷೇಕಂ ಪೃಥಕ್ಪೃಥಕ್ ॥೨೦॥

---

ಅನಂತರ ಸಂಧ್ಯಾವಂದನೆಯನ್ನು ಮಾಡಿದ ಬಳಿಕ ಶಿವಾಲಯವನ್ನು ಸೇರ ತಕ್ಕದ್ದು. ಆ ಶಿವಮಂದಿರವನ್ನು ಮೊದಲೇ ನೀರಿನಿಂದ ತೊಳೆದು ಚೊಕ್ಕಟ ವಾಗಿಯೂ ಪವಿತ್ರವನ್ನಾಗಿಯೂ ಮಾಡಿರಬೇಕಲ್ಲದೇ ಅಲಂಕರಿಸಿಯೂ ಇರಬೇಕು. ||೧೬||

ಆ ಶಿವಮಂದಿರದಲ್ಲಿ ಉತ್ತರ ದಿಕ್ಕಿಗೆ ಅಥವಾ ಪೂರ್ವಕ್ಕೆ ಅಥವಾ ಪಶ್ಚಿಮ ದಿಕ್ಕಿಗೆ ಎದುರಾಗಿ ಮುಖಮಾಡಿಕೊಂಡು ಕುಳಿತು, ಲಿಂಗದಲ್ಲಿ ಶಿವಸನ್ನಿಧಿಯು ಆವಾಹಿತವಾಗುವಂತೆ ಆ ಚಂದ್ರಶೇಖರನನ್ನು ಭಾವಶುದ್ಧನಾಗಿ ಧ್ಯಾನಮಾಡಬೇಕು. ||೧೭||

ಆ ಪರಮೇಶ್ವರನು ಜಟಾಧಾರಿಯಾಗಿರುವನಲ್ಲದೇ ಆ ಜಟೆಯಲ್ಲಿ ಅರ್ಧಾ ಕಾರವಾದ ಚಂದ್ರಕಲೆಯನ್ನು ಧರಿಸಿರುತ್ತಾನೆ. ಆತನು ಮುಕ್ಕಣ್ಣನು. ಆತನ ಕಂಠವು ವಿಷಪಾನದಿಂದ ನೀಲವರ್ಣವಾಗಿರುತ್ತದೆ. ಸ್ವಾಮಿಯ ಹಸ್ತಗಳು ವರದ ಮುದ್ರೆಯನ್ನೂ ಅಭಯ ಮುದ್ರೆಯನ್ನೂ ತೋರುತ್ತಿವೆ. ಹೀಗೆಂದು ಧ್ಯಾನಮಾಡಿ, ಓ ಹಿರಣ್ಮಯವಾದ ಭುಜವುಳ್ಳವನೇ! ನಿನಗೆ ನಮಸ್ಕಾರ, ಎಂದು ಧ್ಯಾನಿಸ ಬೇಕು. ||೧೮-೧೯||

ಹೀಗೆ ಭಕ್ತಿಯಿಂದ ಧ್ಯಾನಮಾಡಿ ಆವಾಹನೆ ಮಾಡಬೇಕು. ಅನಂತರ

ತತಃ ಪರಂ ರುದ್ರಸೂಕ್ತೈಃ ಶ್ರೀರುದ್ರಾಧ್ಯಾಯಪೂರ್ವಕೈಃ ।
ಅಭಿಷೇಕಶ್ಚ ಕರ್ತವ್ಯೋ ಜಲಾವಿಚ್ಛಿನ್ನಧಾರಯಾ ॥೨೧॥

ಪಶ್ಚಾದಾಚಮನಂ ದದ್ಯಾದ್ವಸ್ತ್ರಂ ದದ್ಯಾತ್ತತಃ ಪರಂ ।
ಪಶ್ಚಾದ್ವಿಭೂತಿರ್ಧಾತವ್ಯಾ ಶಿವಮಂತ್ರಾಭಿಮಂತ್ರಿತಾ ॥೨೨॥

ತತಃ ಪರಂ ಚಂದನಂ ಚ ದೇಯಂ ಕುಂಕುಮಕೇಸರೈಃ ।
ಕಸ್ತೂರಿಕಾದಿಭಿರ್ದ್ರವ್ಯೈಸ್ಸುಗಂಧೈರಪಿ ಸಂಯುತಂ ॥೨೩॥

ತತಃಪರಂ ಬಿಲ್ವಪತ್ರೈಃ ಕ್ಷಾಲಿತೈಶ್ಚ ತಿಲಾಕ್ಷತೈಃ ।
ಪುಷ್ಪೈರಪಾರೈರ್ಮಂದಾರಪ್ರಮುಖೈಶ್ಚ ಸಮರ್ಚಯೇತ್ ॥೨೪॥

ತತಃಪರಂ ಧೂಪದೀಪೌ ಕೃತ್ವಾ ನೈವೇದ್ಯಮುತ್ತಮಂ ।
ಮಧುರದ್ರವ್ಯಸಂಕೀರ್ಣಂ ದದ್ಯಾದಾಜ್ಯಸಮನ್ವಿತಂ ॥೨೫॥

---

ಆಚಮನಾಂತವಾಗಿ ಉಪಚರಿಸಿ, ಪಂಚಾಮೃತದಿಂದ ಪ್ರತ್ಯೇಕಪ್ರತ್ಯೇಕವಾಗಿ ಅಭಿಷೇಕಮಾಡಬೇಕು. ॥೨೦॥

ರುದ್ರಾಧ್ಯಾಯವನ್ನೂ, ರುದ್ರಸೂಕ್ತಗಳನ್ನೂ, ಪಾರಾಯಣಮಾಡುತ್ತಾ ಅಭಿಷೇಕಮಾಡಬೇಕು. ಅಭಿಷೇಕಸಮಯದಲ್ಲಿ ನೀರಿನಧಾರೆಯು ಲಿಂಗದ ಮೇಲೆ ಧಾರಾಕಾರವಾಗಿ ಬೀಳುತ್ತಿರಬೇಕು. ॥೨೧॥

ಹೀಗೆ ಅವಿಚ್ಛಿನ್ನವಾಗಿ ಲಿಂಗಕ್ಕೆ ಅಭಿಷೇಕ ಮಾಡಿದಮೇಲೆ ಶುದ್ಧಾಚಮನ ವನ್ನು ಸಮರ್ಪಿಸಿ, ಅನಂತರ ವಸ್ತ್ರವನ್ನು ಅರ್ಪಿಸಬೇಕು. ಆಮೇಲೆ ಶಿವಮಂತ್ರ ಗಳಿಂದ ಅಭಿಮಂತ್ರಿಸಿ ಪರಿಷ್ಕೃತವಾದ ವಿಭೂತಿಯನ್ನು ಧರಿಸಬೇಕು. ॥೨೨॥

ಅನಂತರ ಚಂದನ ಗಂಧವನ್ನೂ ಕುಂಕುಮಕೇಸರಿ, ಕಸ್ತೂರಿ, ಜವ್ವಾಜಿ ಮುಂತಾದ ಸುಗಂಧದ್ರವ್ಯಗಳನ್ನು ಶಿವಲಿಂಗಕ್ಕೆ ಅರ್ಪಿಸಬೇಕು. ॥೨೩॥

ಅನಂತರ ನೀರಿನಿಂದ ತೊಳೆದ ಪರಿಶುದ್ಧವಾದ ಬಿಲ್ವಪತ್ರೆಗಳಿಂದಲೂ, ಉತ್ತಮವಾದ ತಿಲಾಕ್ಷತೆಗಳಿಂದಲೂ ಮಂದಾರಪುಷ್ಪವೇ ಮೊದಲಾದ ಪುಷ್ಪರಾಶಿ ಯಿಂದಲೂ ಪೂಜಿಸಬೇಕು. ॥೨೪॥

ಹಾಗೆಯೇ ಧೂಪ ಮತ್ತು ದೀಪಗಳನ್ನು ಅರ್ಪಿಸಿದ ಬಳಿಕ ನೈವೇದ್ಯಕ್ಕಾಗಿ ಮಧುರದ್ರವ್ಯಗಳನ್ನೂ, ಮಹಾನ್ನವನ್ನೂ, ತುಪ್ಪ, ಹಾಲು ಮತ್ತು ಮೊಸರು ಗಳನ್ನೂ, ॥೨೫॥

ಪರಮಾನ್ನಾನಿ ದೇಯಾನಿ ಫಲಾನಿ ವಿವಿಧಾನ್ಯಪಿ ।
ಯದ್ಯದ್ರುಚಿಕರಂ ವಸ್ತು ತತ್ಸರ್ವಂ ವಿನಿವೇದಯೇತ್ ॥೨೬॥

ತತಃ ಕರ್ಪೂರದೀಪಾನಾಂ ನೀರಾಜನಸಮರ್ಪಣಂ ।
ದೀಪಾವಳಿಪ್ರದಾನಂ ಚ ಸರ್ವತಶ್ಶಿವಮಂದಿರೇ ॥೨೭॥

ತತಃ ಸ್ತುತ್ವಾ ಮಹಾದೇವಂ ಪ್ರಣಮ್ಯ ಚ ಪುನಃ ಪುನಃ ।
ಲೌಕಿಕೈರ್ವೈದಿಕೈರ್ಮಂತ್ರೈಶ್ಶಿವಧ್ಯಾನಪುರಸ್ಸರಂ ॥೨೮॥

ನಮೋ ನಮಸ್ತೇ ತ್ರಿದಶಾಧಿನಾಥ
ನಮೋ ನಮಸ್ತೇ ಪ್ರಮಥಾಧಿನಾಥ ।
ನಮೋ ನಮೋ ವಾಮನ ವಾಮದೇವ
ಸ್ಫುರಜ್ಜಟಾಜೂಟತಟೋಡುನಾಥ ॥೨೯॥

---

ಪರಮಾನ್ನ ಪಾಯಸಗಳನ್ನೂ, ನಾನಾವಿಧವಾದ ಹಣ್ಣುಹಂಪಲುಗಳನ್ನೂ, ಅಲ್ಲದೇ ಮತ್ತೆ ಬೇರೆ ಯಾವ ಯಾವ ರುಚಿಕರವಾದ ಪದಾರ್ಥಗಳುಂಟೋ, ಅವುಗಳೆಲ್ಲವನ್ನೂ ಪರಮೇಶ್ವರನಿಗೆ ಅರ್ಪಿತವಾಗಲೆಂದು ನೆನೆಯುತ್ತಾ ನಿವೇದಿಸಬೇಕು. ॥೨೬॥

ಆ ಬಳಿಕ ನೀರಾಜನಕ್ಕಾಗಿ ಕರ್ಪೂರದೀಪಗಳಿಂದ ಮಂಗಳಾರತಿಯನ್ನು ಮಾಡಬೇಕು. ಅಲ್ಲದೇ ಶಿವಾಲಯದ ಸುತ್ತಲೂ ಸಾಲುದೀಪಗಳನ್ನು ಹೊತ್ತಿಸಬೇಕು. ॥೨೭॥

ಅನಂತರ ಶಿವನನ್ನು ಧ್ಯಾನಮಾಡುತ್ತಾ ಸಾಷ್ಟಾಂಗ ಪ್ರಣಾಮಗಳನ್ನೂ ಪ್ರದಕ್ಷಿಣ ನಮಸ್ಕಾರಗಳನ್ನೂ ಮಾಡಬೇಕು. ಆಮೇಲೆ ವೇದೋಕ್ತವಾದ ಮಂತ್ರಗಳಿಂದಲೂ ಲೌಕಿಕವಾದ ಸ್ತೋತ್ರಪಾಠಗಳಿಂದಲೂ ಶಿವಧ್ಯಾನಮಾಡುತ್ತಾ ಸ್ತೋತ್ರಮಾಡಬೇಕು. ॥೨೮॥

"ಓ ದೇವತೆಗಳಿಗೆಲ್ಲಾ ಅಧಿಪತಿಯೇ, ನಿನಗೆ ಸಾಷ್ಟಾಂಗ ನಮಸ್ಕಾರ. ನೀನು ಪ್ರಮಥಗಣಗಳಿಗೆಲ್ಲಾ ಒಡೆಯನಾಗಿರುವೆ. ನೀನು ನಿನ್ನ ಜಟಾಜೂಟದಲ್ಲಿ ಚಂದ್ರನನ್ನು ಧರಿಸಿರ್ಪೀಯೆ. ನಿನಗೆ ಶತಶಃ ನಮಸ್ಕಾರ. ನೀನೇ ನಮ್ಮೆಲ್ಲರನ್ನೂ ಕಾಪಾಡಬೇಕು. ॥೨೯॥

ಸಂಸಾರರೂಪವಿವಿಧಾಮಿತದಂದಶೂಕ
ದಂಷ್ಟ್ರಾಭಿಘಾತಪರಿಪೀಡಿತಮಿಂದುಮೌಳೇ ।
ಪಾಹಿ ತ್ವದೀಯಮತಿದೀನಮಮುಂದ
ದುಃಖಮಾಧಿವ್ಯಥಾವಿಷವಿನಾಶಕ ದೀನಬಂಧೋ ॥೩೦॥

ಶ್ರೀವಿಶ್ವನಾಥ ಶರಣಾಗತವತ್ಸಲೇಶ
ತ್ವತ್ಪಾದಪದ್ಮಭಜನಾಯ ಮನಃ ಪ್ರವೃತ್ತಂ ।
ಪುಣ್ಯೈರಗಣ್ಯವಿಭವೈಸ್ತದಪಾರಪುಣ್ಯ
ನಿಕ್ಷೇಪಲಾಭಮನುವಾಂಛತಿ ತತ್ಪ್ರಯಚ್ಛ ॥೩೧॥

ದುರ್ವಾರದುಃಖಪರಿಹಾರಕರಂ ಭವಂತಂ
ಫಾಲೇಕ್ಷಣಂ ಭವಭಯಾಬ್ಧಿವಿಶೋಷಕಂ ಚ ।
ಜಾನಾತಿ ಚಿತ್ತಮಿತಿ ಮೇ ತದಪಾರಪುಣ್ಯ
ನಿಕ್ಷೇಪಲಾಭಮನುವಾಂಛತಿ ತತ್ಪ್ರಯಚ್ಛ ॥೩೨॥

---

ಓ ಚಂದ್ರಶೇಖರನೇ, ನೀನೇ ದೀನಾನಾಥರಿಗೆ ಗತಿಯಾಗಿದ್ದೀಯೆ. ನನ್ನನ್ನೂ ಕಾಪಾಡು. ನಾನೂ ಅತ್ಯಂತ ದೀನನಾಗಿದ್ದೇನೆ. ಈ ಸಂಸಾರವೆಂಬುದು ಮಹಾಸರ್ಪದಂತೆ ಇದೆ. ಸರ್ಪವು ತನ್ನ ವಿಷಮಯವಾದ ಹಲ್ಲಿನಿಂದ ಕಚ್ಚಿ ಪೀಡಿಸುವಂತೆ ಈ ಸಂಸಾರದಲ್ಲಿಯೂ ಅನೇಕ ಪ್ರಕಾರವಾದ ಪೀಡೆಗಳು ಬಂದು ನನ್ನನ್ನು ಜರ್ಜರಿತನನ್ನಾಗಿಯೂ ಪೀಡಿತನನ್ನಾಗಿಯೂ ಮಾಡಿವೆ. ಈ ಪೀಡೆಯಿಂದ ನನಗೆ ಅಪಾರವಾದ ದುಃಖವುಂಟಾಗಿದೆ. ನಾನು ಅತ್ಯಂತ ದೀನನಾಗಿದ್ದೇನೆ. ನೀನೇ ಈ ಸಮಸ್ತ ಸಂಕಟಗಳನ್ನೂ ಪರಿಹರಿಸಬಲ್ಲವನು. ನಿನ್ನನ್ನೇ ಶರಣುಹೊಕ್ಕಿದ್ದೇನೆ. ನನ್ನನ್ನು ಕಾಪಾಡು. ॥೩೦॥

ವಿಶ್ವನಾಥನೇ, ನೀನು ಶರಣಾಗತ ಸಂರಕ್ಷಕನಿದ್ದೀಯೆ. ನನ್ನ ಅಪಾರಪುಣ್ಯದಿಂದ ಇಂದು ನಿನ್ನನ್ನು ಸೇವೆಮಾಡಿ ಆರಾಧಿಸಲು ಪ್ರವರ್ತಿಸಿರುತ್ತೇನೆ. ಇದೇ ಪುಣ್ಯವು ಮತ್ತೂ ಅಭಿವೃದ್ಧವಾಗಲಿ ಎಂದು ನನ್ನ ಮನಸ್ಸು ಕೋರುತ್ತಿದೆ. ನೀನು ಇದೇ ಸದ್ಯೋಗವನ್ನೇ ನನಗೆ ಅನುಗ್ರಹಿಸು. ॥೩೧॥

ನನ್ನ ಚಿತ್ತವು ನಿನ್ನನ್ನೇ ಸಂಪೂರ್ಣವಾಗಿ ನಂಬಿರುತ್ತದೆ. ನೀನೇ ದುಷ್ಪರಿಹಾರ್ಯವಾದ ಕಷ್ಟಗಳನ್ನೂ ಪರಿಹರಿಸಬಲ್ಲೆ ಎಂದು ನನಗೆ ಭರವಸೆ ಇದೆ.

ಏತಾವದೀಶಚರಣಂ ಶರಣಂ ಪ್ರಪನ್ನಾಃ
ತತ್ರಾವತ್ಯೈವ ಸುಖಿನೋ ದಯಯಾ ತಯಾ ತೇ ।
ತತ್ರಾವದೀಶ ಮಮ ಚಿತ್ತಮಿದಂ ವಿಚಾರ್ಯ
ತ್ವತ್ಪಾದಪದ್ಮಭಜನಾಯ ಮನಃ ಪ್ರವೃತ್ತಂ ॥೩೩॥

ಅನ್ಯಾನಿ ಯಾನಿ ಕಮಲಾನಿ ಸರೋವರೇಷು
ತೇಷು ಪ್ರನಾಶಮುಪಯಾತಿ ಸುಗಂಧಲೇಶಃ ।
ಇತ್ಯಾದರೇಣ ಬಹುಧೈವ ವಿಚಾರ್ಯ ಚಿತ್ತಂ
ತ್ವತ್ಪಾದಪದ್ಮಭಜನಾಯ ಮನಃ ಪ್ರವೃತ್ತಂ ॥೩೪॥

ನಾನ್ಯನ್ಮಮಾಸ್ತಿ ಶರಣಂ ತರುಣೇಂದುಖಂಡಂ
ದಂಡಾಯಮಾನಕರಮಂಡಿತಮಂಡಲಾಂಸಂ ।

---

ನೀನೇ ಈ ಸಂಸಾರವೆಂಬ ಸಮುದ್ರವನ್ನು ಬತ್ತಿಸಿ ಒಣಗಿಸಬಲ್ಲೆ. ಮುಕ್ಕಣ್ಣ ನಾದ ನಿನ್ನನ್ನೇ ನನ್ನ ಮನಸ್ಸು ಮರೆಹೊಕ್ಕು ಪುಣ್ಯವೆಂಬ ನಿಧಿಯನ್ನು ಬೇಡು ತ್ತದೆ, ಅದನ್ನೇ ನೀನು ಕೊಡಬೇಕು. ॥೩೨॥

ಪ್ರಪಂಚದಲ್ಲಿ ಅನೇಕರು ನಿನ್ನ ಚರಣಕಮಲಗಳೇ ಗತಿಯೆಂದು ನಿನ್ನನ್ನು ಮರೆಹೊಕ್ಕು, ನಿನ್ನನ್ನು ಸೇವಿಸಿ ನಿನ್ನ ಅಲ್ಪ ದಯೆಯಿಂದಲೇ ಅತ್ಯಂತ ಸುಖಿಗಳಾ ಗಿರುವರೆಂದು ನನ್ನ ಮನಸ್ಸಿಗೆ ದೃಢ ನಂಬಿಕೆ ಇರುತ್ತದೆ. ಅದೆಲ್ಲವನ್ನೂ ಪರ್ಯಾ ಲೋಚಿಸಿ ನನ್ನ ಮನಸ್ಸು ಇಂದು ನಿನ್ನ ಚರಣಕಮಲಗಳ ಸೇವೆಯಲ್ಲೇ ಪ್ರವರ್ತಿಸಿರುತ್ತದೆ. ॥೩೩॥

ಸರೋವರಗಳಲ್ಲಿ ಬೇಕಾದಷ್ಟು ಕಮಲಗಳು ಬೆಳೆದಿರುತ್ತವೆ. ಆದರೆ ಅವು ಗಳಲ್ಲಿ ಎಲ್ಲಿಯೋ ಅಲ್ಪಾಲ್ಪ ಸೌರಭವು ಮಾತ್ರ ಇರುವುದಲ್ಲದೇ ಅದೂ ಅನಿತ್ಯವಾ ದುದು. ಆ ಸುಗಂಧಮಯವಾದ ಪುಷ್ಪಗಳೂ ಎಂದಾದರೊಂದು ದಿನ ನಾಶವಾಗತಕ್ಕ ವುಗಳೇ ಸರಿ. ಆದುದರಿಂದ ಅವುಗಳನ್ನು ಸೇವಿಸಿ ಅಥವಾ ಉಪಭೋಗಿಸಿ ಪ್ರಯೋ ಜನವಿಲ್ಲ, ಹೀಗೆಂದು ವಿಚಾರಮಾಡಿಕೊಂಡು ನನ್ನ ಮನಸ್ಸು ನಿನ್ನ ಚರಣವೆಂಬ ಕಮಲಗಳನ್ನೇ ಸೇವಿಸಲು ಪ್ರಾರಂಭಿಸಿರುತ್ತದೆ. ॥೩೪॥

ಭಗವಂತನೇ, ನಿನ್ನನ್ನು, ಚಂದ್ರಾರ್ಧಶೇಖರನನ್ನು, ಬಿಟ್ಟು ನನಗೆ ಆಶ್ರಯ ವಸ್ತುವು ಮತ್ತಾವುದೂ ಇರುವುದಿಲ್ಲ. ಆಜಾನುಬಾಹುವೂ, ಉನ್ನತಾಂಸನೂ,

ತ್ವತ್ಪಾದುಕೇ ಶರಣಮಿತ್ಯನುವಾರಮೇವ
ಜ್ಞಾತ್ವಾ ಭಜಾಮಿ ಭಗವಂತಮುಮಾಸಹಾಯಂ ॥೧೫॥

ಚಿತ್ತಂ ಮಮೇಶಚರಣಸ್ಮರಣೇ ಪ್ರವೃತ್ತಂ
ಜಿಹ್ವಾ ಮಹೇಶ್ವರಕಥಾಸಮುದೀರಣಾಯ ।
ಕರ್ಣೇ ಸದಾಶಿವಕಥಾಶ್ರವಣಪ್ರವೃತ್ತೌ
ಹಸ್ತೌ ಶಿವಾರ್ಚನವಿಧೌ ಮಮ ತೌ ಪ್ರವೃತ್ತೌ ॥೧೬॥

ಧನ್ಯಂ ಮನೋ ಮಮ ಶಿವಸ್ಮರಣಪ್ರವೃತ್ತಂ
ಪುಣ್ಯೈರಪಾರವಿಭವೈಸ್ತದುಪಾರ್ಜಿತಂ ಮೇ ।
ಪುಣ್ಯಾನಿ ತೇನ ಪುನರಪ್ಯಮಿತಾನಿ ತಾನಿ
ಸಂಭಾವಿತಾನ್ಯಪಿ ಶುಭಾನ್ಯಪಿ ಭಾವುಕಾನಿ ॥೧೭॥

ಯತ್ಕಲ್ಪಕೋಟಿಸಮುಪಾರ್ಜಿತಪುಣ್ಯಜಾತಂ
ತತ್ತಾವದೀಶಚರಣಾಂಬುಜಸೇವನಾಯ ।
ಜಾತಂ ತದೇವ ಮಮ ಭಾಗ್ಯಮಿತಿ ಸ್ಮರಾಮಿ
ಭೂಯಃ ಸ್ಮರಾಮಿ ಚಿರಮಾಶು ಹರ ಸ್ಮರಾರೇ ॥೧೮॥

---

ಗಿರಿಜಾರಮಣನೂ ಆದ ನೀನೇ ನನಗೆ ರಕ್ಷಕನೆಂದು ಪದೇ ಪದೇ ಬೇಡಿಕೊಳ್ಳುತ್ತೇನೆ. ನಿನ್ನ ಪಾದುಕೆಗಳನ್ನೇ ಸದಾ ಸೇವಿಸುತ್ತೇನೆ. ॥೧೫॥

ಪರಮೇಶ್ವರನ ಪಾದಾರವಿಂದಗಳನ್ನೇ ನನ್ನ ಮನಸ್ಸು ಧ್ಯಾನಿಸುತ್ತಿರುತ್ತದೆ. ನನ್ನ ನಾಲಿಗೆಯು ಶಿವಕಥೆಯನ್ನೇ ಹೇಳುವುದರಲ್ಲಿ ತತ್ಪರವಾಗಿರುತ್ತದೆ. ಕಿವಿಗಳು ಶಿವಕಥೆಯನ್ನೇ ಕೇಳುವುದರಲ್ಲಿ ಆಸಕ್ತವಾಗಿರುತ್ತವೆ. ನನ್ನ ಕೈಗಳು ಸದಾ ಶಿವನನ್ನು ಅರ್ಚಿಸುವುದರಲ್ಲಿಯೇ ತಲ್ಲೀನವಾಗಿರುತ್ತವೆ. ॥೧೬॥

ಶಿವಧ್ಯಾನಾಸಕ್ತವಾದ ನನ್ನ ಮನಸ್ಸಿಗೆ ಧನ್ಯತೆಯು ನನ್ನ ಅಪಾರ ಪುಣ್ಯರಾಶಿಯಿಂದ ಸಂಪಾದಿತವಾಗಿರುತ್ತದೆ. ಇದರಿಂದ ನಾನೇ ಕೃತಕೃತ್ಯನಾಗಿದ್ದೇನೆ. ಈ ಶಿವಧ್ಯಾನದಿಂದ ನನಗೆ ಇನ್ನೂ ಅನಂತವಾದ ಪುಣ್ಯಗಳು ಲಭಿಸುವುವು. ನನ್ನ ಮನವು ಇನ್ನೂ ಮಂಗಳಕರವಾದ ಮನೋಭಾವನೆಯನ್ನು ಪಡೆಯುವುದರಲ್ಲಿದೆ. ॥೧೭॥

ನನ್ನ ಅನಂತಕೋಟಿಜನ್ಮಗಳಲ್ಲಿ ಸಂಪಾದಿಸಿದ ಪುಣ್ಯರಾಶಿಯಿಂದ ಇಂದು ನನಗೆ ಶಿವಚರಣಕಮಲಗಳ ಆರಾಧನೆಯ ಯೋಗವು ದೊರೆತಿರುತ್ತದೆ. ಇದೇ

ಭೋ ಶಂಕರ ಸ್ಮರಹರಾಸುರವೀರ ಧೀರ
ಗೌರೀಮನೋಹರಣ ಪಾಪಹರ ಪ್ರವೀರ ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೩೯॥

ಕಾರುಣ್ಯಸಾಗರ ವಿಶೇಷಗುಣಾಂಬುರಾಶೇ
ಕಾಶೀಪತೇ ಕುಶಲಮೇವ ಮಮ ಪ್ರಯಚ್ಛ ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೪೦॥

ತ್ವಂ ದೀನವತ್ಸಲ ಇತಿ ಶ್ರುತಿಷು ಪ್ರಸಿದ್ಧಃ
ಸಿದ್ಧಾದಿಸೇವಿತ ಮಹೇಶ್ವರ ಶೂಲಪಾಣೇ ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೪೧॥

---

ನನ್ನ ಪರಮಭಾಗ್ಯವು. ಆದುದರಿಂದ ಪರಮೇಶ್ವರನೇ, ನಿನ್ನನ್ನೇ ಸದಾ ಧ್ಯಾನಿಸುವೆನು. ॥೩೮॥

ಶಂಕರನೇ, ನೀನು ಮನ್ಮಥಧ್ವಂಸಿಯಾಗಿದ್ದೀಯೆ. ದೇವತೆಗಳಿಗೆಲ್ಲರಿಗೂ ಅಧಿಪತಿಯು ನೀನೇ. ನೀನೇ ಗಿರಿಜಾರಮಣ ಯುದ್ಧಮಾಡುವುದರಲ್ಲಿ ನೀನೇ ಚತುರನು. ಈಗ ನಾನು ಮಹಾಪಾಪಸಾಗರದಲ್ಲಿ ಮುಳುಗಿದ್ದೇನೆ. ನನ್ನನ್ನು ಉದ್ಧಾರಮಾಡು. ನಾನು ಸಂಸಾರವೆಂಬ ಕಾಲಸರ್ಪದ ಬಾಯಿಗೆ ಸಿಕ್ಕಿಬಿದ್ದಿದ್ದೇನೆ. ನನ್ನನ್ನು ಕಾಪಾಡು. ॥೩೯॥

ಓ ಪರಮೇಶ್ವರನೇ, ನೀನು ದಯಾಸಾಗರನು. ನೀನು ಅನಂತ ಕಲ್ಯಾಣಗುಣಪರಿಪೂರ್ಣನೂ ಇದ್ದೀಯೆ. ನೀನೇ ಶ್ರೀಕಾಶೀಕ್ಷೇತ್ರಕ್ಕೆ ಅಧಿಪತಿಯಾಗಿದ್ದೀಯೆ. ನೀನು ನನಗೆ ಸದಾ ಮಂಗಲವನ್ನೇ ಅನುಗ್ರಹಿಸು. ॥೪೦॥

ನಿನ್ನನ್ನು ದೀನವತ್ಸಲನೆಂದು ವೇದಗಳೆಲ್ಲವೂ ಉದ್ಘೋಷಿಸಿ ಸ್ತುತಿಸುತ್ತವೆ. ತ್ರಿಶೂಲಪಾಣಿಯಾದ ನಿನ್ನನ್ನೇ ಸಿದ್ಧರೇ ಮೊದಲಾದ ದೇವತೆಗಳೂ ಸೇವಿಸುತ್ತಾ ಧನ್ಯರೆನಿಸಿದ್ದಾರೆ. ॥೪೧॥

ಶ್ರೀನೀಲಕಂಠ ಗಿರಿರಾಜಸುತೋಪಕಂಠ
ಸೋತ್ಕಂಠಮಿಂದುಕಲಿಕಾಭರಣಾರ್ಚನಾದೌ ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೪೨॥

ಕಾ ವಾ ಗತಿರ್ಮಮ ಮಹೇಶ್ವರ ಚಿಂತಿತಾಸ್ತಿ
ಶ್ರೀಕಾಲಕಾಲ ಶಿವಪೂಜಕಪೂಜಕಸ್ಯ ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೪೩॥

ಪಾಪಪ್ರವೃತ್ತಿರಪಿ ಮಾಸ್ತು ಭವತ್ಪದಾಬ್ಜ
ಪೂಜಾವಿಧಾನನಿರತಸ್ಯ ಶಿವಾಸಹಾಯ ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೪೪॥

ಯತ್ಸಂಚಿತಂ ವಿವಿಧಪಾಪಕುಲಂ ತದಾಶು
ನಾಶಂ ಪ್ರಯಾತು ಶಶಿಖಂಡವಿಮಂಡಿತಾಂಗ ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೪೫॥

---

ಓ ಪರಮೇಶ್ವರ, ನಿನ್ನ ಕಂಠವು ವಿಷಪಾನದಿಂದ ನೀಲವರ್ಣವಾಗಿರುತ್ತದೆ. ನಿನಗೆ ಭಗವತಿಯಾದ ಗಿರಿಜೆಯ ಸಹವಾಸದಲ್ಲಿಯೂ, ಚಂದ್ರಕಲೆಯನ್ನು ಆಭರಣವನ್ನಾಗಿ ಏರಿಸಿಕೊಳ್ಳುವುದರಲ್ಲಿಯೂ ಬಹಳ ಆಸಕ್ತಿ ಮತ್ತು ಪ್ರೀತಿ ಇರುತ್ತದೆ.॥೪೨॥

ಪರಮೇಶ್ವರನೇ! ನೀನು ಮೃತ್ಯುಂಜಯನಾಗಿದ್ದೀಯೆ. ನಾನು ನಿನ್ನ ಆರಾಧಕನೇ ಆಗಿದ್ದೇನೆ. ಮತ್ತು ನಾನು ನಿನ್ನ ಭಕ್ತರನ್ನೂ ಆದರಿಸುತ್ತೇನೆ. ನನಗೆ ಮುಂದೆ ಯಾವ ಗತಿಯು ದೊರೆಯಬೇಕೆಂಬ ಸಂಕಲ್ಪವಿದೆಯೋ? ನನ್ನ ಭವಿಷ್ಯವೇನು? ॥೪೩॥

ಓ ಗಿರಿಜಾ ಸಹಾಯನೇ! ನಿನ್ನ ಚರಣಕಮಲಗಳ ಸೇವೆಯಲ್ಲಿಯೇ ನಿರತನಾಗಿರುವ ನನಗೆ ಎಂದೂ ಪಾಪವಾಸನೆಯು ಹುಟ್ಟುವುದು ಬೇಡ. ಪಾಪಕರ್ಮದಲ್ಲಿ ಪ್ರವೃತ್ತಿಯೂ ಬೇಡ. ॥೪೪॥

ಪರಮೇಶ್ವರನೇ! ನೀನು ಚಂದ್ರಕಲೆಯಿಂದ ಅಲಂಕೃತನಾಗಿದ್ದೀಯೆ.

ಗರ್ಭಾಧಿವಾಸಜನಕಂ ದುರದೃಷ್ಟಮಸ್ಯ
ಯತ್ತಾವದಸ್ಯ ಮಮ ತದ್ವಿಲಯಂ ಪ್ರಯಾತು ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೪೬॥

ಯೋ ಯೋನಿಮಾರ್ಗವಿಷಮರ್ಗವಿನಿರ್ಗಮಾದಿ
ಹೇತುಸ್ಸ ತಾವದಧುನಾ ವಿಲಯಂ ಪ್ರಯಾತು ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೪೭॥

ದುರ್ಗಂಧಪೂರಪರಿಪೂರಿತಯೋನಿಭಾಗ
ಸಂಭೋಗಬುದ್ಧಿರಧುನಾ ವಿಲಯಂ ಪ್ರಯಾತು ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೪೮॥

---

ನನ್ನನ್ನು ಉದ್ಧರಿಸಿ ಕಾಪಾಡು. ನನ್ನಲ್ಲಿ ಅನೇಕ ವಿಧವಾದ ಪಾಪಗಳಿರಬಹುದು. ಅವುಗಳೆಲ್ಲವೂ ಜಾಗ್ರತೆ ನಾಶವಾಗುವಂತೆ ಅನುಗ್ರಹಿಸು. ॥೪೫॥

ನನ್ನ ಪಾಪವಶದಿಂದ ಮತ್ತೆ ಗರ್ಭದಲ್ಲಿ ವಾಸಮಾಡಿಸುವುದಕ್ಕೆ ಕಾರಣವಾದ ಯಾವ ದುರದೃಷ್ಟವು, ಸಂಸಾರವಾಸನೆಯು ಇರುತ್ತದೆಯೋ ಆ ವಾಸನೆಯು ಜಾಗ್ರತೆ ನಾಶವಾಗಲಿ. ನನಗೆ ಪುನಃ ಸಂಸಾರಸಂಬಂಧವು ಆಗುವುದು ಬೇಡ.॥೪೬॥

ಜನನವೆಂಬುದು ಮಹಾದುಃಖದಾಯಕವಾದುದು. ಸ್ತ್ರೀಯೋನಿಮಾರ್ಗವು ವಿಷಮಯವಾದ ವಿಷಮ ಕೋಟಿಮಾರ್ಗದಂತೆ ಇರುವುದು. ಅಲ್ಲಿಂದ ಹೊರಕ್ಕೆ ಹೊರಡುವುದೆಂದರೆ ಅತ್ಯಂತ ಯಾತನೆಯಲ್ಲವೇ! ಅಂಥ ಜನನಕ್ಕೆ ಕಾರಣವಾದ ಪಾಪವು ನಾಶವಾಗಿ ಹೋಗಲಿ. ಮತ್ತೆ ನಾನು ಜನ್ಮತಾಳುವುದು ಬೇಡ. ॥೪೭॥

ಸ್ತ್ರೀಯ ಕುತ್ಸಿತವಾದ ಅಂಗವೆಂದರೆ ಯೋನಿಯು. ಅಲ್ಲಿ ಯಾವಾಗಲೂ ದುರ್ವಾಸನೆಯು ಮನೆಮಾಡಿಕೊಂಡಿರುತ್ತದೆ. ಇಂಥ ಯೋನಿಯಲ್ಲಿ ಸಂಭೋಗ ಸುಖವನ್ನು ಅನುಭವಿಸಬೇಕೆಂಬ ದುರ್ಬುದ್ಧಿಯು ನನಗೆ ಹುಟ್ಟುವುದು ಬೇಡ. ನನ್ನಲ್ಲಿರುವ ಕಾಮವಾಸನೆಯು ನಾಶವಾಗಲಿ. ॥೪೮॥

ಯೇ ಯೇ ಪುರೀಷಜಲಸಂಕುಲಗರ್ಭವಾಸ
ದುರ್ವಾಸನಾಪರಿವೃತಾಃ ಪ್ರಲಯೋಸ್ತು ತೇಷಾಂ ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೪೯॥

ವಿಶ್ವೇಶನಾಮಸುಸುಧಾರಸಪಾನಪೀನಾ
ನಿತ್ಯಂ ಮಮಾಸ್ತು ರಸನಾ ಗಿರಿಜಾಸಹಾಯ ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೫೦॥

ಶ್ರೀಬಿಲ್ವಪಲ್ಲವವರೈರಪಿ ಪೂಜಿತಸ್ತ್ವಂ
ಮುಕ್ತಿಂ ಪ್ರದಾತುಮಪಿ ಶಂಕರ ಕಿಂ ಪ್ರವೃತ್ತಃ ।
ಮಾಮುದ್ಧರೋದ್ಧರ ಮಹಾಘಸಮುದ್ರಮಗ್ನಂ
ಸಂಸಾರಘೋರವಿಷಸರ್ಪಮುಖಾಭಿಲಗ್ನಂ ॥೫೧॥

ಮತ್ಪ್ರಾರ್ಥನೀಯಮಿದಮೇತದನಂತಜನ್ಮ
ಸಂಚೀರ್ಣಪುಣ್ಯಫಲಭೂತಮಭೂತಪೂರ್ವಂ ।

---

ಗರ್ಭವೆಂದರೆ ಮಹಾ ಅಸಹ್ಯವಾದದು. ಮೂತ್ರ, ಅಮೇಧ್ಯ ಮೊದಲಾದವುಗಳ ದುರ್ವಾಸನೆಯು ಅಲ್ಲಿ ಮುತ್ತಿಕೊಂಡಿರುತ್ತದೆ. ಇಂಥ ಗರ್ಭದಲ್ಲಿ ವಾಸಮಾಡಿಕೊಂಡು ಹುಟ್ಟಿದವರು ನಾಶವನ್ನೇ ಪಡೆಯಲಿ. ॥೪೯॥

ಓ ಗಿರಿಜಾನಾಯಕನೇ! ನನ್ನ ನಾಲಿಗೆಯು ನಿತ್ಯವೂ ಶಿವನಾಮವನ್ನು ಉಚ್ಚರಿಸಲಿ. ಶಿವನಾಮವೆಂಬ ಅಮೃತಪಾನದಿಂದ ನನ್ನ ಜಿಹ್ವೆಯು ಪರಿಪುಷ್ಟವಾಗಲಿ. ॥೫೦॥

ಶಂಕರನೇ, ನಿನ್ನನ್ನು ಕೇವಲ ಬಿಲ್ವದಳಗಳಿಂದ ಪೂಜಿಸಿದರೆ ಸಾಕು. ನೀನು ಪರಮಸದ್ಗತಿಯೆನಿಸಿದ ಮೋಕ್ಷವನ್ನು ಕೊಡುವುದಕ್ಕೆ ಸದಾ ಸಿದ್ಧನಾಗಿರುತ್ತೀಯಷ್ಟೆ! ॥೫೧॥

ಚಂದ್ರಕಲಾವತಂಸನೇ, ನಾನು ಪ್ರಾರ್ಥಿಸಿಕೊಳ್ಳುವುದು ಇದೊಂದೇ. ನಿನ್ನ ಪಾದವೆಂಬ ಕಮಲದ ಮಕರಂದದಲ್ಲಿ ನಾನು ಭ್ರಮರವೃತ್ತಿಯನ್ನು ಪಡೆಯ

ಸಾನಂದಮಿಂದುಶಕಲಾಕಲಿತಾವತಂಸ
ಪಾದಾರವಿಂದಮಕರಂದಮಧುವ್ರತತ್ವಂ ॥೫೨॥

ಸಾಪಾಯಮನ್ಯದಿತಿ ಮೇ ಮತಿರಾವಿರಾಸೀತ್
ತೇನ ತ್ವದೀಯಚರಣಾಂಬುಜಭಕ್ತಿರೇಕಾ ।
ಕಾಮಾಂತಕಾಸ್ತು ಮಮ ಕಾಮದ ಕಾಮಯೇಽಹಂ
ಕಾಮಾರಿಚಾರುಚರಣಾರ್ಚನಸಾಧನಾನಿ ॥೫೩॥

ನ ಬ್ರಹ್ಮಲೋಕಮಪಿ ವಾಂಛತಿ ಮಾನಸಂ ಮೇ
ವಾಣೀಮನೋರಮಣತಾಮಪಿ ಕಿಂ ಚ ಶಂಭೋ ।
ಲಿಂಗಾರ್ಚನೇ ಶಿವನಿವೇದಿತಭೋಜನೇಽಪಿ
ವಾಂಛಾಂ ಕರೋತಿ ತದಿಮಂ ವರಮದ್ಯ ದೇಹಿ ॥೫೪॥

---

ಬೇಕು. (ಅಂದರೆ ಸದಾ ನಿನ್ನ ಪಾದಸೇವಕನಾಗಬೇಕು.) ಇಂಥ ವೃತ್ತಿಯು ಲಭಿಸುವುದು ಸುಲಭವಾಗಿರುವುದಿಲ್ಲ. ಇದು ಲಭಿಸಬೇಕಾದರೆ ಅನೇಕ ಜನ್ಮಗಳಲ್ಲಿ ಪುಣ್ಯವನ್ನು ಸಂಪಾದಿಸಿರಬೇಕು. ಆ ಪುಣ್ಯಗಳ ಫಲವೇ ನಿನ್ನ ಸೇವೆಯ ಯೋಗವನ್ನು ಕೊಡುವುದು. ॥೫೨॥

ನನಗೆ ಇತರ ವಿಷಯಗಳೆಲ್ಲವೂ ನಿಸ್ಸಾರವಾದುವೆಂದೂ ಅಪಾಯಕಾರಿಗಳೆಂದೂ ವಿಮರ್ಶೆಯಿಂದ ತಿಳಿದಿರುತ್ತದೆ. ಆದುದರಿಂದ ಅವುಗಳಲ್ಲಿ ನನಗೆ ಅಪೇಕ್ಷೆ ಇಲ್ಲ. ನನಗೆ ಅಪೇಕ್ಷೆ ಇರುವುದು ಒಂದರಲ್ಲಿಯೇ. ನಿನ್ನ ಚರಣಕಮಲಗಳಲ್ಲಿ ಸದಾ ಭಕ್ತಿ ಇರಬೇಕು. ನಿನ್ನ ಪಾದಸೇವೆಯನ್ನು ಮಾಡಲು ನನಗೆ ಪೂಜೋಪಕರಣಗಳಿರಬೇಕು. ಕಾಮಿತಾರ್ಥನಾದ ನೀನು ಇಷ್ಟನ್ನು ಮಾತ್ರ ಅನುಗ್ರಹಿಸು. ಮತ್ತಿನ್ನೇನೂ ನನಗೆ ಬೇಕಾಗಿರುವುದಿಲ್ಲ. ॥೫೩॥

ನನಗೆ ಬ್ರಹ್ಮಲೋಕದಲ್ಲಿ ವಾಸಮಾಡಬೇಕೆಂಬ ಅಪೇಕ್ಷೆ ಇರುವುದಿಲ್ಲ. ಅಥವಾ ಆ ಸರಸ್ವತೀವಲ್ಲಭನ ಸ್ವರೂಪಪಡೆಯಬೇಕೆಂಬ ಬಯಕೆಯೂ ಇಲ್ಲ. ನನಗೆ ಶಿವಲಿಂಗವನ್ನು ಅರ್ಚನೆಮಾಡುವುದರಲ್ಲಿಯೂ, ಮತ್ತು ಶಿವನಿವೇದಿತವಾದ ಪ್ರಸಾದಭಕ್ಷಣದಲ್ಲಿಯೂ ಮುಖ್ಯಾಪೇಕ್ಷೆ ಇರುವುದು. ನನಗೆ ಇದೇ ಲಭಿಸಲೆಂಬ ವರವನ್ನು ಕೊಡು. ॥೫೪॥

ವೈಕುಂಠವಾಸಮಪಿ ನೇಚ್ಛತಿ ಮಾನಸಂ ಮೇ
ಶಂಭೋ ರಮಾರಮಣತಾಮಪಿ ಕಿಂ ತು ಭಕ್ತ್ಯಾ ।
ವಾಂಛತ್ಯಪಾರವಿಭವೈಶ್ಶಿವಲಿಂಗಪೂಜಾಂ
ಕರ್ತುಂ ಪ್ರದೋಷಸಮಯೇಷು ವಿಶೇಷತಸ್ತು ॥೫೫॥

ನ ಸ್ವರ್ಗಲೋಕಮಭಿವಾಂಛತಿ ಮಾನಸಂ ಮೇ
ಸ್ವರ್ಗಾಧಿಪತ್ಯಮಪಿ ಚಾರುಶಶಾಂಕಮೌಳೇ ।
ಪ್ರಾಣಪ್ರಯಾಣಸಮಯೇಽಪಿ ಶಿವಾರ್ಚನೇಚ್ಛಾಂ
ರೂಪಂ ಬಲಂ ಸ್ವಮಭಿವಾಂಛತಿ ಪುಣ್ಯಪುಂಜೈಃ ॥೫೬॥

ಜ್ಞಾತಂ ಚ ಚಿತ್ತಮಪಕೃದ್ಗಿರಿಶ ತ್ವಯಾ ಮೇ
ವೀರೇಶಲಿಂಗವಿಕಟಾನಿಕಟಾಟನೇನ ।
ನೀತಂ ವಯಶ್ಶಿವದಿನೇಷ್ವಶನಂ ವಿಹಾಯ
ತ್ವಲ್ಲಿಂಗಪೂಜನರತೇನ ನ ವಿಸ್ಮೃತಿಸ್ತೇ ॥೫೭॥

---

ನನ್ನ ಮನಸ್ಸು ವೈಕುಂಠದಲ್ಲಿ ವಾಸಮಾಡುವುದಕ್ಕೂ ಲಕ್ಷ್ಮೀಪತಿಯಾಗುವುದಕ್ಕೂ ಅಪೇಕ್ಷಿಸುವುದಿಲ್ಲ. ಅದೇ ಮನಸ್ಸು ಅತ್ಯಂತ ವೈಭವಪುರಸ್ಸರವಾಗಿ ಶಿವಲಿಂಗಪೂಜೆಯನ್ನು ಮಾಡಬೇಕೆಂದು ಅಪೇಕ್ಷಿಸುತ್ತದೆ. ||೫೫||

ನನ್ನ ಮನಸ್ಸು ಸ್ವರ್ಗವಾಸವನ್ನು ಬಯಸುವುದಿಲ್ಲ. ಸ್ವರ್ಗದಲ್ಲಿ ಆಧಿಪತ್ಯ ನಡೆಸಲು ಇಂದ್ರನಾಗಬೇಕೆಂತಲೂ ಇಚ್ಛಿಸುವುದಿಲ್ಲ. ಚಂದ್ರಶೇಖರನೇ! ಆ ಮನಸ್ಸು ಪ್ರಾಣಪ್ರಯಾಣ ಕಾಲದವರೆಗೂ, (ಮರಣಪರ್ಯಂತವೂ) ಶಿವಾರ್ಚಯನ್ನು ಮಾಡಲು ಅಪೇಕ್ಷಿಸುತ್ತದೆ. ಮತ್ತು ಅದಕ್ಕೆ ಬೇಕಾಗುವ ರೂಪ, ಛಲ, ಶರೀರಬಲ, ಇವುಗಳು ಬೇಕೆಂದು ಇಚ್ಛಿಸುತ್ತದೆ. ಇದು ನಿನ್ನ ದಯೆಯಿಂದಲೇ ದೊರೆಯಬೇಕು. ||೫೬||

ಪರಮೇಶ್ವರನೇ, ನೀನು ಸರ್ವಾಂತರ್ಯಾಮಿಯಾದುದರಿಂದ ನನ್ನ ಮನಸ್ಸಿನ ಧೋರಣೆಯು ನಿನಗೆ ಪದೇ ಪದೇ ತಿಳಿದೇ ಇರುತ್ತದೆ. ನಾನು ಸದಾ ವೀರೇಶಲಿಂಗದ ದರ್ಶನವನ್ನು ಮಾಡುತ್ತಿರುತ್ತೇನೆ. ಶಿವಯೋಗದ ದಿನಗಳಲ್ಲಿ ಉಪವಾಸಮಾಡಿಕೊಂಡು ನಿನ್ನ ಲಿಂಗವನ್ನು ಪೂಜಿಸುತ್ತಿರುತ್ತೇನೆ. ಇದು ಯಾವುದೂ ನಿನಗೆ ಮರೆತುಹೋಗಿರಲಾರದು. ||೫೭||

ದೇಶಾಂತರಸ್ಥಿತಗೃಹೀತವಿಲಾಸಿನೀ ಯಾ
ತತ್ಸಂಗಮೋಽಪಿ ನ ರತಿರ್ಮಮ ಯೌವನೇಽಪಿ ।
ತತ್ಕಿಂ ತ್ವಯಾ ನ ವಿದಿತಂ ಗಿರಿಜಾರ್ಧಜಾನೇ
ಜಾನೇ ಶಿವಾನ್ಯಮಶಿವಂ ಶಿವಪೂಜನೇನ ॥೫೮॥

ವಾಕ್ಪುಷ್ಪಜಾಲಮಸಕೃದ್ರುಚಿರಂ ಚಿರೇಣ
ಕಾಲೇನ ದತ್ತಮಪಿ ತುಭ್ಯಮಪಿ ತ್ವಯಾಪಿ ।
ತತ್ತದ್ಗೃಹೀತಮಸಕೃತ್ತವ ವಿಸ್ಮೃತಿಃ ಕಾ
ಕಾಕೋದರಾಭರಣ ಮಾ ಸ್ಮರ ಮಾಸ್ಮರಾಶು ॥೫೯॥

ಧತ್ತೂರಪುಷ್ಪನವಬಿಲ್ವದಳಾರ್ಕಪುಷ್ಪ
ಗಂಗಾಜಲಾದಿಸಿತಭೂತಿಕಣಾದಿಭಿಸ್ತ್ವಂ ।
ನಾರಾಧಿತೋಽಸಿ ಕಿಮು ಮಾರಮಣಾತಿಭಕ್ತ್ಯಾ
ತದ್ವಿಸ್ಮೃತಂ ಕಥಮಪಿ ಸ್ಮರ ವಿಶ್ವನಾಥ ॥೬೦॥

---

ನಾನು ದೇಶಾಂತರಸ್ಥಳಾದ ಸ್ತ್ರೀಯನ್ನು ತಂದು ವಿವಾಹಮಾಡಿಕೊಂಡಿದ್ದೇನೆ. ಹಾಗಿದ್ದರೂ ಈ ನನ್ನ ಯೌವನಕಾಲದಲ್ಲಿಯೂ ಕೂಡ ಅವಳೊಡನೆ ಸಂಭೋಗವಿಲಾಸಬೇಕೆಂಬ ಚಪಲವು ನನಗಿರುವುದಿಲ್ಲ. ಅದರಲ್ಲಿ ಸುಖವಿದೆ ಎಂದೂ ನನಗೆ ತೋರುವುದಿಲ್ಲ. ಶಿವಪೂಜೆಯನ್ನು ಬಿಟ್ಟು ಉಳಿದ ಎಲ್ಲಾ ವ್ಯವಹಾರಗಳೂ ಕಲ್ಯಾಣಕಾರಿಯಲ್ಲವೆಂತಲೇ ನನ್ನ ನಂಬಿಕೆ. ಗಿರಿಜಾರಮಣನೇ, ನಿನಗೆ ಇದೆಲ್ಲವೂ ವೇದ್ಯವೇ ಆಗಿರುವುದಷ್ಟೆ. ॥೫೮॥

ನಾಗಾಭರಣನೇ, ನಾನು ಮಾತೆಂಬ ಪುಷ್ಪಸಮೂಹವನ್ನು ನಿನ್ನಲ್ಲಿ ಪದೇ ಪದೇ ಅರ್ಪಿಸಿದ್ದೇನೆ (ಸ್ತುತಿಸಿದ್ದೇನೆ) ಅದೆಲ್ಲವನ್ನೂ ನೀನು ಸ್ವೀಕರಿಸಿದ್ದೀಯೆ, ಇವುಗಳನ್ನೆಲ್ಲಾ ನೀನು ಮರೆತುಬಿಟ್ಟೆಯಾ ? ಬೇಡ ಬೇಡ ಅವುಗಳನ್ನು ಮರೆಯದೇ ಸ್ಮರಿಸಿಕೊಂಡು ನನ್ನನ್ನು ಅನುಗ್ರಹಿಸು. ॥೫೯॥

ವಿಶ್ವನಾಥ! ನಾನು ಭಕ್ತಿಯಿಂದ ನಿನ್ನನ್ನು ಅರ್ಚಿಸಿರುವುದಿಲ್ಲವೇ ? ಧತ್ತೂರಪುಷ್ಪ, ಅರ್ಕಪುಷ್ಪ, ಬಿಲ್ವದಳ, ನಿರ್ಮಲವಾದ ಗಂಗಾಜಲ, ಶುಭ್ರವಾದ ಭಸ್ಮ ಇವುಗಳಿಂದ ಎಷ್ಟು ದಿನ ಪೂಜಿಸಿದ್ದೇನೆ. ಅದನ್ನು ಮರೆತುಬಿಟ್ಟೆಯಾ ? ಬೇಡ. ಮರೆಯಬೇಡ. ಅವುಗಳೆಲ್ಲವನ್ನೂ ದಯೆಯಿಂದ ಪರ್ಯಾಲೋಚಿಸು. ॥೬೦॥

ಏಕೈಕಬಿಲ್ವನವಪಲ್ಲವಕೋಮಲೇನ
ಲಿಂಗೇ ಪ್ರದೋಷಸಮಯೇ ತವ ವೀರನಾಥ ।
ದತ್ತೇನ ತೇನ ಚ ಚತುರ್ದಶಲೋಕಲೋಕ
ಸಂಪ್ಯತ್ವಮುಷ್ಯಫಲಮಲ್ಪಫಲಂ ತದೀಶ ॥೬೧॥

ಗಂಗಾತರಂಗವಿಮಲಾನಿಲಶೀತಲೇನ
ತೋಯೇನ ಯಾ ಶಿರಸಿ ತೇ ರಚಿತಾ ಸುಧಾರಾ ।
ಸಾ ವಿಸ್ಮೃತಾ ಕಥಮುಪಾರಮಣಾದ್ಯ ತಸ್ಯಾಃ
ಕಿಂ ವಾ ಫಲಂ ನ ಸುರಗೌರಿವ ಸಾ ಪ್ರವೃತ್ತಾ ॥೬೨॥

ವಿಶ್ವಾಸಬೀಜವಿಲಯಾಯ ಕಥಂ ಪ್ರವೃತ್ತಿಃ
ತತ್ತತ್ಫಲಾರ್ಪಣಸಮರ್ಥ ಕದರ್ಥನೇಯಂ ।
ಸಹ್ಯಾ ಕಥಂ ಮಮ ತವಾಪಿ ನ ನಾಮಕತ್ವ
ಮದ್ಯಾಪಿ ತೇ ಮಯಿ ಕಿಮತ್ರ ವದಾಮಿ ಶಂಭೋ ॥೬೩॥

---

ಓ ವೀರನಾಥ! ನಿನ್ನನ್ನು ಪ್ರದೋಷ ಸಮಯದಲ್ಲಿ ನೂತನವಾಗಿಯೂ ಕೋಮಲವಾಗಿಯೂ ಇರುವ ಬಿಲ್ವದಳಗಳಿಂದ ಅರ್ಚಿಸಿದರೆ ಅದಕ್ಕೆ ಎಷ್ಟು ಫಲವೆಂದು ಹೇಳೋಣ? ಹದಿನಾಲ್ಕು ಲೋಕಕ್ಕೂ ಪೂಜ್ಯನಾಗುವನೆಂದರೆ ಅದು ಕೇವಲ ಅಲ್ಪ ಅಥವಾ ಅದು ಇಂಥ ಮಹತ್ತರ ಪುಣ್ಯಕರ್ಮಕ್ಕೆ ಫಲವೇ ಅಲ್ಲವೆಂದೂ ಹೇಳಬಹುದು. ॥೬೧॥

ಉಮಾರಮಣನೇ, ನಿನಗೆ ಮಹಾಭಿಷೇಕವನ್ನೇ ಮಾಡಿದ್ದೇನೆ. ಮಂದವಾದ ಗಾಳಿಯಿಂದ ಶೀತಲವಾಗಿ ಮಾಡಲ್ಪಟ್ಟ ಗಂಗಾನದಿಯ ನೀರು ನಿನ್ನ ಶಿರೋ ಭಾಗದಲ್ಲಿ ಧಾರಾಕಾರವಾಗಿ ಸುರಿಯುವಂತೆ ಅಭಿಷೇಕಮಾಡಿದ್ದೇನೆ. ಅದು ನಿನಗೆ ಮರೆತುಹೋಯಿತೇ? ಆ ಪುಣ್ಯಕರ್ಮವು ಇನ್ನೂ ಏತಕ್ಕೆ ಕಾಮಧೇನುವಿನಂತೆ ಫಲವನ್ನು ಈಯುತ್ತಿಲ್ಲ? ॥೬೨॥

ಶಂಭುವೇ, ನೀನು ಆಯಾ ಪೂಜಾಫಲಗಳನ್ನು ಕೊಡುವುದಕ್ಕೆ ಅತ್ಯಂತ ಸಮರ್ಥನಿದ್ದೀಯೆ! ಅಂದಮೇಲೆ ನನ್ನಲ್ಲಿ ಅನುಗ್ರಹ ತೋರಲು ಏಕೆ ಇಷ್ಟು ವಿಲಂಬ ಮಾಡುವೆ? ಈ ರೀತಿ ಸಾವಕಾಶಮಾಡಿದರೆ ನಂಬಿಕೆಯು ದೃಢತೆಗೆ ಧಕ್ಕೆ ತಗಲು

ಯನ್ಯಸ್ತಿ ತಾನಿ ಪರಲೋಕಫಲಾನಿ ತೇಷಾಂ
ನಾದ್ಯಾಧುನಾ ಫಲಮಿತಿ ಶ್ರಮ ಏವ ಸೋಽಯಂ ।
ಸರ್ವೇಽಪ್ಸಿತಾರ್ಥಫಲದಾನಿ ಶಿವಾರ್ಚನಾನಿ
ಶ್ರೌತಾನಿ ತಾನಿ ಸಫಲಾನಿ ಸದಾಪಿ ಶಂಭೋ ॥೬೪॥

ಕೃತ್ಯಂ ಕಿಮಸ್ತಿ ಮರಣೋತ್ತರಪೌಷಧಾನಾಂ
ಸಂಜೀವನೀಫಲಮಪಿ ಶ್ರುತಮೇವ ಕಿಂ ನ ।
ಸಾ ಜೀವನಂ ಜನಯತೀತಿ ನಿಕೃಷ್ಟವಸ್ತು
ವಸ್ತುಪ್ರಕೃಷ್ಟಮಿದಮೀಶ ಶಿವಾರ್ಚನಂ ಹಿ ॥೬೫॥

ಆಮುಷ್ಮಿಕಾನ್ಯಪಿ ಫಲಾನ್ಯಮಿತಾನಿ ಶಂಭೋ
ತಾವದ್ಭವಂತು ಭಗವನ್ನಧುನಾಪಿ ತಾನಿ ।

---

ವುದಿಲ್ಲವೆ? ಅಥವಾ ನೀನು ನನ್ನವನಾಗುವುದಕ್ಕೆ ಸಮ್ಮತಿಸುವುದಿಲ್ಲವೇ? ನನ್ನವನಾಗಿರುವುದು ನಿನಗೆ ಸಹನೆಯಿಲ್ಲವೆ? ಏತಕ್ಕೆ ಅನುಗ್ರಹಿಸಲು ತಡವಾಗುತ್ತಿರುವುದು? ಇದಕ್ಕಿಂತಲೂ ಹೆಚ್ಚಾಗಿ ನಿನ್ನಲ್ಲಿ ಮತ್ತೇನು ಅರಿಕೆಮಾಡಲಿ? ॥೬೩॥

ಶಿವಾರ್ಚನೆಗೆ ಉತ್ತಮಲೋಕವಾಸಸಿದ್ಧಿಯೇ ಫಲವೆಂದು ಹೇಳುವುದಾದರೆ ಅದೆಲ್ಲವೂ ಈಗ ವ್ಯರ್ಥ. ಅವುಗಳು ಗಣನೆಗೆ ಬಾರತಕ್ಕವುಗಳು. ಅವುಗಳನ್ನು ಕಟ್ಟಿಕೊಂಡು ಈಗ ಆಗುವುದೇನು? ನನಗೆ ಅವು ಬೇಕಾಗಿರುವುದಿಲ್ಲ. ಅಲ್ಲದೇ ಶಿವಾರ್ಚನೆಗೆ ಸಕಲ ಇಷ್ಟಾರ್ಥಗಳೂ ಫಲವೆಂದು ವೇದದಲ್ಲಿಯೂ ಹೇಳಿರುತ್ತದೆಯಷ್ಟೆ. ಆ ಎಲ್ಲಾ ಫಲಗಳೂ ಶಿವಪೂಜೆಯಿಂದಲೇ ಸದಾ ಲಭಿಸುವುವಷ್ಟೆ. ॥೬೪॥

ಸಾಧಾರಣವಾದ ಔಷಧಗಳು ಮನುಷ್ಯನು ಮೃತನಾದಮೇಲೆ ಆತನಲ್ಲಿ ಯಾವ ಫಲವನ್ನೂ ಕೊಡಲಾರವು. ಆದರೆ ಸಂಜೀವನೌಷಧವು ವಿಚಿತ್ರವಾದದ್ದೆಂದು ನಾವು ಕೇಳಿರುವೆನು. ಆ ಸಂಜೀವನವು ಮೃತನನ್ನೂ ಜೀವಿಯನ್ನಾಗಿ ಮಾಡುತ್ತದೆಂದೂ ಕೇಳಿರುವೆವು. ಆದರೂ ಅದು ನಿಕೃಷ್ಟವಸ್ತು ತಾನೆ? ಆ ನಿಕೃಷ್ಟವಾದ ಸಂಜೀವನದಿಂದಲೇ ಇಷ್ಟು ಫಲವು ದೊರೆಯುತ್ತಿರಲು ಇನ್ನು ಶಿವಾರ್ಚನೆಯಿಂದ ಇನ್ನೆಷ್ಟು ದಿವ್ಯಫಲವು ಪ್ರಾಪ್ತವಾದೀತು? ಸಂಜೀವನಕ್ಕಿಂತಲೂ ಶಿವಾರ್ಚನೆಯು ಉತ್ಕೃಷ್ಟವೂ ಪವಿತ್ರವೂ ಆಗಿರುವುದಲ್ಲವೆ! ॥೬೫॥

ಶಂಭುವೇ, ಶಿವಾರ್ಚನೆಯಿಂದ ಆಮುಷ್ಮಿಕವಾದ (ಮರಣಾನಂತರ

ಸಂಭಾವಿತಾನಿ ನ ಫಲಾನಿ ಕಥಂ ಬಹೂನಿ
ಯೈಃ ಕೀರ್ತಿರತ್ರ ಬಹುಧಾ ಗಿರಿಶಪ್ರಸಾದಾತ್ ॥೬೬॥

ಏತಾವದೀಶ ಸಹನೀಯ ಮಯಾ ಯದುಕ್ತಂ
ತನ್ನಾಪರಾಧ ಇತಿ ಮಾನಯ ದೀನಬಂಧೋ ।
ಯೋ ನಿಷ್ಠುರಂ ವದತಿ ಕೋಽಪಿ ಶಿಶುಃ ಕುಮಾರಃ
ತದ್ರಕ್ಷಣಾಯ ಜನಕಃ ಖಲು ಸಂಪ್ರವೃತ್ತಃ ॥೬೭॥

ಸ್ನೇಹಸ್ತವಾಸ್ತಿ ಮಯಿ ಸಂತತಮಿತ್ಯವೈಮಿ
ತೇನೈವ ಜೀವನಮುಪೀಶ ಸ ಸಂತತೇರ್ಮೇ ।
ದೂರೀಕುರು ಪ್ರತಿಭವೇಽಪಿ ಭಯಾನಿ ಶಂಭೋ
ತ್ವಯ್ಯಸ್ತು ಭಕ್ತಿರನಿಶಂ ಮುಹುರಿಂದುಮೌಳೇ ॥೬೮॥

---

ಸಂಭವಿಸುವ) ಅನೇಕ ಪುಣ್ಯಫಲಗಳು ಪ್ರಾಪ್ತವಾಗುತ್ತವೆಯಷ್ಟೆ! ಅವುಗಳೆಲ್ಲವೂ ನನಗೆ ಈಗಲೇ ಲಭಿಸಲಿ. ನಿನ್ನ ಪ್ರಸಾದದಿಂದ ಎಷ್ಟೋ ಜನರಿಗೆ ಕೀರ್ತಿಯು ಅಂದರೆ ಆಮುಷ್ಮಿಕಫಲವು ಇಹಲೋಕದಲ್ಲಿರುವಾಗಲೇ ಪ್ರಾಪ್ತವಾಗಿರುವುದಲ್ಲವೆ? ಹಾಗೆಯೇ ನನಗೂ ಪ್ರಸನ್ನನಾಗಿ ಅನುಗ್ರಹಮಾಡು. ॥೬೬॥

ಈಶನೇ, ನೀನು ಮಹಾತಾಳ್ಮೆಯುಳ್ಳವನು. ಈಗ ನಾನು ಬಹಳ ಅವಿನಯವನ್ನೂ ತೋರ್ಪಡಿಸುತ್ತಿರಬಹುದು. ನಾನು ಅಪರಾಧಕರವಾದ ಮಾತನ್ನು ಹೇಳಿದ್ದರೂ ಅವುಗಳು ಅಪರಾಧವಲ್ಲವೆಂದು ಮನ್ನಿಸಿ ಕಾಪಾಡು. ಅಲ್ಲದೇ ನೀನು ದೀನಸಂರಕ್ಷಕನೂ ಆಗಿದ್ದೀಯೆ. ಈಗ ಅತ್ಯಂತ ದೀನನಾದ ನನ್ನನ್ನು ಕ್ಷಮಿಸಿ ಕಾಪಾಡು. ಪ್ರಪಂಚದಲ್ಲಿ ತಂದೆಯಲ್ಲಿ ಮಗನು ನಿಷ್ಠುರವಾಗಿ ಮಾತನ್ನಾಡಿದರೂ ತಂದೆಯು ಆತನನ್ನು ಕ್ಷಮಿಸಿ ಮಗನನ್ನು ಕಾಪಾಡುವುದಿಲ್ಲವೇ. ಎಷ್ಟೇ ಆದರೂ ಪುತ್ರನು ಶಿಶುವೆಂದು ಕ್ಷಮಿಸಿ ಕಾಪಾಡಬೇಕಲ್ಲವೇ? ಹಾಗೆಯೇ ನನ್ನನ್ನೂ ಮನ್ನಿಸಿ ರಕ್ಷಿಸು. ॥೬೭॥

ಚಂದ್ರಮೌಳಿಯೇ, ನಿನ್ನ ವಾತ್ಸಲ್ಯವು ಸತತವೂ ನನ್ನ ಮೇಲೆ ಇರುತ್ತದೆಂದು ನಾನು ನಂಬಿಯೇ ಜೀವಿಸಿಕೊಂಡಿರುತ್ತೇನೆ. ಅನ್ಯಥಾ ನನಗೆ ಜೀವವನ್ನು ಧರಿಸಿಕೊಂಡಿರಲು ನೆಮ್ಮದಿ ಇರುವುದಿಲ್ಲ. ಹಾಗೆಯೇ ನನ್ನ ಮೇಲೆ ಇನ್ನೂ ಹೆಚ್ಚು

ಅದ್ಯ ಪ್ರಭೃತ್ಯಮಿತಪಾತಕರಾಶಿಭೀತಿಃ
ನಾಸ್ತೀತಿ ಮೇ ಹರ ವಿಭಾತ್ಯನುವಾರಮಸ್ಯ ।
ಕಲ್ಯಾಣರಾಶಿರುಪಪನ್ನ ಇತಿ ಸ್ಮರಾಮಿ
ಸಂಪತ್ಸಮೂಹಸಹಿತೋಽಪಿ ಪದೇ ಪದೇ ಮೇ ॥೬೯॥

ಇತಿ ಪ್ರಸಾದ್ಯ ಗೌರೀಶಂ ಪ್ರಣಮ್ಯ ಚ ಪುನಃ ಪುನಃ ।
ನೃತ್ಯಂ ಕಾರ್ಯಂ ಮಹೇಶಾಗ್ರೇ ಶಿವನಾಮಪುರಸ್ಸರಂ ॥೭೦॥

ಪುನಃ ಪ್ರಣಮ್ಯ ಗೌರೀಶಂ ಪ್ರಕ್ಷಾಲ್ಯ ಶಿವಮಂದಿರಂ ।
ಕೃತ್ವಾ ಪೂಜಾಂ ಯಥಾಶಕ್ತಿ ಪೂಜನಂ ವಿನಿವೇದಯೇತ್ ॥೭೧॥

ಹೋಮಶ್ಚ ವೈಶ್ವದೇವಶ್ಚ ಶಿವನೈವೇದ್ಯಶೇಷತಃ ।
ಕರ್ತವ್ಯಃ ಪಾವಕೇ ಶೈವೈಃ ಸಘೃತೇನ ಘೃತೇನ ವಾ ॥೭೨॥

---

ವಾತ್ಸಲ್ಯವನ್ನು ತೋರಿಸಿ ನನ್ನ ಸಕಲ ಜನ್ಮಗಳ ಭಯವನ್ನೂ ಪರಿಹರಿಸು. ಅಲ್ಲದೇ ನಿನ್ನಲ್ಲಿ ನನಗೆ ಸತತವೂ ದೃಢಭಕ್ತಿ ಇರುವಂತೆಯೂ ಅನುಗ್ರಹಿಸು. ॥೬೮॥

ನನಗೆ ಇನ್ನು ಮುಂದೆ ಯಾವ ಪಾಪದ ಭೀತಿಯೂ ಇರುವುದಿಲ್ಲೆಂದು ನಂಬಿರುತ್ತೇನೆ. ಈ ಶಿವಪೂಜೆಯಿಂದ ನನಗೆ ಸಂಪತ್ಸಮೂಹವು ಪ್ರಾಪ್ತವಾಗುವುದೆಂದೂ ಆಶಿಸುತ್ತೇನೆ. ಹಾಗೆಯೇ ನನ್ನನ್ನು ಅನುಗ್ರಹಿಸು.'' ॥೬೯॥

ಹೀಗೆ ಅನೇಕರೀತಿಯಿಂದ ಸ್ತುತಿಸಿ ಪರಶಿವನನ್ನು ಸಂತುಷ್ಟನನ್ನಾಗಿ ಮಾಡಬೇಕು. ಮತ್ತು ಪದೇ ಪದೇ ನಮಸ್ಕರಿಸಿ ಶಿವನಾಮಭಜನಮಾಡುತ್ತಾ ನಾಟ್ಯವಾಡಬೇಕು. ॥೭೦॥

ಮತ್ತೆ ಮತ್ತೆ ನಮಸ್ಕರಿಸುತ್ತಾ ಆ ಶಿವಾಲಯವನ್ನು ಚೊಕ್ಕಟಮಾಡಬೇಕು. ಪೂಜೆಮಾಡಿ ಉಳಿದ ಕಸವನ್ನು ತೆಗಿಸಬೇಕು. ಅನಂತರ ಪುನಃ ಪೂಜೆ ಮಾಡಿ ಸಕಲ ಕರ್ಮವನ್ನೂ ಶಿವನಿಗೇ ಅರ್ಪಿಸಬೇಕು. ॥೭೧॥

ಅನಂತರ ಆ ಶಿವನಿವೇದಿತವಾದ ಅನ್ನ ಮುಂತಾದ ದ್ರವ್ಯಗಳಿಂದ ಹೋಮಹವನಗಳನ್ನು ವೈಶ್ವದೇವವನ್ನೂ ನಡೆಸಬೇಕು. ಶಿವಭಕ್ತರ ಕೈಯಿಂದಲೇ ಆಜ್ಯಮಿಶ್ರಿತವಾದ ದ್ರವ್ಯಗಳಿಂದ ಅಥವಾ ಕೇವಲ ಆಜ್ಯದಿಂದ ಅಗ್ನಿಯಲ್ಲಿ ಹೋಮ ಮಾಡಿಸಬೇಕು. ॥೭೨॥

ಭವಾದ್ಯೈರ್ದೇವಶಬ್ದಾದ್ಯೈಃ ಸ್ವಾಹಾಂತೈರ್ಜುಹುಯಾತ್ತತಃ ।
ಪತ್ನೀಶಬ್ದೋದಿತ್ತೈರೇವ ಸ್ವಾಹಾಂತೈರ್ಜುಹುಯಾತ್ಪುನಃ ॥೭೩॥

ಪಶ್ಚಾದಾಹುತಿದಾನಂ ಸ್ಯಾತ್ಪಿತೃಭ್ಯೋಽಪಿ ಸ್ವಧಾಸ್ತ್ವಿತಿ ।
ತೈರೇವ ತರ್ಪಣಂ ಕಾರ್ಯಂ ಹೋಮಾತ್ಪೂರ್ವಂ ವಿಶೇಷತಃ॥೭೪॥

ಹೋಮೋತ್ತರಂ ವಾ ಕರ್ತವ್ಯಂ ಸಸ್ಯಾತ್ಕಾಲದ್ವಯೇ ತತಃ ।
ತತಶ್ಶಂಕರನೈವೇದ್ಯಭೋಜನಂ ಶಾಂಭವೈಸ್ಸಹ ॥೭೫॥

ತತಶ್ಶಿವಕಥಾಲಾಪೈರ್ನಿಶಾ ನೇಯಾಪಿ ಕಾಚನ ।
ಏವಂ ನಿತ್ಯಮಿದಂ ಕಾರ್ಯಂ ಸಾಯಂಕಾಲೇ ಶಿವಾರ್ಚನಂ ॥೭೬॥

---

ಹೋಮವನ್ನು ಭವಾದಿನಾಮಗಳಿಗೆ ದೇವಶಬ್ದವನ್ನು ಸೇರಿಸಿಕೊಂಡು ಅಂತ್ಯದಲ್ಲಿ ಸ್ವಾಹಾಕಾರವನ್ನು ಹೇಳುತ್ತಾ ಮಾಡಬೇಕು. ಅನಂತರ ಅದೇ ಭವಾದಿ ಶಬ್ದಗಳಿಗೆ ದೇವಶಬ್ದದೊಡನೆ ಪತ್ನೀಶಬ್ದವನ್ನೂ ಸೇರಿಸಿಕೊಂಡು ಸ್ವಾಹಾಕಾರದಿಂದ ಹೋಮಮಾಡಬೇಕು. ॥೭೩॥

ಅನಂತರ ಸ್ವಧಾಸ್ತು ಎಂಬುದಾಗಿ ಹೇಳುತ್ತಾ ಪಿತೃಗಳಿಗೆ ಆಹುತಿಯನ್ನು ಸಮರ್ಪಿಸಬೇಕು. ಅಲ್ಲದೇ ಹಿಂದೆ ಹೇಳಿದ ರೀತಿಯಲ್ಲಿಯೇ ಭವಾದಿಶಬ್ದಗಳನ್ನು ಹೇಳುತ್ತಾ ಹೋಮಕ್ಕಿಂತ ಮುಂಚಿತವಾಗಿಯೇ ತರ್ಪಣವನ್ನು ಮಾಡಬೇಕು. ॥೭೪॥

ಅಥವಾ ತರ್ಪಣವನ್ನು ಹೋಮವು ಮುಗಿದನಂತರವಾದರೂ ಮಾಡಬಹುದು. ತರ್ಪಣಕ್ಕೆ ಎರಡು ಕಾಲದಲ್ಲಿಯೂ ಮಾಡಲು ಅವಕಾಶವಿರುತ್ತದೆ. ಹೀಗೆ ಎಲ್ಲಾ ಕರ್ಮಗಳು ಮುಗಿದಮೇಲೆ ಈಶ್ವರನಾಮಸ್ಮರಣೆಮಾಡುತ್ತಾ ಈಶ್ವರ ಪೂಜಕರೊಡನೆ ಶಿವನೈವೇದ್ಯವನ್ನು ಭುಂಜಿಸಬೇಕು. ॥೭೫॥

ರಾತ್ರಿಯಲ್ಲಿ ಶಿವಕಥೆಯನ್ನು ಹೇಳುತ್ತಾ ಅಥವಾ ಶ್ರವಣಮಾಡುತ್ತಾ ಕಾಲ ಕಳೆಯಬೇಕು. ಹೀಗೆ ನಿತ್ಯವೂ ಮಾಡಬೇಕಲ್ಲದೇ ಸಾಯಂಕಾಲದಲ್ಲಿಯೂ ವಿಶೇಷವಾಗಿ ಶಿವಪೂಜೆ ಮಾಡಬೇಕು. ॥೭೬॥

ಯೋ ನಿತ್ಯಂ ಪ್ರಯತಃ ಕುರ್ಯಾತ್ಸಾಯಂಕಾಲೇ ಶಿವಾರ್ಚನಂ ।
ತಸ್ಯ ಪುಣ್ಯಫಲಂ ವಕ್ತುಂ ಬ್ರಹ್ಮಣಾಪಿ ನ ಶಕ್ಯತೇ ॥೨೭॥

ಇದಂ ವ್ರತಂ ಬ್ರಾಹ್ಮಣಾನಾಂ ಶಾಂಭವಾನಾಂ ವಿಶೇಷತಃ ।
ಏತದ್ವ್ರತಸಮಂ ಪುಣ್ಯಂ ನಾಸ್ತಿ ನ ಶ್ರೂಯತೇಽಪಿ ಚ ॥೨೮॥

ಬ್ರಹ್ಮಾವರ್ತೇ ಪುರಾ ಕಶ್ಚಿದ್ರಾಜಾ ಭೂಚಕ್ರಪಾಲಕಃ ।
ತಸ್ಯೈಶ್ವರ್ಯಸ್ಯ ನಾಂತೋಽಸ್ತಿ ತೇನ ಪುಣ್ಯಂ ಕೃತಂ ಪರಂ ॥೨೯॥

ತಂ ದ್ರಷ್ಟುಮಾಗತೋ ವ್ಯಾಸಸ್ತಮಾಹ ನೃಪಸತ್ತಮಃ ।
ಸಂಪೂಜ್ಯ ಸಾದರಂ ಭಕ್ತ್ಯಾ ಶಿವಭಕ್ತಿಪರಾಯಣಂ ॥೩೦॥

---

ಪ್ರತಿದಿನವೂ ಯಾವನು ಈ ರೀತಿ ಭಕ್ತಿಯಿಂದ ಸಾಯಂಕಾಲದಲ್ಲಿ ಶಿವಾರ್ಚನೆಯನ್ನು ಮಾಡುತ್ತಾನೆಯೋ, ಆತನ ಪುಣ್ಯಫಲವು ಎಷ್ಟು ಮಹತ್ತರವಾದದ್ದೆಂದು ಹೇಳಲು ಬ್ರಹ್ಮನಿಗೂ ಶಕ್ಯವಿರುವುದಿಲ್ಲ. ॥೨೭॥

ಈ ಸಾಯಂಕಾಲದಲ್ಲಿ ಶಿವಪೂಜೆಯನ್ನು ಮಾಡುವುದು ಬ್ರಾಹ್ಮಣರಿಗೆ ಮಹಾವ್ರತವಾಗಿರುವುದು. ಅದರಲ್ಲಿಯೂ ಶಿವೋಪಾಸಕರೆನಿಸಿದವರಿಗಂತೂ ಇದಕ್ಕಿಂತಲೂ ಹೆಚ್ಚಾದ ವ್ರತವಿರುವುದಿಲ್ಲ. ಈ ವ್ರತದಿಂದ ಲಭಿಸುವಷ್ಟು ಪುಣ್ಯವು ಇನ್ನು ಯಾವ ವ್ರತದಿಂದಲೂ ಇರುವುದಿಲ್ಲ. ॥೨೮॥

ಹಿಂದೆ ಬ್ರಹ್ಮಾವರ್ತದಲ್ಲಿ ಒಬ್ಬ ರಾಜನಿದ್ದನು. ಆತನು ಸಕಲ ಪೃಥ್ವಿಯನ್ನೂ ಪಾಲಿಸುತ್ತಿದ್ದನು. ಆತನ ಐಶ್ವರ್ಯವು ಅಪಾರವೂ, ಅನಂತವೂ ಆಗಿದ್ದಿತು. ಅದಕ್ಕೆ ತಕ್ಕ ಹಾಗೆ ಆ ರಾಜನು ಅನೇಕ ಸತ್ಕರ್ಮಗಳನ್ನೂ ಪುಣ್ಯಕರ್ಮಗಳನ್ನೂ ಮಾಡಿದ್ದನು. ॥೨೯॥

ಹೀಗೆ ಆ ರಾಜನು ರಾಜ್ಯಭಾರಮಾಡುತ್ತಿರಲು ಒಂದುಸಲ ಶಿವಭಕ್ತಾಗ್ರಣಿಯಾದ ವ್ಯಾಸಮುನಿಯು ಆತನನ್ನು ಭೇಟಿಮಾಡಲು ಬಂದನು. ಮುನಿಯನ್ನು ಕಂಡಕೂಡಲೇ ರಾಜನು ಸಕಲೋಪಚಾರಗಳಿಂದ ಉಪಚರಿಸಿ ಪ್ರಶ್ನೆಮಾಡಿದನು. ॥೩೦॥

॥ ರಾಜೋವಾಚ ॥

ತತ್ತ್ವಜ್ಞ ತತ್ತ್ವವಿಚ್ಛ್ರೇಷ್ಠ ಸಂಸಾರಕ್ಲೇಶನಾಶಕಂ ।
ಉಪಾಯಂ ವದ ಮೇ ಯೇನ ನ ಸಂಸಾರಭಯಂ ಮುನೇ ॥೮೧॥

॥ ವ್ಯಾಸ ಉವಾಚ ॥

ಸಾಧು ಪೃಷ್ಟಂ ತ್ವಯಾ ರಾಜನ್ ಧರ್ಮೇಷ್ವಾಸ್ಥಾ ನೃಣಾಮಿಹ ।
ದುರ್ಲಭಾ ಸಾ ಯತೋ ಲೋಕೇ ಪ್ರಾಯಸ್ಸಂಸಾರಿಣೋ ಜನಾಃ ॥೮೨॥

ಸಂಸಾರರತಚಿತ್ತಾನಾಂ ಕುತಃ ಸ್ಯಾದ್ಧರ್ಮವಾಸನಾ ।
ಧರ್ಮವಾಸನಯಾ ಲೋಕೇ ವಿರಕ್ತೋ ಜಾಯತೇ ನರಃ ॥೮೩॥

---

ಮುನಿಶ್ರೇಷ್ಠನೇ, ನೀನು ಸಕಲ ಮಹಾತತ್ತ್ವಗಳನ್ನೂ ತಿಳಿದಿದ್ದೀಯೆ. ಅಲ್ಲದೇ ತತ್ತ್ವವನ್ನು ತಿಳಿದವರಿಗೆಲ್ಲಾ ಅಗ್ರೇಸರನಾಗಿದ್ದೀಯೆ. ಈಗ ನನಗೆ ಈ ಸಂಸಾರಕ್ಲೇಶದಿಂದ ಪಾರುಗಾಣುವುದಕ್ಕೆ ಉಪಾಯವನ್ನು ಉಪದೇಶಿಸಬೇಕು. ಮತ್ತೊಮ್ಮೆ ಈ ಸಂಸಾರಬಂಧನವು ಒದಗಬಾರದು. ಅಂಥ ಉಪಾಯವನ್ನು ಹೇಳೆಂದು ರಾಜನು ಕೇಳಿದನು. ॥೮೧॥

ಆಗ ವ್ಯಾಸಮುನಿಯು ಹೀಗೆ ನುಡಿದನು "ಎಲೈ ರಾಜನೇ, ಬಹಳ ಯೋಗ್ಯವಾದ ಪ್ರಶ್ನೆಯನ್ನೇ ಮಾಡಿರುವೆ. ಇಷ್ಟು ಧರ್ಮಶ್ರದ್ಧೆಯುಳ್ಳ ಜನರು ಲೋಕದಲ್ಲಿ ಅತಿ ವಿರಳ. ಧರ್ಮಶ್ರದ್ಧೆಯು ಜನರಿಗೆ ಲಭಿಸುವುದೇ ಬಹಳ ಕಷ್ಟ. ಆದ್ದರಿಂದಲೇ ಎಲ್ಲಾ ಜನರೂ ಪುನಃ ಪುನಃ ಜನನಮರಣಾತ್ಮಕವಾದ ಸಂಸಾರದಲ್ಲಿ ಕ್ಲೇಶಪಡುವರು. ॥೮೨॥

ಸಾಂಸಾರಿಕ ತಾಪತ್ರಯದಲ್ಲಿಯೇ ಮೂರು ಹೊತ್ತೂ ಆಸಕ್ತರಾದವರಿಗೆ ಧರ್ಮಸಂಸ್ಕಾರವು ಹೇಗೆ ಬಂದೀತು? ಅವರು ಹಾಗೆಯೇ ಕಷ್ಟವನ್ನನುಭವಿಸುವುದೇ ಗತಿ. ಆದರೆ ಯಾರಿಗೆ ಧರ್ಮದಲ್ಲಿ ಆಸಕ್ತಿಯಿರುತ್ತದೆಯೋ ಅವರು ಕ್ರಮೇಣ ಈ ಸಂಸಾರದಿಂದ ವಿರಕ್ತರಾಗುತ್ತಾರೆ. ॥೮೩॥

ಅವಿರಕ್ತಸ್ಯ ಧರ್ಮೇಷು ವಾಸನಾ ಯದಿ ಜಾಯತೇ ।
ಕ್ಷಣಾರ್ಧೇನ ವಿನಷ್ಟಾ ಸಾ ನ ಪುನರ್ಜಾಯತೇ ಖಲು ॥೮೪॥

ಸಂತತಾ ಧರ್ಮಬುದ್ಧಿಶ್ಚೇನ್ಮನುಷ್ಯಾಣಾಂ ವಿಶೇಷತಃ ।
ತ ಏವ ಮುಕ್ತಾಸ್ಸಂಸಾರಾದಸಾರಾದಘಸಾಗರಾತ್ ॥೮೫॥

ಧರ್ಮಾಶ್ಚ ವಿವಿಧಾಸ್ಸಂತಿ ಸಂತು ತೈರಮಿತೈರಪಿ ।
ನ ಫಲಂ ಧರ್ಮಧರ್ಮೇಣ ವಿನಾ ಧರ್ಮೇಣ ಕೇವಲಂ ॥೮೬॥

॥ ರಾಜೋವಾಚ ॥

ಶ್ರುತಮದ್ಯೇದಮಾಶ್ಚರ್ಯಂ ತ್ವನ್ಮುಖಾದೇವ ಕೇವಲಂ ।
ಧರ್ಮಧರ್ಮಃ ಕ್ವ ವಾ ಶಾಸ್ತ್ರೇ ಸಾ ವಾರ್ತಾ ನ ಶ್ರುತಾ ಖಲು ॥೮೭॥

---

ವಿರಕ್ತರಲ್ಲದವರಿಗೆ ಯಾವಾಗಲಾದರೊಂದುವೇಳೆ ಧರ್ಮದಲ್ಲಿ ಸಂಸ್ಕಾರವು ಉದ್ಬುದ್ಧವಾದರೂ ಒಂದು ಕ್ಷಣವಾದಕೂಡಲೇ ಆ ಧರ್ಮಸಂಸ್ಕಾರವು ನಾಶವೇ ಆಗುವುದು. ಅಲ್ಲದೇ ಮತ್ತೆ ಆ ಸಂಸ್ಕಾರವು ಹುಟ್ಟುವುದೇ ಇಲ್ಲ. ॥೮೪॥

ಯಾರಿಗೆ ಸತತವೂ ಧರ್ಮಬುದ್ಧಿಯೂ, ಧರ್ಮಸಂಸ್ಥಿತಿಯೂ ಅವಿಚ್ಛಿನ್ನವಾಗಿ ಇರುತ್ತದೆಯೋ, ಅವರು ಈ ಪಾಪಸಮುದ್ರದಂತಿರುವ ಸಂಸಾರದಿಂದ ಮುಕ್ತರಾಗುತ್ತಾರೆ. ॥೮೫॥

ಪ್ರಪಂಚದಲ್ಲಿ ಅನೇಕವಿಧವಾದ ಧರ್ಮಗಳಿರುವುವು. ಆದರೆ ಧರ್ಮಧರ್ಮವೆಂಬುದೊಂದನ್ನು ಬಿಟ್ಟರೆ ಬಾಕಿ ಉಳಿದ ಯಾವ ಧರ್ಮಗಳಿಂದಲೂ ವಿಶೇಷ ಫಲವಿರುವುದಿಲ್ಲ.” ॥೮೬॥

ಎಲೈ ಮುನಿಯೇ, ಧರ್ಮ ಧರ್ಮವೆಂಬ ಹೆಸರನ್ನು ಇಂದೇ ನಿನ್ನ ಬಾಯಿಂದ ಕೇಳಿದೆನು. ಈ ಧರ್ಮಧರ್ಮವೆಂಬುದು ನೀನು ಹೇಳಿದಂತೆ ಇರುವುದಾದರೆ ಆಶ್ಚರ್ಯವೇ ಸರಿ. ಆದರೆ ಈ ಹೆಸರನ್ನು ಯಾವ ಶಾಸ್ತ್ರದಲ್ಲಿಯೂ ಕೇಳಿರುವುದಿಲ್ಲ. ಅದು ಹೇಗೆ? ಅದರ ಸ್ವರೂಪವೇನು? ಎಂದು ರಾಜನು ಮತ್ತೆ ಕೇಳಿದನು. ॥೮೭॥

॥ ವ್ಯಾಸ ಉವಾಚ ॥

ಧರ್ಮಧರ್ಮಪರಿಜ್ಞಾನಂ ಲೋಕೇ ಖಲ್ವತಿದುರ್ಲಭಂ ।
ಧರ್ಮಧರ್ಮೇ ಪ್ರವೃತ್ತಿಶ್ಚ ಲೋಕೇ ನೈವೋಪಜಾಯತೇ ॥೮೮॥

ಧರ್ಮೋತ್ತಮೋ ಧರ್ಮಧರ್ಮಸ್ತದ್ಧರ್ಮಾವಗಮೋ ಭುವಿ ।
ಶಂಕರಸ್ಯಾಸ್ತಿ ತಜ್ಞಾನಮನ್ಯೇಷಾಂ ತು ನ ಸರ್ವಥಾ ॥೮೯॥

ಧರ್ಮಧರ್ಮ ಇತಿ ಜ್ಞಾತೋ ಧರ್ಮೇಷು ಶಿವಪೂಜನಂ ।
ದೇವದೇವೋ ಮಹಾದೇವೋ ಯಥಾ ಸರ್ವಾಮರೇಷ್ವಪಿ ॥೯೦॥

ದೇವತ್ವೇನ ಮಹಾದೇವೋ ನೋಚ್ಯತೇಽತುಲ್ಯತಾ ಯತಃ ।
ಪರಂತು ದೇವದೇವತ್ವವ್ಯವಹಾರೋ ಮಹೇಶ್ವರೇ ॥೯೧॥

---

ಮತ್ತೆ ವ್ಯಾಸನು ಹೀಗೆ ಉತ್ತರವಿತ್ತನು.--“ ಈ ಪ್ರಪಂಚದಲ್ಲಿ ಅತ್ಯಂತ ಶ್ರೇಷ್ಠವಾದ ಈ ಧರ್ಮಧರ್ಮದ ತಿಳಿವಳಿಕೆಯು ಎಲ್ಲರಿಗೂ ಇರುವುದಿಲ್ಲ. ಇದರ ಪ್ರಚಾರವು ಬಹಳ ವಿರಳ ಮತ್ತು ರಹಸ್ಯವಾದುದು. ಸರ್ವಸಾಮಾನ್ಯ ಜನರಿಗೆ ಈ ಧರ್ಮ ವಿಷಯದಲ್ಲಿ ಪ್ರವೃತ್ತಿಯೂ ಇರುವುದಿಲ್ಲ. ಇದರಲ್ಲಿ ಪ್ರವೃತ್ತಿ ಸುಲಭವಾಗಿ ಉಂಟಾಗಲೂ ಆರದು. ॥೮೮॥

ಧರ್ಮಧರ್ಮ ಸಕಲ ಧರ್ಮಗಳಿಗಿಂತಲೂ ಶ್ರೇಷ್ಠವಾದುದು. ಆ ಧರ್ಮ ಧರ್ಮದ ಜ್ಞಾನವೂ ಅದರ ಪೂರ್ಣಸ್ವರೂಪದ ಪರಿಚಯವೂ ಆ ಪರಮೇಶ್ವರನೊ ಬ್ಬನಿಗೇ ಇರುವುದು. ಇಂಥ ಶ್ರೇಷ್ಠಧರ್ಮದ ಸ್ವರೂಪ ಜ್ಞಾನವು ಸಾಮಾನ್ಯ ಜನರಿಗೆ ಹೇಗೆ ಇದ್ದೀತು ? ಅದರ ಪರಿಚಯವೇ ಒಬ್ಬರಿಗೂ ಇರುವುದಿಲ್ಲ. ॥೮೯॥

ಧರ್ಮಗಳಲ್ಲೆಲ್ಲಾ ಶ್ರೇಷ್ಠವಾದ ಶಿವಪೂಜನವೇ ಧರ್ಮಧರ್ಮವಾಗಿರು ವುದು. ಹೇಗೆ ದೇವತೆಗಳಲ್ಲೆಲ್ಲಾ ಪರಮೇಶ್ವರನು ದೇವದೇವನೆಂದು ಕರೆಯಿಸಿ ಕೊಂಡಿದ್ದಾನೆಯೋ, ಹಾಗೆಯೇ ಧರ್ಮಗಳಲ್ಲೆಲ್ಲಾ ಶಿವಪೂಜನವು ಧರ್ಮಧರ್ಮ ವೆಂದೆನಿಸಿಕೊಂಡಿದೆ. ॥೯೦॥

ಪರಮೇಶ್ವರನನ್ನು ಕೇವಲ ದೇವನು ಎಂದು ಕರೆಯುವುದಿಲ್ಲ. ಏಕೆಂದರೆ ಕೇವಲ ದೇವತ್ವವು ಇತರ ದೇವತೆಗಳಲ್ಲಿಯೂ ಇರುತ್ತದೆ. ಆ ದೇವತೆಗಳಿಗೂ ಪರಮೇಶ್ವರನಿಗೂ ಒಂದೇ ಹೆಸರು ಇರುವ ಹಾಗಿಲ್ಲ. ಒಂದುವೇಳೆ ಪೂರ್ಣ

ತಸ್ಮಾದ್ಧರ್ಮೋತ್ತಮತ್ವೇನ ಶಿವಧರ್ಮಶ್ಶಿವಾರ್ಚನಂ ।
ಧರ್ಮಧರ್ಮ ಇತಿ ಜ್ಞಾನಂ ತಸ್ಮಿನ್ ಸತಿ ನ ದುರ್ಲಭಂ ॥೯೨॥

ಅಧುನಾಪಿ ಶ್ರುತೋ ಧರ್ಮೋ ಧರ್ಮಧರ್ಮ ಇತಿ ತ್ವಯಾ ।
ಶಿವಾರ್ಚನಾತ್ಪರೋ ಧರ್ಮೋ ಧರ್ಮೋ ಧರ್ಮೇಣ ಸರ್ವಥಾ॥೯೩॥

ಧರ್ಮಧರ್ಮತ್ವಮೇತಸ್ಯ ಶಿವಲಿಂಗಾರ್ಚನಸ್ಯ ತು ।
ಧರ್ಮಾಂತರಾಪೇಕ್ಷಯಾ ಸ್ಯಾತ್ತದಪೇಕ್ಷಾ ತು ತಸ್ಯ ನ ॥೯೪॥

---

ಸಾಮ್ಯವಿದ್ದರೆ ಒಂದು ಹೆಸರು ಇರಬಹುದಾಗಿತ್ತು. ಅಂಥ ಸಾಮ್ಯವು ತೋರುವಂತಿಲ್ಲ. ಇತರ ದೇವತೆಗಳಿಂದ ಎಷ್ಟೋ ಉತ್ತಮನು ಪರಮೇಶ್ವರನು. ಆದುದರಿಂದ ಪರಮೇಶ್ವರನನ್ನು ಕೇವಲ ದೇವನೆಂದು ಕರೆಯದೇ ದೇವದೇವನೆಂದು ಕರೆಯುತ್ತಾರೆ. ॥೯೧॥

ಆದುದರಿಂದ ಸಕಲ ಧರ್ಮಗಳಲ್ಲಿ ಶ್ರೇಷ್ಠವಾದ ಶಿವಧರ್ಮ ಅಥವಾ ಶಿವಾರ್ಚನೆಯನ್ನು ಧರ್ಮಧರ್ಮವೆಂದು ತಿಳಿಯಬೇಕು. ಇದು ಶಿವಾರ್ಚನೆಯನ್ನೇ ಮಾಡುತ್ತ ಬಂದರೆ ಸರಿಯಾಗಿ ಮನವರಿಕೆಯಾಗುವುದು. ॥೯೨॥

ಈಗತಾನೇ ನೀನು ಧರ್ಮಧರ್ಮದ ವಿಚಾರವನ್ನು ಕೇಳಿರುವೆ. ಈ ಶಿವಾರ್ಚನಾತ್ಮಕವಾದ ಧರ್ಮವೇ ಧರ್ಮಧರ್ಮವು. ಇತರ ಧರ್ಮಗಳೂ ಈ ಧರ್ಮದಿಂದಲೇ ಧರ್ಮವೆಂದೆನಿಸುವುವು. ಶಿವಾರ್ಚನಾತ್ಮಕವಾದ ಧರ್ಮಸಂಬಂಧವಿಲ್ಲದಿದ್ದರೆ ಉಳಿದ ಧರ್ಮಗಳಿಗೆ ಧರ್ಮತ್ವವೇ ಕೂಡುವುದಿಲ್ಲ. ॥೯೩॥

ಈ ಶಿವಲಿಂಗಾರ್ಚನಾತ್ಮಕವಾದ ಧರ್ಮವು ಧರ್ಮಧರ್ಮವು ಏತಕ್ಕಾಯಿತೆಂದರೆ – ಈ ಧರ್ಮಧರ್ಮವೇ ಇತರ ಧರ್ಮಗಳಿಗೆ ಧರ್ಮತ್ವವನ್ನು ಸಿದ್ಧಪಡಿಸಿಕೊಡುವುದು. ಅಂದರೆ ಇತರ ಧರ್ಮಗಳಿಗೆ ತಮ್ಮಲ್ಲಿ ಧರ್ಮತ್ವವನ್ನು ಸಿದ್ಧಪಡಿಸಿಕೊಳ್ಳುವುದಕ್ಕೆ ಈ ಧರ್ಮಧರ್ಮದ ಅಪೇಕ್ಷೆ ಇರುವುದು. ಆದರೆ ಧರ್ಮಧರ್ಮಕ್ಕೆ ಇತರ ಧರ್ಮಗಳ ಅಪೇಕ್ಷೆ ಇರುವುದಿಲ್ಲ. ಅದಕ್ಕೆ ಧರ್ಮತ್ವವು ಸ್ವತಃ ಸಿದ್ಧವಾಗಿರುವುದು. ॥೯೪॥

ಯಾಗದಾನಾದಯೋ ಧರ್ಮಾಶ್ಶಿವಲಿಂಗಾರ್ಚನಾತ್ಮಕಂ ।
ಧರ್ಮಮಾಶ್ರಿತ್ಯ ಧರ್ಮತ್ವಂ ಪ್ರಾಪ್ನುವಂತಿ ಹಿ ಸರ್ವಥಾ ॥೯೫॥

ತಥಾ ಚ ಧರ್ಮಧರ್ಮೋಽಯಂ ಧರ್ಮಸಂಮ್ರಾಡಿತಿ ಶ್ರುತಂ ।
ಅತಶ್ಶಿವಾರ್ಚನಂ ಶ್ರೇಷ್ಠಂ ಧರ್ಮಾಣಾಮಿತಿ ಗೀಯತೇ ॥೯೬॥

ಅನಂತಜನ್ಮಸಂಚೀರ್ಣೈರ್ಯಾಗಾದ್ಯೈಃ ಪೂತಮಾನಸಾಃ ।
ಶಿವಾರ್ಚನೇ ಪ್ರವರ್ತಂತೇ ತೇನ ಮುಕ್ತಿರವಾಪ್ಯತೇ ॥೯೭॥

ಪ್ರಾಪ್ಯಾತಿದುರ್ಲಭಂ ಲೋಕೇ ಭಕ್ತಿಮವ್ಯಭಿಚಾರಿಣೀಂ ।
ಕೃತ್ವಾ ಶಿವಾರ್ಚನಂ ಮುಕ್ತೋ ಭವತ್ಯೇವ ಹಿ ಸರ್ವಥಾ ॥೯೮॥

ಪ್ರಾತರ್ಮಧ್ಯಾಹ್ನಸಮಯೇ ವಿಶೇಷಾದ್ಗಿರಿಶಾರ್ಚನಂ ।
ಕರ್ತವ್ಯಂ ಮಧ್ಯಕಾಲೇಽಪಿ ಸಂತತಂ ಚ ಶಿವಾರ್ಚನಂ ॥೯೯॥

---

ಯಜ್ಞಯಾಗಾದಿಗಳೂ, ದಾನಗಳೂ ಈ ಶಿವಲಿಂಗಾರ್ಚನಾತ್ಮಕವಾದ ಧರ್ಮಧರ್ಮವನ್ನು ಆಶ್ರಯಿಸಿಯೇ ಧರ್ಮತ್ವವನ್ನು ಪಡೆಯುವುವು. ॥೯೫॥

ಆದುದರಿಂದ ಈ ಶಿವಲಿಂಗಾರ್ಚನೆಯು ಧರ್ಮಧರ್ಮವೆನಿಸುವುದು. ಅಲ್ಲದೇ ಇದನ್ನು ಧರ್ಮಸಂಮ್ರಾಟ್ ಎಂದೂ ಹೇಳುವರು. ಆದುದರಿಂದ ಸಕಲ ಧರ್ಮಗಳಿಗಿಂತಲೂ ಶಿವಾರ್ಚನೆಯೇ ಅತ್ಯಂತ ಶ್ರೇಷ್ಠವಾದುದು. ॥೯೬॥

ಅನೇಕ ಜನ್ಮಗಳಲ್ಲಿ ಯಾಗಾದಿ ಧರ್ಮಗಳನ್ನು ಅನುಷ್ಠಾನಮಾಡಿ ಚಿತ್ತ ಶುದ್ಧಿಯನ್ನೂ ಪುಣ್ಯರಾಶಿಯನ್ನೂ ಪಡೆದುಕೊಂಡಿರುವವರು ಶಿವಾರ್ಚನೆಯನ್ನು ಮಾಡಲು ಪ್ರವರ್ತಿಸುತ್ತಾರೆ. ಮತ್ತು ಶಿವನನ್ನು ಅರ್ಚಿಸಿ ಮೋಕ್ಷವನ್ನು ಪಡೆಯು ತ್ತಾರೆ. ॥೯೭॥

ಈ ಪ್ರಪಂಚದಲ್ಲಿ ಅತ್ಯಂತ ವಿರಲವಾದ ಶಿವಧರ್ಮವನ್ನು ತಿಳಿದುಕೊಂಡು, ಶಿವನಲ್ಲಿ ದೃಢವಾದ ಮತ್ತು ಶಾಶ್ವತವಾದ ಭಕ್ತಿಯನ್ನೂ ಸಂಪಾದಿಸಿಕೊಂಡು ಶಿವನನ್ನು ಆರಾಧಿಸಿದರೆ ಖಂಡಿತ ಮೋಕ್ಷವನ್ನೇ ಪಡೆಯುವನು. ॥೯೮॥

ಆ ಶಿವಾರ್ಚನೆಯನ್ನು ಸರ್ವದಾ ಮಾಡಬೇಕು. ಪ್ರಾತಃಕಾಲದಲ್ಲಿಯೂ ಮಧ್ಯಾಹ್ನ ಸಮಯದಲ್ಲಿಯೂ, ಅಲ್ಲದೇ ಮಧ್ಯೆಮಧ್ಯೆಯೂ ಶಿವನನ್ನು ಅರ್ಚಿಸ ಬೇಕು." ಎಂದು ಹೇಳಿದ ಋಷಿವಾಕ್ಯವನ್ನು ಕೇಳಿ, ರಾಜನು, ॥೯೯॥

॥ ರಾಜೋವಾಚ ॥

**ಮುನೇ ಸಂತತಪೂಜಾಯಾಃ ಕಃ ಪ್ರಕಾರಃ ಕಥಂ ಸದಾ ।**
**ಸಾ ಪೂಜಾ ಕಾಲಸಾಧ್ಯಾ ಹಿ ಕಥಂ ಕಾರ್ಯಾ ವದಾಧುನಾ ॥೧೦೦॥**

॥ ವ್ಯಾಸ ಉವಾಚ ॥

**ಅವಿಚ್ಛಿನ್ನಾ ನೀರಧಾರಾ ಶಿವಲಿಂಗೇ ಮನೋಹರಾ ।**
**ಕಲ್ಪನೀಯಾ ಸೈವ ಧಾರಾ ಶಿವಸಂತತಪೂಜನಂ ॥೧೦೧॥**

**ಶಿವಸಂತತಪೂಜಾಯಾಃ ಫಲಮುಪ್ಯುಚ್ಯತೇ ಶೃಣು ।**
**ಯಸ್ಯ ಶ್ರವಣಮಾತ್ರೇಣ ತಸ್ಯ ಭಕ್ತಿಃ ಪ್ರಜಾಯತೇ ॥೧೦೨॥**

**ಜಲಧಾರಾ ಮುಕ್ತಿಧಾರಾ ಪಾಪಧಾರಾಪಹಾರಿಣೀ ।**
**ಧಾರಾರೂಪಾಣಿ ಪಾಪಾನಿ ನಶ್ಯಂತಿ ಜಲಧಾರಯಾ ॥೧೦೩॥**

---

"ವ್ಯಾಸಮುನಿಯೇ, ಆ ಸಾರ್ವಕಾಲಿಕವಾದ ಶಿವಾರ್ಚನೆಯನ್ನು ಹೇಗೆ ಮಾಡಬೇಕು? ಅದಕ್ಕೆ ಕ್ರಮ ಯಾವುದು? ಆ ಪೂಜೆಗೂ ಒಂದು ನಿಯಮಿತ ವಾದ ಕಾಲವು ಇರುತ್ತದೆಯಷ್ಟೆ! ಅದೆಲ್ಲವನ್ನೂ ನನಗೆ ಹೇಳು" ಎಂದು ಕೇಳಿದನು.

ಆ ರಾಜನ ಪ್ರಶ್ನೆಗೆ ವ್ಯಾಸಮುನಿಯು ಹೀಗೆ ಉತ್ತರವಿತ್ತನು—ಸತತವಾದ ಶಿವಪೂಜೆ ಎಂದರೆ ಅವಿಚ್ಛಿನ್ನವಾದನೀರಿನ ಧಾರೆಯು ಶಿವಲಿಂಗದ ಮೇಲೆ ಅಭಿಷಿಕ್ತ ವಾಗುವುದೇ. ಜಲಧಾರೆಯು ಮಧ್ಯೆ ನಿಲ್ಲದೇ ಒಂದೇಸಮನೆ ಶಿವಲಿಂಗದ ಮೇಲೆ ಬೀಳುವಂತೆ ಅಭಿಷೇಕಮಾಡಿ, ಪೂಜೆಯನ್ನೂ ಮಾಡಿದರೆ ಅದು ಸತತ ಶಿವಪೂಜೆ ಎನಿಸುವುದು. ॥೧೦೧॥

ಇಂಥ ಅವಿಚ್ಛಿನ್ನ ಶಿವಪೂಜೆಯಿಂದ ಲಭಿಸುವ ಫಲಗಳನ್ನೂ ವಿವರಿಸು ತ್ತೇನೆ. ಅದನ್ನು ಗಮನವಿಟ್ಟು ಕೇಳು. ಈ ಫಲಶ್ರುತಿಯನ್ನು ಕೇಳಿದ ಮಾತ್ರ ದಿಂದಲೇ ಮನುಷ್ಯನಿಗೆ ಪರಮೇಶ್ವರನಲ್ಲಿ ಭಕ್ತಿಯೂ ಶಿವಪೂಜೆಯಲ್ಲಿ ಪ್ರವೃತ್ತಿಯೂ ಹುಟ್ಟುವುದು. ॥೧೦೨॥

ಶಿವಲಿಂಗದ ಮೇಲೆ ಅಭಿಷೇಕ ಮಾಡಿದ ಜಲಧಾರೆಯೇ ಸಾಕ್ಷಾತ್ ಮುಕ್ತಿಧಾರೆ ಎಂದು ತಿಳಿ. ಇಂಥ ಜಲಧಾರೆಯು ಧಾರಾಕಾರವಾದ ಸಮಸ್ತ

ಅವಿಚ್ಛಿನ್ನಾನಿ ಪಾಪಾನಿ ಜಲಾವಿಚ್ಛಿನ್ನಧಾರಯಾ ।
ವಿನಶ್ಯಂತೀತಿ ಸಾ ಲಿಂಗೇ ಕಲ್ಪನೀಯಾ ಸದಾ ದ್ವಿಜೈಃ ॥೧೦೪॥

ಘರ್ಮಕಾಲೇ ವಿಶೇಷೇಣ ಜಲಧಾರಾಪ್ರಕಲ್ಪನಂ ।
ಶಿವಲಿಂಗೇಷು ಕರ್ತವ್ಯಂ ತೇನ ಪಾಪಲಯೋ ಭವೇತ್ ॥೧೦೫॥

ಅತಃ ಪಾಪಲಯೋದ್ಯೋಗಃ ಕರ್ತವ್ಯೋ ನೀರಧಾರಯಾ ।
ಶೋಧಿತಂ ನೀರಮಾದಾಯ ಸುಗಂಧದ್ರವ್ಯಸಂಯುತಂ ॥೧೦೬॥

ಪತ್ರೈಃ ಫಲೈರ್ವಾ ಪುಷ್ಪೈರ್ವಾ ನವದೂರ್ವಾಂಕುರೈರಪಿ ।
ಜಲೈರಪಿ ಪ್ರಕುರ್ವಂತಿ ಮುನಯಶ್ಶಿವಪೂಜನಂ ॥೧೦೭॥

---

ಪಾಪಗಳನ್ನೂ ತೊಳೆದು ತೊಡೆದು ಹಾಕುತ್ತದೆ. ಈ ಜಲಧಾರೆಯಿಂದ ಸಕಲ ಪಾಪಗಳೂ ನಾಶವಾಗುತ್ತವೆ. ||೧೦೩||

ಅವಿಚ್ಛಿನ್ನವಾದ ಪಾಪಗಳು ಅವಿಚ್ಛಿನ್ನವಾದ ಜಲಧಾರೆಯಿಂದ ನಾಶವಾಗುವುವು. ದ್ವಿಜರು ಈ ತತ್ತ್ವವನ್ನು ತಿಳಿದುಕೊಂಡು ಈ ಪಾಪನಾಶಕವಾದ ಜಲಧಾರೆಯನ್ನು ಶಿವಲಿಂಗದ ಮೇಲೆ ಅವಿಚ್ಛಿನ್ನವಾಗಿ ಅಭಿಷೇಕಮಾಡಬೇಕು. ||೧೦೪||

ಬೇಸಿಗೆ ಕಾಲದಲ್ಲಿ ಇಂಥ ಅವಿಚ್ಛಿನ್ನವಾದ ಜಲಧಾರೆಯಿಂದ ಶಿವಲಿಂಗಗಳಿಗೆ ಅಭಿಷೇಕಮಾಡಬೇಕು. ಇದರಿಂದ ಸಕಲ ಪಾಪಗಳೂ ದೂರವಾಗುವುವು. ||೧೦೫||

ಹೀಗೆ ಪಾಪಲಯಕ್ಕೆ ಸುಲಭೋಪಾಯವಾದ ಅವಿಚ್ಛಿನ್ನ ಜಲಧಾರೆಯನ್ನು ಮಾಡಲು ಅವಶ್ಯ ಪ್ರಯತ್ನಿಸಬೇಕು. ಹಾಗೆ ಮಾಡುವುದಕ್ಕೆ ಯೋಗ್ಯವಾದ ಜಲವನ್ನು ಶೋಧಿಸಿ ನಿರ್ಮಲವನ್ನಾಗಿ ಮಾಡಬೇಕಲ್ಲದೇ, ಅದರಲ್ಲಿ ಸುಗಂಧದ್ರವ್ಯಗಳನ್ನೂ ಮಿಶ್ರಮಾಡಬೇಕು. ಇಂತಹ ಶ್ರೇಷ್ಠವಾದ ಜಲದಿಂದ ಶಿವಲಿಂಗಕ್ಕೆ ಸಂತತವಾಗಿ ಅಭಿಷೇಕಮಾಡಬೇಕು. ||೧೦೬||

ಇಂಥ ಧರ್ಮದ ತತ್ತ್ವವನ್ನರಿತ ಮುನಿಗಳು ಪತ್ರ, ಪುಷ್ಪ, ದೂರ್ವೆ, ಜಲ, ಹಣ್ಣು, ಕಾಯಿ, ಮುಂತಾದವುಗಳಿಂದ ಸದಾ ಶಿವಪೂಜೆಯನ್ನು ಮಾಡುವರು. ||೧೦೭||

ಜಲಂ ದತ್ವಾ ಮಹೇಶಾಯ ಯತ್ಫಲಂ ಸಮವಾಪ್ಯತೇ ।
ತತ್ಫಲಂ ಕೇನ ವಾ ಸಮ್ಯಗ್ವರ್ಣನೀಯಂ ನೃಪೋತ್ತಮ ॥೧೦೮॥

ಶಿವಾರ್ಚನೇನ ಸಿಧ್ಯಂತಿ ಸರ್ವೇ ಕಾಮಾಶ್ಶ್ರುತಿಶ್ರುತಾಃ ।
ಅನಾಯಾಸೇನ ಮರ್ತ್ಯಾನಾಂ ಶುಭದಂ ಶಿವಪೂಜನಂ ॥೧೦೯॥

ಅಪಾರಕರುಣಾಸಾರಸಾಗರಃ ಶಂಕರಃ ಪರಃ ।
ಭಕ್ತ್ಯಾ ದತ್ತಂ ಫಲಂ ಪತ್ರಂ ಗೃಹ್ಣಾತಿ ಶುಭದಾಯಕಃ ॥೧೧೦॥

ತಸ್ಯ ಸಂಪೂರ್ಣಕಾಮಸ್ಯ ನಿತ್ಯಾನಂದಸ್ಯ ವಸ್ತುನಃ ।
ತೋಷೋ ಜಲಾರ್ಪಣೇನಾಪಿ ಜಾಯತೇ ತತ್ಕಿಲಾದ್ಭುತಂ ॥೧೧೧॥

---

ಹೀಗೆ ಜಲದಿಂದ ಪರಮೇಶ್ವರನಿಗೆ ಅಭಿಷೇಕಮಾಡುವವನಿಗೆ ಎಷ್ಟು, ಎಂಥ ಫಲವು ಲಭಿಸುವುದೆಂಬುದನ್ನು ಯಾರುತಾನೆ ವರ್ಣಿಸಬಲ್ಲರು? ಅಥವಾ ತಿಳಿಯ ಬಲ್ಲರು? ॥೧೦೮॥

ವೇದೋಕ್ತವಾದ ಯಾವ ಯಾವ ಕರ್ಮಗಳಿಂದ ಯಾವ ಯಾವ ಇಷ್ಟಾರ್ಥಫಲಗಳು ಲಭಿಸುವುವೋ, ಅವೆಲ್ಲವೂ ಶಿವಪೂಜನದಿಂದ ಸುಲಭವಾಗಿಯೇ ಸಿದ್ಧಿಸುವುವು. ಯಾಗದಂತೆ ಕಷ್ಟಸಾಧ್ಯವಲ್ಲದಿದ್ದರೂ ಶಿವಪೂಜೆಯು ಮನುಷ್ಯರಿಗೆ ಅತ್ಯಂತ ಶುಭಫಲಗಳನ್ನು ಕೊಡುವುದಾಗಿರುತ್ತದೆ. ॥೧೦೯॥

ಆ ಶಂಕರನು ಅನಂತ ಕರುಣಾನಿಧಿಯಾಗಿರುವನು. ಆದುದರಿಂದಲೇ ಶಿವ ಪೂಜಕನು ಪತ್ರವನ್ನೋ, ಫಲವನ್ನೋ, ಯಾವುದನ್ನೋ ಆಗಲಿ ಭಕ್ತಿಯಿಂದ ಅರ್ಪಿಸಿದ್ದನ್ನು ಸ್ವೀಕರಿಸಿ ಸಕಲ ಶುಭಫಲಗಳನ್ನೂ ಕೊಡುವನು. ॥೧೧೦॥

ಪ್ರಪಂಚದಲ್ಲಿ ಪೂರ್ಣಕಾಮರಿಗೆ ಎಷ್ಟು ಸೇವೆಮಾಡಿದರೂ ಅವರು ಸಂತು ಷ್ಟರಾಗುವುದಿಲ್ಲ. ಆದರೆ ಪರಮೇಶ್ವರನು, ಪೂರ್ಣಕಾಮನೂ, ನಿತ್ಯಾನಂದಸ್ವರೂ ಪನೂ ಆಗಿದ್ದರೂ ಕೇವಲ ಜಲವನ್ನು ಅರ್ಪಣೆಮಾಡಿದ್ದರಿಂದಲೇ ಸಂತುಷ್ಟನಾಗು ವನು ಎಂಬುದು ಎಷ್ಟು ಅದ್ಭುತವಾದ ವಿಚಾರ. ಇದರಿಂದ ಆತನು ಪರಮದಯಾ ಶಾಲಿ ಎಂದು ತಿಳಿಯುವುದು. ॥೧೧೧॥

ಪ್ರಚ್ಛಿನ್ನಾನ್ಯಪಿ ಶುಷ್ಕಾಣಿ ಬಿಲ್ವಪತ್ರಾಣಿ ಶಂಕರಃ ।
ಗೃಹ್ಣಾತಿ ವಿಪುಲಂ ಭಾಗ್ಯಂ ದಾತುಂ ಭಕ್ತಾಯ ಸಾದರಂ ॥೧೧೨॥

ಶಿವಸ್ಯ ಕರುಣಾಸಿಂಧೋರ್ಮಹಿಮಾಪಿ ಮಹಾನ್ ಖಲು ।
ಸ್ವಭಕ್ತದಯಯಾ ಗೃಹ್ಣಾತ್ಯಂಬು ಪತ್ರಂ ಚ ಕಿಂಚನ ॥೧೧೩॥

ನಾರಾಧಯಂತಿ ಸಹಸಾ ಕರುಣಾಸಾಗರಂ ಹರಂ ।
ನ ತರಂತ್ಯಪಿ ಸಂಸಾರಸಾಗರಂ ಪಾತಕಾಕರಂ ॥೧೧೪॥

ಭಕ್ತ್ಯಾ ದೇವಶಿರೋಮಣಿಸ್ಸುರಮಣಿರ್ದ್ವಿತ್ರಾಣಿ ಪತ್ರಾಣಿ ವಾ
ನೀರಂ ವಾ ಕುಸುಮಂ ಫಲಂ ಮಣಿಮಯೇ ಲಿಂಗೇಽನ್ಯಲಿಂಗೇಽಪಿ ವಾ ।
ದತ್ತಂ ಭಸ್ಮವಿಭೂಷಿತೇನ ಕೃಪಯಾ ಗೃಹ್ಣಾತ್ಯನುಗ್ರಾಹಕೋ
ದಾತೃತ್ವವ್ಯಸನಾತ್ಪ್ರಯಚ್ಛತಿ ಮಹದ್ಭಾಗ್ಯಂ ಭವಾನೀಪತಿಃ ॥೧೧೫॥

---

ಅಷ್ಟೈಶ್ವರ್ಯಸಂಪನ್ನನಾಗಿದ್ದರೂ ಆ ಶಂಕರನು ಭಕ್ತಿಯಿಂದ ಅರ್ಪಿತವಾದ ಬಿಲ್ವಪತ್ರೆಗಳು ಛಿದ್ರಛಿದ್ರವಾಗಿದ್ದರೂ, ಒಣಗಿಹೋಗಿದ್ದರೂ ಅವುಗಳನ್ನೂ ಪ್ರೀತಿಯಿಂದಲೇ ಸ್ವೀಕರಿಸುವನು. ಇದು ಭಕ್ತನಿಗೆ ಭಾಗ್ಯವನ್ನು ಕೊಡಬೇಕೆಂಬ ದಯೆಯಿಂದಲೇ ಅಲ್ಲವೇ? ॥೧೧೨॥

ಆ ದಯಾನಿಧಿಯಾದ ಶಂಕರನ ಮಹಿಮೆಯೂ ದಯೆಯೂ ಅಪಾರವಾದದ್ದಷ್ಟೆ! ಆ ದಯೆಯಿಂದಲೇ ಅಲ್ಲವೇ ತನ್ನ ಭಕ್ತನು ಯತ್ಕಿಂಚಿತ್ತಾದ ನೀರನ್ನೋ ಪತ್ರವನ್ನೋ ಕೊಟ್ಟರೂ ಅದನ್ನೇ ಸ್ವೀಕರಿಸುವನು. ॥೧೧೩॥

ಸಾಮಾನ್ಯಜನರು ಈ ವಿಚಾರವನ್ನೇನು ಬಲ್ಲರು? ಪರಮೇಶ್ವರನು ಕರುಣಾನಿಧಿ ಎಂಬುದೂ ಅವರಿಗೆ ತಿಳಿದಿರುವುದಿಲ್ಲ. ಆದರಂತೆ ಅವರು ಶಿವಾರ್ಚನೆಯಲ್ಲಿ ಪ್ರಯತ್ನವನ್ನೂ ಮಾಡುವುದಿಲ್ಲ. ಹಾಗೆಯೇ ಅವರು ಈ ಪಾಪಕೂಪವಾದ ಸಂಸಾರ ಸಾಗರವನ್ನೂ ದಾಟಲಾರರು. ಅನೇಕ ಕ್ಲೇಶವನ್ನು ಅನುಭವಿಸುತ್ತಲೇ ಇರುತ್ತಾರೆ. ॥೧೧೪॥

ಆ ಪರಮೇಶ್ವರನು ಸಕಲದೇವತೆಗಳಿಗೂ ಶಿರೋಮಣಿಯಂತೆ ಶ್ರೇಷ್ಠನಾಗಿರುವನು. ಹೀಗಿದ್ದರೂ ಕೃಪಣತೆಯನ್ನು ತಾಳದೆ, ಭಸ್ಮಾಲಂಕೃತನಾದ ತನ್ನ ಭಕ್ತನು ಮಣಿಮಯವಾದ ಲಿಂಗದ ಮೇಲಾಗಲಿ ಅಥವಾ ಇತರ ಲಿಂಗದ ಮೇಲಾಗಲಿ

**ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಪೂರ್ವಾರ್ಧೇ ಪ್ರದೋಷಕಾಲಪೂಜಾಫಲ ಸಂತತಪೂಜಾ ಜಲಾಧಾರವಿಧಿ ತತ್ಫಲವರ್ಣನಂ ನಾಮ ಏಕೋನಪಂಚಾಶೋಽಧ್ಯಾಯಃ**

---

ಯತ್ಕಿಂಚಿತ್ ಜಲವನ್ನೋ, ಕುಸುಮವನ್ನೋ, ಫಲವನ್ನೋ, ಏನನ್ನೋ ಅರ್ಪಿಸಿ ಪೂಜಿಸಿದರೂ ಅದನ್ನೇ ಪರಮಪ್ರೀತಿಯಿಂದ ಸ್ವೀಕರಿಸುವನು. ಮತ್ತು ಭಕ್ತನನ್ನು ಅನುಗ್ರಹಿಸುವುದೆಂದರೆ ಇಷ್ಟಾರ್ಥಪ್ರದಾನಮಾಡಬೇಕೆಂಬುದೇ ಆ ಪರಶಿವನ ಸಂಕಲ್ಪ. ಅನ್ಯಥಾ ಈ ಅಲ್ಪ ಸೇವೆಗೆ ಹೇಗೆ ಮೆಚ್ಚುವನು? ಆ ಪರಮೇಶ್ವರನಿಗೆ ಪಾತ್ರತ್ವವೆಂಬ ಹುಚ್ಚು ಅತಿಯಾಗಿರುವುದು. ಅದರಿಂದಲೇ ಇಷ್ಟು ಮಹಾಭಾಗ್ಯ ವನ್ನು ಅನುಗ್ರಹಿಸುವನು" ಎಂದು ವ್ಯಾಸಮಹರ್ಷಿಯು ರಾಜನಿಗೆ ಶಂಕರನ ಗುಣಾತಿಶಯಗಳನ್ನು ವರ್ಣಿಸಿದನು. ||೧೧೫||

ಇಲ್ಲಿಗೆ ಶ್ರೀಶಿವರಹಸ್ಯದ ಮೂರನೆಯ ಅಂಶದ ಪೂರ್ವಾರ್ಧದಲ್ಲಿ, ಪ್ರದೋಷಕಾಲ ಪೂಜಾಫಲ, ಮತ್ತು ಜಲಧಾರಾವಿಧಿಯ ಫಲ ಇವುಗಳನ್ನು ವಿವರಿಸುವ ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಪೂರ್ವಾರ್ಧೇ

## ಪಂಚಾಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಪ್ರಹೃಷ್ಟಸ್ಸ ನೃಪೋತ್ತಮಃ ।
ವಾಗ್ಭಿರಭ್ಯರ್ಚ್ಯ ತಂ ವ್ಯಾಸಂ ಪುನರಾಹ ವಿಚಕ್ಷಣಃ ॥೧॥

ಭಗವನ್ ಬ್ರೂಹಿ ತತ್ತ್ವಜ್ಞ ಧರ್ಮಾಧರ್ಮಾಧಿಕಾರಿಣಂ ।
ತತ್ಫಲಂ ಚ ವಿಶೇಷೇಣ ತದಂಗಾನ್ಯಪಿ ಸಾದರಂ ॥೨॥

---

## ಐವತ್ತನೆಯ ಅಧ್ಯಾಯ

ವ್ಯಾಸಮುನಿಯು ಹೇಳಿದ ಮಾತನ್ನು ಕೇಳಿ ಆ ರಾಜನಿಗೆ ಬಹಳ ಸಂತೋಷವಾಯಿತು. ಮತ್ತೆ ಆ ರಾಜನು ವ್ಯಾಸಮುನಿಯನ್ನು ಪ್ರಶಂಸಿಸುತ್ತಾ ಹೀಗೆ ಹೇಳಿದನು. ॥೧॥

ಭಗವನ್ ವ್ಯಾಸಮುನಿಯೇ! ನೀನು ಸಕಲ ತತ್ವಗಳನ್ನೂ ತಿಳಿದವನಾಗಿದ್ದೀಯೆ. ಈಗ ನೀನು ಹೇಳಿದ ಧರ್ಮಾಧರ್ಮದ ಅನುಷ್ಠಾನದಲ್ಲಿ ಅಧಿಕಾರವಿರುವುದು ಯಾರಿಗೆ? ಆ ಧರ್ಮಾಧರ್ಮದ ಅಂಗಾಂಶಗಳು ಯಾವುವು? ಅದನ್ನು ಆಚರಿಸಿದರೆ ಯಾವ ಫಲ ದೊರೆಯುವುದು? ಎಂಬುದನ್ನು ವಿಸ್ತರಿಸಬೇಕೆಂದು ರಾಜನು ಕೇಳಿದನು. ಎಂದು ಯಾಜ್ಞವಲ್ಕ್ಯರು ಹೀಗೆಂದು ಹೇಳಿದರು. ॥೨॥

|| ವ್ಯಾಸ ಉವಾಚ ||

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚಾನ್ಯೇಽಪಿ ಸಂಕರಾಃ ।**
**ತತ್ತದಂಗಪ್ರಭೇದೇನ ಸರ್ವೇ ತತ್ರಾಧಿಕಾರಿಣಃ ॥೩॥**

**ದ್ವಿಜಾನಾಂ ವೈದಿಕೈರ್ಮಂತ್ರೈಶ್ಶಿವಲಿಂಗಸಮರ್ಚನಂ ।**
**ಅನ್ಯೇಷಾಂ ಲೌಕಿಕೈರ್ಮಂತ್ರೈಸ್ತತ್ಕಾರ್ಯಂ ಸರ್ವಥಾ ನೃಪ ॥೪॥**

**ಸ್ತ್ರೀಣಾಂ ಚ ಪುರುಷಾಣಾಂ ಚ ಶಿವಲಿಂಗಸಮರ್ಚನಂ ।**
**ಅವಶ್ಯಮೇವ ಕರ್ತವ್ಯಂ ತತ್ತ್ಯಾಜ್ಯಂ ನೈವ ಸರ್ವಥಾ ॥೫॥**

**ಶಿವಲಿಂಗಾರ್ಚನಂ ತ್ಯಕ್ತ್ವಾ ಭೋಕ್ತುಮಿಚ್ಛತಿ ಮಾನವಃ ।**
**ಸ ಮಲಾಶನಜಂ ಪಾಪಂ ಪ್ರಾಪ್ನೋತ್ಯೇವ ನ ಸಂಶಯಃ ॥೬॥**

**ಯಸ್ತು ಲಿಂಗಾರ್ಚನಂ ತ್ಯಕ್ತ್ವಾ ಯಃ ಪಿಬೇನ್ನೀರಮೇವ ವಾ ।**
**ಸ ರೇತಃಪಾನಜಂ ಪಾಪಂ ಪ್ರಾಪ್ನೋತ್ಯೇವ ನ ಸಂಶಯಃ ॥೭॥**

---

ಈ ಶಿವಲಿಂಗಾರ್ಚನೆಯಲ್ಲಿ ಬ್ರಾಹ್ಮಣರಿಗೂ, ಕ್ಷತ್ರಿಯರಿಗೂ, ವೈಶ್ಯರಿಗೂ ಶೂದ್ರರಿಗೂ ಮತ್ತೂ ಇತರ ಸಂಕರಜಾತಿಯವರಿಗೂ ಸಹ ಅಧಿಕಾರವಿದೆ. ಆದರೆ ಆಯಾಯಾ ಜಾತಿಯವರಿಗೆ ಅಂಗಾಂಶಗಳು ಮಾತ್ರ ಭಿನ್ನವಾಗಿರುತ್ತವೆ. ||೩||

ಲಿಂಗಾರ್ಚನೆಯನ್ನು ದ್ವಿಜರು ವೇದೋಕ್ತ ಮಂತ್ರಗಳಿಂದ ಮಾಡಬೇಕು. ಇತರರು ಲೌಕಿಕವಾದ ಅಂದರೆ ಸ್ತೋತ್ರಾದಿಗಳಿಂದ ಪೂಜೆಯನ್ನು ಮಾಡಬೇಕು. ಅಂತೂ ಎಲ್ಲರೂ ಶಿವಾರ್ಚನೆಯನ್ನು ಮಾಡಲೇಬೇಕು. ||೪||

ಸ್ತ್ರೀಯರೇ ಆಗಲಿ, ಪುರುಷರೇ ಆಗಲಿ, ಪ್ರತಿಯೊಬ್ಬರೂ ಶಿವಲಿಂಗವನ್ನು ಪೂಜಿಸಲೇಬೇಕು. ಎಂದೂ ಶಿವಾರ್ಚನೆಯನ್ನು ಬಿಡಕೂಡದು. ||೫||

ಯಾವನು ಶಿವಾರ್ಚನೆಯನ್ನು ಮಾಡದೇ ಊಟಮಾಡುವನೋ ಅವನು ಅಮೇಧ್ಯವನ್ನು ತಿಂದರೆ ಯಾವ ಪಾಪವು ಸಂಭವಿಸುತ್ತದೆಯೋ ಆ ಪಾಪಕ್ಕೆ ಗುರಿಯಾಗುತ್ತಾನೆ. ಯಾವನು ಲಿಂಗಪೂಜೆಮಾಡದೆ ನೀರನ್ನು ಕುಡಿಯುವನೋ ಅವನಿಗೆ ರೇತಸ್ಸನ್ನು ಪಾನಮಾಡಿದ ದೋಷವು ಬರುವುದು. ಇದರಲ್ಲಿ ಸಂದೇಹವೇ ಇಲ್ಲ. ||೬-೭||

**ಸಾತ್ಯಕಿರ್ನಾಮ ರಾಜಾಭೂತ್ಸಮಸ್ತೇ ಕ್ಷಿತಿಮಂಡಲೇ ।**
**ಸ ರಾಜ್ಯಪಾಲನೋದ್ಯುಕ್ತೋ ನ ಭವತ್ಯೇವ ಸರ್ವಥಾ ॥೮॥**

**ತಸ್ಯ ದಾರಾಶ್ಚ ಬಹವೋ ರೂಪಲಾವಣ್ಯಸಂಯುತಾಃ ।**
**ಸ ತೈಸ್ಸಹಾನಿಶಂ ಭೋಗಾನ್ ಭುಂಕ್ತೇ ದುರ್ಮಂತ್ರಿಸಂಯುತಃ ॥೯॥**

**ತರುಣೀತನುಸಂಗೇನ ಭೋಜನೇನ ಚ ನೀಯತೇ ।**
**ಅಹೋರಾತ್ರಂ ನ ತಸ್ಯಾಸ್ತಿ ಕೃತ್ಯಮನ್ಯತ್ ಸ್ವಭಾವತಃ ॥೧೦॥**

**ನಾರೀಷು ತರುಣೀಷ್ವೇವ ರತಿಸ್ತಸ್ಯ ನಿರಂತರಂ ।**
**ನಿದ್ರಾಕಾಲೇಽಪಿ ತರುಣೀ ತ್ಯಕ್ತಾ ನೈವ ದುರಾತ್ಮನಾ ॥೧೧॥**

**ಏವಂ ಸಂವಸತಸ್ತಸ್ಯ ನಾರೀ ತಸ್ಯೈವ ಕಾಚನ ।**
**ಉದ್ಯಾನವನಮಾಸಾದ್ಯ ತತ್ರ ಲಿಂಗಂ ದದರ್ಶ ಸಾ ॥೧೨॥**

---

ಹಿಂದೆ ಸಾತ್ಯಕಿ ಎಂಬ ರಾಜನಿದ್ದನು. ಆತನು ಈ ಪೃಥಿವಿಗೆಲ್ಲಾ ಅಧಿಪತಿಯಾಗಿದ್ದನು. ಆದರೆ ಆತನು ರಾಜ್ಯದ ರಕ್ಷಣೆಗಾಗಿ ಪ್ರಯತ್ನವನ್ನೇ ಮಾಡುತ್ತಿರಲಿಲ್ಲ. ||೮||

ಆ ರಾಜನಿಗೆ ಅನೇಕ ಪತ್ನಿಯರಿದ್ದರು. ಆ ಸ್ತ್ರೀಯರೊಡನೆ ಸದಾ ಸಂಭೋಗ ವಿಲಾಸಗಳಲ್ಲಿಯೇ ಮಗ್ನನಾಗಿರುತ್ತಿದ್ದನು. ಅತನ ಮಂತ್ರಿಗಳೂ ಹಾಗೆಯೇ ದುರ್ಬುದ್ಧಿಗಳೇ ಆಗಿದ್ದರು. ||೯||

ಆ ರಾಜನು ಹಗಲೂ ರಾತ್ರಿ ಅವಿಚ್ಛಿನ್ನವಾಗಿ ಸ್ತ್ರೀಯರೊಡನೆ ಭೋಗ ವಿಲಾಸಗಳಲ್ಲಿ ತಲ್ಲೀನನಾಗಿಯೂ, ಸದಾ ಊಟಉಪಚಾರಗಳನ್ನು ಮಾಡುತ್ತಲೂ ಕಾಲಕಳೆಯುತ್ತಿದ್ದನು. ಆತನಿಗೆ ಈ ಭೋಗವಿಲಾಸವನ್ನು ಬಿಟ್ಟು ಬೇರೆ ಕೆಲಸವೇ ಇರಲಿಲ್ಲ. ಬೇರೆ ಏನನ್ನೂ ಯೋಚಿಸುತ್ತಿರಲಿಲ್ಲ. ||೧೦||

ಆ ಸ್ತ್ರೀಯರಲ್ಲಿಯೂ ಉತ್ತಮರೂ ಸುಂದರಿಯರೂ ಆದ ಯುವತಿಯರೊಡನೆಯೇ ಸರ್ವದಾ ವಿಹರಿಸುತ್ತಿದ್ದನು. ಆತನು ನಿದ್ರಾಕಾಲದಲ್ಲಿಯೂ ಯುವತಿಯರನ್ನು ಬಿಟ್ಟಿರುತ್ತಿದ್ದಿಲ್ಲ. ||೧೧||

ಆ ರಾಜನು ಹೀಗೆಯೇ ವಿಷಯಾಸಕ್ತನಾಗಿ ಕಾಲಕಳೆಯುತ್ತಿರಲು ಒಂದಾನೊಂದು ಸಲ ಅದೇ ರಾಜನ ಪತ್ನಿಯೊಬ್ಬಳು ಉದ್ಯಾನವನದಲ್ಲಿ ಸಂಚರಿಸುತ್ತಿರುವಾಗ ಒಂದು ಶಿವಲಿಂಗವನ್ನು ಕಂಡಳು. ||೧೨||

ತತ್ರೈಕಶ್ಶಾಂಭವೋ ದೃಷ್ಟಶ್ಶಿವಪೂಜನತತ್ಪರಃ ।
ಭಸ್ಮೋದ್ಧೂಳಿತಸರ್ವಾಂಗಸ್ತ್ರಿಪುಂಡ್ರಾಂಕಿತಮಸ್ತಕಃ ॥೧೩॥

ರುದ್ರಾಕ್ಷಮಾಲಾಭರಣೋ ಯುವಾ ಸುಂದರವಿಗ್ರಹಃ ।
ತಂ ದೃಷ್ಟ್ವಾ ಪ್ರಾಹ ಸಾ ನಾರೀ ಕೋಽಸಿ ಕಸ್ಮಾದುಪಾಗತಃ ॥೧೪॥

ಕಿಂ ಕುಲಂ ಕಃ ಪಿತಾ ಕಾ ವಾ ತವ ಮಾತಾ ನರೋತ್ತಮ ।
ಪರಿಗ್ರಹೋಽಸ್ತಿ ತೇ ಕಿಂ ವಾ ನಾರೀ ಕುತ್ರ ತವಾಧುನಾ ॥೧೫॥

ಇತಿ ತದ್ವಚನಂ ಶ್ರುತ್ವಾ ದೃಷ್ಟ್ವಾ ತಾಮತಿಸುಂದರೀಂ ।
ಈಷನ್ನಮ್ರಾನನಃ ಪ್ರಾಹ ವಿನಯೇನಾತಿವಿಸ್ಮಿತಃ ॥೧೬॥

ಅಹಂ ರಾಜಕುಲೋತ್ಪನ್ನೋ ಮಾತಾ ಮೇ ವೀರಸೂಃ ಪಿತಾ ।
ಶೂರಸೇನ ಇತಿ ಖ್ಯಾತೋ ಭಾರ್ಯಾ ಕಮಲಲೋಚನಾ ॥೧೭॥

---

ಅಲ್ಲಿಯೇ ಒಬ್ಬ ಶಿವಪೂಜಕನು ಆ ಲಿಂಗಕ್ಕೆ ಪೂಜೆಮಾಡುತ್ತಾ ಇರುವುದನ್ನೂ ಆಕೆಯು ನೋಡಿದಳು. ಆ ಶಿವಭಕ್ತನು ಮೈಗೆಲ್ಲಾ ಭಸ್ಮವನ್ನು ಹಚ್ಚಿದ್ದನಲ್ಲದೇ ಹಣೆಯಲ್ಲಿ ತ್ರಿಪುಂಡ್ರಾಕಾರವಾಗಿಯೂ ಭಸ್ಮವನ್ನಿಟ್ಟುಕೊಂಡಿದ್ದನು. ॥೧೩॥

ಆ ಶೈವನು ರುದ್ರಾಕ್ಷಮಾಲಿಕೆಗಳನ್ನೂ ಅಲಂಕರಿಸಿಕೊಂಡಿದ್ದನು. ಅಲ್ಲದೆ ಶೈವನು ಸ್ವಾಭಾವಿಕವಾಗಿಯೇ ಸುಂದರನೂ ಯುವಕನೂ ಆಗಿದ್ದನು. ಆತನನ್ನು ನೋಡಿ ಯುವತಿಯು "ನೀನು ಯಾರು? ಎಲ್ಲಿಂದ ಬಂದಿದ್ದೀಯೆ? ॥೧೪॥

ಎಲೈ ಸುಂದರನೇ, ನಿನ್ನ ವಂಶವಾವುದು? ನಿನಗೆ ತಂದೆತಾಯಿಗಳಿದ್ದಾರೆಯೇ? ಅವರು ಯಾರು? ನಿನಗೆ ಮದುವೆ ಆಗಿದೆಯೇ? ಹಾಗಿದ್ದರೆ ಈಗ ನಿನ್ನ ಪತ್ನಿಯು ಎಲ್ಲಿರುವಳು? ನೀನೇನೋ ನೋಡುವುದಕ್ಕೆ ಉತ್ತಮನಂತೆ ತೋರುತ್ತಿದ್ದೀಯೆ" ಎಂದು ಕೇಳಿದಳು. ॥೧೫॥

ಈಕೆಯ ಮಾತನ್ನು ಕೇಳಿ ಆ ಶೈವನು ಅಕಸ್ಮಾತ್ ತನ್ನನ್ನು ಯಾರು ಮಾತನಾಡಿಸಿದರೆಂದು ಆಕಡೆ ನೋಡಿ, ಅತಿ ಸುಂದರಿಯಾದ ಆ ಸ್ತ್ರೀಯನ್ನು ಕಾಣುತ್ತಾ ವಿಸ್ಮಯವನ್ನು ಹೊಂದಿದವನಲ್ಲದೇ, ವಿನಯದಿಂದ ಸ್ವಲ್ಪ ತಲೆಬಾಗಿ ಹೀಗೆ ಉತ್ತರವಿತ್ತನು. ॥೧೬॥

"ಎಲೈ ವನಿತೆಯೇ, ನನ್ನ ವಂಶವು ಕ್ಷತ್ರಿಯರದಾಗಿರುತ್ತದೆ. ನಾನು ಕ್ಷತ್ರಿಯನು. ನನ್ನ ತಾಯಿಯ ಹೆಸರು ವೀರಮಾತೆ ಎಂದು. ಅಂದರೆ ವೀರರಾದ

ಭಾಗ್ಯಂ ಚ ಮಹದೇವಾಸ್ತಿ ಗಜಾಶ್ವರಥಸಂಕುಲಂ ।
ಗವಾಂ ಚ ಕೋಟಯಸ್ಸಂತಿ ರತ್ನಾಗಾರಾಶ್ಚ ಕೋಟಿಶಃ ॥೧೮॥

ಸುವರ್ಣಸ್ಯ ಚ ನಾಂತೋಽಸ್ತಿ ಮಂದಿರೇಷು ತದೇವ ಮೇ ।
ಮಂದಿರಾಣಿ ಸುವರ್ಣಾನಾಂ ರತ್ನಾನಾಮಪಿ ಕಾನಿಚಿತ್ ॥೧೯॥

ಇತಿ ತದ್ವಚನಂ ಶ್ರುತ್ವಾ ತಮುವಾಚ ನೃಪಾಂಗನಾ ।
ಕಿಮೇವಮಾಗತೋಽತ್ರಾಪಿ ಕಿಮೇಕಾಕೀ ಭವಾನಿಹ ॥೨೦॥

ಪರರಾಷ್ಟ್ರೇ ಕಿಮಾಗತ್ಯ ಸ್ವಬಂಧುಜನವರ್ಜಿತಃ ।
ಭೃತ್ಯವರ್ಗೈಶ್ಚ ರಹಿತಸ್ತಪಸ್ವೀವಾಧಿತಿಷ್ಠಸಿ ॥೨೧॥

ವೈರಾಗ್ಯೇ ತವ ಕಿಂ ಬೀಜಂ ಮಹದೈಶ್ವರ್ಯಸಂಯುತಃ ।
ಭುಂಕ್ಷ್ವ ಭೋಗಾನ್ ಯಥಾಕಾಮಂ ತರುಣೀಂ ರಮಣೀಂ ವ್ರಜ ॥೨೨॥

---

ಪುತ್ರರನ್ನು ಪಡೆದಳು. ತಂದೆಯ ಹೆಸರು ಶೂರಸೇನ ಎಂದು ಪ್ರಸಿದ್ಧವಾಗಿದೆ. ನನ್ನ ಹೆಂಡತಿಯ ಹೆಸರು ಕಮಲಲೋಚನೆ. ॥೧೭॥

ನನಗೆ ಸಂಪತ್ತು ಏನೂ ಕಡಮೆ ಇಲ್ಲ. ಐಶ್ವರ್ಯವು ಬೇಕಾದಷ್ಟಿದೆ. ಆನೆ ಕುದುರೆ, ರಥ, ಗೋವುಗಳು ಕೋಟ್ಯಂತರ ಇರುವುವಲ್ಲದೇ ರತ್ನಮಯಗಳೇ ಆದ ಅನೇಕ ಅರಮನೆಗಳೂ ನನಗಿವೆ. ॥೧೮॥

ನನ್ನ ಅರಮನೆಯಲ್ಲಿ ಸುವರ್ಣಗಳಿಗೂ, ರತ್ನವೈಡೂರ್ಯಗಳಿಗೂ ಅಂತ್ಯವೇ ಇಲ್ಲ. ಅನೇಕ ಮನೆಗಳು ಸಾಕ್ಷಾತ್ ಸುವರ್ಣಮಯಗಳೂ ರತ್ನಮಯಗಳೂ ಆಗಿವೆ" ಎಂದನು. ॥೧೯॥

ಆತನ ಮಾತನ್ನು ಕೇಳಿ ಆ ರಾಜವನಿತೆಯು ಮತ್ತೆ ಹೀಗೆ ಪ್ರಶ್ನಿಸಿದಳು. "ಎಲೈ ಸುಂದರನೇ! ನೀನು ಇಲ್ಲಿಗೆ ಏತಕ್ಕೆ ಬಂದಿದ್ದೀಯೆ? ॥೨೦॥

ನೀನು ಸಕಲ ಬಂಧುಗಳನ್ನೂ, ಪರಿಜನವನ್ನೂ ಬಿಟ್ಟು ಏಕೆ ಪರದೇಶಕ್ಕೆ ಬಂದಿದ್ದೀಯೆ? ಇಲ್ಲಿ ತಪಸ್ವಿಯಂತೆ ಏಕೆ ಒಂಟಿಯಾಗಿದ್ದೀಯೆ? ॥೨೧॥

ಅಷ್ಟು ಐಶ್ವರ್ಯವಿದ್ದರೂ ನೀನು ಏಕೆ ಸುಖಪಡುವುದಿಲ್ಲ? ನಿನಗೆ ಈರೀತಿ ವೈರಾಗ್ಯ ವುಂಟಾಗಲು ಏನು ಕಾರಣ? ಈಗ ನೀನು ಮನಸ್ಸಿಗೆ ಬಂದಂತೆ ಭೋಗ ವಿಲಾಸಗಳನ್ನು ಅನುಭವಿಸಬ ಹುದಲ್ಲ! ಸುಂದರಿಯಾದ ಯುವತಿಯರನ್ನು ಏತಕ್ಕಾಗಿ ಬಿಟ್ಟಿರುವೆ? ॥೨೨॥

ಅನಿತ್ಯಂ ಯೌವನಂ ನೂನಂ ವಾರ್ಧಕೇ ಸಮುಪಾಗತೇ ।
ಕಥಂ ತೇ ತರುಣೀಯೋಗಸ್ತಾರುಣ್ಯಧನಸಂಕ್ಷಯೇ ॥೨೩॥

ಕಿಂ ಚ ಸೌಂದರ್ಯಮೇತಾವದ್ಯೌವನಂ ಚಾತಿಶೋಭನಂ ।
ದುರ್ಲಭಂ ಮದನಸ್ಯೇದಮುಪರಂ ರೂಪಮುತ್ತಮಂ ॥೨೪॥

ಯದ್ವಾ ಮದನ ಏವಾಸಿ ಸೌಂದರ್ಯಮಿದಮೀದೃಶಂ ।
ದುರ್ಲಭಂ ಭೂತಲೇ ಮನ್ಯೇ ಕಾಂತಿಶ್ಚಾತ್ಯಂತಮುತ್ತಮಾ ॥೨೫॥

ಸೌಂದರ್ಯಂ ಯೌವನಂ ಕಾಂತಿರುನ್ಮಾದನಿಧಿರೇವ ಹಿ ।
ಪ್ರತ್ಯೇಕಮೇವ ಮಿಲಿತಾಸ್ತ್ರಯೋ ಲೋಕೋತ್ತರಾಃ ಖಲು ॥೨೬॥

---

ಯೌವನವು ಶಾಶ್ವತವಾಗಿ ಇರಲಾರದು. ಮುಪ್ಪು ಬಂದಮೇಲೆ ಯಾವ ಇಂದ್ರಿಯಗಳ ಬಲವೂ ಇರುವುದಿಲ್ಲ. ಆಗ ನಿನಗೆ ಸ್ತ್ರೀಸುಖವು ಹೇಗೆ ಉಂಟಾದೀತು? ಈ ಅಮೂಲ್ಯವಾದ ತಾರುಣ್ಯವು ಕಳೆದುಹೋದ ಮೇಲೆ ನೀನು ಹೇಗೆ ಸುಖಪಡುವೆ? ||೨೩||

ಅಲ್ಲದೇ ನಿನ್ನಲ್ಲಿ ಸೌಂದರ್ಯವೂ ಬೇಕಾದಷ್ಟಿದೆ. ಅತ್ಯಂತ ಚಾರುತರವಾದ ಯೌವನವೂ ಈಗ ಸಿದ್ಧವಾಗಿರುತ್ತದೆ. ನಿನ್ನ ರೂಪುಗುಣಗಳೂ ಅತ್ಯಂತ ಶ್ಲಾಘ್ಯವಾಗಿವೆ. ಇಷ್ಟು ಗುಣಗಳು ಬಹುಶಃ ಮನ್ಮಥನಿಗೂ ಇರಲಾರವು. ಇಂತಹ ಅಮೋಘವಾದ ತಾರುಣ್ಯವನ್ನು ಸುಖಾನುಭವದಿಂದ ಸಾರ್ಥಕಗೊಳಿಸು. ||೨೪||

ಅಥವಾ ನೀನು ಸಾಕ್ಷಾತ್ ಮನ್ಮಥನೇ ಆಗಿರುವೆಯೋ? ಸಾಮಾನ್ಯ ಜನರಿಗೆ ಇಷ್ಟು ಸೌಂದರ್ಯವು ಎಲ್ಲಿ ಬಂದೀತು? ಈ ಲೋಕೋತ್ತರವಾದ ಸೌಂದರ್ಯವನ್ನು, ತಾರುಣ್ಯವನ್ನು ನೋಡಿದರೆ, ಮತ್ತು ನಿನ್ನ ಶರೀರಕಾಂತಿಯನ್ನು ನೋಡಿದರೆ ಸಾಕ್ಷಾತ್ ಮನ್ಮಥನಂತೆಯೇ ತೋರುತ್ತಿದ್ದೀಯೆ. ||೨೫||

ಈ ಸೌಂದರ್ಯ, ಯೌವನ ಅಥವಾ ಈ ದೇಹಕಾಂತಿ ಇವುಗಳಲ್ಲಿ ಒಂದೊಂದು ಇದ್ದರೇ ಅತ್ಯಂತ ಉನ್ಮಾದವು ಉಂಟಾಗುವುದು. ಅಂದಮೇಲೆ ಈ ಮೂರೂ ಸೇರಿದರೆ ಇನ್ನೆಷ್ಟು ಉನ್ಮತ್ತತೆಯು ಬಂದೀತು? ಇಂಥ ಸುಸಂಧಿಯು ಲೋಕೋತ್ತರವಾಗಿರುತ್ತದೆಯಷ್ಟೆ! ಹೀಗಿದ್ದರೂ ನೀನು ಏಕೆ ಉದಾಸೀನನಾಗಿದ್ದೀಯೆ? ||೨೬||

ಕೇನ ವಾ ಸಂಗಮೋ ಜಾತಸ್ತವ ರಾಜಕುಲೋದ್ಭವ ।
ವಂಚಿತೋಽಸಿ ನ ಸಂದೇಹಃ ಶಿಕ್ಷಕಸ್ತೇ ನ ತೇ ಖಲು ॥೨೭॥

ಪಿತ್ರಾ ವಿರೋಧಃ ಕಿಂ ಜಾತಸ್ತವ ಮಾತ್ರಾ ವದಾಧುನಾ ।
ಯದ್ವಾ ಕಲತ್ರಕಲಹಃ ಪ್ರವೃತ್ತಸ್ತವ ವೇಶ್ಮನಿ ॥೨೮॥

ತತ್ರ ಚೇತ್ಕಲಹೋ ವೃತ್ತಸ್ತತ್ಯಾಗಂ ಕುರು ಕಿಂ ತತಃ ।
ಮಯಾ ಸಹಾತ್ರ ವಸತೋ ಸೌಭಾಗ್ಯಂ ಚ ಭವಿಷ್ಯತಿ ॥೨೯॥

ನಾರೀರತ್ನಮಿತಿ ಖ್ಯಾತಂ ಮಮ ನಾಮ ನೃಪೋತ್ತಮ ।
ಮಯಾ ಸಹಾತ್ರ ಸಂಗೇನ ದಿನಾನಿ ನಯ ಸಾದರಂ ॥೩೦॥

---

ಎಲೈ ರಾಜಕುಮಾರನೇ! ನಿನ್ನ ಸಂಗಡಿಗನು ಯಾರು? ನಿನ್ನ ಹಿತ ಚಿಂತಕರು ಯಾರು? ಈ ರೀತಿ ನಿನಗೆ ವೈರಾಗ್ಯವನ್ನು ಬೋಧಿಸಿದರು? ಅವರು ಖಂಡಿತವಾಗಿಯೂ ನಿನಗೆ ಈ ರೀತಿ ಬೋಧನೆಮಾಡಿ ನಿನ್ನನ್ನು ಮೋಸಗೊಳಿಸಿರುವರು. ನೀನು ಮೋಸಹೋಗಿದ್ದೀಯೆ. ॥೨೭॥

ಅಥವಾ ಮನೆಯಲ್ಲಿ ತಂದೆಯೊಡನೆಯೋ ತಾಯಿಯೊಡನೆಯೋ ಜಗಳವಾಗಿರುವುದೇ? ಅಥವಾ ಹೆಂಡತಿಯ ಸಂಗಡವೇನಾದರೂ ಕಲಹವುಂಟಾಯಿತೇ? ಏಕೆ ಹೆಂಡತಿಯನ್ನು ಬಿಟ್ಟು ಇಲ್ಲಿಗೆ ಒಂಟಿಯಾಗಿ ಬಂದಿದ್ದೀಯೆ? ॥೨೮॥

ಹಾಗೆಲ್ಲಿಯಾದರೂ ಹೆಂಡತಿಯೊಡನೆ ಜಗಳವಾಡಿಕೊಂಡು ನೀನು ಇಲ್ಲಿಗೆ ಬಂದಿದ್ದರೆ ನೀನು ಆಕೆಯನ್ನು ಬಿಟ್ಟೇಬಿಡು. ಅವಳನ್ನು ಕಟ್ಟಿಕೊಂಡು ನಿನಗೆ ಆಗಬೇಕಾದುದೇನು? ಇದೋ ನಿನ್ನೊಡನೆ ಸೇರಿಕೊಳ್ಳಲು ನಾನು ಸಿದ್ಧಳಾಗಿರುವೆನು. ನನ್ನೊಡನೆ ಇಲ್ಲಿಯೇ ಸುಖವಾಗಿ ವಾಸಮಾಡು. ಇಲ್ಲಿ ನಿನಗೆ ಬೇಕಾದಷ್ಟು ಸುಖವುಂಟಾಗುವುದು. ನಿನಗೆ ತೃಪ್ತಿಯಾಗುವಂತೆ ನಾನು ಎಲ್ಲವನ್ನೂ ಏರ್ಪಡಿಸಿಕೊಡುತ್ತೇನೆ. ॥೨೯॥

ಎಲೈ ರಾಜೋತ್ತಮನೇ! ನನ್ನನ್ನು ಪರಕೀಯಳೆಂದು ತಿಳಿಯಬೇಡ. ನಾನು ನಿನ್ನವಳಾಗಿ ನಿನ್ನ ಸುಖಕ್ಕಾಗಿಯೇ ವರ್ತಿಸುತ್ತೇನೆ. ನನ್ನ ಹೆಸರು ನಾರೀರತ್ನ ಎಂದು. ನನ್ನೊಡನೆ ಇಲ್ಲಿಯೇ ಬೇಕಾದಷ್ಟು ದಿನ ಸುಖವಾಗಿ ವಾಸಮಾಡಿಕೊಂಡಿರು. ॥೩೦॥

ತ್ವದಧೀನಮಿದಂ ರಾಜ್ಯಂ ಪ್ರಾಜ್ಯಮದ್ಯ ಭವಿಷ್ಯತಿ ।
ಮದ್ಭರ್ತ್ರಾ ಸಹ ಸಂಗೋಽಪಿ ಮಯಾ ತ್ಯಕ್ತೋ ನೃಪೋತ್ತಮ ॥೩೦॥

ಮತ್ಪರಿಗ್ರಹಮಾತ್ರೇಣ ತವ ಸೌಖ್ಯಂ ಭವಿಷ್ಯತಿ ।
ವಿಷದಾನೇನ ಭರ್ತಾಪಿ ಹಂತವ್ಯೋ ನಿಶಿ ಸತ್ವರಂ ॥೩೧॥

ಏತದ್ರಾಷ್ಟ್ರಾಧಿಪತ್ಯಂ ಚ ದೇಯಂ ತುಭ್ಯಮಸಂಶಯಂ ।
ಚಂದ್ರಮಂಡಲಸಂಕಾಶಾಃ ಶಯ್ಯಾಸ್ಸಂತಿ ಮನೋಹರಾಃ ॥೩೨॥

ಔಷಧಂ ಚ ಗೃಹೇ ಸಿದ್ಧಂ ಮದನೋನ್ಮಾದಸಾಧಕಂ ।
ಭಕ್ಷ್ಯಭೋಜ್ಯಾದಯಸ್ಸರ್ವೇ ಪದಾರ್ಥಾಸ್ಸಂತಿ ಕೋಟಿಶಃ ॥೩೪॥

---

ನಾನು ನನ್ನ ಗಂಡನ ಸಹವಾಸವನ್ನೇ ಬಿಟ್ಟು ಬಿಟ್ಟಿದ್ದೇನೆ. ಆತನು ನನ್ನನ್ನು ಮೆಚ್ಚುವುದಿಲ್ಲ. ಆತನನ್ನು ನಾನು ಪ್ರೀತಿಸುವುದೂ ಇಲ್ಲ. ಈಗ ಈ ರಾಜ್ಯವನ್ನು ಅವನಿಗೆ ತಪ್ಪಿಸಿ ನಿನ್ನ ಅಧೀನವನ್ನಾಗಿಯೇ ಮಾಡುತ್ತೇನೆ. ನೀನು ರಾಜನಾದರೆ ಈ ರಾಜ್ಯವು ಮಹಾ ವೈಭವಯುಕ್ತವಾದೀತು. ಇದಕ್ಕೆ ನೀನೇ ರಾಜನಾಗುವಂತೆ ನಾನು ಎಲ್ಲಾ ಏರ್ಪಾಟನ್ನೂ ಮಾಡುತ್ತೇನೆ. ॥೩೦॥

ನೀನು ನನ್ನನ್ನು ಸ್ವೀಕರಿಸಿ ನನ್ನ ಒಡನಾಡಿಯಾದ ಮಾತ್ರದಿಂದಲೇ ನಿನಗೆ ಅನಂತ ಸುಖವು ಲಭಿಸುವುದು. ನೀನು ಏನೂ ಯೋಚನೆ ಮಾಡಬೇಕಾಗಿಲ್ಲ. ನನ್ನ ಗಂಡನನ್ನು ರಹಸ್ಯವಾಗಿ ವಿಷಪಾನ ಮಾಡಿಸಿ ಕೊಲ್ಲಿಸಿದರೆ ನಮ್ಮ ಮಾರ್ಗವು ಸುಗಮವಾಗುವುದು. ಹಾಗೆಯೇ ಮಾಡುವೆನು. ॥೩೧॥

ನಾನು ಖಂಡಿತವಾಗಿಯೂ ಈ ರಾಜ್ಯವನ್ನು ನಿನಗೇ ಕೊಡಿಸುವೆನು. ನಿನ್ನನ್ನು ಇಲ್ಲಿಗೆ ಅಧಿಪತಿಯನ್ನಾಗಿ ಮಾಡಲು ನನಗೆ ಸಾಮರ್ಥ್ಯವಿದೆ. ನೀನು ನಿರ್ಯೋಚನೆಯಿಂದ ನನ್ನನ್ನು ಪರಿಗ್ರಹಿಸು. ಇದೋ, ಇಲ್ಲಿ ಬೇಕಾದಷ್ಟು ಭೋಗಸಾಮಗ್ರಿಗಳು ಸಿದ್ಧವಾಗಿವೆ. ಚಂದ್ರನಂತೆ ಧವಳವಾದ ಅನೇಕ ಸುಪ್ಪತ್ತಿಗೆಗಳು ನಿನ್ನ ವಿಹಾರಕ್ಕೆ ಸಿದ್ಧವಾಗಿವೆ. ॥೩೨॥

ಮೈಗೆ ಶಕ್ತಿತರಿಸಬಲ್ಲ ಮತ್ತು ಕಾಮೋದ್ರೇಕಗೊಳಿಸುವ ದಿವ್ಯೌಷಧಗಳು ಮನೆಯಲ್ಲಿ ಬೇಕಾದಷ್ಟು ಇವೆ. ಶರೀರ ಪೋಷಕವಾದ ಭಕ್ಷ್ಯಭೋಜ್ಯಾದಿಗಳು ಮತ್ತು ರಸಭರಿತವಾದ ಅನೇಕ ಪದಾರ್ಥಗಳೂ ಇಲ್ಲಿಯೇ ಕಾಣುತ್ತಿವೆ. ಇವುಗಳೆಲ್ಲವನ್ನೂ ನೀನು ಭೋಗಿಸು. ॥೩೪॥

ರತ್ನಮಂದಿರಮೇವಾಸ್ತಿ ಶಯನಾರ್ಥಮನುತ್ತಮಂ ।
ರತ್ನಜಾಲಸಮಾಕೀರ್ಣಂ ಕಸ್ತೂರೀಗಂಧವೇಷ್ಟಿತಂ ॥೩೫॥

ದಿವ್ಯೈಃ ಪರಿಮಳದ್ರವ್ಯೈರಪಾರೈಃ ಪರಿವೇಷ್ಟಿತಂ ।
ದಾಸೀಜನಾಶ್ಚ ಬಹವೋ ದಾಸಾಸ್ಸಂತ್ಯೇವ ಕೋಟಿಶಃ ॥೩೬॥

ಅಪೇಕ್ಷಿತಂ ಯದ್ಯದೇವ ತತ್ಸರ್ವಮಪಿ ದೀಯತೇ ।
ಅಹಮೇವ ತ್ವದೀಯಾಸ್ಮಿ ತವ ಕಿಂ ದುರ್ಲಭಂ ನೃಪ ॥೩೭॥

ವ್ಯಾಘ್ರೀದುಗ್ಧಂ ಗೃಹೇ ಸಿದ್ಧಂ ಅಪಾರಂ ತಸ್ಯ ಸೇವನಾತ್ ।
ಸರ್ವದಾ ರಮಣೀಭೋಗೇ ಶ್ರಮಸ್ತೇ ನ ಭವಿಷ್ಯತಿ ॥೩೮॥

---

ನಿನಗೆ ಸ್ವಚ್ಛಂದವಾಗಿ ಮಲಗುವುದಕ್ಕೂ ಕೂರುವುದಕ್ಕೂ ಪ್ರಶಸ್ತವಾದ ರತ್ನಮಯವಾದ ಅರಮನೆಗಳಿವೆ. ಅಲ್ಲಿ ಅನೇಕ ವೈಭವವಸ್ತುಗಳು ಇರುತ್ತವೆ. ರತ್ನಜಾಲಗಳೂ ಮಣಿಜಾಲಗಳೂ ಅಲಂಕೃತವಾಗಿರುತ್ತವೆ. ಕಸ್ತೂರಿಯೇ ಮೊದಲಾದ ಸುಗಂಧ ದ್ರವ್ಯಗಳು ಅಪಾರವಾಗಿವೆ. ಭೋಗವಿಲಾಸಕ್ಕೆ ಯಾವುದು ಬೇಕೆಂದರೆ ಅವು ಎಲ್ಲವೂ ಸಿದ್ಧವಿರುತ್ತವೆ. ||೩೫||

ಲೋಕೋತ್ತರಗಳಾದ ಪರಿಮಳದ್ರವ್ಯಗಳೂ ವಸ್ತ್ರಾಭರಣಗಳೂ ಸಮೃದ್ಧವಾಗಿವೆ. ನಿನ್ನ ಸೇವೆಗೆ ಸ್ತ್ರೀಯರನ್ನೇ ನಿಯಮಿಸುತ್ತೇನೆ. ನಿನ್ನ ಉಪಚಾರಕ್ಕೆ ದಾಸರೂ ಬೇಕಾದಷ್ಟು ಮಂದಿ ಸಿದ್ಧವಾಗಿರುತ್ತಾರೆ. ನಿನಗೆ ಯಾವುದಕ್ಕೂ ಕೊರತೆಯನ್ನುಂಟುಮಾಡುವುದಿಲ್ಲ. ||೩೬||

ನಿನಗೆ ಎಷ್ಟು ·ಹೊತ್ತಿಗೆ ಏನು ಬೇಕೆಂದರೆ ಅದು ಸರ್ವವೂ ಸಿದ್ಧವಾಗಿರುತ್ತದೆ. ನಿನಗೆ ಎಲ್ಲವನ್ನೂ ನಾನು ಹೊಂದಿಸಿ ಕೊಡುತ್ತೇನೆ. ಹೆಚ್ಚು ಹೇಳುವುದೇನು ? ಎಲೈ ರಾಜನೇ ! ನಾನೇ ನಿನ್ನವಳಾಗಿರುತ್ತೇನೆ. ನಿನ್ನ ಯಾವತ್ತು ಸುಖಸಾಮಗ್ರಿಗಳನ್ನು ನಾನೇ ಸಿದ್ಧಪಡಿಸುತ್ತಾ ನಿನ್ನೊಡನಿರಲು ನಿನಗೆ ಯಾವುದಕ್ಕೆ ತಾನೆ ಕೊರತೆಯಾದೀತು ? ||೩೭||

ಹುಲಿತುಪ್ಪವು ಸಿದ್ಧವಾಗಿದೆ. ಅದನ್ನು ಸೇವಿಸಿದರೆ ಎಷ್ಟೇ ಸ್ತ್ರೀಸಂಭೋಗ ಮಾಡಿದರೂ ಆಯಾಸವಾಗುವುದಿಲ್ಲ. ಅಂಥ ಹುಲಿತುಪ್ಪವನ್ನು ನೀನು ಸೇವಿಸಿ ಎಷ್ಟು ಬೇಕಾದರೂ ತರುಣಿಯರೊಡನೆ ಭೋಗವಿಲಾಸ ಮಾಡುತ್ತಾ ಆನಂದಪಡು. ||೩೮||

**ಕುಸುಮಾನಿ ವಿಚಿತ್ರಾಣಿ ಕೋಟಿಶಸ್ಸಂತಿ ಮೇ ವನೇ ।**
**ಇದಂ ವನಂ ಮನ್ಮನಾತ್ರ ಪಟಮಂಡಪಮಂಡಿತಂ ॥೩೯॥**

**ದುಕೂಲಶಯ್ಯಾ ರಚಿತಾ ಪುಷ್ಪಶಯ್ಯಾಸಮನ್ವಿತಾ ।**
**ರಸದ್ರವ್ಯಾಣಿ ದಿವ್ಯಾನಿ ಸಂತ್ಯತ್ರ ಪಟಮಂಟಪೇ ॥೪೦॥**

**ಅತಃ ಪರಂ ವಿಲಂಬಸ್ಯ ನ ಕಾರ್ಯಮಪಿ ದೃಶ್ಯತೇ ।**
**ನ ಚಾತ್ರ ಭಯಲೇಶೋಽಪಿ ಮಯಾ ಸಹ ಸಮಾಗಮೇ ॥೪೧॥**

**ಪುರುಷಾಣಾಂ ಪ್ರವೇಶೋತ್ರ ನಾಸ್ತಿ ಸರ್ವಾತ್ಮನಾ ನೃಪ ।**
**ನಾರೀವರಗಣೈರೇತದುದ್ಯಾನಂ ಪರಿರಕ್ಷಿತಂ ॥೪೨॥**

---

ಹೂವೂ, ಹೂವಿನ ಹಾರತುರಾಯಿಗಳೂ, ಬೇಕಾದಷ್ಟು ಸಿದ್ಧವಾಗಿರುತ್ತವೆ. ಇದೋ ನೋಡು, ಈ ಉದ್ಯಾನವು ಎಷ್ಟು ರಮ್ಯವಾಗಿರುವುದು? ಇಲ್ಲಿ ಬೇಕಾದಷ್ಟು ವಸ್ತ್ರಾಗಾರಗಳೂ ಲತಾನಿಕುಂಜಗಳೂ ಇರುತ್ತವೆ. ಈ ಉದ್ಯಾನವು ನನ್ನದೇ ಆಗಿರುತ್ತದೆ. ಇಲ್ಲಿಯೇ ಸಮೃದ್ಧವಾಗಿ ಹೂಗಳು ದೊರೆಯುವುವು. ॥೩೯॥

ಇದೇ ಉದ್ಯಾನವನದ ಮಂಟಪದಲ್ಲಿ ದಿವ್ಯವಾದ ಸುಪ್ಪತ್ತಿಗೆಗಳೂ ಪುಷ್ಪಶಯನಗಳೂ ಸದಾ ಸಿದ್ಧವಾಗಿರುತ್ತವೆ. ಇಲ್ಲಿಯೇ ಅತ್ಯಂತ ಸ್ವಾದಿಷ್ಠವಾದ ಭಕ್ಷ್ಯಭೋಜ್ಯಗಳೂ ಸಿದ್ಧವಾಗಿವೆ. ಇವೆಲ್ಲವೂ ನಿನ್ನ ಸೇವೆಗಾಗಿಯೇ ಎಂದು ತಿಳಿ. ॥೪೦॥

ಇನ್ನು ಏತಕ್ಕೆ ತಡಮಾಡುವೆ? ನನ್ನೊಡನೆ ಬಂದು ಸುಖವಾಗಿರು. ಇಲ್ಲಿ ಯಾರದೂ ಭಯವಿರುವುದಿಲ್ಲ. ನೀನು ನನ್ನೊಡನೆ ವಿಹರಿಸಿದಮೇಲೆ ನಿನಗೆ ಯಾರಿಂದಲೂ ಏನೂ ತೊಂದರೆಯಾಗಲಾರದು. ನೀನು ಏನೂ ಸಂಶಯಪಡದೇ ನನ್ನನ್ನು ಪಡೆ. ॥೪೧॥

ಈ ನನ್ನ ಉದ್ಯಾನವನಕ್ಕೆ ಯಾವ ಪುರುಷನೂ ಪ್ರವೇಶಿಸಲಾರನು. ಸುತ್ತಲೂ ಸ್ತ್ರೀಜನರನ್ನೇ ಭದ್ರವಾಗಿ ಕಾವಲಿರಿಸಿದ್ದೇನೆ. ಇಲ್ಲಿ ನಡೆಯುವ ಯಾವ ಸಮಾಚಾರವೂ ಹೊರಗೆ ಇತರರಿಗೆ ತಿಳಿಯುವುದಿಲ್ಲ. ॥೪೨॥

ದಾಸ್ಯೋ ರಂಭಾನಿಭಾಸ್ಸಂತಿ ಕೋಟಿಶೋ ಮಮ ಭೂಪತೇ ।
ದಾಸ್ಯಂ ತಾಸ್ತೇ ಕರಿಷ್ಯಂತಿ ಕಾಲೇ ಕಾಲೇ ಯಥೋಚಿತಂ ॥೪೩॥

ಮಾಂ ಪಶ್ಯ ಸಾದರಂ ರಾಜನ್ನುನ್ನಮಯ್ಯ ಮುಖಂ ನೃಪ ।
ಅವಾಙ್ಮುಖತ್ವಂ ಸಂತ್ಯಜ್ಯ ರಸಿಕತ್ವಂ ಭಜಾಧುನಾ ॥೪೪॥

ಅತಿಸೌಂದರ್ಯಸಂಪನ್ನಾಮಿಂದಿರಾಪ್ಯಾದರೇಣ ಮಾಂ ।
ರಂಭಾದಿಭಿಸ್ಸಮಾಗತ್ಯ ಪಶ್ಯತ್ಯೇವ ಮುಹುರ್ಮುಹುಃ ॥೪೫॥

ದೇವಾನಾಮಪಿ ಮಯ್ಯೇವ ಮನಃ ಪ್ರಾಯೋ ನೃಪೋತ್ತಮ ।
ದೃಷ್ಟ್ವಾ ಮಾಂ ಪುರುಷಃ ಕೋ ವಾ ಮದಧೀನೋ ನ ಜಾಯತೇ ॥೪೬॥

---

ನನಗೆ ಅನೇಕ ಸಖಿಯರೂ ದಾಸಿಯರೂ ಇದ್ದಾರೆ. ಅವರೆಲ್ಲರೂ ಅಪ್ಸರಸ್ತ್ರೀ ರಂಭೆಯರಷ್ಟು ಸುಂದರಿಯರಾಗಿರುತ್ತಾರೆ. ಅವರೆಲ್ಲರನ್ನೂ ನಿನ್ನ ಸೇವೆಗೆ ನಿಯಮಿಸುವೆನು. ನಿನಗೆ ಯಾವಾಗ ಏನು ಬೇಕಾದರೂ ಅವರು ಒದಗಿಸುವರು. ಮತ್ತು ಅವರು ನಿನ್ನ ಸೇವೆಯನ್ನು ಮಾಡುವರು. ||೪೩||

ಎಲೈ ಸುಂದರಾಂಗನೇ! ಇನ್ನು ಸಂಕೋಚವನ್ನು ಬಿಟ್ಟುಬಿಡು. ಕತ್ತನ್ನೆತ್ತಿ ನನ್ನನ್ನು ಪ್ರೀತಿಯಿಂದ ನೋಡು. ಸಂಶಯವನ್ನೂ ಉದಾಸೀನತೆಯನ್ನೂ ಬಿಟ್ಟು ಈಗ ರಸಿಕನಾಗು. ಜೀವನದ ತಾರುಣ್ಯದ ಸೊಗಸನ್ನೂ, ರಸವನ್ನು ಅನುಭವಿಸು. ||೪೪||

ನಾನು ಅತ್ಯಂತ ಸುಂದರಿಯೂ ಯುವತಿಯೂ ಆಗಿದ್ದೇನೆ. ನನ್ನಷ್ಟು ರೂಪವತಿಯರು ಮತ್ತೆ ಯಾರೂ ಇರುವುದಿಲ್ಲ. ನನ್ನ ರೂಪದಲ್ಲಿ ಆದರದಿಂದ ಸಾಕ್ಷಾತ್ ಲಕ್ಷ್ಮಿಯೂ ಕೂಡ ಅಪ್ಸರಸ್ತ್ರೀಯರೊಂದಿಗೆ ಬಂದು ವಿಸ್ಮಯದಿಂದ ನೋಡುತ್ತಾಳೆ. ಅಸೂಯೆಪಡುತ್ತಾಳೆ. ||೪೫||

ಎಲೈ ಕೋಮಲಾಂಗನೇ! ನಾನೇನೂ ಸಾಮಾನ್ಯ ಸ್ತ್ರೀಯಲ್ಲ. ದೇವತೆಗಳ ಮನಸ್ಸೂ ಕೂಡ ಬಹುಶಃ ನನ್ನನ್ನು ಅಪೇಕ್ಷಿಸುತ್ತಿದೆ. ಅವರ ಕಣ್ಣು ನನ್ನ ಮೇಲೆಯೇ ಇರುತ್ತದೆ. ನಾನು ಅಷ್ಟು ಸುಂದರಿಯಾಗಿದ್ದೇನೆ. ನನ್ನನ್ನು ನೋಡಿದ ಮೇಲೆ ಯಾವ ಪುರುಷನು ತಾನೇ ನನ್ನ ಅಧೀನನಾಗುವುದಿಲ್ಲ? ||೪೬||

ಸ್ತ್ರೀಮಾತ್ರೇ ಪುರುಷಾಣಾಂ ತು ಪ್ರೀತಿಸ್ತಿಷ್ಠತಿ ಸರ್ವದಾ ।
ನಾರೀರತ್ನೇ ಮಯಿ ಪ್ರೀತಿಃ ಕಥಂ ವಾ ನ ಭವಿಷ್ಯತಿ ॥೪೭॥

ಯೌವನೇನಾಂಗಪುಷ್ಟಿರ್ಯಾ ಮಯಿ ಸಾ ನೃಪಸತ್ತಮ ।
ಸೌಂದರ್ಯಸಂಯುತಾ ಪುಂಸಾಂ ವಿನೋದಾಯ ಭವಿಷ್ಯತಿ ॥೪೮॥

ದೃಷ್ಟ್ವಾಹಂ ಸದದೃಷ್ಟೇನ ತ್ವಯಾಪಿ ನೃಪನಂದನ ।
ನಿತ್ಯಂ ಮದ್ದರ್ಶನಾಕಾಂಕ್ಷಾಂ ಕುರ್ವಂತ್ಯೇವಾಮರಾ ಅಪಿ ॥೪೯॥

ನೂನಂ ನಪುಂಸಕಸ್ಯಾಪಿ ಪುಂಸ್ತ್ವಂ ಮದ್ದರ್ಶನಾದ್ಭವೇತ್ ।
ಪಶ್ಯ ಪಶ್ಯ ಮದಂಗಾನಿ ಸುಂದರಾಣ್ಯತಿಸುಂದರ ॥೫೦॥

---

ಪುರುಷರು, ಸ್ತ್ರೀಸಾಮಾನ್ಯಳಾದ ಯಾವಳನ್ನೇ ನೋಡಲಿ ಆಕೆಯನ್ನು ಪ್ರೀತಿಸುತ್ತಾರೆ. ಮತ್ತು ಮುಗ್ಧರಾಗುತ್ತಾರೆ. ಅಂದಮೇಲೆ ನಾನು ನಾರೀರತ್ನ ಳಾಗಿರಲು ನನ್ನ ಮೇಲೆ ಯಾರಿಗೆ ತಾನೇ ಪ್ರೀತಿಬರಲಾರದು? ಸರ್ವರೂ ನನ್ನನ್ನು ನೋಡಿದಕೂಡಲೇ ಮೋಹಿತರಾಗುವುದರಲ್ಲಿ ಸಂಶಯವಿಲ್ಲ. ॥೪೭॥

ಎಲೈ ಸುಂದರಾಂಗನೇ! ಇದೋ ನೋಡು. ನನ್ನ ಅವಯವಗಳು ಎಷ್ಟು ಪುಷ್ಟಗಳಾಗಿವೆ? ಮತ್ತು ನೋಡು. ನನ್ನ ಶರೀರವು ಎಷ್ಟು ಸುಂದರವಾಗಿದೆ? ನನ್ನಲ್ಲಿ ಅಪೂರ್ವವಾದ ಯೌವನದ ಕಾಂತಿಯು ಎದ್ದು ತೋರುತ್ತಿದೆ. ಅಲ್ಲವೇ? ನಿಜವಾಗಿಯೂ ಪುರುಷನೇ ಆಗಿದ್ದರೆ ನಿನಗೆ ವಿನೋದವಾಗುವುದು. ॥೪೮॥

ಎಲೈ ರಾಜಕುಮಾರನೇ! ನೀನು ಇಂದು ನನ್ನನ್ನು ನೋಡಲು ಒಳ್ಳೇ ಸುಕೃತಮಾಡಿದ್ದೆ. ನಿನ್ನ ಪುಣ್ಯದಿಂದ ನನ್ನನ್ನು ನೋಡಿರುವೆ. ಕೂಡಲೇ ನನ್ನನ್ನು ಪರಿಗ್ರಹಿಸು. ದೇವತೆಗಳೂ ಸಹ ಅತ್ಯಂತ ಸುಂದರಿಯಾದ ನನ್ನನ್ನು ನೋಡ ಬೇಕೆಂದು ಖಂಡಿತ ತವಕಪಡುತ್ತಿರಬಹುದು. ॥೪೯॥

ಸುಂದರಾಂಗನೇ, ಇದೋ ನನ್ನ ಒಂದೊಂದು ಅವಯವವನ್ನೂ ನೋಡು. ಎಷ್ಟು ಲಾವಣ್ಯಯುಕ್ತವೂ ಕಾಂತಿಯುಕ್ತವೂ ಆಗಿರುವುದೆಂಬುದನ್ನು ನೋಡಿ ಆನಂದ ಪಡು. ಅತ್ಯಂತ ಸುಂದರಿಯಾದ ನನ್ನನ್ನು ನೋಡಿದರೆ ಬಹುಶಃ ನಪುಂಸ ಕನಿಗೂ ಪುಂಸ್ತ್ವಬರಬಹುದು, ಕಾಮೋದ್ರೇಕವಾದೀತು. ॥೫೦॥

ಸೌಂದರ್ಯಧನಸಂಪನ್ನಸ್ತ್ವಮಹಂ ತದ್ಧನಂ ಪರಂ ।
ದೃಷ್ಟ್ವಾ ತ್ವದೀಯತಾಂ ಪ್ರಾಪ್ತಾ ತದ್ಧನಂ ದುರ್ಲಭಂ ಯತಃ ॥೫೧॥

ನಾರೀಣಾಂ ಧನಲೋಭೇನ ಪ್ರವೃತ್ತಿಃ ಪುರುಷೇಷ್ವತಃ ।
ಇದಂ ಧನಂ ಪರಿತ್ಯಜ್ಯ ನ ಭವತ್ಯೇವ ನೋ ನೃಪ ॥೫೨॥

ಕುರೂಪೇಷ್ವಪಿ ನಾರೀಣಾಂ ಹಿರಣ್ಯಾಯ ಪ್ರವರ್ತನಂ ।
ರೂಪವಂತಂ ಪರಿತ್ಯಜ್ಯ ಕುತ್ಸಿತಾನಾಂ ಸ್ವಭಾವತಃ ॥೫೩॥

ಪರಮೈಶ್ವರ್ಯಸಂಪನ್ನಾಃ ಸ್ವರ್ಣಾಗಾರಾಶ್ಚ ಕೋಟಿಶಃ ।
ಮಮ ಸ್ವರ್ಣೇಷು ರತ್ನೇಷು ನಾಕಾಂಕ್ಷಾ ಸರ್ವಥಾ ನೃಪ ॥೫೪॥

---

ಎಲೈ ಮೋಹನಾಂಗನೆ! ನಿನ್ನನ್ನು ನೋಡಿ ನಾನು ಅತ್ಯಂತ ಮುಗ್ಧಳಾಗಿದ್ದೇನೆ. ನಿನ್ನಷ್ಟು ಸುಂದರನನ್ನು ಎಲ್ಲಿಯೂ ಕಂಡಿಲ್ಲ. ನಿನ್ನಲ್ಲಿ ಸೌಂದರ್ಯವೂ ಯೌವನವೂ ಧನದಂತೆ ಸಮೃದ್ಧವಾಗಿರುತ್ತದೆ. ಪುರುಷನ ಸೌಂದರ್ಯವನ್ನೂ ಯೌವನವನ್ನೂ ಕಂಡರೆ ನನಗೆ ಬಹಳ ಪ್ರೀತಿ. ಆದ್ದರಿಂದಲೇ ನಿನ್ನನ್ನು ಕಂಡ ಕೂಡಲೇ ನಾನು ಸಂಪೂರ್ಣವಾಗಿ ನಿನ್ನವಳೇ ಆಗಿರುವೆನು. ||೫೧||

ಸ್ತ್ರೀಯರು ಸಾಮಾನ್ಯವಾಗಿ ಪುರುಷರಲ್ಲಿ ಧನವನ್ನು ಕಂಡಕೂಡಲೇ ಅವರಲ್ಲಿ ಮೋಹಿತರಾಗುವರು. ಈಗ ನಿನ್ನಲ್ಲಿ ಸಮೃದ್ಧವಾದ ಸೌಂದರ್ಯವಿದೆ. ನಾನು ಸೌಂದರ್ಯವನ್ನೇ ನಿಜವಾದ ಧನವೆಂದು ತಿಳಿದಿದ್ದೇನೆ. ಬೇರೆ ಧನದಲ್ಲಿ ನನಗೆ ಅಪೇಕ್ಷೆಯೇ ಇಲ್ಲ. ಬೇರೆಯದನ್ನು ನಾನು ಧನವೆಂತಲೇ ತಿಳಿಯುವುದಿಲ್ಲ. ಆದ್ದರಿಂದಲೇ ನಿನ್ನನ್ನು ಪ್ರೀತಿಸುವೆನು. ||೫೨||

ಕೇವಲ ನೀಚರಾದ ಸ್ತ್ರೀಯರು ಹಣದಾಸೆಯಿಂದ ರೂಪವಂತನಲ್ಲದಿದ್ದರೂ ಕುರೂಪಿಯಾಗಿದ್ದರೂ ಪುರುಷರನ್ನು ಪ್ರೀತಿಸುತ್ತಾರೆ. ಅವರನ್ನು ಪಡೆದು ಹಣವನ್ನು ಪಡೆಯುತ್ತಾರೆ. ಆದರೆ ನಮ್ಮಂತಹ ಉತ್ತಮ ಸ್ತ್ರೀಯರು ಎಂದೂ ಹಣದ ಮೇಲಿನ ಅಪೇಕ್ಷೆಯಿಂದ ಪ್ರೀತಿಸುವುದಿಲ್ಲ. ||೫೩||

ನನ್ನಲ್ಲಿ ಅತಿಶಯವಾದ ಸಂಪತ್ತು ಇದೆ. ಸ್ವರ್ಣಮಯವಾದ ಅರಮನೆಗಳೇ ನನಗಿವೆ. ಆದ್ದರಿಂದ ನಾನು ನಿನ್ನನ್ನು ಸ್ವರ್ಣದ ಅಥವಾ ರತ್ನದ ಮೇಲಿನ ಆಸೆಯಿಂದ ಪ್ರೀತಿಸುತ್ತೇನೆಂದು ತಿಳಿಯಬೇಡ. ||೫೪||

ತ್ವದೀಯಮತಿಸೌಂದರ್ಯಂ ಧನಾನಾಂ ಚ ಧನಂ ಸ್ಮಿಪ ।
ಇದಮಾಕಾಂಕ್ಷಿತಂ ನಿತ್ಯಂ ತ್ಯಕ್ತುಮೇವ ನ ಶಕ್ಯತೇ ॥೫೫॥

ತ್ವನ್ಮುಖಾಲೋಕನೇನೈವ ದೂರಾನ್ಮದನಮೋಹಿತಾ ।
ಅತಃ ಪರಂ ಸನ್ನಿಧಾನೇ ಕಥಂ ತ್ಯಾಜ್ಯೋ ಭವಾನ್ಮಯಾ ॥೫೬॥

ಯತ್ರ ಯತ್ರೈವ ಗಂತವ್ಯಂ ತ್ವಯಾ ತತ್ರ ನೃಪೋತ್ತಮ ।
ಆಗಂತವ್ಯಂ ನ ಸಂದೇಹಃ ಕಿಂ ತ್ಯಾಜ್ಯೋಽಸಿ ಭವಾನ್ಮಯಾ ॥೫೭॥

ಇತಿ ತದ್ವಚನಂ ಶ್ರುತ್ವಾ ಭಯೇನಾನತಕಂಧರಃ ।
ತಾಮಾಹ ನೃಪತಿರ್ಮಂದಂ ಸ್ಮರನ್ ದೇವಂ ಮಹೇಶ್ವರಂ ॥೫೮॥

---

ಇದೋ ನಿನ್ನ ಸೌಂದರ್ಯವೇ ನನಗೆ ಎಲ್ಲಕ್ಕಿಂತಲೂ ಮಿಗಿಲಾದ ಧನವು. ಈ ಸೌಂದರ್ಯಧನವನ್ನೇ ನಾನು ಸದಾ ಅಪೇಕ್ಷಿಸುತ್ತಿದ್ದುದು. ಇಂದು ನೀನು ನನಗೆ ಸಿಕ್ಕಿರುವೆ. ನಿನ್ನನ್ನು ಇನ್ನು ಬಿಟ್ಟಿರಲು ಸಾಧ್ಯವೇ ಇಲ್ಲ. ||೫೫||

ನಾನು ದೂರದಿಂದಲೇ ನಿನ್ನ ಸೌಂದರ್ಯವನ್ನೂ, ಸುಂದರವಾದ ಮುಖವನ್ನೂ ನೋಡಿ ಮುಗ್ಧಳಾಗಿ ನಿನ್ನ ಬಳಿಗೆ ಬಂದಿರುವೆನು. ಇನ್ನು ನಿನ್ನ ಸಮಾಗಮವನ್ನು ಪಡೆದ ಮೇಲೆ ಬಿಡುವುದು ಹೇಗೆ? ಇನ್ನು ಖಂಡಿತ ನಿನ್ನ ವಿರಹವನ್ನು ಅನುಭವಿಸಲಾರೆ. ||೫೬||

ನಾನು ನಿನ್ನನ್ನು ಅತ್ಯಂತವಾಗಿ ಪ್ರೀತಿಸುತ್ತೇನೆ. ಆದ್ದರಿಂದಲೇ ನಿನ್ನನ್ನು ಒಂದುಕ್ಷಣವೂ ಅಗಲಿರಲಾರೆ. ಎಲ್ಲಿಯಾದರೂ ನಿನ್ನನ್ನೂ ನಾನು ಬಿಟ್ಟುಬಿಡಬಹುದೆಂದು ಅನುಮಾನಿಸಬೇಡ. ಈಗ ನೀನು ಎಲ್ಲಿ ಹೋಗುವೆಯೋ ಅಲ್ಲಿಗೇ ನಾನೂ ಬರುವೆನು. ಇನ್ನು ನಿನ್ನನ್ನು ಅಗಲಿರುವುದು ನನಗೆ ಸಾಧ್ಯವಿಲ್ಲ." ||೫೭||

ಇದಿಷ್ಟು ಮಾತನ್ನೂ ಆ ರಾಜನು ಕತ್ತನ್ನು ಬಗ್ಗಿಸಿಕೊಂಡೇ ಕೇಳುತ್ತಿದ್ದನು. ಇದೇನು ಆಕಸ್ಮಿಕವಾಗಿ ತನಗೆ ಆಪತ್ತು ಒದಗಿತೆಂಬ ಹೆದರಿಕೆಯಿಂದಲೇ ಪರಮೇಶ್ವರನನ್ನು ಮನಸಾ ಧ್ಯಾನಿಸಿದನು. ಮತ್ತು ಈ ಸಂಕಟದಿಂದ ಪಾರು ಮಾಡೆಂದೂ ಪ್ರಾರ್ಥಿಸಿ, ಅನಂತರ ಆ ರಾಜಸ್ತ್ರೀಯನ್ನು ಕುರಿತು ಗಂಭೀರವಾಗಿ ಹೀಗೆ ನುಡಿದನು. ||೫೮||

ಕಿಮಂಬ ಮಯ್ಯಪಿ ಪ್ರೀತಿರತಿಕುತ್ಸಿತವಿಗ್ರಹೇ ।
ಸಂಸಾರತಾಪಸಂತಪ್ತೇ ದುಃಖಿತೇ ತೇನ ಸಂತತಂ ॥೫೯॥

ತಿಷ್ಠಂತಿ ಸದನೇ ನಾರ್ಯೋ ಯೌವನೋನ್ಮಾದಪೀಡಿತಾಃ ।
ಸೌಂದರ್ಯಧಾರಾರೂಪಾಸ್ತಾಃ ಪರಿತ್ಯಕ್ತಾಸ್ಸಹಸ್ರಶಃ ॥೬೦॥

ಐಶ್ವರ್ಯಂ ಚ ಪರಿತ್ಯಕ್ತಂ ಸರ್ವಥಾಪಿ ವಿನಶ್ವರಂ ।
ವಿನಶ್ವರಶರೀರಸ್ಯ ನಾಪೇಕ್ಷಾ ಕ್ರಿಯತೇಽಧುನಾ ॥೬೧॥

---

"ತಾಯೆ, ನಿನಗೂ ನನ್ನಲ್ಲಿ ಅನುರಾಗವುಂಟಾಯಿತೇ? ನೀನು ನನಗೆ ಮಾತೃಸ್ವರೂಪಳು "ಮಾತೃವತ್ ಪರದಾರಾಃ" ಎಂದು ಶಾಸ್ತ್ರದಲ್ಲಿ ಹೇಳಿದೆ. ಹೀಗಿರಲು ನೀನು ನನ್ನಲ್ಲಿ ಹೀಗೆ ಪ್ರವರ್ತಿಸಬಹುದೇ? ನಾನು ಎಷ್ಟರವುಟ್ಟೆ ನವನು? ಪಾಮರನಾಗಿದ್ದೇನೆ. ನನ್ನ ಈ ಬಡದೇಹದಲ್ಲಿ ಏನು ಸಾರವಿದೆ? ನಾನು ಸಂಸಾರದುಃಖದಿಂದ ಪೀಡಿತನಾಗಿ ಬಹಳ ಕ್ಲೇಶಪಡುತ್ತಿದ್ದೇನೆ. ಸಂಸಾರವನ್ನೇ ನಾನು ದ್ವೇಷಿಸುತ್ತೇನೆ. ಸಂಸಾರದ ಜುಗುಪ್ಸೆಯಿಂದಲೇ ನಾನು ವಿರಕ್ತನಾಗಿದ್ದೇನೆ. ॥೫೯॥

ಎಲೈ ಪೂಜ್ಯಳೇ, ನೀನು ಎಷ್ಟು ಅನುಚಿತವಾದ ಮಾತನ್ನಾಡುತ್ತಿದ್ದೀಯೆ! ವಿರಕ್ತನಾದ ನಾನು ಮತ್ತೆ ಈ ಸಂಸಾರಕ್ಲೇಶದಲ್ಲಿ ಸಿಕ್ಕಿಕೊಳ್ಳಲು ಎಂದೂ ಅಪೇಕ್ಷಿಸುವುದಿಲ್ಲ. ಹಾಗೆ ನಾನು ಭೋಗವಿಲಾಸವನ್ನು ಅನುಭವಿಸಲು ಆಪೇಕ್ಷಿಸುತ್ತಿದ್ದರೆ ಇಲ್ಲಿಗೆ ಬರಬೇಕಾಗಿತ್ತೆ? ನನ್ನ ಮನೆಯಲ್ಲಿಯೇ ಪರಮಯೌವನದಿಂದ ಮತ್ತರಾದ ಸಾವಿರಾರು ಸ್ತ್ರೀಯರಿದ್ದರು. ಎಲ್ಲರೂ ಅತ್ಯಂತ ರೂಪವತಿಯರೇ ಆಗಿದ್ದರು. ಅವರೆಲ್ಲರ ಸಂಗವನ್ನೂ ವಿರಾಗದಿಂದಲೇ ನಾನು ಬಿಟ್ಟುಬಂದಿರುವೆನು. ॥೬೦॥

ವಿಶಾಲವಾದ ಐಶ್ವರ್ಯವು ಉಪಭೋಗಿಸಲು ನನಗೆ ಸಿದ್ಧವಾಗಿದ್ದರೂ ಅವುಗಳೆಲ್ಲವೂ ಕ್ಷಣಿಕವಾದವೆಂದು ತಿಳಿದು ವಿವೇಕದಿಂದ ಎಲ್ಲವನ್ನೂ ತ್ಯಜಿಸಿರುವೆನು. ಈ ಶರೀರವೂ ಕೂಡ ಕ್ಷಣ ಭಂಗುರವು. ಇದರಲ್ಲಿಯೂ ನನಗೆ ಅಪೇಕ್ಷೆ ಇಲ್ಲ. ಸರ್ವ ವಿಷಯಗಳಲ್ಲಿಯೂ ನನಗೆ ಜಿಹಾಸೆಯು ಉತ್ಪನ್ನವಾಗಿದೆ. ॥೬೧॥

ಕಿಮೇತೇನ ಶರೀರೇಣ ಯೌವನೇನಾಪಿ ಕಿಂ ಮಮ ।
ಅವಿಲಂಬೇನ ದೇಹಸ್ಯ ಪತನಂ ಚ ಭವಿಷ್ಯತಿ ॥೬೨॥

ಸೌಂದರ್ಯಂ ಚ ಕಿಮೇತಸ್ಯ ಶರೀರಸ್ಯ ವಿಶೇಷತಃ ।
ಮಾಂಸಾಸ್ಥಿಮಜ್ಜಾರೂಪಸ್ಯ ಸೌಂದರ್ಯಂ ಕುತ್ರ ದೃಶ್ಯತೇ ॥೬೩॥

ವಿನಶ್ವರೇ ಶರೀರೇಽಸ್ಮಿನ್ ಪ್ರೀತಿಃ ಕಾರ್ಯಾ ನ ಸರ್ವಥಾ ।
ತನ್ನಾಶೇ ಖಲು ದುಃಖಾನಿ ಭವಿಷ್ಯಂತಿ ನ ಸಂಶಯಃ ॥೬೪॥

ಅಭಾಗ್ಯಾನಾಂ ಶರೀರೇಷು ಭವತ್ಯಾಸ್ಥಾ ಕದಾಚನ ।
ತಯಾ ದುಃಖಂ ಬಹು ಪ್ರಾಪ್ಯಂ ಮರಣೋತ್ತರಮುಕ್ಷತಂ ॥೬೫॥

---

ಈ ನಶ್ವರವಾದ ಶರೀರದಿಂದಲಾಗಲಿ ಅಥವಾ ಯೌವನದಿಂದಾಗಲಿ ನನಗೆ ಯಾವ ಪರಮಸುಖವು ದೊರತೀತು ? ಇವೆಲ್ಲಾ ಪರಮಾಭಾಸಗಳು. ಈ ಶರೀರವು ಸ್ವಲ್ಪವೇ ದಿವಸಗಳಲ್ಲಿ ನಾಶಹೊಂದುವುದಾಗಿದೆ. ॥೬೨॥

ಈ ಶರೀರದಲ್ಲಿ ಏನು ಸೌಂದರ್ಯವಿದೆ? ನಿಜವಾಗಿಯೂ ಇದು ಸೌಂದರ್ಯವೇ? ಕೇವಲ ಮಾಂಸ, ಮೂಳೆ, ಮಜ್ಜೆಗಳ ಮುದ್ದೆಯೇ ಈ ಶರೀರವು. ಇದರಲ್ಲಿ ನೀನು ಯಾವ ಸೌಂದರ್ಯವನ್ನು ಕಂಡೆ? ॥೬೩॥

ಇಷ್ಟು ಕ್ಷಣಭಂಗುರವಾದ ಶರೀರದಲ್ಲಿ ಎಂದೂ ಮಮತೆ ಇಡಬಾರದು. ಎಂದೂ ಮೋಹಗೊಳ್ಳಲೂ ಬಾರದು. ಈ ಶರೀರವು ದುಃಖವನ್ನು ಅನುಭವಿಸುತ್ತಲೇ ಹುಟ್ಟಿದೆ. ಇರಬೇಕಾದರೂ ದುಃಖಪೂರ್ಣವಾಗಿರುತ್ತದೆ. ಇದು ನಾಶವಾಗಬೇಕಾದರೂ ದುಃಖವಾಗುತ್ತದೆ. ಹೀಗೆ ಈ ಶರೀರವು ಸರ್ವಥಾ ದುಃಖಮಯವೇ ಆಗಿದೆ. ॥೬೪॥

ಕೇವಲ ಭಾಗ್ಯಹೀನರು ಈ ಶರೀರದಲ್ಲಿ ಮಮತೆಯನ್ನಿಟ್ಟಿರುತ್ತಾರೆ. ಇದೇ ಮಮತೆಯಿಂದಲೇ ಸರ್ವದಾ ದುಃಖವನ್ನು ಅನುಭವಿಸಿ, ಮರಣಾನಂತರವೂ ನಾರಕೀಯವಾದ ಅಪಾರ ಯಾತನೆಯನ್ನೂ ಅನುಭವಿಸುವರು. ॥೬೫॥

ಮೂತ್ರೇಣ ವಿಷ್ಟಯಾ ಪೂರ್ಣಮುದರಂ ರೇತಸಾ ಖಲು ।
ಕ್ರಿಮಿಭಿಶ್ಚ ಸಮಾಕೀರ್ಣಂ ದುರ್ಗಂಧೇನ ಸಮಾವೃತಂ ॥೬೬॥

ಮುಖಂ ತು ಶ್ಲೇಷ್ಮನಿಲಯಂ ಲಾಲಾಜಲಸಮಾಕುಲಂ ।
ನಾಸಿಕಾಕರ್ಣನಯನೈಃ ಕುತ್ಸಿತಂ ನಿಸ್ಸರಿಷ್ಯತಿ ॥೬೭॥

ಪಿಹಿತಂ ಚರ್ಮಣಾ ಸರ್ವಂ ಮಲಾದಿಕಮತಃ ಕಥಂ ।
ಬುದ್ಧಿರ್ಮಲಪುಟೇ ದೇಹೇ ಸುಂದರತ್ವಂ ನ ಕುತ್ಸಿತೇ ॥೬೮॥

ಅಮೇಧ್ಯಮಧ್ಯಸಂಜಾತಃ ಕ್ರಿಮಿಃ ಕಿಮಿತಿ ಸುಂದರಃ ।
ಅಮೇಧ್ಯೇನ ಸಹೈತಸ್ಯ ಶರೀರಸ್ಯ ಸ್ಥಿತಿಃ ಖಲು ॥೬೯॥

ಗರ್ಭದುಃಖಾನಿ ಭುಕ್ತಾನಿ ಬಹೂನಿ ವಿವಿಧಾನ್ಯಪಿ ।
ಗರ್ಭೇ ಕ್ರಿಮಿಸಮಾಕೀರ್ಣೇ ಶರೀರಮಭವತ್ಫಲಂ ॥೭೦॥

---

ಈ ಶರೀರದಲ್ಲಿ ಅತ್ಯಂತ ಹೇಯವೂ ಜುಗುಪ್ಸಿತವೂ ಆದ ಮೂತ್ರ, ಅಮೇಧ್ಯ, ರೇತಸ್ಸುಗಳಿಂದ ಸದಾ ದುರ್ಗಂಧವು ಹೊರಪಡುತ್ತಿರುವುದು. ಅಲ್ಲದೇ ಒಳಗೆ ಕೇವಲ ಕ್ರಿಮಿಗಳೂ ತುಂಬಿಕೊಂಡಿವೆ. ॥೬೬॥

ಬಾಯಿಯು ಕೇವಲ ಶ್ಲೇಷ್ಮದ ಮನೆ ಆಗಿರುತ್ತದೆ. ಅಲ್ಲಿಂದ ಸದಾ ಲಾಲಾ ಜಲವೇ ಹರಿಯುತ್ತಿರುತ್ತದೆ. ಅಲ್ಲದೇ ಮೂಗಿಂದಲೂ, ಕಿವಿಯಿಂದಲೂ, ಕಣ್ಣಿಂದಲೂ ಕೂಡ ಅತ್ಯಂತ ಕುತ್ಸಿತವಾದ ಕೊಳೆಯು ಹೊರಡುತ್ತಿರುತ್ತದೆ. ॥೬೭॥

ಕೇವಲ ದುರ್ಗಂಧಗಳೂ ಅಸಹ್ಯಗಳಾದವೂ ಆದ ಕೊಳೆಗಳ ಮೇಲೆ ಚರ್ಮದ ಹೊದಿಕೆ ಮುಚ್ಚಿಕೊಂಡಿದೆ. ಇಷ್ಟು ಅಮೇಧ್ಯಮಯವಾದ ಶರೀರದಲ್ಲಿ ಸುಂದರತೆಯ ಬುದ್ಧಿಯು ಹೇಗೆ ಬಂದೀತು? ಇದು ಸರ್ವಥಾ ಭ್ರಾಂತಿ. ಶರೀರವು ಕೇವಲ ಕುತ್ಸಿತವಾಗಿಯೇ ಇರುತ್ತದೆ. ॥೬೮॥

ಈ ಶರೀರವು ಕೇವಲ ಅಮೇಧ್ಯಗಳ ಮಧ್ಯದಿಂದಲೇ ಹುಟ್ಟಿದೆ. ಆದ್ದರಿಂದಲೇ ಇದೂ ಒಂದು ಕ್ರಿಮಿಯೇ ಆಗಿದೆ. ಅಲ್ಲದೆ ಸದಾ ಅಮೇಧ್ಯಗಳೊಡನೆಯೇ ಒಟ್ಟುಗೂಡಿಕೊಂಡಿರುತ್ತದೆ. ಇಂಥ ದೇಹವು ಸುಂದರವು ಹೇಗಾದೀತು? ॥೬೯॥

ಈ ಶರೀರವು ಹುಟ್ಟಬೇಕಾದರೇ ಅನೇಕ ದುಃಖಗಳನ್ನು ಅನುಭವಿಸಿದೆ. ಗರ್ಭದಲ್ಲಿ ಕ್ರಿಮಿಗಳ ಮಧ್ಯೆ ಅನೇಕ ಯಾತನೆಗಳನ್ನು ಅನುಭವಿಸುತ್ತಾ ಈ ದೇಹವು ಹುಟ್ಟಿದೆ. ॥೭೦॥

**ಶರೀರಂ ರೇತಸಾ ಜಾತಂ ಯೋನಿಮಧ್ಯಗತೇನ ಹಿ ।**
**ಮೂತ್ರಗಂಧಸಮಾಕೀರ್ಣೋ ಯೋನಿದೇಶೋಽಪಿ ವಸ್ತುತಃ ॥೭೦॥**

**ಅಂಕುರೋ ರೇತಸಾ ಸಿಕ್ತೋ ಮೂತ್ರೇಣ ಪರಿವೇಷ್ಟಿತಃ ।**
**ಮಲೈಶ್ಚರ್ಮಪಿನದ್ಧೋಽಪಿ ಸ ಕಿಂ ಭವತಿ ಸುಂದರಃ ॥೭೧॥**

**ಪಿಚುಮಂದಾಂಕುರೋ ಜಾತಃ ಪಾರಿಜಾತಾಂಕುರಃ ಕಥಂ ।**
**ಅತಶ್ಶರೀರೇ ಸೌಂದರ್ಯಂ ನ ಕೇನಾಪ್ಯುಪಧಾರಿತಂ ॥೭೩॥**

**ದೃಶ್ಯಂತೇ ಬಹವೋ ಲೋಕೇ ತರುಣಾ ಮರಣೋನ್ಮುಖಾಃ ।**
**ಮರಣೇ ಸತಿ ಸೌಂದರ್ಯಂ ತಾರುಣ್ಯಂ ಚ ಕ್ವ ತದ್ಗತಂ ॥೭೪॥**

---

ಈ ದೇಹವು ಅತ್ಯಂತ ಹೇಯವಾದ ರೇತಸ್ಸಿನಿಂದ ಬಹು ಜುಗುಪ್ಸಿತವಾದ ಯೋನಿಯಿಂದ ಹುಟ್ಟುತ್ತದೆ. ಆ ಯೋನಿಪ್ರದೇಶವೋ, ಸದಾ ಮೂತ್ರದ ದುರ್ವಾಸನೆಯಿಂದ ನಾರುತ್ತಿರುತ್ತದೆ. ಹೀಗೆ ಸರ್ವಥಾ ಅಸಹ್ಯಮಯವಾದ ಶರೀರದಲ್ಲಿ ಮಮತೆಯನ್ನಿಡಬಹುದೇ? ॥೭೦॥

ಮೂತ್ರ ಪುರೀಷಗಳ ಮಧ್ಯದಲ್ಲಿರುವ ಗರ್ಭಾಂಕುರವು ಪುನಃ ಹೇಯವಾದ ರೇತಸ್ಸಿನಲ್ಲಿ ಮುಳುಗಿಕೊಂಡು, ಅನಂತರವೂ ಅಮೇಧ್ಯಸದೃಶವಾದ ಚರ್ಮದಿಂದ ಮುಚ್ಚಿಕೊಂಡು ಆಮೇಲೆ ಶರೀರವು ಬೆಳೆಯುವುದು. ಇಷ್ಟು ಸರ್ವಥಾ ಹೇಯ ಪದಾರ್ಥಗಳಿಂದಲೇ ಹುಟ್ಟಿದ ದೇಹವು ಹೇಗೆ ಸುಂದರವಾದೀತು? ॥೭೧॥

ಹುಚ್ಚುಕಾಯಿಗಿಡದ ಹೂವು ಪಾರಿಜಾತ ಕುಸುಮವಾಗಿ ಹೇಗೆ ಆದೀತು? ಆದುದರಿಂದ ಈ ಶರೀರವು ಸರ್ವಥಾ ಜಘನ್ಯವಾದದ್ದು. ಈ ಶರೀರದಲ್ಲಿ ಸೌಂದರ್ಯವಿದೆ ಎಂದು ಈವರೆಗೆ ಯಾವ ವಿವೇಕಿಯೂ ತಿಳಿದುಕೊಂಡಿಲ್ಲ. ॥೭೩॥

ಪ್ರಪಂಚದಲ್ಲಿ ಅನೇಕ ಮಂದಿ ಯುವಕರೇನೋ ಇರುತ್ತಾರೆ. ಆದರೆ ಅವರು ಯಾರೂ ಶಾಶ್ವತರಲ್ಲ. ಮರಣವನ್ನು ತಪ್ಪಿಸಿಕೊಳ್ಳುವನು ಒಬ್ಬನೂ ಇಲ್ಲ. ಎಲ್ಲರೂ ಮೃತ್ಯುವಿನ ಕಡೆಗೇ ಓಡುತ್ತಿರುತ್ತಾರೆ. ಹಾಗೆಯೇ ಕ್ರಮೇಣ ಮೃತ್ಯುವನ್ನೂ ಸೇರಿದ ಬಳಿಕ ಅವರ ಶರೀರದಲ್ಲಿ ಆ ತಾರುಣ್ಯವು ಇರುತ್ತದೆಯೇ? ಆದುದರಿಂದ ಈ ಶರೀರದಲ್ಲಿ ಸೌಂದರ್ಯವೂ ಇಲ್ಲ. ಯೌವನವೆಂಬುದು ನಿಜವಾಗಿ ಇರತಕ್ಕದ್ದಲ್ಲ. ಇದರಲ್ಲಿ ಮೋಹಗೊಳ್ಳಬಾರದು. ॥೭೪॥

ಅಹೋ ಮಹದಿದಂ ಕಷ್ಟಂ ಶಿಷ್ಟಾನಾಮಪಿ ಜಾಯತೇ ।
ಬುದ್ಧಿರ್ಮಾಂಸವಿಕಾರೇಷು ಶರೀರೇಷು ವಿಶೇಷತಃ ॥೭೫॥

ಅಭಾಗ್ಯಸ್ಯ ಪರಂ ತಾವನ್ನಾರೀಸಂಗರತಿರ್ಭವೇತ್ ।
ಕುತ್ಸಿತತ್ವಂ ನ ಜಾನಂತಿ ಶರೀರಸ್ಯಾಪಿ ಮೋಹತಃ ॥೭೬॥

ಮಲಮಾಂಸಾಸ್ಥಿಮಜ್ಜಾನಾಂ ಗ್ರಂಥಿಷು ಪ್ರೀತಿರಸ್ತಿ ಚೇತ್ ।
ತದ್ರೂಪೇಷು ಶರೀರೇಷು ಪ್ರೀತಿರ್ಭವತು ಕಸ್ಯಚಿತ್ ॥೭೭॥

ಇತಸ್ತ್ವಯಾ ತು ಗಂತವ್ಯಂ ತ್ಯಜ ಪಾಪಮತಿಂ ತಥಾ ।
ಯಮಲೋಕಭಯಂ ಪ್ರಾಪ್ಯಂ ತ್ವಯಾಪ್ಯದ್ಯಾಪಿ ನ ಶ್ರುತಂ ॥೭೮॥

---

ಈ ದೇಹವು ಬಹಳ ಕಷ್ಟಕ್ಕೀಡಾದುದು. ತಾನು ಮಾಂಸದ ಮುದ್ದೆ ಆಗಿದ್ದರೂ ಕದಾಚಿತ್ ವಿವೇಕಿಗಳಿಗೂ ಬುದ್ಧಿಭ್ರಮಣೆಯನ್ನುಂಟುಮಾಡಿ ಇದು ಮೋಹಗೊಳ್ಳುವಂತೆ ಮಾಡುವುದು. ಆದುದರಿಂದ ಈ ದೇಹವು ಬಹಳ ಅಪಾಯಕಾರಿ. ॥೭೫॥

ಕೇವಲ ಬುದ್ಧಿಹೀನನು ಅಥವಾ ಭಾಗ್ಯಹೀನನು ಸ್ತ್ರೀಸಹವಾಸದಲ್ಲಿ ಬಿದ್ದು ಅಲ್ಲಿಯೇ ಮೋಹಿತನಾಗಿ ಶರೀರವು ಕುತ್ಸಿತವೆಂದು ತಿಳಿಯುವುದಿಲ್ಲ. ಆತನಿಗೆ ಅದು ಗೊತ್ತಾಗುವುದೂ ಇಲ್ಲ. ಅಂತಹವನು ಮೌಢ್ಯದಿಂದ ನಾಶವಾಗುವನು. ॥೭೬॥

ಮಲ, ಮೂತ್ರ, ಮೂಳೆ, ವಸೆ ಇವುಗಳಲ್ಲಿ ಯಾರಿಗಾದರೂ ಪ್ರೀತಿಯು ಬರುತ್ತದೆಯೇ? ಅಥವಾ ಅವುಗಳು ಸುಂದರಗಳಾಗಿವೆ ಎಂದು ಯಾರಿಗಾದರೂ ಬುದ್ಧಿ ಹುಟ್ಟುತ್ತದೆಯೇ? ಹಾಗೆ ಮಾಂಸಗಳ ಮುದ್ದೆಯಲ್ಲಿ ಪ್ರೀತಿಯು ಹುಟ್ಟುವುದಾದರೆ, ಅದೇ ಮಾಂಸವಿಕಾರವಾದ ದೇಹದಲ್ಲಿಯೂ ಒಂದುವೇಳೆ ಪ್ರೀತಿಯು ಹುಟ್ಟಬಹುದು. ಮಾಂಸಮೂಳೆಗಳನ್ನು ಯಾರೂ ಪ್ರೀತಿಸಲಾರರು. ॥೭೭॥

ಎಲೌ ಸ್ತ್ರೀಯೇ! ಇನ್ನು ಇಂಥ ಪಾಪಬುದ್ಧಿಯನ್ನು ತೋರಬೇಡ. ಈ ದುರ್ಬುದ್ಧಿಯನ್ನು ಬಿಟ್ಟುಬಿಡು. ನಾನು ಎಂದಿಗೂ ಮೋಹದಲ್ಲಿ ಬೀಳಲಾರೆ. ನೀನು ಈ ಕೂಡಲೇ ಇಲ್ಲಿಂದ ಹೊರಟು ಹೋಗು. ಪಾಪಾಚಾರಣೆಯಿಂದ ಎಂತಹ ನರಕವೂ ನರಕಯಾತನೆಯೂ ಉಂಟಾಗುವುದೆಂಬುದನ್ನು ಇನ್ನೂ ನೀನು ಬಹುಶಃ ಕೇಳಿಲ್ಲ. ಅದಕ್ಕೇ ಹೀಗೆ ಸ್ವೇಚ್ಛೆಯಿಂದ ಪ್ರವರ್ತಿಸುತ್ತಿದ್ದೀಯೆ. ಅನುಚಿತ ಮಾತನ್ನಾಡುತ್ತಿದ್ದೀಯೆ. ॥೭೮॥

**ಯದದ್ಯ ಮದನೋದ್ರೇಕಾತ್ಪರದಾರಾಂಗಸಂಗಮಃ ।**
**ತದಾ ಪಾತೋ ಭವತ್ಯೇವ ಕುಂಭೀಪಾಕೇ ನ ಸಂಶಯಃ ॥೭೯॥**

**ಪರದಾರಾನನಂ ದೃಷ್ಟ್ವಾ ಮೋಹಾತ್ಪಾಪರತಃ ಕ್ವಚಿತ್ ।**
**ಅಘೋರಯಾತನಾಂ ಪ್ರಾಪ್ಯ ಕಲ್ಪಾಂತೇ ಮುಚ್ಯತೇ ನ ವಾ ॥೮೦॥**

**ದುರಾಚಾರಾಃ ಪರಾಂ ನಾರೀಂ ಪರಸ್ಯ ಪರಿತಃ ಪರಂ ।**
**ಪಶ್ಯಂತಿ ತೇ ಚ ಪಶ್ಯಂತಿ ಯಾತನಾಂ ಪ್ರವಿಶಂತಿ ಚ ॥೮೧॥**

**ಮಲಮೂತ್ರಾದಿದುರ್ಗಂಧಸಮೂಹಪರಿವೇಷ್ಟಿತೇ ।**
**ಯೋನಿದೇಶೇ ದುರಾಚಾರಾ ರಮಂತೇ ಪಾಮರಾಸ್ಸದಾ ॥೮೨॥**

---

ಎಲ್ಲಿಯಾದರೂ ನಾನು ಮೋಹದಿಂದಲೋ ಅಥವಾ ಕಾಮೋದ್ರೇಕದಿಂದಲೋ ಪರಸ್ತ್ರೀಸಂಗಮಾಡಿದರೆ ಖಂಡಿತವಾಗಿಯೂ ನಾನು ಪತಿತನಾಗಿ ಹೋಗುವೆನು. ಅಲ್ಲದೇ ಕುಂಭೀಪಾಕ ನರಕದಲ್ಲಿ ಬಿದ್ದು ಅನೇಕ ಯಾತನೆಗಳನ್ನೂ ನಾನು ಅನುಭವಿಸಬೇಕಾಗುವುದು. ॥೭೯॥

ಯಾವಾತನು ಮೋಹಾಂಧನಾಗಿ ಪಾಪಕರ್ಮಗಳನ್ನು ಆಚರಿಸುವನೋ, ಮತ್ತು ಪರಸ್ತ್ರೀಸಂಗವನ್ನು ಮಾಡುವನೋ, ಆತನು ನರಕದಲ್ಲಿ ಘನಘೋರವಾದ ಯಾತನೆಗಳನ್ನು ಅನುಭವಿಸುತ್ತಾನೆ. ಆತನಿಗೆ ಆ ಯಾತನೆಯಿಂದ ಕಲ್ಪಾಂತ್ಯದಲ್ಲಿಯೂ ಬಿಡುಗಡೆ ಆಗುವುದೋ ಇಲ್ಲವೋ! ಅಂತೂ ಆತನಿಗೆ ಯಾತನೆಯು ಅಪಾರವಾಗುವುದು. ॥೮೦॥

ವಿವೇಕಿಗಳು ಯಾರೂ ಪರಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡುವುದಿಲ್ಲ. ದುರಾಚಾರಿಗಳಾದವರು ಮಾತ್ರ ಪರಸ್ತ್ರೀವಿಷಯದಲ್ಲಿ ಪಾಪಗಳನ್ನು ಆಚರಿಸುವರು. ಮತ್ತು ಅದಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸುವರು. ಹಾಗೆಯೇ ದಾರುಣವಾದ ಯಾತನೆಯನ್ನೂ ಪಡೆಯುವರು. ॥೮೧॥

ಮಲಮೂತ್ರಾದಿಗಳಿಂದ ಸದಾ ದುರ್ಗಂಧಪೂರ್ಣವಾದ ಸ್ತ್ರೀಯರ ಯೋನಿಯಲ್ಲಿ ಕೇವಲ ಮೂಢರಾದ ದುರಾಚಾರಿಗಳು, ಪಾಮರರು ಗ್ರಾಮ್ಯಕರ್ಮವನ್ನು ಮಾಡುತ್ತಾ ಸುಖವೆಂದು ತಿಳಿದುಕೊಳ್ಳುವರು. ॥೮೨॥

ಅಂಗಾನಿ ಯಾನಿ ತೇ ತುಂಗಾನ್ಯನಂಗಪರಿಪೀಡಿತೇ ।
ತಾನಿ ಮಾಂಸಪುಟಾನ್ಯೇವ ತೇಷು ಕಾ ಪ್ರೀತಿರದ್ಯ ಮೇ ॥೮೩॥

ಯೋನಿಸ್ಸೂಕರನಾರೀಣಾಂ ಯಥಾ ಭವತಿ ಕುತ್ಸಿತಾ ।
ತಥೈವ ನರನಾರೀಣಾಂ ಯೋನಿರಪ್ಯತಿಕುತ್ಸಿತಾ ॥೮೪॥

ಏವಂ ಸತ್ಯಪಿ ದೇಹೇಷು ವಿಶೇಷಃ ಕಶ್ಚಿದಸ್ತಿ ಹಿ ।
ತೇನ ತಾವದ್ವಿಶೇಷಣ ಗ್ರಾಹ್ಯಾಗ್ರಾಹ್ಯತ್ವಧೀರಪಿ ॥೮೫॥

ಅಂತರ್ಬಹಿಶ್ಚ ದುಷ್ಟಾಸ್ತೇ ಸೂಕರಾದಿಕವಿಗ್ರಹಾಃ ।
ಅಸ್ಪೃಶ್ಯಾ ಏವ ತೇ ತಸ್ಮಾತ್ತೇ ತಾವದತಿಕುತ್ಸಿತಾಃ ॥೮೬॥

---

ಎಲೌ ವನಿತೆಯೇ! ನಿನ್ನ ಯಾವ ಅಂಗಗಳು ಉಬ್ಬಿಕೊಂಡಿವೆಯೋ (ಸ್ತನಗಳು) ಅವು ಯಥಾರ್ಥವಾಗಿ ಸುಂದರವಾದವುಗಳಲ್ಲ. ನೀನು ಕೇವಲ ಕಾಮ ಪರಳಾಗಿ ಅವು ಸುಂದರವಾದವುಗಳೆಂದು ತಿಳಿದುಕೊಂಡಿರುವೆ. ಆ ಅಜ್ಞಾನವನ್ನು ಬಿಡು. ಆ ಸ್ತನಗಳೂ ಕೇವಲ ಮಾಂಸದ ಮುದ್ದೆಯೇ ಆಗಿವೆ. ಈ ವಿವೇಕವನ್ನು ತಿಳಿದ ನನಗೆ ಅವುಗಳಲ್ಲಿ ಮೋಹವು ಹೇಗೆ ಉಂಟಾದೀತು ? ॥ ॥೮೩॥

ಹೆಣ್ಣುಹಂದಿಯ ಯೋನಿಯು ಎಷ್ಟು ನೀಚವಾದುದೂ ಕುತ್ಸಿತವಾದುದೂ ಆಗಿದೆಯೋ, ಮನುಜಸ್ತ್ರೀಯರ ಯೋನಿಯೂ ಅಷ್ಟೇ ಕುತ್ಸಿತವು. ॥೮೪॥

ಹೀಗೆ ಮನುಷ್ಯರಿಗೂ ತಿರ್ಯಕ್‌ಜಂತುಗಳಿಗೂ ಸರ್ವವಿಧಗಳಲ್ಲಿಯೂ ಸಮಾನತೆಯೇ ಇರುತ್ತದೆ. ಆದರೆ ಅವುಗಳಲ್ಲಿ ಸ್ವಲ್ಪ ವಿಶೇಷತೆ ಇದೆ. ಇದೇ ವೈಶಿಷ್ಟ್ಯದಿಂದಲೇ ಉತ್ತಮತ್ವ ಮತ್ತು ಅಧಮತ್ವವು ನಿರ್ಣೀತವಾಗುವುದು. ॥೮೫॥

ಹಂದಿಯೇ ಮೊದಲಾದವುಗಳ ಶರೀರವು ಅತಿ ಕುತ್ಸಿತವಾದುದು. ಏಕೆಂದರೆ ಅವುಗಳ ಒಳಗಡೆ ಹೇಗೆ ಹೇಸಿಗೆ ತುಂಬಿರುತ್ತದೆಯೋ ಹಾಗೆಯೇ ಅವುಗಳ ಹೊರ ಮೈಯ್ಯೂ ಕುತ್ಸಿತವಾಗಿರುತ್ತದೆ. ಆದ್ದರಿಂದಲೇ ಅವುಗಳನ್ನು ಕೈಯಿಂದಲೂ ಮುಟ್ಟ ಕೂಡದು. ॥೮೬॥

ಮನುಷ್ಯಾಣಾಂ ಶರೀರಾಣಿ ಕುತ್ಸಿತಾನ್ಯಂತರಿತ್ಯತಃ ।
ಬಹಿಸ್ತ್ವಕುತ್ಸಿತಾನ್ಯೇವ ವಿಶೇಷಸ್ತಾವತಾ ಖಲು ॥೮೭॥

ಮಾನುಷೇಷ್ವಪಿ ದೇಹೇಷು ದ್ವಿಜದೇಹಃ ಪರಂ ಶುಚಿಃ ।
ತೇಷು ಬ್ರಾಹ್ಮಣದೇಹಸ್ತು ಶುಚಿರಿತ್ಯವಗಮ್ಯತಾಂ ॥೮೮॥

ತೇಷು ಬ್ರಾಹ್ಮಣದೇಹೇಷು ಪವಿತ್ರತಮಮೇವ ತತ್ ।
ಶರೀರಂ ಶಾಂಭವಸ್ಯೇತಿ ಶಾಂಭವಃ ಖಲು ದುರ್ಲಭಃ ॥೮೯॥

ಶಾಂಭವಸ್ಯ ಬ್ರಾಹ್ಮಣಸ್ಯ ಶರೀರಮಪಿ ಭಸ್ಮನಾ ।
ತ್ರಿಪುಂಡ್ರೇಣ ಚ ರುದ್ರಾಕ್ಷೈಃ ಪವಿತ್ರಮಿತಿ ಕೀರ್ತಿತಂ ॥೯೦॥

ಭೂರಿಪುಣ್ಯಪ್ರಭಾವೇಣ ಬ್ರಾಹ್ಮಣೋ ಜಾಯತೇ ನರಃ ।
ಶಾಂಭವೋ ಜಾಯತೇ ತತ್ರಾಪ್ಯಪಾರೈಃ ಪುಣ್ಯಸಾಗರೈಃ ॥೯೧॥

---

ಮನುಷ್ಯರ ದೇಹದೊಳಭಾಗದಲ್ಲಿ ಹೇಸಿಗೆಯು ತುಂಬಿಕೊಂಡಿದ್ದರೂ ಕೇವಲ ಹೊರಮೈ ಮಾತ್ರ ಸ್ವಚ್ಛವಾಗಿರುತ್ತದೆ. ಇದೇ ವ್ಯತ್ಯಾಸ ಇರುವುದು. ॥೮೭॥

ಹೀಗೆ ವಿಶೇಷತೆಯನ್ನು ಪಡೆದುಕೊಂಡಿರುವ ಮನುಷ್ಯರ ಶರೀರಗಳಲ್ಲಿಯೂ ತಾರತಮ್ಯವಿದೆ. ಸಾಮಾನ್ಯ ಮನುಷ್ಯರ ದೇಹಕ್ಕಿಂತ ದ್ವಿಜಜಾತಿಯವರ ದೇಹವು ಶ್ರೇಷ್ಠವಾದುದು. ಅವುಗಳಲ್ಲಿಯೂ ಬ್ರಾಹ್ಮಣರ ಶರೀರವು ಶ್ರೇಷ್ಠವೆಂದು ತಿಳಿ. ॥೮೮॥

ಆ ಬ್ರಾಹ್ಮಣರಲ್ಲಿಯೂ ಯಾರು ಶಿವಪೂಜಕರಾಗಿರುತ್ತಾರೆಯೋ, ಅವರ ಶರೀರವು ಅತ್ಯಂತ ಪವಿತ್ರವಾದುದು. ಶಿವಭಕ್ತನಾಗಿಯೂ ಬ್ರಾಹ್ಮಣನಾಗಿಯೂ ಇರುವುದೇ ಪರಮ ಪವಿತ್ರತೆಯು. ಏಕೆಂದರೆ ಲೋಕದಲ್ಲಿ ಶಿವಾರಾಧಕರು ಅತಿ ದುರ್ಲಭರಷ್ಟೆ. ॥೮೯॥

ಶೈವಧರ್ಮ ಬ್ರಾಹ್ಮಣರ ಶರೀರವು ಸದಾ ಭಸ್ಮಧಾರಣೆಯಿಂದಲೂ ತ್ರಿಪುಂಡ್ರಧಾರಣೆಯಿಂದಲೂ ರುದ್ರಾಕ್ಷಸಂಸರ್ಗದಿಂದಲೂ, ಪವಿತ್ರೀಕೃತವಾಗಿರುತ್ತದೆ. ॥೯೦॥

ಮನುಷ್ಯನಾಗಿ ಹುಟ್ಟಬೇಕಾದರೆ ಮೊದಲು ಪುಣ್ಯವನ್ನು ಮಾಡಿರಬೇಕು. ಅದರಲ್ಲಿಯೂ ಬ್ರಾಹ್ಮಣನಾಗಿ ಜನಿಸಬೇಕಾದರೆ ಅನೇಕ ಸುಕೃತಗಳು ಬೇಕು.

ಶಾಂಭವಬ್ರಾಹ್ಮಣಾಂಗೇನ ಸಂಗೋ ಮಂಗಳದಾಯಕಃ ।
ಮಮಾಭವತ್ತೇನ ಬುದ್ಧಿಸ್ಸಂಸಾರೇ ನ ಪ್ರಜಾಯತೇ ॥೯೨॥

ರಾಜ್ಯಂ ಪ್ರಾಜ್ಯಮಪಿ ತ್ಯಕ್ತಂ ಹಾರಾದಾರಾಶ್ಚ ಕೋಟಿಶಃ ।
ನ ತತ್ಸಂಗಾತ್ಸುಖಂ ತೇನ ತತ್ತ್ಯಾಜ್ಯಮಿತಿ ಮೇ ಮತಿಃ ॥೯೩॥

ಮರಣೇ ಸತಿ ರಾಜ್ಯಾನಿ ಕಲತ್ರಾಣಿ ಧನಾನಿ ಚ ।
ನಾಯಾಂತಿ ಶಿವಧರ್ಮಸ್ತು ಸಹಾಯಾಸ್ಯತಿ ಸತ್ವರಂ ॥೯೪॥

ಪಶ್ಚಾದಗ್ರೇಽಪಿ ಮಧ್ಯೇಽಪಿ ಶಿವಧರ್ಮಃ ಪರಂ ಸ್ವಯಂ ।
ಆವೃತ್ಯಾಯಾತಿ ಸಹಸಾ ನ ಜಹಾತಿ ಸ ಶಾಂಭವಂ ॥೯೫॥

---

ಅದರಲ್ಲಿಯೂ ಶಿವಭಕ್ತಿಯುಳ್ಳ ಬ್ರಾಹ್ಮಣನಾಗಿ ಹುಟ್ಟಬೇಕಾದರೆ ಅನಂತಾನಂತ ಪುಣ್ಯಗಳನ್ನೇ ಮಾಡಿರಬೇಕು. ॥೯೧॥

ಈಶ್ವರ ಭಕ್ತನಾಗಿರುವ ಬ್ರಾಹ್ಮಣನ ಶರೀರದೊಡನೆ ಸಂಪರ್ಕ ಒದಗಿದರೇ ಎಷ್ಟೋ ಕಲ್ಯಾಣಗಳು ಲಭಿಸುವುವು. ಹಾಗೆಯೇ ನನಗೂ ಶೈವಬ್ರಾಹ್ಮಣನ ಸಹವಾಸದಿಂದ ಈ ಸಂಸಾರದುಃಖದಲ್ಲಿ ನನ್ನ ಮನಸ್ಸು ಪ್ರವರ್ತಿಸುವುದಿಲ್ಲ. ॥೯೨॥

ಆ ಶೈವಬ್ರಾಹ್ಮಣನ ಬೋಧನೆಯಿಂದಲೇ ನನಗೆ ವಿವೇಕವು ದೊರೆಯಿತು. ಆದರಿಂದಲೇ ನನಗೆ ಊರ್ಜಿತವಾದ ರಾಜ್ಯವಿದ್ದರೂ ಆದನ್ನು ಬಿಟ್ಟುಬಂದೆ. ಸಕಲ ವಸ್ತ್ರಪರಿಚ್ಛದಗಳನ್ನೂ, ಸ್ತ್ರೀಯರನ್ನೂ ತ್ಯಾಗಮಾಡಿದೆ. ಏಕೆಂದರೆ ಅವುಗಳಲ್ಲಿ ಯಾವುದರಿಂದಲೂ ನಿಜವಾದ ಸುಖವು ದೊರೆಯುವುದಿಲ್ಲ. ಆದ್ದರಿಂದಲೇ ಅವುಗಳಲ್ಲಿ ನನಗೆ ತ್ಯಾಗಬುದ್ಧಿಯು ಉತ್ಪನ್ನವಾಯಿತು. ॥೯೩॥

ನೋಡುವುದಕ್ಕೇನೋ ರಾಜ್ಯಗಳೂ ಧನಸಂಪತ್ತುಗಳೂ ಆವಶ್ಯಕವಾದ ಸಹವಾಸಿಗಳೆಂದು ತೋರುವುವು. ಆದರೆ ಮೃತನಾದೊಡನೆ ಅವುಗಳೆಲ್ಲವೂ ಇಲ್ಲಿಯೇ ಉಳಿಯುವುವು. ಜೊತೆಯಲ್ಲಿ ಯಾವುದೂ ಬರುವುದಿಲ್ಲ. ಆದರೆ ಕೇವಲ ಶಿವ ಧರ್ಮವು, ಶಿವಧರ್ಮಾನುಷ್ಠಾನದಿಂದ ಉಂಟಾದ ಪುಣ್ಯವು ಮಾತ್ರ ನಮ್ಮ ಜೊತೆ ಯಲ್ಲಿ ಬರುವುದು. ॥೯೪॥

ಶಿವಧರ್ಮವು ಆದಿಯಲ್ಲಿಯೂ, ಅಂತ್ಯದಲ್ಲಿಯೂ, ಮಧ್ಯದಲ್ಲಿಯೂ ಜೊತೆ ಯಲ್ಲಿಯೇ ಇರುವುದು. ಪುನಃ ಪುನಃ ಅದು ಶಿವಭಕ್ತನನ್ನೇ ಸೇರಿಕೊಂಡಿರುವುದು. ಜೊತೆಯನ್ನು ಎಂದೂ ಬಿಡುವುದಿಲ್ಲ. ॥೯೫॥

ಸಂಪತ್ಕಾಲೇ ಯಥಾ ಪುತ್ರಪೌತ್ರಮಿತ್ರಾದಯಸ್ಸದಾ ।
ತಿಷ್ಠಂತ್ಯಾವೃತ್ಯ ತಂ ತದ್ವದ್ಧರ್ಮೋಽಪ್ಯಾವೃತ್ಯ ತಿಷ್ಠತಿ ॥೯೬॥

ನ ಕಲತ್ರಂ ಸಮಾಯಾತಿ ಮರಣೇ ಸಮುಪಸ್ಥಿತೇ ।
ನ ಪುತ್ರಾ ನಾಪಿ ಪೌತ್ರಾಶ್ಚ ನ ಮಿತ್ರಾದ್ಯಾಶ್ಚ ಬಾಂಧವಾಃ ॥೯೭॥

ನ ಚೈಶ್ವರ್ಯಂ ಸಮಾಯಾತಿ ಮರಣೇ ಸಮುಪಸ್ಥಿತೇ ।
ರಥಾಶ್ವಗಜದಾಸಾದ್ಯಾಸ್ಸಮಾಯಾಂತಿ ನ ಸರ್ವಥಾ ॥೯೮॥

ಯಾವಜ್ಜೀವಾರ್ಜಿತಂ ವಿತ್ತಂ ಕ್ವಾಸ್ತೀತಿ ಪರಿಪೃಚ್ಛತಿ ।
ಪತ್ನೀ ಪುತ್ರೋಽಪಿ ಬಹುಧಾ ಮರಣೇ ಸಮುಪಸ್ಥಿತೇ ॥೯೯॥

ಅನೇನ ಯೌವನಂ ನೀತಂ ಭುಕ್ತ್ವಾ ಭೋಗಾಂಶ್ಚ ಕೋಟಿಶಃ ।
ಅನೇನ ಸಹ ಮರ್ತವ್ಯಮಿತಿ ಧೀಃ ಸ್ತ್ರೀಷು ನ ಧ್ರುವಾ ॥೧೦೦॥

---

ಜನರಲ್ಲಿ ಸಕಲ ಸಂಪತ್ತುಗಳೂ ಇದ್ದಾಗ ಪುತ್ರ ಪೌತ್ರ ಮಿತ್ರಾದಿಗಳು ಹೇಗೆ ಬಂದು ಸುತ್ತುವರೆದುಕೊಂಡು ಸೇವಿಸುತ್ತಾರೆಯೋ, ಹಾಗೆಯೇ ಶಿವಧರ್ಮವೂ ಶಿವಭಕ್ತನನ್ನು ಯಾವಾಗಲೂ ಸೇರಿಕೊಂಡಿರುತ್ತದೆ. ॥೯೬॥

ಮನುಷ್ಯನಿಗೆ ಮರಣವು ಸಮಾಪಿಸಿತೆಂದರೆ ಆಗ ಯಾರೂ ಆತನನ್ನು ಕೇಳುವವರಿಲ್ಲ. ಆತನ ಜೊತೆಯಲ್ಲಿ ಹೆಂಡತಿಯಾಗಲಿ, ಪುತ್ರರಾಗಲಿ ಮಿತ್ರರಾಗಲಿ ಅಥವಾ ಬಾಂಧವರಾಗಲಿ ಯಾರೂ ಬರುವುದಿಲ್ಲ. ॥೯೭॥

ಮನುಷ್ಯನು ಮೃತನಾದ ಮೇಲೆ ಆತನ ಜೊತೆಯಲ್ಲಿ ಐಶ್ವರ್ಯವಾಗಲಿ ಅಥವಾ ರಥ, ಅಶ್ವ, ಗಜ, ದಾಸ, ಇವುಗಳಲ್ಲಿ ಯಾವುವೂ ಖಂಡಿತ ಬರುವುದಿಲ್ಲ. ॥೯೮॥

ಮರಣಕಾಲವು ಸಮೀಪಿಸಿದೊಡನೆಯೇ ಪತ್ನಿಪುತ್ರರು "ನೀವು ಈವರೆಗೂ ಸಂಪಾದನೆ ಮಾಡಿದ ಹಣವು ಎಲ್ಲಿದೆ? ಎಲ್ಲಿಟ್ಟಿದ್ದೀರಿ" ಹೀಗೆಂದೇ ಕೇಳುವರು. ಅವರು ಜೊತೆಯಲ್ಲಿ ಬರುವ ಮಾತನ್ನೇ ಪ್ರಸ್ತಾವಿಸುವುದಿಲ್ಲ. ॥೯೯॥

ಅಯ್ಯೋ! ಈತನು ಈಗ ಸಾಯುತ್ತಿರುವನು. ಈವರೆಗೂ ಈತನ ಸಂಗಡವೇ ಸುಖವಾಗಿ ಜೀವನವನ್ನು ಮಾಡುತ್ತಿದ್ದೆ. ಈತನೊಡನೆ ಭೋಗವಿಲಾಸಗಳನ್ನು ಅನುಭವಿಸುತ್ತಲೇ ನನ್ನ ಯೌವನವು ಕಳೆದಿದೆ. ಆದುದರಿಂದ ಈಗಲೂ

†

ಪ್ರೌಢಃ ಪುತ್ರೋ ಯದಿ ತದಾ ಮ್ರಿಯತಾಮಯಮದ್ಯ ಮೇ ।
ಧನಧಾನ್ಯೇಷು ಸ್ವಾಮಿತ್ವಂ ಸ್ಯಾದಿತ್ಯೇವಾವಧಾರಯೇತ್ ॥೧೦೧॥

ನಾರೀ ತು ಮರಣೇ ಪುಂಸಃ ಕ್ವ ಮೇ ಸುರತಮಿತ್ಯಪಿ ।
ರುದತ್ಯಯಂ ಕಾಂ ಗತಿಂ ವಾ ಯಾಸ್ಯತೀತಿ ನ ಸರ್ವಥಾ ॥೧೦೨॥

ರಕ್ಷಣಂ ಕೃತಮೇತೇನ ಜೀವತೋ ಮರಣೋತ್ತರಂ ।
ರಕ್ಷಕೋಽಪಿ ನ ಚಾಸ್ತೀತಿ ರುದಂತಿ ಶಿಶವಃ ಪರಂ ॥೧೦೩॥

ಭೃತ್ಯಾಶ್ಚ ರಕ್ಷಕಾಭಾವಾದ್ರುದಂತಿ ಸಹಸಾ ಗೃಹೇ ।
ದಾಸ್ಯೋಽಪಿ ಬಂಧುವರ್ಗಾಶ್ಚ ತಥೈವ ಪ್ರತಿವೇಶಿನಃ ॥೧೦೪॥

---

ಈತನ ಜೊತೆಯನ್ನು ಬಿಡಕೂಡದು. ನಾನೂ ಈತನೊಡನೆಯೇ ಹೋಗಬೇಕು. ನಾನೂ ಈಗಲೇ ಸಾಯುತ್ತೇನೆ ಎಂದು ಯಾವ ಸ್ತ್ರೀಗೂ ಬುದ್ಧಿಬರಲಾರದು. ||೧೦೦||

ಪುತ್ರನು ಪ್ರೌಢನಾಗಿದ್ದರೆ ತಂದೆಯು ಸಾಯುವಾಗ ಹೀಗೆ ಯೋಚಿಸುವನು. ಈತನು ಈ ಕೂಡಲೇ ಸತ್ತುಹೋದರೆ ನನಗೆ ಬಹಳ ಅನುಕೂಲವಾಗುತ್ತದೆ. ಧನಧಾನ್ಯಾದಿಗಳಿಗೆಲ್ಲಾ ನಾನೇ ಒಡೆಯನಾಗುತ್ತೇನೆ. ಆದ್ದರಿಂದ ಈ ಮುದುಕನು ಸಾಯಲಿ ಎಂದು ಯೋಚಿಸುವನು. ||೧೦೧||

ಪುರುಷನು ಸತ್ತುಹೋದರೆ ಸ್ತ್ರೀಯು ತನ್ನ ಪತಿಗೆ ಯಾವ ಗತಿಯು ಉಂಟಾದೀತೋ? ಉತ್ತಮ ಲೋಕವು ಪ್ರಾಪ್ತವಾಗುವುದೇ? ಎಂದು ಮುಂತಾಗಿ ಯೋಚಿಸುವುದಿಲ್ಲ. ಪ್ರತ್ಯುತ ಆವಳು ಇನ್ನು ಮುಂದೆ ನನಗೆ ಸಂಭೋಗವಿಲಾಸಾದಿಗಳು ಎಲ್ಲಿ ದೊರೆತಾವು ಎಂದು ಯೋಚಿಸುತ್ತಾ ರೋದಿಸುತ್ತಾಳೆ. ||೧೦೨||

ಈ ತಂದೆಯು ಬದುಕಿದ್ದಾಗ ನಮ್ಮನ್ನೆಲ್ಲಾ ಪೋಷಿಸುತ್ತಿದ್ದನು. ಈತನು ಇಂದು ಸತ್ತುಹೋದನು. ಇನ್ನುಮುಂದೆ ನಮ್ಮನ್ನು ಕಾಪಾಡುವವರಾರು? ಎಂದು ತಮ್ಮ ಸ್ವಾರ್ಥವನ್ನೇ ಯೋಚಿಸಿಕೊಂಡು ಮಕ್ಕಳೂ ಅಳುವರು. ||೧೦೩||

ದಾಸದಾಸಿಯರು, ಬಂಧುಗಳು, ಮತ್ತು ನೆರೆಹೊರೆಯವರು, ಎಲ್ಲರೂ ತಮಗೆ ಅನುಕೂಲವಾಗಿದ್ದವನು ಸತ್ತರೆ ತಮ್ಮ ಸೌಲಭ್ಯಕ್ಕೆ ಹಾನಿಯುಂಟಾಯಿತಲ್ಲಾ ಎಂದು ತಮ್ಮ ಸ್ವಾರ್ಥಕ್ಕಾಗಿಯೇ ಶೋಕಿಸುತ್ತಾರೆ. ||೧೦೪||

ರಾಷ್ಟ್ರನಿರ್ವಾಹಕಾಭಾವಾದ್ರಾಜಾಪಿ ರುದತಿ ಸ್ವಯಂ ।
ಪ್ರಜಾಶ್ಚ ಪಾಲಕಾಭಾವಾದ್ರುದಂತಿ ಮರಣೋತ್ತರಂ ॥೧೦೫॥

ಪರಂ ತು ತೇಷು ಕಸ್ಯಾಪಿ ಮರಣೋತ್ತರಮಸ್ಯ ಕಾ ।
ಗತಿರಿತ್ಯಪಿ ಧೀ ರ್ನೇತಿ ತೇಷ್ವಾಸ್ಥಾ ನ ಪ್ರಜಾಯತೇ ॥೧೦೬॥

ಧನಾರ್ಜನಂ ಚ ಪಾಪೇನ ಕೃತಂ ಗೃಹ್ಣಂತಿ ತೇ ಸುತಾಃ ।
ನ ತಸ್ಯ ಪರಲೋಕಾರ್ಥಂ ಯತ್ನಂ ಕುರ್ವಂತಿ ಸರ್ವಥಾ ॥೧೦೭॥

ನ ಯಮಾದ್ರಕ್ಷಕಃ ಕೋಽಪಿ ಲೋಕೇ ಯಮಪುರೀಂ ವಿನಾ ।
ಅತೋ ಯಮಾಂತಕೋ ನಿತ್ಯಂ ಪೂಜನೀಯಃ ಪ್ರಯತ್ನತಃ॥೧೦೮॥

---

ನನ್ನ ವಿಷಯವೂ ಹೀಗೆಯೇ ಇರುತ್ತದೆ. ನಾನು ಸತ್ತರೆ ನನಗೆ ಹೃತ್ಪೂರ್ವಕವಾದ ಸಹಾನುಭೂತಿಯನ್ನು ತೋರಿಸುವವರಾರೂ ಇರುವುದಿಲ್ಲ. ನನ್ನ ಸಂಗಡ ಬರುವವರಂತೂ ಒಬ್ಬರೂ ಇಲ್ಲ. ಕೇವಲ ರಾಜ್ಯಭಾರಮಾಡುವವನು ಹೋದನೆಂದು ವೃದ್ಧರಾಜನು ಚಿಂತಿಸುವನು. ಪ್ರಜೆಗಳು ತಮಗೆ ಒಳ್ಳೇ ರಕ್ಷಕನಿಲ್ಲದೇ ಹೋದನಲ್ಲಾ ಎಂದು ಶೋಕಿಸುವರು. ಹೀಗೆಯೇ ಈ ಪ್ರಪಂಚವು ಕೇವಲ ತನ್ನ ಸ್ವಾರ್ಥವನ್ನೇ ಯೋಚಿಸುವುದಾಗಿದೆ. ॥೧೦೫॥

ಆದರೆ ನಾನು ಸತ್ತುಹೋದಮೇಲೆ ನನಗೆ ಸದ್ಗತಿಯುಂಟಾಯಿತೇ ಅಥವಾ ಇಲ್ಲವೇ ಎಂದು ಹೆಂಡತಿಯಾಗಲಿ, ಮಕ್ಕಳಾಗಲಿ, ತಂದೆತಾಯಿಗಳಾಗಲಿ, ಬಂಧುಮಿತ್ರರಾಗಲಿ, ಪ್ರಜೆಗಳಾಗಲಿ ಯೋಚಿಸುವುದಿಲ್ಲ. ಶೋಕಿಸುವುದೂ ಇಲ್ಲ. ॥೧೦೬॥

ಪಾಪದಿಂದಲೋ ಅಥವಾ ದೇಹಶ್ರಮದಿಂದಲೋ ನಾನು ಎಷ್ಟು ಹಣವನ್ನು ಸಂಪಾದನೆ ಮಾಡಿರುತ್ತೇನೆಯೋ, ಅವುಗಳೆಲ್ಲವನ್ನೂ ಮಕ್ಕಳು ಪಡೆಯುತ್ತಾರೆ. ಆದರೆ ನನಗೆ ಪರಲೋಕದಲ್ಲಿ ಸದ್ಗತಿಯಾಗಲೆಂದೂ, ಧರ್ಮವನ್ನು ಮಾಡಬೇಕೆಂದೂ ಅವರು ಚಿಂತಿಸುವುದಿಲ್ಲ. ನಾನು ಸಂಪಾದಿಸಿದ ದ್ರವ್ಯವನ್ನು ನನಗಾಗಿ ಖರ್ಚುಮಾಡುವುದಕ್ಕೂ ಅವರು ಸಮ್ಮತಿಸುವುದಿಲ್ಲ. ಆದ್ದರಿಂದ ಇವರನ್ನು ನಂಬಿ ಮೋಸಹೋಗಬಾರದು. ॥೧೦೭॥

ಈ ಪ್ರಪಂಚದಲ್ಲಿ ಹುಟ್ಟಿದವರೆಲ್ಲಾ ಒಂದಲ್ಲ ಒಂದು ದಿವಸ ಸತ್ತೇ ಸಾಯುವರು. ಆ ಮೃತ್ಯುಂಜಯನೊಬ್ಬನನ್ನು ಬಿಟ್ಟು ಮನುಷ್ಯನನ್ನು ಯಮನ ಹೊಡೆತದಿಂದ ತಪ್ಪಿಸಿ ಕಾಪಾಡಬಲ್ಲವನು ಬೇರೆ ಒಬ್ಬನೂ ಇರುವುದಿಲ್ಲ. ಆದುದರಿಂದ ತನ್ನ

**ಕಾಲಾಂತಕಃ ಪರೋ ಬಂಧುರ್ದಯಾಸಿಂಧುಶ್ಚ ಕೇವಲಂ ।**
**ಸ್ಮೃತೋಽಪಿ ಯಾತನಾಭೀತಿಂ ಹರತ್ಯೇವ ನ ಸಂಶಯಃ ॥೧೦೯॥**

**ಭ್ರಮಂತಿ ಯೌವನೋನ್ಮಾದಾನ್ನ ಜಾನಂತಿ ಮಹೇಶ್ವರಂ ।**
**ನಾರ್ಚಯಂತಿ ನ ಪಶ್ಯಂತಿ ನ ಸ್ಮರಂತಿ ಪುನಃ ಪುನಃ ॥೧೧೦॥**

**ನೃಣಾಂ ಮರಣಕಾಲೇಽಪಿ ಸ್ಮರಣಂ ಶೂಲಪಾಣಿನಃ ।**
**ಕಿಂ ನ ನಿರ್ವಾಣದಂ ತದ್ಧಿ ಪರಮಾನಂದ ಏವ ಹಿ ॥೧೧೧॥**

**ನರಸ್ತು ಮರಣೇ ಪ್ರಾಪ್ತೇ ತರುಣೀಮಪ್ಯನುಕ್ಷಣಂ ।**
**ಪಶ್ಯತ್ಯತೀವ ಪಾಪಿಷ್ಠೋ ನ ಪಶ್ಯತಿ ಮಹೇಶ್ವರಂ ॥೧೧೨॥**

---

ಕಲ್ಯಾಣವನ್ನು ಅಪೇಕ್ಷಿಸುವವನು ಆ ಮೃತ್ಯುಂಜಯನನ್ನೇ ಸರ್ವಥಾ ಶರಣೆಂದು ಮರೆಹೋಗಬೇಕು. ಮತ್ತು ಆಸಕ್ತಿ ವಹಿಸಿ ಆತನನ್ನೇ ಪೂಜಿಸಬೇಕು. ॥೧೦೮॥

ಮನುಷ್ಯನಿಗೆ ಪರಮ ಬಂಧುವಾದವನು ಆ ಮೃತ್ಯುಂಜಯನಾದ ಪರಮೇಶ್ವರನೊಬ್ಬನೇ. ಆತನು ದಯಾಸಾಗರನಾದ್ದರಿಂದ ನಮಗೆ ಕಲ್ಯಾಣವನ್ನುಂಟು ಮಾಡುವನು. ಆತನನ್ನು ಧ್ಯಾನಿಸಿದರೆ ಸಕಲ ನರಕಯಾತನೆಗಳನ್ನೂ ಪರಿಹರಿಸುವನು. ॥೧೦೯॥

ಮೂಢರಾದ ಮತ್ತು ಯೌವನದಿಂದ ಮತ್ತರಾದ ಜನರು ಅಜ್ಞರಾಗಿರುತ್ತಾರೆ. ಆದ್ದರಿಂದ ಅವರು ಆ ಪರಮೇಶ್ವರನನ್ನು ತಿಳಿದಿರುವುದಿಲ್ಲ. ಹಾಗೆಯೇ ಅವರು ಆ ಶಂಕರನ ಅರ್ಚನೆಯನ್ನಾಗಲಿ ದರ್ಶನವನ್ನಾಗಲಿ ಧ್ಯಾನವನ್ನಾಗಲಿ ಮಾಡುವುದಿಲ್ಲ. ॥೧೧೦॥

ಮಾನವರು ಮರಣಕಾಲದಲ್ಲಿ ಆ ಪರಮೇಶ್ವರನನ್ನು ಸ್ಮರಿಸಿಕೊಂಡರೆ ನಿಸ್ಸಂದೇಹವಾಗಿ ಮುಕ್ತಿಯು ದೊರೆಯುವುದು. ಅಂದರೆ ಸುಲಭವಾಗಿ ಪ್ರಾಣಗಳು ಹೊರಟು ಹೋಗುವುವು. ಹಾಗೆಯೇ ಸಾಂಸಾರಿಕಕ್ಲೇಶಗಳೂ ಕತ್ತರಿಸಿಹೋಗುವುವು. ಆ ಶಂಕರನ ಸ್ಮರಣೆಯೇ ಪರಮಾನಂದ ಪ್ರದವಾಗುವುದು. ॥೧೧೧॥

ಮಾನವನು ಸ್ವಾಭಾವಿಕವಾಗಿಯೇ ಪಾಪವಾಸನೆಯಲ್ಲಿ ಮುಳುಗಿರುತ್ತಾನೆ. ಆದ್ದರಿಂದಲೇ ಮರಣಕಾಲದಲ್ಲಿ ಸಹ ಸ್ತ್ರೀಯ ಚಿಂತೆಯನ್ನೇ ಮಾಡುತ್ತಾ, ಸ್ತ್ರೀಯನ್ನೇ ನೋಡುತ್ತಾ, ಆತನು ಸಂಕಟಪಡುವನು. ಅಂತಹ ಅಪಾಯಕಾಲದಲ್ಲಿ ಸಹ ನಿರ್ವಾಣಕರನಾದ ಶಂಕರನನ್ನು ಆತನು ಧ್ಯಾನಿಸುವುದಿಲ್ಲ. ॥೧೧೨॥

**ಬಿಲ್ವಪತ್ರಾರ್ಚಿತಂ ಲಿಂಗಂ ದೃಷ್ಟ್ವಾಪಿ ಮರಣಕ್ಷಣೇ ।**
**ಮೋಕ್ಷಾಂಗನಾಂಗಸಂಗೇನ ಪರಮಾನಂದಮಾಪ್ನುಯಾತ್ ॥೧೧೩॥**

**ಪ್ರಾಣೋತ್ಕ್ರಮಣವೇಲಾಪಿ ಯಾತಿ ಕೋಲಾಹಲೈಃ ಪರಂ ।**
**ಶಿವನಾಮಧ್ವನಿಸ್ತತ್ರ ನ ಶ್ರುತೋ ನ ಕೃತೋಽಪಿ ಸಃ ॥೧೧೪॥**

**ವ್ಯರ್ಥಕ್ಲೇಶಕರೈಃ ಕಾಲೋ ನೀಯತೇ ಕರಪೀಡನೈಃ ।**
**ಮುಖೋರಸ್ತಾಡನೈಸ್ತೈಸ್ತು ಪರಲೋಕೇ ನ ತಸ್ಯ ತು ॥೧೧೫॥**

**ನ ಶ್ರಾವ್ಯತೇ ಶಿವಕಥಾ ಶ್ರಾವಿತಂ ಶಿವನಾಮ ವಾ ।**
**ತನುರ್ನ ಭಸ್ಮನಾ ಲಿಪ್ತಾ ನಾಪಿ ಬಿಲ್ವಾನ್ವಿತಾ ಕೃತಾ ॥೧೧೬॥**

---

ಮರಣ ಸಮಯದಲ್ಲಿ ಬಿಲ್ವಪತ್ರೆಗಳಿಂದ ಅರ್ಚಿತವಾದ ಶಿವಲಿಂಗದ ದರ್ಶನವನ್ನು ಮಾಡಿದರೆ ನಿಸ್ಸಂದೇಹವಾಗಿ ಮುಕ್ತಿವನಿತೆಯನ್ನು ಆಲಿಂಗಿಸಿಕೊಂಡು ಆನಂದಹೊಂದುವನು. ॥೧೧೩॥

ಮನುಷ್ಯನಿಗೆ ಮರಣವು ಸಮೀಪಿಸಿತೆಂದರೆ ರೋದನ ವಿಲಾಪಾದಿಗಳಿಂದ ದೊಡ್ಡ ಕೋಲಾಹಲವನ್ನೇ ಎಬ್ಬಿಸುತ್ತಾರೆ. ಆದರೆ ಅಲ್ಲಿ ಮಂಗಳಕರವಾದ ಶಂಕರನ ಶುಭನಾಮಗಳ ಧ್ವನಿಯೇ ಕೇಳಿಸುವುದಿಲ್ಲ. ಆ ಶಿವನಾಮಗಳನ್ನು ಹೇಳುವವರೂ, ಹೇಳೆಂದು ಸೂಚಿಸುವವರೂ ಇರುವುದಿಲ್ಲ. ॥೧೧೪॥

ವೃಥಾ ಗಟ್ಟಿಯಾಗಿ ರೋದನವನ್ನು ಮಾತ್ರ ಮಾಡುತ್ತಾರೆ. ಬಾಯಿ, ಎದೆ ಇವುಗಳನ್ನು ಚಚ್ಚಿಕೊಳ್ಳುತ್ತಾ ಕೂಗಿಕೊಳ್ಳುತ್ತಾರೆ. ಕೇವಲ ಇಷ್ಟೇ ವಿಲಾಪಗಳಿಂದ ಕಾಲಕಳೆಯುತ್ತಾರೆಯೇ ವಿನಾ, ಈತನು ಈಗ ಪರಲೋಕಕ್ಕೆ ಹೋಗುವನು; ಈತನಿಗೆ ಮುಂದೆ ಸದ್ಗತಿಯಾಗಬೇಕು; ಆದಷ್ಟು ಶಿವಧರ್ಮಗಳನ್ನು ಮಾಡಿಸೋಣ ಎಂದು ಯಾರೂ ಯೋಚಿಸುವುದಿಲ್ಲ. ॥೧೧೫॥

ಬಂಧುಗಳು ಆ ಪ್ರಾಣೋತ್ಕ್ರಮಣ ಸಮಯದಲ್ಲಿ ಮುಂದೆ ಸದ್ಗತಿದಾಯಕವಾದ ಶಿವಕಥೆಯನ್ನು ಹೇಳಿ ಕೇಳಿಸುವುದಿಲ್ಲ. ಶಿವನಾಮವನ್ನೂ ಭಜಿಸುವುದಿಲ್ಲ. ಮತ್ತು ಶಿವಧರ್ಮಗಳೂ ಶೈವಚಿಹ್ನೆಗಳೂ ಆದ ಭಸ್ಮಲೇಪನವನ್ನಾಗಲಿ ಬಿಲ್ವಪತ್ರೆಯ ಸಂಸರ್ಗವನ್ನಾಗಲಿ ಮಾಡುವುದಿಲ್ಲ. ॥೧೧೬॥

ಶಿವಾಭಿಷೇಕಪಾನೀಯಂ ನ ಮುಖೇ ದೀಯತೇ ತದಾ ।
ನ ಮಧ್ಯೇಽಪಿ ತನುರ್ದತ್ತಾ ಹರಸ್ಯ ವೃಷಭಸ್ಯ ವಾ ॥೧೧೭॥

ವಿಭೂತ್ಯಾ ರುದ್ರಾಕ್ಷೈರಪಿ ಮರಣಕಾಲೇ ಪರಿವೃತಾ
ತನುಸ್ತ್ಯಕ್ತಾ ಪುಣ್ಯೈರ್ಹರವೃಷಭಮಧ್ಯೇ ಯದಿ ತದಾ ।
ಶಿವಃ ಸ್ವಾಂಕಾರೂಢಂ ತದನು ಕುರುತೇ ತಂ ದೃಢತರಂ
ಸಮಾಲಿಂಗ್ಯಾಯಂ ಮೇ ತನುರಿತಿ ಮುಹುಃ ಸ್ತೌತಿ ಶಿವಯಾ॥೧೧೮॥

ಪ್ರಾಜ್ಯೇ ರಾಜ್ಯೇಽಪ್ಯಪೇಕ್ಷಾ ನ ಚ ನವತರುಣೀಸಂಗಮೇ ಚಂದನಾದೌ
ರತ್ನಾದೌ ಕಿಂ ತ್ವಪೇಕ್ಷಾ ಮಮ ಭವತಿ ಮಹಾದೇವಲಿಂಗಾರ್ಚನೇಷು ।
ಪ್ರಾಣಸ್ಯಾಶು ಪ್ರಯಾಣೇ ಶಿವ ಶಿವ ಹರ ಭೋಃ ಶ್ರೀಮಹಾದೇವ ಶಂಭೋ
ಪಾಹೀತಿ ಸ್ಯಾದವಶ್ಯಂ ಮುಹುರಪಿ ಶಿವ ಹಾ ನಾಮಪೀಯೂಷವಲ್ಲೀ
॥೧೧೯॥

---

ಆ ಪ್ರಾಣೋತ್ಕ್ರಮಣ ಸಮಯದಲ್ಲಿ ಮೃತನಾಗುತ್ತಿರುವವನ ಬಾಯಿಗೆ ಶಿವಾಭಿಷೇಕ ಜಲವನ್ನು ಯಾವ ಬಂಧುಗಳೂ ಬಿಡುವುದಿಲ್ಲ. ಅಥವಾ ಆ ಸಮಯದಲ್ಲಿ ಆತನ ಶರೀರವನ್ನು ಈಶ್ವರನ ಮುಂಭಾಗದಲ್ಲಿಯಾಗಲಿ ವೃಷಭನ ಕಾಲುಗಳ ಮಧ್ಯಭಾಗದಲ್ಲಿಯಾಗಲಿ ಮಲಗಿಸುವವರೂ ಇರುವುದಿಲ್ಲ. ಹೀಗೆ ಸದ್ಗತಿದಾಯಕವಾದ ಯಾವ ಸತ್ಕರ್ಮಗಳನ್ನೂ ಮಾಡಬೇಕೆಂಬ ಬುದ್ಧಿಯು ಬಾಂಧವರಿಗೆ ಹುಟ್ಟುವುದೇ ಇಲ್ಲ. ॥೧೧೭॥

ಮರಣಕಾಲದಲ್ಲಿ ಶಿವಧರ್ಮಗಳಿಂದಲೂ ಶೈವಚಿಹ್ನೆಗಳಿಂದಲೂ ಪರಿವೃತನಾಗಿ ಶಿವನನ್ನು ಧ್ಯಾನಮಾಡುತ್ತಾ ಪ್ರಾಣಪರಿತ್ಯಾಗಮಾಡಿದರೆ ಒಳ್ಳೇ ಸದ್ಗತಿಯಾಗುವುದು. ಮೈಗೆಲ್ಲಾ ವಿಭೂತಿಯನ್ನು ಹಚ್ಚಿಕೊಂಡು, ರುದ್ರಾಕ್ಷಗಳನ್ನು ಧರಿಸಿ ಶಿವಸನ್ನಿಧಿಯಲ್ಲಾಗಲಿ, ವೃಷಭನ ಪಾದಗಳ ಮಧ್ಯದಲ್ಲಿಯಾಗಲಿ ಪ್ರಾಣಗಳನ್ನು ಬಿಟ್ಟರೆ ಆತನನ್ನು ಸಾಕ್ಷಾತ್ ಪರಮೇಶ್ವರನು ಅತ್ಯಂತ ವಾತ್ಸಲ್ಯದಿಂದ ಆಲಿಂಗಿಸಿಕೊಂಡು, ತನ್ನ ತೊಡೆಯ ಮೇಲೆ ಕೂರಿಸಿಕೊಂಡು, ಈತನೂ ನನ್ನ ಶರೀರವೇ ಆಗಿರುತ್ತಾನೆಂದು ಪಾರ್ವತಿಯೊಡನೆ ತಾನೂ ಶ್ಲಾಘಿಸುವನು. ಶಿವಭಕ್ತನಿಗೆ ಇಷ್ಟು ಸೌಭಾಗ್ಯಗಳು ಲಭಿಸುವುವು. ॥೧೧೮॥

ನನಗೆ ವಿಶಾಲವಾದ ರಾಜ್ಯವೂ ಬೇಡ. ನವಯುವತಿಯೊಡನೆ ಭೋಗವಿಲಾಸಗಳನ್ನು ಅನುಭವಿಸಬೇಕೆಂಬ ಅಪೇಕ್ಷೆಯೂ ನನಗಿಲ್ಲ. ವಸ್ತ್ರಾಲಂಕಾರಗಳಲ್ಲಿ

**ವಿಶ್ವೇಶ ಶ್ರೀಮಹೇಶ ತ್ರಿದಶವರ ಮಹಾದೇವ ಶಂಭೋ ತ್ರಿನೇತ್ರ**
**ಶ್ರೀಕಂಠಾಂಬಾಸಹಾಯ ತ್ರಿಪುರಹರ ಮಹಾರುದ್ರಕಾಲಾಂತಕೇತಿ ।**
**ನಾಮಾನ್ಯೇತಾನಿ ಶಂಭೋ ಮಮ ತವ ಕೃಪಯಾ ಪ್ರಾಣನಿರ್ಯಾಣಕಾಲೇ**
**ಪ್ರಾಪ್ತೇ ಜಿಹ್ವಾಂಗಣಾಗ್ರೇ ಶಿವಶಿವ ಶಿವ ಇತ್ಯೇವ ನೃತ್ಯಂತು ಭೂಯಃ**
**॥೧೨೦॥**

**ಬಿಲ್ವಾದ್ಯೈರ್ಲಿಂಗಪೂಜಾವಿರಚನಚತುರೋಽಪ್ಯಸ್ತು ಹಸ್ತೋ ನಮಸ್ತೇ**
**ಮೂರ್ಧ್ನಾ ತಾವತ್ಕರೋತು ತ್ರಿನಯನ ನಯನೇ ಪ್ರೇಕ್ಷಣಾಯ ಪ್ರವೃತ್ತೇ।**
**ಲಿಂಗಸ್ಯಾಭ್ಯರ್ಚಿತಸ್ಯ ಸ್ಮರಹರ ಚರಣಾರಾಧನಂ ಮಾನಸಂ ಮೇ**
**ಶ್ರೋತ್ರೇ ಸ್ಯಾತಾಂ ಮಹೇಶ ಶ್ರವಣಸುಖಕರೇ ಪ್ರಾಣನಿರ್ಯಾಣಕಾಲೇ**
**॥೧೨೧॥**

---

ಅಥವಾ ಸ್ರಕ್ಚಂದನಾದಿಗಳಲ್ಲಿಯೂ ನನಗೆ ಬಯಕೆ ಇಲ್ಲ. ನನಗೆ ಅಪೇಕ್ಷಿತವಾದದ್ದು ಒಂದೇ. ಆ ಪರಮೇಶ್ವರಸ್ವರೂಪವಾದ ಲಿಂಗವನ್ನು ನಾನು ಸದಾ ಪೂಜಿಸುತ್ತಿರಬೇಕೆಂಬುದೇ. ಹಾಗೆಯೇ ಮರಣಕಾಲದಲ್ಲಿ ಸಹ ಆ ಪರಮೇಶ್ವರನ ದಿವ್ಯನಾಮಗಳನ್ನು ಸ್ಮರಿಸುತ್ತಾ ಹೇ ಮಹಾದೇವ, ಶಿವ, ಶಂಭೋ, ಶಂಕರ ಎಂದು ಭಜಿಸುತ್ತಾ ಆತನನ್ನೇ ಶರಣೆಂದು ಮರೆಹೋಗುವೆನು. ಇದಿಷ್ಟು ನನ್ನ ಅಪೇಕ್ಷೆಯು ಕೈಗೂಡುತ್ತಿದ್ದರೇ ನನಗೆ ಪರಮಸುಖವು ಲಭಿಸುವುದು. ಆಹಾ! ಆ ಶಿವನಾಮಾಮೃತದ ಮಹಿಮೆಯು ಎಷ್ಟು ಮಹತ್ತರವಾದುದು. ॥೧೧೯॥

ಓ ಪರಮೇಶ್ವರ! ನಾನು ನಿನ್ನನ್ನೇ ಪ್ರಾರ್ಥಿಸಿಕೊಳ್ಳುತ್ತೇನೆ. ನನಗೆ ಪ್ರಾಣೋತ್ಕ್ರಮಣದ ಸಮಯವು ಬಂದಾಗ ನಿನ್ನ ಶುಭನಾಮಗಳನ್ನು ಹೇಳುತ್ತಾ ಪ್ರಾಣಬಿಡುವಂತೆ ಅನುಗ್ರಹ ಮಾಡು. ಮರಣಸಮಯಲ್ಲಿ ಶಿವಶಿವ ಎಂಬ ನಾಮವೂ ವಿಶ್ವೇಶ ಇತ್ಯಾದಿ ಪುಣ್ಯನಾಮಗಳೂ ನನ್ನ ನಾಲಿಗೆಯಮೇಲೆ ನಾಟ್ಯವಾಡಲಿ. ॥೧೨೦॥

ಶಂಕರನೇ! ನನ್ನ ಕರಗಳು ಸದಾ ಬಿಲ್ವಪತ್ರಾದಿಗಳಿಂದ ಲಿಂಗಪೂಜೆಯನ್ನು ಮಾಡುತ್ತಿರುವಂತೆ ಅನುಗ್ರಹಿಸು. ನನ್ನ ಶಿರಸ್ಸು ಸದಾ ನಿನ್ನನ್ನೇ ನಮಸ್ಕರಿಸುತ್ತಿರಲಿ. ತ್ರಿನಯನನೇ! ನನ್ನ ಲೋಚನಗಳು ನಿನ್ನ ದರ್ಶದಲ್ಲಿಯೇ ಸದಾ ಆಸಕ್ತವಾಗಿರಲಿ. ಸಕಲೋಪಚಾರಗಳಿಂದ ಸಂಪೂಜಿತನಾದ ನಿನ್ನನ್ನೇ ನಾನು ನೋಡುತ್ತಿರುವಂತೆ ಅನುಗ್ರಹಿಸು. ಮನ್ಮಥಧ್ವಂಸಿಯೇ! ನನ್ನ ಮನವು ಸದಾ ನಿನ್ನನ್ನೇ

**ಪ್ರಾಯಶ್ಚಿತ್ತಾನಿ ಶಂಭೋ ಶಿವಪದಕಮಲಧ್ಯಾನಮೇವೇತಿ ಮನ್ಯೇ**
**ಪ್ರಾಪ್ತೇ ಪ್ರಾಣಪ್ರಯಾಣೇ ಭಸಿತಸಿತತನುರ್ವ್ಯಾಪ್ತರುದ್ರಾಕ್ಷಕಾಂತಃ ।**
**ಲಿಂಗೇ ಬಿಲ್ವಾರ್ಚನಂ ಚ ಸ್ಮರಹರ ಶಿವ ಇತ್ಯಕ್ಷರೋಚ್ಚಾರಣಂ ಚ**
**ಪ್ರತ್ಯೇಕಂ ವಾಪಿ ಮುಕ್ತ್ಯೈ ಸಕೃದಪಿ ಶಿವಯೋಃ ಪಾದಪದ್ಮೇ ಶಯಾಮಿ**
**॥೧೨೨॥**

**ಕಲ್ಯಾಣಪ್ರಾಪಕಾಣಾಂ ಪರಮಮಿದಮಿತಿ ಜ್ಞಾತಧರ್ಮೇಂದುಮೌಳೇ**
**ತ್ವತ್ಪಾದಾಂಭೋಜಮಾತ್ರಸ್ಮರಣಮಿದಮಹಜ್ಜೀವನಂ ರಕ್ಷಕಂ ಮೇ ।**

---

ಆರಾಧಿಸಲಿ, ನಿನ್ನ ಚರಣಗಳನ್ನೇ ಧ್ಯಾನಿಸಲಿ. ನನ್ನ ಕರ್ಣಗಳು ಶ್ರೋತ್ರಾಹ್ಲಾದಕರವಾದ ಶಿವನಾಮಗಳನ್ನೇ ಸದಾ ಕೇಳುತ್ತಿರಲಿ. ಮಹೇಶ! ಇಷ್ಟು ಸೌಭಾಗ್ಯಗಳು ನನಗೆ ಮರಣಕಾಲದಲ್ಲಿಯೂ ದೊರೆಯಲಿ. ॥೧೨೧॥

ಮರಣ ಸಮಯದಲ್ಲಿ ಪಾಪಶೋಧನೆಗಾಗಿ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳಬೇಕೆಂದು ಶಾಸ್ತ್ರದಲ್ಲಿ ಹೇಳಿರುವುದು. ಆ ಪ್ರಾಯಶ್ಚಿತ್ತಗಳಲ್ಲೆಲ್ಲಾ ಉತ್ತಮವಾದದ್ದು ಯಾವುದೆಂದು ನಾನು ಅರಿತಿದ್ದೇನೆ. ತಾತ್ತ್ವಿಕವಾಗಿಯೂ ಶ್ರೇಷ್ಠವಾಗಿಯೂ ಇರುವ ಪ್ರಾಯಶ್ಚಿತ್ತವೆಂದರೆ ಶಿವಧರ್ಮವೇ ಸರಿ. ಆ ಪರಮೇಶ್ವರನ ಚರಣಕಮಲಗಳ ಆರಾಧನೆಯೂ, ಶರೀರದಲ್ಲೆಲ್ಲಾ ಭಸ್ಮ ಮತ್ತು ರುದ್ರಾಕ್ಷಗಳ ಧಾರಣೆಯೂ, ಶಿವಲಿಂಗವನ್ನು ಬಿಲ್ವಾದಿಗಳಿಂದ ಪೂಜಿಸುವುದೂ, ಶಿವಶಿವ ಎಂದು ಪದೇಪದೇ ಶಿವನಾಮೋಚ್ಚಾರಣೆ ಮಾಡುವುದೇ ಪ್ರಾಯಶ್ಚಿತ್ತವಾಗಿದೆ ಇವುಗಳಲ್ಲಿ ಒಂದೊಂದು ಸಹ ಏಕಾವೃತ್ತಿಯಾದರೂ ಅನುಷ್ಠಿತವಾದರೆ ಸಕಲ ಪಾಪಗಳೂ ನಾಶವಾಗುವುವಲ್ಲದೇ ಮುಕ್ತಿಯೂ ಸಹ ಲಭಿಸುವುದು. ಆದುದರಿಂದ ನಾನು ಮರಣಸಮಯದಲ್ಲಿ ಸಕಲ ಶಿವಧರ್ಮಗಳನ್ನೂ ಮಾಡಿಕೊಂಡು ಪಾರ್ವತೀ ಪರಮೇಶ್ವರರ ಚರಣಸನ್ನಿಧಿಯಲ್ಲಿ ಪ್ರಾಣತ್ಯಾಗಕ್ಕಾಗಿ ಮಲಗುವೆನು. ॥೧೨೨॥

ಚಂದ್ರಶೇಖರನೇ! ನಾನು ಧರ್ಮಗಳ ಗುಟ್ಟನ್ನು ತಿಳಿದುಕೊಂಡಿದ್ದೇನೆ. ಮಂಗಳವನ್ನು ತಂದುಕೊಡುವ ಧರ್ಮಗಳಲ್ಲೆಲ್ಲಾ ಶಿವಧರ್ಮವೇ ಶ್ರೇಷ್ಠವೆಂದು ನನಗೆ ತಿಳಿದಿರುತ್ತದೆ. ಆದ್ದರಿಂದಲೇ ಇತರ ಧರ್ಮಗಳನ್ನೆಲ್ಲಾ ಬಿಟ್ಟು ಕೇವಲ ನಿನ್ನ ಚರಣಾರಾಧನೆಯನ್ನೂ ಸ್ಮರಣೆಯನ್ನು ಮಾಡುತ್ತಿದ್ದೇನೆ. ಇದೇ ಧರ್ಮವೇ ನನಗೆ ಜೀವನವೆಂದೂ ಶರಣೆಂದೂ ನಂಬಿದ್ದೇನೆ. ಈ ರೀತಿಯಾಗಿ ನಿನ್ನನ್ನು ಸೇವಿಸಲು ನನಗೆ ಅವಕಾಶವು ದೊರೆತಿರುವುದರಿಂದ ನಾನೇ ಇಂದು ಧನ್ಯನು.

ಮನ್ಯೇ ಧನ್ಯೋಽಸ್ಮಿ ತೇನ ತ್ರಿಪುರಹರ ಭವತ್ಪಾದಪದ್ಮಾವಲಂಬಂ
ಮತ್ವಾ ಲಂಬೋದರಾನ್ಯಂ ಶಿವ ಶಿವ ಶಿವ ನ ಸ್ಕಂದಭಿನ್ನಂ ಚ ಮಾಂ ನ
॥೧೨೩॥

**ಇತಿ ಶ್ರೀಶಿವರಹಸ್ಯೇ ತೃತೀಯಾಂಶೇ ಹರಾಖ್ಯೇ ಪೂರ್ವಾರ್ಧೇ ಜನಕಯಾಜ್ಞವಲ್ಕ್ಯಸಂವಾದೇ ಶಿವಪೂಜಾಮಹಿಮಾವರ್ಣನೇ ರಾಜಸ್ತ್ರೀ ರಾಜಪುತ್ರಸಂವಾದೇ ಶರೀರಕುತ್ಸಿತತ್ವಪೂರ್ವಕ ಮರಣಸಮಯಕರ್ತವ್ಯ ಶಿವಧ್ಯಾನಪ್ರಾರ್ಥನಾದಿವರ್ಣನಂ ನಾಮ ಪಂಚಾಶೋಽಧ್ಯಾಯಃ.**

## ತೃತೀಯಾಂಶ ಪೂರ್ವಾರ್ಧಕಥಾ ಸಮಾಪ್ತಾ.

---

ತ್ರಿಪುರಾಂತಕನೇ! ಈ ರೀತಿಯಾಗಿ ನೀನೇ ಶರಣೆಂದು ನಂಬಿರುವ ನಿನ್ನ ಚರಣ ಕಮಲಗಳೇ ಆಧಾರವಾಗಿರುವ ನನ್ನನ್ನು ಗಣಪತಿಗಿಂತ ಬೇರೆಯವನೆಂದು ತಿಳಿಯ ಬೇಡ. ಷಣ್ಮುಖನಿಗಿಂತ ಅನ್ಯನೆಂದೂ ಭಾವಿಸಬೇಡ. ನಿನ್ನ ಪ್ರಿಯಪುತ್ರರಾದ ಗಣಪತಿ ಮತ್ತು ಷಣ್ಮುಖರಲ್ಲಿ ಯಾವ ವಾತ್ಸಲ್ಯವನ್ನು ತೋರುವೆಯೋ ಅದೇ ವಾತ್ಸಲ್ಯವನ್ನು ನನ್ನಲ್ಲಿಯೂ ತೋರು. ಶಿವನೇ! ಶಂಕರನೇ, ನನ್ನ ಮೇಲೆ ಕೃಪೆ ಮಾಡಿ ನನ್ನನ್ನು ಉದ್ಧರಿಸು." ಎಂದು ದೇವರನ್ನು ಪ್ರಾರ್ಥಿಸುತ್ತಾ ಆ ವನಿತೆಯ ಮಾತುಗಳನ್ನು ತಿರಸ್ಕರಿಸಿದನು. ಎಂದು ಯಾಜ್ಞವಲ್ಕ್ಯಋಷಿಯು ಜನಕರಾಜನಿಗೆ ವ್ಯಾಸೋಕ್ತಿರೂಪದಲ್ಲಿ ಶಿವಪೂಜಾಮಹಿಮೆಯನ್ನು ವಿವರಿಸಿದನು. ॥೧೨೩॥

ಇಲ್ಲಿಗೆ ಶ್ರೀಶಿವರಹಸ್ಯ ತೃತೀಯಾಂಶದ ಪೂರ್ವಾರ್ಧದಲ್ಲಿ, ಜನಕರಾಜ ಮತ್ತು ಯಾಜ್ಞವಲ್ಕ್ಯ ಇವರ ಸಂವಾದರೂಪವಾಗಿ, ಶಿವಪೂಜಾಮಹಿಮಾವರ್ಣನ ಪ್ರಸ್ತಾವದಲ್ಲಿ ರಾಜಪುತ್ರ ಮತ್ತು ರಾಜಸ್ತ್ರೀಯರ ಸಂಭಾಷಣೆಯ ರೂಪವಾಗಿ, ಶರೀರವು ಅತಿಕುತ್ಸಿತವಾದದ್ದು ಎಂಬ ವಿಷಯವನ್ನು ತಿಳಿಸುವ ಐವತ್ತನೆಯ ಅಧ್ಯಾಯವು ಮುಗಿದುದು.

## ಶ್ರೀಶಿವರಹಸ್ಯದ ತೃತೀಯಾಂಶದಲ್ಲಿ ಪೂರ್ವಾರ್ಧವು ಮುಗಿದುದು.

॥ ಓಂ ತತ್ಸತ್ ॥

